ಗಳು 334-338 ರಲ್ಲಿ ಪೂರ್ವ ಪರಿಚಿತರಾದ 11 ವಚನಕಾರರ (ಪ್ರಥಮ ಸಂಪುಟ, 190-209, 275) ಮತ್ತು ಕೆಲವು ವಚನಗಳು ಕೊಟ್ಟಿವೆ. ಪುಟಗಳು 338-360ರಲ್ಲಿ ಸುಮಾರು 1160ರಿಂದ 1725ರ ವರೆಗೆ ಬಾಳಿದ 59 ಹೊಸ ವಚನಕಾರರ ವಿಷಯವು ಅವರ ವಚನಗಳೊಡನೆ ಹೇಳಿದೆ. ಇವರೊಳಗೆ 15 ಮಂದಿ ಸ್ತ್ರೀಯರು. ಈ 59 ಕವಿಗಳಲ್ಲಿ 45 ಮಂದಿ ಪ್ರಥಮ ಸಂಪುಟಕ್ಕೂ 12 ಮಂದಿ ದ್ವಿತೀಯ ಸಂಪುಟಕ್ಕೂ ಒಬ್ಬರುಮಾತ್ರ ಈ ಸಂಪುಟಕ್ಕೂ ಸೇರತಕ್ಕವರಾಗಿದ್ದಾರೆ. ಪುಟಗಳು 360-361ರಲ್ಲಿ 52 ಹೊಸ ವಚನಕಾರರ ಹೆಸರುಗಳು ಅವರ ಅಂಕಿತಗಳೊಡನೆ ಹೇಳಿವೆ; ಆದರೆ ವಚನಗಳು ಉದಾಹೃತವಾಗಿಲ್ಲ. ಇವರಲ್ಲಿ 7 ಮಂದಿ ಸ್ತ್ರೀಯರು. ಈ ಕವಿಗಳೆಲ್ಲಾ ಪ್ರಾಯಿಕವಾಗಿ ಬಸವನ ಸಮಕಾಲಿಕರಾದುದರಿಂದ ಪ್ರಥಮ ಸಂಪುಟಕ್ಕೆ ಸೇರತಕ್ಕವರು—362ನೆಯ ಪುಟದಲ್ಲಿ 6 ಹೊಸ ವಚನಕಾರರ ಹೆಸರು ಹೇಳಿದೆ; ಇವರಾರೂ ಈ ಸಂಪುಟಕ್ಕೆ ಸೇರತಕ್ಕವರಂತೆ ಕಾಣುವುದಿಲ್ಲ. ಪುಟಗಳು 362-371 ರಲ್ಲಿ 46 ಅಂಕಿತಗಳು ವಚನಗಳೊಡನೆ ಕೊಟ್ಟಿದೆ; ಇವುಗಳಲ್ಲಿ 15 ದ್ವಿತೀಯ ಸಂಪುಟದಲ್ಲಿ (121-124) ಬರುತ್ತವೆ. 371ನೆಯ ಪುಟದಲ್ಲಿ ವಚನಗಳಿಲ್ಲದೆ 13 ಹೊಸ ಅಂಕಿತಗಳೂ ಉಕ್ತವಾಗಿವೆ. ಪುಟಗಳು 372-389ರಲ್ಲಿ 1099 ರಿಂದ 1700ರವರೆಗೆ ಬಾಳಿದ 79 ಕವಿಗಳ ವಿಷಯವು ಹೇಳಿದೆ; ಇವರಲ್ಲಿ 11 ಮಂದಿ ಪೂರ್ವಪರಿಚಿತರು, ಉಳಿದವರಲ್ಲಿ ಶಾಸನ ಕವಿಗಳಾದ ಮೂವರು ಪ್ರಥಮ ಸಂಪುಟಕ್ಕೂ ಮಿಕ್ಕ ಐವರು ದ್ವಿತೀಯ ಸಂಪುಟಕ್ಕೂ ಸೇರತಕ್ಕವರು. 5 ನೆಯ ಪರಿಶಿಷ್ಟವು (ಪುಟಗಳು 390-398) ಕೆಲವರು ಪೂರ್ವಿಕ ಕವಿಗಳನ್ನೂ ಕೆಲವರು ಆಧುನಿಕರನ್ನೂ ಕವಿಗಳು ಗೊತ್ತಿಲ್ಲದ ಕೆಲವು ಹೊಸ ಗ್ರಂಥಗಳನ್ನೂ ತಿಳಿಸುತ್ತದೆ ಪುಟಗಳು 390-392 ರಲ್ಲಿ 5 ಕವಿಗಳ ವಿಷಯವು ಹೇಳಿದೆ; ಇವರಲ್ಲಿ ಇಬ್ಬರು ಪೂರ್ವ ಪರಿಚಿತರು; 1800 ರಿಂದ 1860ರ ವರೆಗೆ ಬಾಳಿದ ಉಳಿದ ಮೂವರು ಈ ಸಂಪುಟಕ್ಕೆ ಸೇರತಕ್ಕವರು ಪುಟಗಳು 392-396ರಲ್ಲಿ 32 ಆಧುನಿಕ ಗ್ರಂಥಕರ್ತರ ವಿಷಯವು ತಿಳಿಸಿದೆ. ಇವರಲ್ಲಿ ಮೂವರು ಪೂರ್ವಪರಿಚಿತರು. 397ನೆಯ ಪುಟದಲ್ಲಿ ಸುಮಾರು 1600 ರಿಂದ 1811ರ ವರೆಗೆ ಹುಟ್ಟಿದ ಕವಿಗಳು ಗೊತ್ತಿಲ್ಲದ 6 ಹೊಸಗ್ರಂಥಗಳು ಹೇಳಿವೆ. ಇವು 2 ನೆಯ ಪರಿಶಿಷ್ಟದಲ್ಲಿ ಕೊಟ್ಟಿರುವ 213 ಗ್ರಂಥಗಳೊಡನೆ ಸೇರತಕ್ಕುವು. 398 ನೆಯ ಪುಟದಲ್ಲಿ 347 ರಿಂದ 382ರ ವರೆಗಿನ ಪುಟಗಳ ಗ್ರಂಥ ಶುದ್ಧಿ ತಿಳಿಸಿದೆ. 6 ನೆಯ ಪರಿಶಿಷ್ಟವು (ಪುಟಗಳು 399-417) ಪ್ರಥಮ ದ್ವಿತೀಯ ಸಂಪುಟಗಳಲ್ಲಿ ಹೇಳಿರುವ ಕವಿಗಳ ಮತ್ತು ಗಂಥಗಳ ಸೂಚಿಯ ರೂಪವಾಗಿದೆ. ಇದಾದಮೇಲೆ ಬರುವ ಅನುಬಂಧದಲ್ಲಿ (ಪುಟಗಳು 418-433) ಮೂರು ಸಂಪುಟಗಳಲ್ಲಿಯೂ ಹೇಳ

ದಿರುವ ಕೆಲವು ಹೊಸ ಗ್ರಂಥಗಳ ಹೆಸರು ಹೇಳಿದೆ. 7ನೆಯ ಪರಿಶಿಷ್ಟವು (ಪುಟಗಳು 435-470) ಕೆಲವರು ಹೊಸ ಪೂರ್ವಕವಿಗಳ ಮತ್ತು ಆಧುನಿಕರ ಚರಿತ್ರವನ್ನು ಒಳಕೊಂಡಿದೆ. ಪುಟಗಳು 435-462 ರಲ್ಲಿ 32 ಪೂರ್ವಕವಿಗಳ ವಿಷಯವು ಹೇಳಿದೆ: ಇವರಲ್ಲಿ 8 ಮಂದಿ ಪೂರ್ವಪರಿಚಿತರು-7 ಮಂದಿ ಹಿಂದೆ ಪುಟಗಳು 360-361ರಲ್ಲಿ ಉಕ್ತರಾಗಿದ್ದಾರೆ. ಆದರೆ ಇಲ್ಲಿ ಅವರ ವಚನಗಳು ಕೊಟ್ಟಿವೆ. ಮತ್ತೊಬ್ಬನು ದ್ವಿತೀಯ ಸಂಪುಟದಲ್ಲಿ ಉಕ್ತನಾಗಿದ್ದಾನೆ. 1109 ರಿಂದ 1840 ರ ವರೆಗೆ ಬಾಳಿದ ಉಳಿದ 24 ಕವಿಗಳಲ್ಲಿ 8 ಮಂದಿ ಪ್ರಥಮ ಸಂಪುಟಕ್ಕೂ ಮೂವರು ದ್ವಿತೀಯ ಸಂಪುಟಕ್ಕೂ 13 ಮಂದಿ ಈ ಸಂಪುಟಕ್ಕೂ ಸೇರತಕ್ಕವರು: ಇವರಲ್ಲಿ ಒಬ್ಬ ಸ್ತ್ರೀಯನ್ನು ಒಳಕೊಂಡ ಮೂವರು ವಚನ ಕಾರರೂ ಐವರು ಶಾಸನ ಕವಿಗಳೂ ಸೇರಿದ್ದಾರೆ. ಪುಟಗಳು 462-470 ರಲ್ಲಿ 44 ಆಧುನಿಕ ಗ್ರಂಥಕರ್ತರ ವಿಷಯವು ಹೇಳಿದೆ: ಇವರಲ್ಲಿ 13 ಮಂದಿ ಪೂರ್ವ ಪರಿಚಿತರು. ಆದರೆ ಇಲ್ಲಿ ಅವರ ಇನ್ನು ಕೆಲವು ಗ್ರಂಥಗಳು ಕೊಟ್ಟಿವೆ. ಗ್ರಂಥ ಶುದ್ಧಿಯಲ್ಲಿ (ಪುಟಗಳು 471-497) ಮಧುವಯ್ಯ, ಲಿಂಗಣಾರಾಧ್ಯ ಎಂಬ ಎಂಬ ಇಬ್ಬರು ಪೂರ್ವಕವಿಗಳ ವಿಷಯವು ಹೇಳಿದೆ ಇವರಲ್ಲಿ 1ನೆಯವನು ಪ್ರಥಮ ಸಂಪುಟಕ್ಕೂ 2 ನೆಯವನು ದ್ವಿತೀಯ ಸಂಪುಟಕ್ಕೂ ಸೇರತಕ್ಕವರು. ಕೊನೆಯಲ್ಲಿರುವ ಅಕಾರಾದಿ ಸೂಚಿ 7 ನೆಯ ಪರಿಶಿಷ್ಟದಲ್ಲಿಯೂ ಗ್ರಂಥ ಶುದ್ಧಿಯಲ್ಲಿಯೂ ಹೇಳಿರುವ ಕವಿಗಳ ಮತ್ತು ಗ್ರಂಥಗಳ ಹೆಸರನ್ನು ತಿಳಿಸುತ್ತದೆ.

ಈ ಸಂಪುಟದಲ್ಲಿ ಹೇಳಿರುವ ಪೂರ್ವಕವಿಗಳ ಒಟ್ಟು ಸಂಖ್ಯೆ—ಮೂಲ ಗ್ರಂಥದಲ್ಲಿ 165, 1 ನೆಯ ಪರಿಶಿಷ್ಟದಲ್ಲಿ 33, 4ನೆಯ ಪರಿಶಿಷ್ಟದಲ್ಲಿ 125, 5ನೆಯ ಪರಿಶಿಷ್ಟದಲ್ಲಿ 3, 7ನೆಯ ಪರಿಶಿಷ್ಟದಲ್ಲಿ 24, ಗ್ರಂಥ ಶುದ್ಧಿಯಲ್ಲಿ 2—ಹೀಗೆ 352. ಈ ಸಂಖ್ಯೆಯಲ್ಲಿ 23 ಸ್ತ್ರೀಯರನ್ನು ಒಳಕೊಂಡ 124 ವಚನ ಕಾರರೂ ಬೇರೆ ಇಬ್ಬರು ಕಬ್ಬಿಗಿತಿಯರೂ 8 ಶಾಸನಕವಿಗಳೂ ಸೇರಿದ್ದಾರೆ. ಮತಾನುಸಾರವಾಗಿ ವಿಭಾಗಿಸಿದರೆ ಇವರಲ್ಲಿ ವೀರಶೈವರು 191, ಬ್ರಾಹ್ಮಣರು 108, ಜೈನರು 23, ಇತರರು 30. ಇತರರೊಳಗೆ 10 ಮಂದಿ ಅರಸರೂ 12 ಮಂದಿ ಒಕ್ಕಲಿಗರೂ 6 ಮಂದಿ ದೇವಾಂಗದವರೂ ಸೇರಿದ್ದಾರೆ. ಈ 352 ಕವಿಗಳಲ್ಲಿ 110 ಮಂದಿ ಪ್ರಥಮ ಸಂಪುಟಕ್ಕೂ 43 ಮಂದಿ ದ್ವಿತೀಯ ಸಂಪುಟಕ್ಕೂ ಸೇರತಕ್ಕವರು: ಉಳಿದ 199 ಮಂದಿಯೇ ಈ ಸಂಪುಟಕ್ಕೆ ಸೇರು ತ್ತಾರೆ.

ಹಾಗೆಯೇ ಈ ಸಂಪುಟದಲ್ಲಿ ಹೇಳಿರುವ ಆಧುನಿಕ ಗ್ರಂಥಕರ್ತರ ಒಟ್ಟು ಸಂಖ್ಯೆ—ಮೂಲಗ್ರಂಥದಲ್ಲಿ 155, 5ನೆಯ ಪರಿಶಿಷ್ಟದಲ್ಲಿ 29, 7ನೆಯ ಪರಿಶಿ

ಷ್ಟದಲ್ಲಿ 31 – ಹೀಗೆ 215. ಇವರಲ್ಲಿ 7 ಮಂದಿ ಸ್ತ್ರೀಯರು ಸೇರಿದ್ದಾರೆ. ಮತದ ಪ್ರಕಾರ ವಿಂಗಡಿಸಿದರೆ ಇವರಲ್ಲಿ ಬ್ರಾಹ್ಮಣರು 159, ವೀರಶೈವರು ಆ ಮತಕ್ಕೆ ಸೇರಿದ ಒಬ್ಬ ಮುಸಲ್ಮಾನನನ್ನು ಕೂಡಿಸಿಕೊಂಡು 27, ಜೈನರು 1, ಇತರರು 28. ಇತರರೊಳಗೆ ಇಬ್ಬರು ಒಕ್ಕಲಿಗರೂ 18 ಮಂದಿ ಕ್ರಿಸ್ತರೂ ಸೇರಿದ್ದಾರೆ.

ಪೂರ್ವಕವಿಗಳೂ ಆಧುನಿಕರೂ ಸೇರಿ ಈ ಸಂಪುಟದಲ್ಲಿ ಹೇಳಿರುವ ಗ್ರಂಥ ಕರ್ತರ ಒಟ್ಟು ಸಂಖ್ಯೆ 352+215=567. ಈ ಸಂಖ್ಯೆಯಲ್ಲಿ 124 ವಚನ ಕಾರರೂ 32 ಸ್ತ್ರೀಯರೂ 8 ಶಾಸನ ಕವಿಗಳೂ ಸೇರಿದ್ದಾರೆ. ಮತದ ಪ್ರಕಾರ ಇವರಲ್ಲಿ ಬ್ರಾಹ್ಮಣರು 267, ವೀರಶೈವರು 218, ಜೈನರು 24, ಇತರರು 58 ಇತರರೊಳಗೆ 10 ಮಂದಿ ಅರಸರೂ 14 ಮಂದಿ ಒಕ್ಕಲಿಗರೂ 6 ಮಂದಿ ದೇವಾಂಗದವರೂ 18 ಮಂದಿ ಕ್ರಿಸ್ತರೂ ಸೇರಿದ್ದಾರೆ. ಹಿಂದೆ ತಿಳಿಸಿದಂತೆ ಈ ಸಂಪುಟಕ್ಕೆ ಸೇರಬೇಕಾದ ಪೂರ್ವಕವಿಗಳ ಸಂಖ್ಯೆ 199: ಇದಕ್ಕೆ ಆಧುನಿಕರ ಸಂಖ್ಯೆಯಾದ 215ನ್ನು ಸೇರಿಸಿದರೆ ಒಟ್ಟು ಈ ಸಂಪುಟದ ಕವಿಗಳ ಸಂಖ್ಯೆ 414 ಆಗುತ್ತದೆ.

## ವಚನಕಾರರು.

ಈ ಸಂಪುಟದಲ್ಲಿ ಕೊಟ್ಟಿರುವ ವಚನಕಾರರ ಸಂಖ್ಯೆ (124) ತಕ್ಕಮಟ್ಟಿಗೆ ದೊಡ್ಡದಾಗಿದೆ. ಇದಕ್ಕೆ ಪ್ರಥಮ ದ್ವಿತೀಯ ಸಂಪುಟಗಳಲ್ಲಿಯ ವಚನ ಕಾರರ ಸಂಖ್ಯೆಯನ್ನು (60) ಸೇರಿಸಿದರೆ ಒಟ್ಟುಸಂಖ್ಯೆ 184 ಆಗುತ್ತದೆ. ಇದಲ್ಲದೆ 6 ನೆಯ ಪರಿಶಿಷ್ಟದಲ್ಲಿ ವಚನಗಳೊಡನೆಯೂ ವಚನಗಳಿಲ್ಲದೆಯೂ 59 ಅಂಕಿತಗಳು ಉಕ್ತವಾಗಿವೆ. ಈ ಅಂಕಿತಗಳನ್ನು ಉಪಯೋಗಿಸಿದ 59 ವಚನಕಾರರು ಇದ್ದೇ ಇರಬೇಕು. ಆದುದರಿಂದ ನಮಗೆ ತಿಳಿದಮಟ್ಟಿಗೆ ವಚನಕಾರರ ಸಂಖ್ಯೆ 243 ಆಗುತ್ತದೆ. ಇವರಲ್ಲಿ ಕೆಲವರು ಮಾತ್ರ ಬಸವನ ಕಾಲಕ್ಕೆ ಹಿಂದೆ ಇದ್ದವರು ; ಆದರೆ ಬಹುಸಂಖ್ಯಾತರು ಬಸವನ ಸಮಕಾಲದವರು. ಬಸವಯುಗದಲ್ಲಿ ಹುಟ್ಟಿದ ವಚನಗಳ ಸಂಖ್ಯೆ 160 ಕೋಟಿ ಎಂದು ಇತಿಹಾಸವಿದೆ. ಬಸವನ ಕಾಲಕ್ಕೆ ಈಚೆಯೂ ಹಲವರು ವಚನಗಳನ್ನು ಬರೆದಿದ್ದಾರೆ. ಈ ವಚನಗಳು ಕನ್ನಡಸಾಹಿತ್ಯದಲ್ಲಿ ಪೂಜ್ಯಸ್ಥಾನವನ್ನು ಪಡೆಯಲು ಅರ್ಹವಾಗಿವೆ. ಇವು ಗೂಢವಾದ ವೇದಾಂತ ವಿಷಯಗಳನ್ನು ಸುಲಭವಾದ ಮಾತುಗಳಿಂದ ಬಿಗಿಯಾದ ಶೈಲಿಯಲ್ಲಿ ಮನಮುಟ್ಟುವಂತೆ ಬೋಧಿಸುತ್ತವೆ. ಇವನ್ನು ಕನ್ನಡ ಉಪನಿಷತ್ತುಗಳು ಎಂದು ಕರೆಯಬಹುದು. ಇವುಗಳ ಮಹತ್ವವನ್ನು ಬಸವನೇ ಮೊದಲಾದವರು ಹೀಗೆ ಹೊಗಳಿದ್ದಾರೆ :—

ಆದ್ಯರ ವಚನ ಪರುಷ ಕಂಡಯ್ಯಾ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಕೂಡಲಸಂಗನ ಶರಣರ ವಚನ ಬೇವ ಸವಿದಂತೆ.

ಹಾಲ ತೊರೆಗೆ ಬೆಲ್ಲದಂತಹ ಕೆಸರು; ಸಕ್ಕರೆಯಂತಹ ಮರಳು; ತವರಾಜನಂತಹ ನೊರೆತೆರೆಗಳು. ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ ಉಪ್ಪುನೀರ ಸವಿದಂತಾಯಿತ್ತಯ್ಯಾ ಎನ್ನ ಯುಕ್ತಿ.

ಬಸವ

ನಮ್ಮ ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು. ನಮ್ಮ ಆದ್ಯರ ವಚನ ಮದಮಾತ್ಸರ್ಯಾದಿ ಅರಿಷಡ್ವರ್ಗ ಸಪ್ತವ್ಯಸನ ಪಂಚೇಂದ್ರಿಯ ದಶವಾಯುಗಳಿಚ್ಛೆಗೆ ಹರಿವ ಮನವ ಸ್ವಸ್ಥವಾಗಿ ನಿಲಿಸಿತ್ತು. ನಮ್ಮ ಆದ್ಯರ ವಚನ ಅಂಗೇಂದ್ರಿಯಂಗಳ ಲಿಂಗೇಂದ್ರಿಯವೆನಿಸಿತ್ತು. ನಮ್ಮ ಆದ್ಯರ ವಚನ ನೂರೊಂದು ಸ್ಥಲವ ಮೀರಿದ ಮಹದಲ್ಲಿ ನೆಲಸಿತ್ತು. ಇಂತಪ್ಪ ಆದ್ಯರ ವಚನ ಭಂಡಾರವ ನಮ್ಮ ಪ್ರಭುದೇವರು ಮುಖ್ಯವಾದ 770 ಅಮರಗಣಂಗಳು ಅಸಂಖ್ಯಾತ ಪುರಾತನರು ಪ್ರಮಥಗಣಂಗಳು ಕೇಳಿ ಹೇಳಿ ಕೊಂಡಾಡಿದ ಕಾರಣ ನಮ್ಮ 'ಕೂಡಲ ಚೆನ್ನ ಸಂಗಯ್ಯನಲ್ಲಿ ಸರ್ವಸುಖವ ಸೂರೆಗೊಂಡು ಸ್ವಯಲಿಂಗವಾದರು. ಇಂತಪ್ಪ ಪುರಾತನರ ವಚನಂಗಳ ಎರಡಿಲ್ಲದೆ ಕೊಂಡಾಡಿ ತನುಮನಧನವ ಎರಡಿಲ್ಲದೆ ಸಮರ್ಪಿಸುವ ಭಕ್ತರ ಭೃತ್ಯ ನಾನು, ಆಳಿನಾಳಯ್ಯಾ ನಾನು.

ಚೆನ್ನಬಸವ

ತಿಳಿಪಲ್ ಶಿವಜೀವೈಕ್ಯಮಂ| ನಿಲಿಪಲ್ ಭವಪಾಶಬಂಧಮಂ ಶಿವಪದಮಂ|
ತ್ಸಲಿಪಲ್ ನಿಜದೊಳ್ ಚಿತ್ಕ್ರಿಯೆ|ಯಳವಟ್ಟ ಪುರಾತನೋಕ್ತಿಯೊಂದೆ ಸಮರ್ಥಂ||

ಕಂಬಾಳ ಶಾಂತಮಲ್ಲೇಶ (380ನೆಯ ಪುಟವನ್ನು ನೋಡಿ).

ಪುಟಗಳು 356—359ರಲ್ಲಿ ಉಕ್ತರಾದ ವಚನಕಾರರಿಗೆ ಕೊಟ್ಟಿರುವ ಕಾಲವು ಸರಿಯಾಗಿದೆ ಎಂದು ಖಂಡಿತವಾಗಿ ಹೇಳಲಾರೆನು.

ಆದಿಭಾಗದಲ್ಲಿ ವಾಚಕರ ಸೌಕರ್ಯಕ್ಕಾಗಿ ಈ ಸಂಪುಟದಲ್ಲಿ 7ನೆಯ ಪರಿಶಿಷ್ಟದವರೆಗೆ ವಿವರಿಸಿರುವ ಕವಿಗಳ ಮತ್ತು ಗ್ರಂಥಗಳ ಪಟ್ಟಿಗಳು ಬೇರೆ ಬೇರೆ ವರ್ಣಾನುಕ್ರಮವಾಗಿ ಪುಟಸಂಖ್ಯೆಯೊಡನೆ ಕೊಟ್ಟಿವೆ 7ನೆಯ ಪರಿಶಿಷ್ಟದಲ್ಲಿಯೂ ಅದರ ಮುಂದೆ ಇರುವ ಗ್ರಂಥಶುದ್ಧಿಯಲ್ಲಿಯೂ ಬರುವ ಕವಿಗಳ ಮತ್ತು ಗ್ರಂಥಗಳ ಹೆಸರುಗಳು ಕೊನೆಯಲ್ಲಿರುವ ಅಕಾರಾದಿಸೂಚಿಯಲ್ಲಿ ಕೊಟ್ಟಿವೆ. ಈ ಸಂಪುಟದಲ್ಲಿ ಗ್ರಂಥಶುದ್ಧಿ ಪುಟ 327, ಪುಟ 398, ಪುಟ 471

ಹೀಗೆ ಮುಂದೆ ಬರುತ್ತದೆ. ಕೊನೆಯ ಗ್ರಂಥಶುದ್ಧಿ ಈ ಸಂಪುಟಕ್ಕೆ ಮಾತ್ರ ವಲ್ಲದೆ ಪ್ರಥಮ ದ್ವಿತೀಯ ಸಂಪುಟಗಳಿಗೂ ಅನ್ವಯಿಸುತ್ತದೆ.

ಈ ಸಂಪುಟವು ಹಿಂದೆ ತಿಳಿಯದಿದ್ದ ಅನೇಕ ಕವಿಗಳ ಮತ್ತು ಗ್ರಂಥಗಳ ವಿಷಯವನ್ನು ಒಳಕೊಂಡಿದೆ. ಇದರಲ್ಲಿ ಹೇಳಿರುವ ಕವಿಗಳ ಮತ್ತು ಗ್ರಂಥಗಳ ವಿಷಯವು ಅರ್ಧಪಾಲಿಗಿಂತ ಹೆಚ್ಚು ಹೊಸದೆಂದು ಸ್ಥೂಲವಾಗಿ ಹೇಳಬಹುದು. ಈ ಅಂಶವು ಗ್ರಂಥವನ್ನು ಕ್ರಮವಾಗಿ ಓದಿನೋಡಿದಲ್ಲಿ ಸ್ವತಃ ವ್ಯಕ್ತವಾಗುವುದರಿಂದ ಅದನ್ನು ಇಲ್ಲಿ ವಿವರಿಸಬೇಕಾದ ಆವಶ್ಯಕತೆ ಕಾಣಬರುವುದಿಲ್ಲ. ಇಲ್ಲಿ ಹೇಳಿರುವರೆಲ್ಲರೂ ಉದ್ದಾಮಕವಿಗಳೆಂದು ಭಾವಿಸಲಾಗದು ಇವರಲ್ಲಿ 2 ಮುಖ್ಯವಾಗಿ ಆಧುನಿಕರಲ್ಲಿ, ಹಲವರು ಕವಿಗಳೆನ್ನಿಸಿಕೊಳ್ಳಲು ಅರ್ಹರಲ್ಲವೆಂದು ಹಿಂದೆಯೇ ಹೇಳಿದ್ದೇನೆ. ನನ್ನ ತಿಳಿವಳಿಕೆಗೆ ಬಂದ ಪ್ರತಿಯೊಬ್ಬ ಗ್ರಂಥಕರ್ತನ ಹೆಸರೂ ಗ್ರಂಥದಲ್ಲಿ ಇರಬೇಕೆಂದು ಭಾವಿಸಿ ಎಲ್ಲರನ್ನೂ ಸೇರಿಸಿದ್ದೇನೆ. ಈಚೀಚೆಗೆ ಕವಿತಾಶಕ್ತಿ ಕುಂದುತ್ತ ಬಂದಿರುವುದು ಎಲ್ಲರಿಗೂ ವೇದ್ಯವಾಗಿಯೇ ಇದೆ.

ಈ ಸಂಪುಟವನ್ನು ಬರೆವುದಕ್ಕಾಗಿ ಮೈಸೂರು ಪ್ರಾಚ್ಯಕೋಶಾಲಯ. ಶ್ರೀಮತ್ಪರಮಹಂಸೇತ್ಯಾದಿಗಳಾದ ಮೇಲುಗೋಟೆ ಯತಿರಾಜಸ್ವಾಮಿಗಳು. ಶ್ರೀಮಂತರು ಕರ್ಣಾಟಕ ಭಾಷಾರತ್ನ ಮೈಸೂರು ಕರಿಬಸವಶಾಸ್ತ್ರಿಗಳು, ಬೆಂಗಳೂರು ಪಂಡಿತ ಎಂ. ಎಲ್ಲಪ್ಪನವರು, ಅರಳೆಪೇಟೆ ಗುರುಸಿದ್ದಪ್ಪನವರು ಇವರುಗಳಲ್ಲಿದ್ದ ಪುಸ್ತಕ ಸಂಗ್ರಹಗಳು ಇವುಗಳನ್ನು ಪರೀಕ್ಷಿಸಿದೆನು. ಕೋಶಾಲಯದ ಅಧಿಕಾರಿಗಳಿಗೂ ಮೇಲೆ ಹೇಳಿದ ಮಹಾಶಯರುಗಳಿಗೂ ನನ್ನ ಕೃತಜ್ಞತೆಯನ್ನು ತಿಳಿಸುತ್ತೇನೆ. ಹೀಗೆಯೇ ಕೈಬರಹದ ಪುಸ್ತಕಗಳನ್ನಾಗಲಿ ಸೂಚನೆಗಳನ್ನಾಗಲಿ ಗುಣದೋಷ ವಿಮರ್ಶೆಗಳನ್ನಾಗಲಿ ಕಳುಹಿಸಿಕೊಟ್ಟು ಸಹಾಯಮಾಡಿದ ಶ್ರೀಮಂತರು ದಾವಣಗೆರೆ ವಿರಾವಿ ಮಠದ ಶಾಂತವೀರಾರ್ಯರು, ಹೆಗ್ಗಡದೇವನ ಕೋಟೆ ತಾಲ್ಲೂಕು ಎತ್ತಿಗೆ ಮಠದ ದೊಡ್ಡಾರಾಮಾರಾಧ್ಯರು, ಮಹಾಮಹೋಪಾಧ್ಯಾಯ ಸಿದ್ಧಾಂತಿ ಶಿವಶಂಕರ ಶಾಸ್ತ್ರಿಗಳು ಧಾರವಾಡದ ರಾಮಚಂದ್ರ ಹನುಮಂತ ದೇಶಪಾಂಡೆ ಎಂ. ಎ., ಪುತ್ತೂರು ಉಗ್ರಾಣ ಮಂಗೇಶರಾಯರು, ಮದರಾಸ್ ಬೆನಗಲ್ ರಾಮರಾಯರು ಎಂ. ಎ. ಎಲ್. ಎಲ್. ಬಿ., ಹಲಸಂಗಿ ಜಿ ಚೆನ್ನಮಲ್ಲಪ್ಪನವರು, ಧಾರವಾಡದ ಎಸ್. ಎನ್. ಕೊಪ್ಪಿಕರ್, ಕಕ್ಕೆಯ ವೆಂಕಪ್ಪ ಪರಮಯ್ಯ ಹೆಗ್ಗಡೆ ಕಡೆಕೋಡಿ, ಹಾವೇರಿಯ ಎಚ್. ಜಿ. ಬೆಂಗೇರಿ ಬಿ. ಎ., ಮೈಸೂರು ಪಂಡಿತ ರಘುಪತ್ಯಾಚಾರ್ಯರು ಮತ್ತು ಪಂಡಿತ ಕೆ. ಸಿ. ನಂಜುಂಡಾರಾಧ್ಯರು, ಕನ್ನಡ ಪ್ರೊಫೆಸರ್. ಎಚ್. ಚೆನ್ನಕೇಶವಯ್ಯಂಗಾರ್, ಬೆಂಗಳೂರು ಜೀರಿಗೆ ಬಸವಲಿಂಗಪ್ಪನ

ವರು ಮಂಜೇಶ್ವರದ ಎಂ. ಗೋವಿಂದ ಪೈ, ಮದರಾಸ್ ಯೂನಿವರ್ಸಿಟಿ ಕನ್ನಡ ಫೆಲ್ಲೋ ಎಚ್. ಶೇಷಯ್ಯಂಗಾರ್, ಎಚ್. ನಾರಾಯಣರಾಯರು ಬಿ. ಎ. ಬಿ.ಎಲ್., ರಾಯ್ ಬಹಾದುರ್ ಎಂ. ರಘುನಾಥರಾಯರು ಬಿ.ಎ., ಈ ಮಹನೀಯರುಗಳ ಉಪಕಾರವು ಚಿರಸ್ಮರಣೀಯವಾಗಿದೆ. ಇವರೊಳಗೆ ಮೊದಲು ಹೇಳಿರುವ ಇಬ್ಬರು ಮಹಾಶಯರು ದೂರವಾದ ತಮ್ಮ ವಾಸಸ್ಥಳಗಳಿಂದ ನನ್ನ ಅವಲೋಕನಕ್ಕಾಗಿ ಹಲವು ಓಲೆಯ ಪುಸ್ತಕಗಳನ್ನು ತರುವ ಶ್ರಮವನ್ನು ವಹಿಸಿ ಬಹಳ ಸಹಾಯಮಾಡಿದ್ದಾರೆ. ಈ ಸಂದರ್ಭದಲ್ಲಿ ಮೈಸೂರು ಶಾಸನ ಇಲಾಖೆಯ ಶ್ರೀಮಾನ್ ಎಂ. ಸಿ. ಶ್ರೀನಿವಾಸಯ್ಯಂಗಾರ್ ಈ ಸಂಪುಟದ ಮತ್ತು ದ್ವಿತೀಯ ಸಂಪುಟದ ಕೆಲವು ಭಾಗಗಳನ್ನು ಮುದ್ರಣಕ್ಕೋಸ್ಕರ ಪ್ರತಿಮಾಡಿ ಸಹಕರಿಸಿದುದೂ ಸ್ಮರಿಸತಕ್ಕುದಾಗಿದೆ. ಕೊನೆಗೆ ಶ್ರೀಮಾನ್ ಸಿ. ಎ. ರಾಘವೇಂದ್ರಯ್ಯ, ನನ್ನ ಸೋದರಳಿಯ ಶ್ರೀಮಾನ್ ಎಂ. ಎ. ರಂಗಸ್ವಾಮಯ್ಯಂಗಾರ್ ಬಿ. ಎ. ಮತ್ತು ನನ್ನಮಗ ಶ್ರೀಮಾನ್ ಆರ್. ತಿರುನಾರಣಯ್ಯಂಗಾರ್ ಇವರುಗಳು ಮುದ್ರಣಕ್ಕಾಗಿ ಈ ಸಂಪುಟದ ಕೆಲವುಭಾಗಗಳನ್ನು ಪ್ರತಿಮಾಡುವುದು, ಈ ಸಂಪುಟಕ್ಕೆ ವಿಷಯಸೂಚಿಕೆ, ಅನುಬಂಧ, ಅಕಾರಾದಿಸೂಚಿ ಇವುಗಳನ್ನು ಸಿದ್ಧಮಾಡುವುದು ಈ ಕೆಲಸಗಳಲ್ಲಿ ಮಾಡಿದ ಸಹಾಯವೂ ತಿಳಿಸತಕ್ಕುದಾಗಿದೆ.

ಈ ಸಂಪುಟವು 18, 19 ಈ ಎರಡು ಶತಮಾನಗಳಲ್ಲಿದ್ದ ಕವಿಗಳ ಸಮಗ್ರವಾದ ಮತ್ತು ನಿರ್ದೋಷವಾದ ಚರಿತೆಯನ್ನು ಒಳಕೊಂಡಿದೆ ಎಂದು ನಾನು ಹೇಳಲಾರೆನು. ಇದರಲ್ಲಿ ಎಷ್ಟೋ ಕುಂದು ಕೊರತೆಗಳಿವೆ. ಆದರೆ ನನಗೆ ದೊರೆತ ಸಾಮಗ್ರಿಯ ಆಧಾರದಿಂದ ಎಷ್ಟರಮಟ್ಟಿಗೆ ಸಮಗ್ರವಾಗಿಯೂ ದೋಷರಹಿತವಾಗಿಯೂ ಮಾಡಲು ಸಾಧ್ಯವೊ ಅಷ್ಟರಮಟ್ಟಿಗೆ ಮಾಡಲು ಪ್ರಯತ್ನಿಸಿದ್ದೇನೆ. 69ನೆಯ ವಯಸ್ಸು ನಡೆಯುತ್ತಿರುವ ವಾರ್ಧಕ್ಯ, ಎರಡುಕಣ್ಣುಗಳಿಗೂ ಬಂದಿರುವ ಪರೆಯಿಂದ ಉಂಟಾಗಿರುವ ನೇತ್ರ ಪಾಟವದ ಕೊರತೆ, ಈ ಪ್ರತಿಬಂಧಕಗಳಿದ್ದರೂ ಈ ಸಂಪುಟವನ್ನು ಪೂರ್ತಿಮಾಡಲು ಸಾಧ್ಯವಾದುದಕ್ಕಾಗಿ ಸಂತೋಷಿಸಿ ಇದನ್ನೂ ಕನ್ನಡಿಗರಿಗೆ ಕಾಣಿಕೆಯಾಗಿ ಒಪ್ಪಿಸಿದ್ದೇನೆ. ಇದೂ ಅವರ ಮೆಚ್ಚಿಕೆಗೂ ಪ್ರೋತ್ಸಾಹಕ್ಕೂ ಪಾತ್ರವಾದರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುವೆನು.

## ಕರ್ಣಾಟಕ ಕವಿಚರಿತೆ.

### ಕನ್ನಡ ಸಾಹಿತ್ಯದ ವಿಪುಲತೆ.

ಕನ್ನಡದಲ್ಲಿ ಹೇರಳವಾಗಿ ಗ್ರಂಥಗಳು ಹುಟ್ಟಿವೆ. ಈ ಭಾಷೆಯ ಸಾಹಿತ್ಯವು ದಕ್ಷಿಣ ಹಿಂದೂದೇಶದ ಇತರ ದ್ರಾವಿಡಭಾಷೆಗಳ ಸಾಹಿತ್ಯದೊಡನೆ

ಹೋಲಿಸಿದರೆ ಹಿಂದಾಗುವಂತಿಲ್ಲ. ಕರ್ಣಾಟಕ ಕವಿಚರಿತೆಯು ಮೂರು ಸಂಪುಟಗಳನ್ನು ಸೂಕ್ಷ್ಮದೃಷ್ಟಿಯಿಂದ ನೋಡಿದರೂ ಈ ಹೇಳಿಕೆಯ ನಿಜತ್ವವು ಧೃಢಪಡುತ್ತದೆ. ಇತರ ದ್ರಾವಿಡ ಭಾಷೆಗಳಲ್ಲಿರುವಂತೆಯೇ ಕನ್ನಡದಲ್ಲಿ ಬಹು ಗ್ರಂಥಗಳು ಮತಕ್ಕೆ ಸಂಬಂಧಪಟ್ಟುವು. ಭಟ್ಟಾಕಳಂಕನು (1604) ಕನ್ನಡದಲ್ಲಿ ವ್ಯಾಕರಣ, ತರ್ಕ, ವೇದಾಂತ ಇವಕ್ಕೆ ಸಂಬಂಧಿಸಿದ ಅನೇಕ ಗ್ರಂಥಗಳೂ ಕಾವ್ಯ, ನಾಟಕ, ಅಲಂಕಾರ ಕಲೆ, ಶಾಸ್ತ್ರ ಇವಕ್ಕೆ ಸಂಬಂಧಪಟ್ಟ ಅಸಂಖ್ಯಾತವಾದ ಗ್ರಂಥಗಳೂ ಹುಟ್ಟಿವೆ ಎಂದು ತನ್ನ ಶಬ್ದಾನುಶಾಸನದ ಉಪೋದ್ಘಾತದಲ್ಲಿ ಹೇಳಿ[1] ಕರ್ಣಾಟಕ ಸಾಹಿತ್ಯದ ವಿಪುಲತೆಯನ್ನು ಸೂಚಿಸಿದ್ದಾನೆ. ಕನ್ನಡ ಸಾಹಿತ್ಯವನ್ನು ಪರೀಕ್ಷಿಸಿದರೆ ಕಾವ್ಯಗಳು, ಛಂದೋಲಂಕಾರ ವ್ಯಾಕರಣ ವಿಷಯವಾದ ಗ್ರಂಥಗಳು, ನಿಘಂಟುಗಳು ಮಾತ್ರವಲ್ಲದೆ ಜೀವನ ಚರಿತ್ರೆ, ಸ್ಥಳೀಯ ಚರಿತ್ರೆ, ತತ್ವಶಾಸ್ತ್ರ ಇವುಗಳ ವಿಷಯವಾದ ಗ್ರಂಥಗಳೂ ವೈದ್ಯ, ಗಣಿತ. ಜ್ಯೋತಿಷ, ಪಾಕಶಾಸ್ತ್ರ, ಕಾಮಶಾಸ್ತ್ರ ಮುಂತಾದ ವಿಷಯಗಳನ್ನು ಪ್ರತಿಪಾದಿಸುವ ಹಲವು ಗ್ರಂಥಗಳೂ ಗೋಚರವಾಗುತ್ತವೆ. ಇದಲ್ಲದೆ ಉತ್ತಮ ಕಾವ್ಯಸರಣಿಯಲ್ಲಿ ಪ್ರೌಢ ಕವಿಗಳಿಂದ ರಚಿತವಾದ ಅನೇಕ ಕನ್ನಡಶಾಸನಗಳೂ ದೊರೆಯುತ್ತವೆ.

## ಕನ್ನಡ ಕವಿಗಳು.

ಕನ್ನಡಭಾಷೆಗೆ ಜೈನರೇ ಆದಿಕವಿಗಳು. ಈಗ ನಮಗೆ ದೊರೆತಿರುವ ಪುರಾತನವಾದ ಮತ್ತು ಉತ್ತಮವಾದ ಗ್ರಂಥಗಳೆಲ್ಲಾ ಜೈನಕವಿಗಳಿಂದ ರಚಿತವಾಗುವು. ಗ್ರಂಥ ರಚನೆಯಲ್ಲಿ ಜೈನರ ಪ್ರಾಬಲ್ಯದ ಕಾಲವು ಕನ್ನಡ ಸಾಹಿತ್ಯದಉಚ್ಚಸ್ಥಿತಿಯ ಕಾಲವೆಂದು ತಿಳಿಯಬೇಕು. ಕನ್ನಡಭಾಷೆಯ ಸೌಂದರ್ಯ ಕಾಂತಿಗಳಿಗೆ ಹಿಂದಣ ಜೈನ ಕವಿಗಳೇ ಬಹಳ ಮಟ್ಟಿಗೆ ಕಾರಣಭೂತರು. ಇವರು ಶುದ್ಧವಾದ ಮತ್ತು ಗಂಭೀರವಾದಶೈಲಿಯಲ್ಲಿ ಗ್ರಂಥಗಳನ್ನು ರಚಿಸಿ ಗ್ರಂಥರಚನಾಕೌಶಲವನ್ನು ಎತ್ತರವಾದ ಅಂತಸ್ತಿಗೆ ಏರಿಸಿದ್ದಾರೆ. ಪಂಪಪೊನ್ನರನ್ನರು ಕವಿಗಳೊಳಗೆ ರತ್ನತ್ರಯರೆನ್ನಿಸಿಕೊಂಡಿರುವುದು ಉಚಿತವೇ ಸರಿ. ಪೊನ್ನನು ರಾಷ್ಟ್ರಕೂಟರಾಜನಾದ 3ನೆಯ ಕೃಷ್ಣನಿಂದಲೂ ರನ್ನನು ಚಾಳುಕ್ಯರಾಜನಾದ ತೈಲಪನಿಂದಲೂ ಜನ್ನನು ಹೊಯ್ಸಳರಾಜನಾದ 2ನೆಯ ಬಲ್ಲಾಳನಿಂದಲೂ ಕವಿಚಕ್ರವರ್ತಿ ಎಂಬ

---

1. ಶಬ್ದಾಗಮ ಯುಕ್ತ್ಯಾಗಮ ಪರಮಾಗಮ ವಿಷಯಾಣಾಂ ತಥಾ ಕಾವ್ಯನಾಟಕಾಲಂಕಾರ ಕಲಾಶಾಸ್ತ್ರ ವಿಷಯಾಣಾಂಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್.

ಬಿರುದನ್ನು ಪಡೆದರು. 2ನೆಯ ನಾಗವರ್ಮನು ಚಾಳುಕ್ಯರಾಜನಾದ 2ನೆಯ ಜಗದೇಕಮಲ್ಲನಲ್ಲಿಯೂ ಜನ್ನನ ತಂದೆಯೂ ಕೇಶಿರಾಜನ ಮಾತಾಮಹನೂ ಆದ ಸುಮನೋಬಾಣನು ಹೊಯ್ಸಳರಾಜನಾದ 2ನೆಯ ನಾರಸಿಂಹನಲ್ಲಿಯೂ ಕಟಕೋಪಾಧ್ಯಾಯರಾಗಿದ್ದರು. ಇತರ ಕವಿಗಳೂ ಕೂಡ 14ನೆಯ ಶತಮಾನದ ಕೊನೆಯವರೆಗೆ ಶ್ಲಾಘ್ಯವಾದ ಚಂಪೂಕಾವ್ಯಗಳನ್ನು ಬರೆದರು. ಇವರಲ್ಲಿ ಕೊನೆಯವನು ಮಧುರನೆಂದು ಹೇಳಬಹುದು. ಕನ್ನಡ ಭಾಷಾಭ್ಯಾಸಕ್ಕೆ ಸಹಕಾರಿಯಾದ ಛಂದೋಲಂಕಾರ ವ್ಯಾಕರಣಗ್ರಂಥಗಳೂ ನಿಘಂಟುಗಳೂ ಬಹಳ ಮಟ್ಟಿಗೆ ಜೈನರಿಂದಲೇ ರಚಿತವಾಗಿವೆ. ತಮಿಳಿನಲ್ಲಿಯೂ ತಕ್ಕಮಟ್ಟಿಗೆ ಹೀಗೆಯೇ ಆಗಿದೆ.

ಷಟ್ಪದೀ ಗ್ರಂಥಗಳನ್ನು ಬರೆದವರಲ್ಲಿ ಕುಮುದೇಂದು, ಭಾಸ್ಕರ, 3ನೆಯ ಮಂಗರಸ ಮುಂತಾದವರನ್ನು ಹೇಳಬಹುದು.

ವೀರಶೈವರು ತಮ್ಮ ಮತಗ್ರಂಥಗಳನ್ನು ಬಹಳಮಟ್ಟಿಗೆ ಕನ್ನಡದಲ್ಲಿ ಬರೆದು ಆ ಭಾಷೆಯ ಅಭಿವೃದ್ಧಿಗೆ ವಿಶೇಷವಾಗಿ ಸಹಾಯ ಮಾಡಿದ್ದಾರೆ. ಹಿಂದೆ ತಿಳಿಸಿದಂತೆ ಬಸವನೂ ಅವನ ಸಮಕಾಲದವರೂ ಪ್ರಾಯಿಕವಾಗಿ ಸಾಮಾನ್ಯ ಜನರ ಉಪಯೋಗಕ್ಕೋಸ್ಕರ ವಚನಗಳನ್ನು ಪ್ರಚಾರಕ್ಕೆ ತಂದರು. ಬಸವನ ಸಮಕಾಲಿಕರಾದ ಸುಮಾರು 200 ಮಂದಿಯೂ ಅವನಿಗೆ ಹಿಂದೆ ಕೆಲವರೂ ಈಚೆ ಹಲವರೂ ವಚನಗಳನ್ನು ಬರೆದಿದ್ದಾರೆ. ಈ ವಚನಕಾರರಲ್ಲಿ ಹಲವರು ಸ್ತ್ರೀಯರೂ ಸೇರಿದ್ದಾರೆ. ಡಾಕ್ಟರ್ ಫ್ಲೀಟ್ ಹೇಳುವಂತೆ[2] ಉತ್ತರದಿಕ್ಕಿನಿಂದ ಅಡಿಗಡಿಗೆ ಆಕ್ರಮಣ ಮಾಡುತ್ತಿದ್ದ ಮುಹರಾರರ ಅವಾಂತರದಲ್ಲಿ ಇತ್ತೀಚೆಗೆ ಅಂಸವಾದ ಕನ್ನಡಭಾಷೆಯನ್ನು ಉಳಿಸಿದ ಕೀರ್ತಿ ಬಹಳಮಟ್ಟಿಗೆ ವೀರಶೈವರಿಗೆ ಸಲ್ಲತಕ್ಕದಾಗಿದೆ. ವೀರಶೈವ ಕವಿಗಳಲ್ಲಿ ಹರೀಶ್ವರನು ಪ್ರಥಮಸ್ಥಾನವನ್ನು ಪಡೆದಿದ್ದಾನೆ. ಈಚೆಗೆ ಚಂಪೂಗ್ರಂಥಗಳನ್ನು ಬರೆದವರಲ್ಲಿ ಷಡಕ್ಷರದೇವ, ಸುರಂಗಕವಿ ಇವರ ಹೆಸರುಗಳನ್ನು ಹೇಳಬಹುದು. ರಾಘವಾಂಕ, ಪದ್ಮಣಾಂಕ, ವಿರೂಪಾಕ್ಷ ಪಂಡಿತ, ಮಲ್ಲಣಾರ್ಯ, ಬೊಮ್ಮರಸ, ನಜುಂಡ ಮೊದಲಾದ ಹಲವರು ಕವಿಗಳು ಷಟ್ಪದಿಯಲ್ಲಿಯೂ ಸಾಂಗತ್ಯದಲ್ಲಿಯೂ ಒಳ್ಳೆಯ ಗ್ರಂಥಗಳನ್ನು ಬರೆದಿದ್ದಾರೆ.

---

1. ಕನ್ನರನಾದರದಿಂ ಕುಡೆ । ಪೊನ್ನಂ ಮನನೊಸೆದು ತೈಲಪಂ ಕುಡೆರನ್ನಂ
ಮನ್ನಿಸಿ ಬಲ್ಲಾಳಂ ಕುಡೆ । ಜನ್ನಂ ಕವಿಚಕ್ರವರ್ತಿವೆಸರಂ ಪಡೆದಂ॥

2. Dynasties of Kanarese Districts, 477

ಬ್ರಾಹ್ಮಣ ಕವಿಗಳಲ್ಲಿ ರುದ್ರಭಟ್ಟನು ಅಗ್ರಗಣ್ಯನು. ಈಚೆಗೆ ಬಾಳಿದ ಚಂಪೂಗ್ರಂಥಕಾರರಲ್ಲಿ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಮಲ್ಲಿಕಾರ್ಜುನ, ತಿಮ್ಮಕವಿ ಇವರು ಗಣ್ಯರು. ಷಟ್ಪದೀಗ್ರಂಥಕಾರರಲ್ಲಿ ಕುಮಾರ ವ್ಯಾಸ, ಕುಮಾರ ವಾಲ್ಮೀಕಿ, ಲಕ್ಷ್ಮೀಶ, ಲಕ್ಷ್ಮಕವಿ ಮೊದಲಾದವರನ್ನು ಹೇಳ ಬಹುದು.

ಮೈಸೂರು ಮಹಾರಾಜರುಗಳಲ್ಲಿ ಚಾಮರಾಜ ಒಡೆಯರ್, ಚಿಕ್ಕದೇವ ರಾಜ ಒಡೆಯರ್, ಮುಮ್ಮಡಿ ಕೃಷ್ಣರಾಜ ಒಡೆಯರ್ ಈ ಮೂವರು ಕನ್ನಡ ಭಾಷಾಭಿವೃದ್ಧಿಯಲ್ಲಿ ಆದರವನ್ನು ತೋರಿಸಿ ಗ್ರಂಥಕರ್ತರಿಗೆ ಉತ್ತೇಜನವನ್ನು ಕೊಟ್ಟುದಲ್ಲದೆ ಸ್ವತಃ ಗ್ರಂಥಗಳನ್ನೂ ರಚಿಸಿರುವುದು ಗಮನಿಸತಕ್ಕ ವಿಷಯ ವಾಗಿದೆ. ಅಲ್ಲದೆ ಮೈಸೂರು ಮಹಾರಾಜರಾದ 1ನೆಯ ಕೃಷ್ಣರಾಜಒಡೆಯರ ಮಹಿಷಿಯಾದ ಚೆಲುವಾಂಬೆ ಕನ್ನಡದಲ್ಲಿ ಗ್ರಂಥಗಳನ್ನು ಬರೆದಿರುವುದು ಸ್ತೋತ್ರಾರ್ಹವಾಗಿದೆ. ಗ್ರಂಥ ಕರ್ತರಾದ ಇತರ ಸ್ತ್ರೀಯರಲ್ಲಿ ಹೊನ್ನಮ್ಮ, ಶ್ರೀರಂಗಮ್ಮ, ಹೆಳವನಕಟ್ಟೆ ಗಿರಿಯಮ್ಮ ಮುಂತಾದವರನ್ನು ಹೇಳಬಹುದು.

## ಗ್ರಂಥಕರ್ತರ ಒಟ್ಟುಸಂಖ್ಯೆ.

ಈ ಸಂಪುಟದಲ್ಲಿ ಹೇಳಿರುವ ಗ್ರಂಥಕರ್ತರ ಸಂಖ್ಯೆಯೂ ಮತದ ಪ್ರಕಾರ ಅವರ ವಿಭಾಗವೂ ಹಿಂದೆಯೇ ಕೊಟ್ಟಿವೆ (ಪುಟ xxviii). ಪ್ರಥಮ ಸಂಪುಟದಲ್ಲಿ ಹೇಳಿರುವ ಕವಿಗಳ ಸಂಖ್ಯೆ 280. ಇದರಲ್ಲಿ 45 ಮಂದಿ ವಚನಕಾರರೂ 40 ಮಂದಿ ಶಾಸನ ಕವಿಗಳೂ 6 ಮಂದಿ ಸ್ತ್ರೀಯರೂ ಒಬ್ಬ ದೊರೆಯೂ ಇಬ್ಬರು ರಾಜಕುಮಾರರೂ ಸೇರಿದ್ದಾರೆ. ಮತದ ಪ್ರಕಾರ ಇವರಲ್ಲಿ ಜೈನರು 95, ವೀರಶೈವರು 90, ಬ್ರಾಹ್ಮಣರು 45, ಇತರರು 50. ಪ್ರಥಮಸಂಪುಟದ ತಿದ್ದಿದ ಮುದ್ರಣಕ್ಕೆ ದ್ವಿತೀಯ ಸಂಪುಟದಿಂದ ಸೇರಿಸಿರುವ ಕವಿಗಳನ್ನು ಬಿಟ್ಟು ದ್ವಿತೀಯ ಸಂಪುಟದ ಕವಿಗಳ ಸಂಖ್ಯೆ 301. ಇದು 15 ಮಂದಿ ವಚನಕಾರ ರನ್ನೂ 3 ಮಂದಿ ಶಾಸನಕವಿಗಳನ್ನೂ 4 ಮಂದಿ ಸ್ತ್ರೀಯರನ್ನೂ ಮೂವರು ಮಹಾರಾಜರನ್ನು ಒಳಕೊಂಡ 12 ಮಂದಿ ಅರಸರನ್ನೂ ಒಳಕೊಂಡಿದೆ. ಇವ ರಲ್ಲಿ ಮತದ ಪ್ರಕಾರ ವೀರಶೈವರು 145, ಬ್ರಾಹ್ಮಣರು 76, ಜೈನರು 56, ಇತರರು 24. ಅಂತು ಮೂರು ಸಂಪುಟಗಳಲ್ಲಿಯೂ ಹೇಳಿರುವ ಗ್ರಂಥಕ ರ್ತರ ಒಟ್ಟು ಸಂಖ್ಯೆ 1148 ಆಗುತ್ತದೆ. ಮೇಲೆ ತಿಳಿಸಿರುವ ಅಂಶಗಳನ್ನು ಕೆಳ ಗಣ ಪಟ್ಟಿ ವಿಶದವಾಗಿ ತೋರಿಸುತ್ತದೆ:—

| ಸಂಪುಟ | | ಗ್ರಂಥಕರ್ತರಸಂಖ್ಯೆ | ಜೈನರು | ವೀರಶೈವರು | ಬ್ರಾಹ್ಮಣರು | ಇತರರು |
|---|---|---|---|---|---|---|
| I | | 280 | 95 | 90 | 45 | 50 |
| II | | 301 | 56 | 145 | 76 | 24 |
| III | ಪೂರ್ವಿಕರು | 352 | 23 | 191 | 108 | 30 |
| ,, | ಆಧುನಿಕರು | 215 | 1 | 27 | 159 | 28 |
| ಒಟ್ಟು | .... | 1148 | 175 | 453 | 388 | 132 |

ಈ 1148 ಎಂಬ ಸಂಖ್ಯೆ 184 ವಚನಕಾರರನ್ನೂ 51 ಶಾಸನ ಕವಿಗಳನ್ನೂ 42 ಸ್ತ್ರೀಯರನ್ನೂ ಐವರು ಮಹಾರಾಜರನ್ನು ಒಳಕೊಂಡ 25 ಅರಸರನ್ನೂ ಒಳಕೊಂಡಿದೆ. ಮೇಲಣ ಪಟ್ಟಿಯಿಂದ 1148 ಗ್ರಂಥ ಕರ್ತರಲ್ಲಿ 933 ಮಂದಿ ಪೂರ್ವಿಕರೆಂದೂ 215 ಮಂದಿ ಆಧುನಿಕರೆಂದೂ ತಿಳಿಯುತ್ತದೆ. ಹಿಂದೆ ತಿಳಿಸಿದಂತೆ (ಪುಟ xxvii) ಈ ಸಂಪುಟದಲ್ಲಿ ಹೇಳಿರುವ 352 ಪೂರ್ವ ಕವಿಗಳಲ್ಲಿ 110 ಮಂದಿ ಪ್ರಥಮ ಸಂಪುಟಕ್ಕೂ 43 ಮಂದಿ ದ್ವಿತೀಯ ಸಂಪುಟಕ್ಕೂ ಸೇರತಕ್ಕವರಾದುದರಿಂದ ಅವರನ್ನು ಬಿಟ್ಟರೆ ಈ ಸಂಪುಟಕ್ಕೆ ಮಾತ್ರ ಸೇರತಕ್ಕವರು 199ಮಂದಿಯೇ ಆಗುತ್ತಾರೆ. ಕೆಳಗಣ ಪಟ್ಟಿ ಒಂದೊಂದು ಸಂಪುಟಕ್ಕೂ ನ್ಯಾಯವಾಗಿ ಸೇರಬೇಕಾದ ಗ್ರಂಥಕರ್ತರ ಸಂಖ್ಯೆಯನ್ನು ತೋರಿಸುತ್ತದೆ :—

| ಸಂಪುಟ | ಗ್ರಂಥಕರ್ತರ ಸಂಖ್ಯೆ | ಮೊತ್ತ | |
|---|---|---|---|
| I | 280+110 | 390 | 1148 |
| II | 301+43 | 344 | |
| I1I | 199+215 | 414 | |

ಈ ಸಂಖ್ಯೆಗಳು ವಾಚಕರಿಗೆ ಕನ್ನಡ ಸಾಹಿತ್ಯದ ಸಮೃದ್ಧಿಯನ್ನು ಸ್ಪಷ್ಟಪಡಿಸದೆ ಇರಲಾರವು.

ಕನ್ನಡ ಭಾಷೆಯಲ್ಲಿ ವಿಶೇಷಾಭಿಮಾನದಿಂದ 1894 ರಲ್ಲಿ, ಎಂದರೆ ಸುಮಾರು 35 ವರುಷಗಳಿಗೆ ಹಿಂದೆ, ಆರಂಭಿಸಿದ ಈ ಕೆಲಸವು ಭಗವದನುಗ್ರಹದಿಂದ ಪೂರ್ತಿಯಾದುದಕ್ಕಾಗಿ ಸಂತೋಷಿಸುತ್ತೇನೆ. ಇದು ಬಹಳ ಶ್ರಮಸಾಧ್ಯವಾದ ಕೆಲಸ ಎಂದು ನಾನು ಹೇಳಬೇಕಾಗಿಲ್ಲ. ಪ್ರಥಮ ಸಂಪುಟವನ್ನು ಬರೆವಾಗ ನನಗೆ ಸಹಾಯಕರಾಗಿದ್ದ ನನ್ನ ಭ್ರಾತೃಪುತ್ರರಾದ ಶ್ರೀಮಾನ್ ಎಸ್' ಜಿ. ನರಸಿಂಹಾಚಾರ್ಯರು ಬದುಕಿದ್ದರೆ ನನ್ನ ಕೆಲಸವು ಸುಲಭವಾಗುತ್ತಿದ್ದುದಲ್ಲದೆ

ಬಹುಶಃ ಇನ್ನೂ ಶೀಘ್ರವಾಗಿಯೇ ಕೊನೆಗಾಣುತ್ತಿದ್ದಿತು. ಆದರೆ ಇದು ದೇವರ ಚಿತ್ತಕ್ಕೆ ಬರಲಿಲ್ಲ; ವಾರ್ಧಕ್ಯದಲ್ಲಿ ಸಹಾಯಶೂನ್ಯನಾಗಿ ನಾನೊಬ್ಬನೇ ಈ ಕಷ್ಟವಾದ ಕೆಲಸವನ್ನು ಮುಗಿಸಬೇಕಾಗಿ ಬಂದಿತು. ಅನೇಕ ಗ್ರಂಥಾವೇಕ್ಷಣವೂ ವಿಶೇಷ ಪರಿಶೋಧನವೂ ಅತ್ಯವಶ್ಯವಾದ ಇಂಥ ದೊಡ್ಡ ಗ್ರಂಥದೊಳಗೆ ಇಲ್ಲಿ ಅಲ್ಲಿ ತಪ್ಪುಗಳು ಸಿಕ್ಕುವುದೇನಾಶ್ಚರ್ಯವಲ್ಲ. ಇವುಗಳನ್ನು ತಿದ್ದಿ ಗ್ರಂಥವು ವಿಶೇಷ ಪ್ರಯೋಜನಕಾರಿಯಾಗುವಂತೆ ಮಾಡುವುದಕ್ಕೆ ಸಹಾಯಮಾಡುವ ವಿದ್ವಾಂಸರಿಗೆ ಅತ್ಯಂತ ಕೃತಜ್ಞನಾಗಿರುವೆನು. ನನ್ನಿಂದ ಸಾಧ್ಯವಾದಷ್ಟು ಕೆಲಸವನ್ನು ಮಾಡಿದ್ದೇನೆ. ಇನ್ನುಮುಂದೆ ಈ ವಿಚಾರವನ್ನು ನನಗಿಂತ ಚಿಕ್ಕ ವಯಸ್ಸಿನವರು ಕೈಕೊಂಡು ಮುಂದುವರಿಸಬೇಕೆಂದು ಕೋರುತ್ತೇನೆ.

## ಆಕ್ಷೇಪಣೆಗಳು

ನಾನು ಈ ಗ್ರಂಥವನ್ನು ಬರೆವುದಕ್ಕೆ ಆರಂಭಿಸಿದಾಗ ಕನ್ನಡ ಸಾಹಿತ್ಯದಲ್ಲಿ ಆದರವನ್ನು ತೋರಿಸುತ್ತಿದ್ದ ಜನರ ಸಂಖ್ಯೆ ಬಹಳ ಸ್ವಲ್ಪವಾಗಿದ್ದಿತು. ಈಗ ಈ ವಿಷಯದಲ್ಲಿ ಆದರವು ಹೆಚ್ಚುತ್ತಿರುವುದನ್ನು ನೋಡಿ ನನಗೆ ಬಹಳ ಸಂತೋಷವಾಗುತ್ತದೆ. ಕೆಲವರು ವಿಮರ್ಶಕರು ಕವಿಚರಿತೆಯ ವಿಷಯವಾಗಿ ಪತ್ರಿಕೆಗಳಲ್ಲಿಯೂ ಪುಸ್ತಕಗಳಲ್ಲಿಯೂ ಆಕ್ಷೇಪಣೆಗಳನ್ನು ಬರೆಯಲು ಆರಂಭಿಸಿರುವುದೂ ನನಗೆ ಸಂತೋಷಜನಕವಾಗಿದೆ. ಈ ಆಕ್ಷೇಪಣೆಗಳ ವಿಷಯವಾಗಿ ವಿಚಾರ ನಡಸುವುದಕ್ಕೆ ಮುಂಚೆ ಬೆಂಗಳೂರು ಡೆಯಿಲಿಪೋಸ್ಟ್ ಎಂಬ ಇಂಗ್ಲಿಷ್‌ಪತ್ರಿಕೆಯಲ್ಲಿ (12-9-1924) ಧರ್ಮ ಎಂಬ ಸುಳ್ಳು ಹೆಸರನ್ನು ವಹಿಸಿ ಒಬ್ಬ ಮಹನೀಯರು ನನ್ನನ್ನು ದ್ರೋಹಿ ಎಂದು ದೂಷಿಸಿ ಬರೆದಿರುವ ಬರೆವಣಿಗೆಯ ವಿಷಯವಾಗಿ ಒಂದೆರಡು ಮಾತನ್ನು ಆಡುವುದು ಆವಶ್ಯಕವಾಗಿದೆ. ಈ ಬರವಣಿಗೆಯೂ ಇದಕ್ಕೆ ಅದೇ ಪತ್ರಿಕೆಯಲ್ಲಿ ಅಚ್ಚಾಗಿರುವ ನನ್ನ ಉತ್ತರವೂ (26-9-1924) ಈ ಸಂಪುಟದ ಇಂಗ್ಲಿಷ್ ಅವತರಣಿಕೆಯಲ್ಲಿ ಪೂರ್ತಿಯಾಗಿ ಬಂದಿರುವುದರಿಂದ ಇಲ್ಲಿ ಈ ವಿಷಯವನ್ನು ಕುರಿತು ಲಂಬಿಸಬೇಕಾಗಿಲ್ಲ. ನಾನು ಈ ಬರೆವಣಿಗೆಗೆ ಉತ್ತರವನ್ನು ಬರೆಯಬೇಕೆಂದಿರಲಿಲ್ಲ. ಆದರೆ ಇದರ ಸಾರಾಂಶವೂ ಟೀಕೆಗಳೂ ಸಂಪದಭ್ಯುದಯ, ವೃತ್ತಾಂತಪತ್ರಿಕೆ, ವಿಶ್ವಬಂಧು, ಪ್ರಬುದ್ಧಕರ್ಣಾಟಕ ಮುಂತಾದ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾದುದನ್ನು ನೋಡಿ ನನ್ನ ಮಿತ್ರರು ಕೆಲವರು ಜನರಲ್ಲಿ ಉಂಟಾಗಬಹುದಾದ ತಪ್ಪು ತಿಳಿವಳಿಕೆಯನ್ನು ನಿವಾರಣ ಮಾಡುವುದಕ್ಕಾಗಿ ನಾನು ಉತ್ತರವನ್ನು ಬರೆಯಬೇಕೆಂದು ನಿರ್ಬಂಧಿಸಿದುದರಿಂದ ಅದೇ ಪತ್ರಿಕೆಗೆ ಬರೆದು ಕಳುಹಿಸಿದೆನು. ಅಲ್ಲಿ

ಕಾರವಾಗಿ ಶಿರಶ್ಛೇದನ ಮಾಡುವುದು ಎಂಬಂತೆ ಧರ್ಮರು ನನ್ನನ್ನು ಮೊದಲು ಭೂಷಿಸಿ ಆಮೇಲೆ ದೂಷಿಸಿದ್ದಾರೆ. ಅವರು ಬರೆದಿರುವುದರ ಸಾರಾಂಶವೇನೆಂದರೆ—ಪ್ರಥಮ ಸಂಪುಟವನ್ನು ಬರೆವುದರಲ್ಲಿ ಸಹಾಯಕರಾಗಿದ್ದ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರ ಹೆಸರನ್ನು ಅಸೂಯೆಯಿಂದ ತಿದ್ದಿದ ಮುದ್ರಣದಲ್ಲಿ ಹೇಳದೆ ಅವರ ಮಾತನ್ನೇ ಎತ್ತದೆ ಅವರಿಗೆ ದ್ರೋಹ ಮಾಡಿದ್ದೇನೆ; ಹೀಗೆಯೇ ಶ್ರವಣಬೆಳ್ಗೊಳದ ಶಾಸನಗಳು, ಕರ್ಣಾಟಕ ಶಬ್ದಾನುಶಾಸನ ಈ ಗ್ರಂಥಗಳ ತಿದ್ದಿದ ಮುದ್ರಣಗಳಲ್ಲಿಯೂ ಮಿ॥ ಬಿ. ಎಲ್. ರೈಸರ ಹೆಸರನ್ನು ಅಸೂಯೆಯಿಂದ ಬಿಟ್ಟಿದ್ದೇನೆ–ಎಂಬುದೇ. ಈ ತಿದ್ದಿದ ಮುದ್ರಣಗಳಲ್ಲಿ ಹಲವು ಅಂಶಗಳನ್ನು ಬಿಟ್ಟು ಹಲವು ಹೊಸ ವಿಷಯಗಳನ್ನು ಸೇರಿಸಿ ಅನೇಕ ವ್ಯತ್ಯಾಸಗಳನ್ನು ಮಾಡಿರುವುದರಿಂದ ಈ ಮಾರುಪಾಡುಗಳಿಗೆಲ್ಲಾ ನಾನೊಬ್ಬನೇ ಉತ್ತರವಾದಿ ಎಂಬಂಶವನ್ನು ತಿಳಿಸುವುದಕ್ಕಾಗಿ ಅವರ ಹೆಸರುಗಳನ್ನು ಬಿಟ್ಟಿದ್ದೇನೆಯೇ ಹೊರತು ಮತ್ತೆ ಬೇರೆ ಇಲ್ಲ. ನನ್ನ ಉತ್ತರದಲ್ಲಿ ಮಿ॥ ರೈಸರ ಪತ್ರಗಳಿಂದ ಅನುವಾದ ಮಾಡಿ ಅವರಿಗೆ ತಿದ್ದಿದ ಮುದ್ರಣಗಳಲ್ಲಿ ತಮ್ಮ ಹೆಸರಿರಬೇಕೆಂಬ ಭಾವನೆಯೇ ಇರಲಿಲ್ಲವೆಂಬುದನ್ನು ವ್ಯಕ್ತಗೊಳಿಸಿದ್ದೇನೆ. ಧರ್ಮರಿಗೆ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರು ನನ್ನ ಸಮೀಪ ಬಂಧು, ಭ್ರಾತೃಪುತ್ರರು, ಎಂಬಂಶವು ತಿಳಿದಿರಲಾರದು. ಇವರು ಗತಿಸಿದಾಗ ನನಗಿಂತ ಹೆಚ್ಚಾಗಿ ದುಃಖಿಸಿದವರಾರೂ ಇಲ್ಲ. ದ್ವಿತೀಯ ಸಂಪುಟದ ಅವತರಣಿಕೆಯಲ್ಲಿ (ಪುಟ 29) ಇವರ ವಿಷಯವಾಗಿ ಹೀಗೆ ಬರೆದಿದ್ದೆನು: "ಪ್ರಥಮ ಸಂಪುಟವನ್ನು ಬರೆವಾಗ ನನಗೆ ವಿಶೇಷ ಸಹಾಯಕರಾಗಿದ್ದ ಮ॥ ರಾ॥ ಎಸ್. ಜಿ. ನರಸಿಂಹಾಚಾರ್ಯರು ಆ ಪುಸ್ತಕವು ಪ್ರಕಟವಾದ ಕೆಲವು ವರ್ಷಗಳಲ್ಲಿಯೇ ವೈಕುಂಠವಾಸಿಯಾದ ಸಂಗತಿ ಎಲ್ಲರಿಗೂ ವಿದಿತವಾಗಿಯೇ ಇದೆ. ಇವರಿಗಿದ್ದ ಕೂಲಂಕಷವಾದ ಕರ್ಣಾಟಕ ಭಾಷಾ ಪಾಂಡಿತ್ಯವೂ ಮನೋಹರವಾದ ಕವಿತಾಮಾರ್ಗವೂ ಇಂಥ ವೈದುಷ್ಯಕ್ಕೆ ಅಲಂಕಾರವಾದ ವಿನಯಸಂಪತ್ತಿಯೂ ಎಲ್ಲರ ಮನಸ್ಸನ್ನೂ ಆಕರ್ಷಿಸುತ್ತಿದ್ದವು. ಇವರ ಅಕಾಲ ಮರಣದಿಂದ ಮೈಸೂರು ದೇಶಕ್ಕೆ ಮಾತ್ರವೇ ಅಲ್ಲದೆ ಕನ್ನಡ ನಾಡೆಲ್ಲಕ್ಕೂ ವಿಶೇಷ ನಷ್ಟವುಂಟಾಯಿತೆಂದು ಹೇಳಿದರೆ ಅತ್ಯುಕ್ತಿಯಾಗಲಾರದು. ನನಗಂತು ಇವರ ಮರಣದಿಂದ ಬಲದ ಭುಜವೇ ಹೋದ ಹಾಗಾಯಿತು." ಹಿಂದೆ ಇಷ್ಟು ಹೇಳಿದ್ದುದರಿಂದ ತಿದ್ದಿದ ಮುದ್ರಣದಲ್ಲಿ ಪುನಃ ಹೇಳುವುದು ಅವಶ್ಯಕವಿಲ್ಲವೆಂದು ಸುಮ್ಮನಾದೆನು. ಅಸೂಯೆಯೆಂಬುದು ನನ್ನ ಸ್ವಭಾವದಲ್ಲಿಯೇ ಇಲ್ಲ; ತಥಾಪಿ ನನ್ನ ಸಮೀಪ ಬಂಧುವಾದ ಶ್ರೀಮಾನ್ ಎಸ್, ಜಿ, ನರಸಿಂಹಾಚಾರ್ಯರ ವಿಷಯದಲ್ಲಿ ಇದು ಅಸಂಭಾವ್ಯವೇ ಸರಿ.

ಮೇಲೆ ಹೇಳಿದ ಬರೆವಣಿಗೆಯಲ್ಲಿ ಧರ್ಮರು ಪ್ರಥಮ ಸಂಪುಟದಲ್ಲಿ ಗ್ರಂಥಗಳ ಗುಣ ವಿಮರ್ಶೆ ಇರುವುದರಿಂದಲೂ ನಾನೊಬ್ಬನೇ ಬರೆದ ದ್ವಿತೀಯ ಸಂಪುಟದಲ್ಲಿ ಅದರ ಅಭಾವದಿಂದಲೂ ಈ ವಿಮರ್ಶಾತ್ಮಕವಾದ ಕೆಲಸವು ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರದೇ ಆಗಿರಬಹುದು ಎಂಬ ತಮ್ಮ ಊಹೆಯನ್ನು ತಿಳಿಸಿದ್ದಾರೆ. ಆದರೆ ಪ್ರಥಮ ಸಂಪುಟವನ್ನು ಬರೆದಾಗ ನಮ್ಮಲ್ಲಿ ಇಂಥ ಕಾರ್ಯ ವಿಭಾಗವು ಏರ್ಪಟ್ಟಿರಲಿಲ್ಲ. ವಿಮರ್ಶಾತ್ಮಕವಾದ ಕೆಲಸವನ್ನು ಇಬ್ಬರೂ ಮಾಡಿದ್ದೇವೆ. ಆದರೂ ಈ ಕೆಲಸದಲ್ಲಿ ನನ್ನ ಭಾಗವೇ ಹೆಚ್ಚು ಎಂದು ಹೇಳಬಹುದು. ಇದರಿಂದ ಶ್ರೀಮಾನ್ ಎಸ್. ಜಿ. ನರಸಿಂಹಾಚಾರ್ಯರ ವೈದುಷ್ಯಕ್ಕಾಗಲಿ ಅವರು ಮಾಡಿದ ಸಹಾಯದ ಮಹತ್ವಕ್ಕಾಗಲಿ ಎಳ್ಳಷ್ಟೂ ಕೊರತೆಯಿಲ್ಲ. ದ್ವಿತೀಯ ಸಂಪುಟದಲ್ಲಿ ಗ್ರಂಥಗಳ ಗುಣ ವಿಮರ್ಶೆಯಿಲ್ಲ ಎಂಬ ಧರ್ಮರ ಹೇಳಿಕೆ ನಿಜವಲ್ಲ; ಆ ಸಂಪುಟದ 44, 67, 82, 90, 95, 135, 152, 181, 194, 205, 210, 218, 233, 235, 249, 279, 310, 350, 383, 395, 427, 443, 463, 471, 472, 494, 503, 524 ಮುಂತಾದ ಪುಟಗಳನ್ನು ನೋಡಿದರೆ ಈ ಅಂಶವು ವ್ಯಕ್ತವಾಗುತ್ತದೆ. ಪ್ರಥಮ ಸಂಪುಟದಲ್ಲಿ ಹಲವರು ಉದ್ದಾಮ ಕವಿಗಳ ಚರಿತ್ರವು ಬಂದಿದೆ; ದ್ವಿತೀಯ ಸಂಪುಟದಲ್ಲಿ ಅಂಥ ಕವಿಗಳ ಸಂಖ್ಯೆ ಬಹಳ ಕಡಮೆ; ಆದುದರಿಂದ ಎಷ್ಟರಮಟ್ಟಿಗೆ ಅಲ್ಲಿ ಗುಣ ವಿಮರ್ಶೆ ಇದೆಯೋ ಅಷ್ಟರಮಟ್ಟಿಗೆ ಇಲ್ಲಿಲ್ಲ. ಅಷ್ಟೇ ಹೊರತು ಇಲ್ಲಿ ಇಲ್ಲವೇ ಇಲ್ಲ ಎಂದು ಹೇಳಲಾಗುವುದಿಲ್ಲ. ಪೂರ್ವ ಪ್ರಬಂಧಗಳ ಉತ್ಕೃಷ್ಟತೆಯೂ ಕಾಲಕ್ರಮದಲ್ಲಿ ಆ ಉತ್ಕೃಷ್ಟತೆ ಕಡಮೆಯಾಗುತ್ತ ಬಂದಿರುವುದೂ ಸರ್ವರಿಗೂ ತಿಳಿದ ವಿಷಯವೇ. ಈ ಸಂಪುಟದ 23, 27, 52, 85, 88 130, 149, 449 ಮುಂತಾದ ಪುಟಗಳನ್ನು ನೋಡಿದರೆ ಇಲ್ಲಿಯೂ ಕೂಡ ಗುಣ ವಿಮರ್ಶೆ ತಕ್ಕ ಮಟ್ಟಿಗೆ ಇದ್ದೇ ಇದೆ ಎಂಬುದು ಸ್ಪಷ್ಟವಾಗುತ್ತದೆ.

## ಮ|| ಬಿ. ಎಲ್. ರೈಸರ ಮರಣ.

ಕಳೆದ ಜುಲೈ ತಿಂಗಳಲ್ಲಿ ಸಂಭವಿಸಿದ ಮ|| ಬಿ. ಎಲ್. ರೈಸರ ಮರಣಕ್ಕಾಗಿ ನನ್ನ ದುಃಖವನ್ನು ತಿಳಿಸಬೇಕಾಗಿದೆ. ಅವರು ಮೈಸೂರು ಸೀಮೆಯಲ್ಲಿ ಕನ್ನಡ ಭಾಷೆಯ ಪ್ರಾಥಮಿಕ ಶಿಕ್ಷಣಕ್ಕೆ ಅಸ್ತಿಭಾರ ಹಾಕಿದವರು. ಕನ್ನಡ ಸಾಹಿತ್ಯದ ವಿಷಯದಲ್ಲಿಯೂ ಮಾರ್ಗದರ್ಶಿಗಳಾಗಿದ್ದುದು ಮಾತ್ರವಲ್ಲದೆ ಕೆಲವು ಶ್ಲಾಘ್ಯವಾದ ಗ್ರಂಥಗಳನ್ನು ಮೊತ್ತಮೊದಲು ಮುದ್ರಿಸಿ ಕನ್ನಡ ಭಾಷಾಭಿವೃದ್ಧಿಗೆ ಬಹಳ ಸಹಾಯ ಮಾಡಿದ್ದಾರೆ. ಶಾಸನದ ಇಲಾಖೆಯಲ್ಲಿ ಇವರು ಮಾಡಿದ ಕಾರ್ಯದ ಮಹತ್ತ್ವವನ್ನು ಅಷ್ಟಿಷ್ಟೆಂದು ಹೇಳಲಾಗುವುದಿಲ್ಲ.

1899 ರಿಂದ 1906ರ ವರೆಗೆ ಅವರಿಗೆ ಸಹಾಯಕನಾಗಿ [Assistant) ಈ ಇಲಾಖೆಯಲ್ಲಿ ಕೆಲಸ ಮಾಡುವ ಗೌರವವು ನನಗೆ ಲಭಿಸಿದ್ದಿತು ; ಆದರೆ ಅವರ ಪರಿಚಯವು ನನಗೆ 1890 ರಿಂದಲೂ ಉಂಟು. ಇವರು ಕರ್ಣಾಟಕ ಕವಿ ಚರಿತೆಯನ್ನು ಬರೆವುದರಲ್ಲಿ ನನಗೆ ಮೊದಲಿಂದಲೂ ಪ್ರೋತ್ಸಾಹಕರಾಗಿದ್ದರು. ಕನ್ನಡ ಸಾಹಿತ್ಯದ ವಿಷಯದಲ್ಲಿ ನಾನು ಮಾಡಿದ ಅಲ್ಪಸಹಾಯವನ್ನು ಕೂಡ ಅವರು 1897 ರಲ್ಲಿ ಮುದ್ರಿಸಿದ ಮೈಸೂರು ಗೆಜಟಿಯರಿನಲ್ಲಿ [ಪುಟಗಳು 495-496) ತಿಳಿಸಿದ್ದಾರೆ. ಕನ್ನಡ ಭಾಷೆಯಲ್ಲಿಯೂ ಕನ್ನಡ ಸಾಹಿತ್ಯದಲ್ಲಿಯೂ ಅವರಿಗಿದ್ದ ಅಭಿಮಾನವು ಇಂಗ್ಲೆಂಡಿಗೆ ಹೋದಮೇಲೆ ಎಳ್ಳಷ್ಟೂ ಕಡಮೆಯಾಗಲಿಲ್ಲ. ಅವರಿಗೂ ನನಗೂ ಪತ್ರವ್ಯವಹಾರವು ನಡೆಯುತ್ತಲೇ ಇದ್ದಿತು. ಒಂದು ಪತ್ರದಲ್ಲಿ ಕವಿಚರಿತೆಯನ್ನು ಇಂಗ್ಲಿಷಿಗೆ ಪರಿವರ್ತಿಸುವುದಾಗಿ ತಿಳಿಸಿದ್ದರು. ಕನ್ನಡದಲ್ಲಿಯೂ ಮೈಸೂರಲ್ಲಿಯೂ ಅವರಿಗಿದ್ದ ಪ್ರೀತಿ ಅವರು ಸಾವವರೆಗೂ ಉಜ್ಜ್ವಲವಾಗಿಯೇ ಇದ್ದಿತು. ಅವರು ಸಾವುದಕ್ಕೆ ಮೂರೇ ತಿಂಗಳು ಮುಂದೆ, ಎಂದರೆ 1927 ನೆಯ ಏಪ್ರಿಲ್ 6ರಲ್ಲಿ, ಬರೆದ ಪತ್ರದಲ್ಲಿ ಈ ಮಾತುಗಳು ಉಕ್ತವಾಗಿವೆ: "ಕನ್ನಡಭಾಷೆಯ ವಿಷಯವಾದ ನಿಮ್ಮ ಉಪನ್ಯಾಸಗಳು ಆವಾಗ ನನಗೆ ತಲುಪುತ್ತವೆಯೋ ಎಂದು ಇದಿರು ನೋಡುತ್ತ ಇದ್ದೆನು. ನಿಮ್ಮ ಕರ್ಣಾಟಕ ಕವಿಚರಿತೆ ಕ್ಷಿಪ್ರದಲ್ಲಿಯೇ ಪೂರ್ತಿಯಾಗುವ ಸಂಭವವಿದೆ ಎಂದು ಕೇಳಿ ಸಂತೋಷಿಸುತ್ತೇನೆ. ಈ ಗ್ರಂಥವು ಕನ್ನಡ ಸಾಹಿತ್ಯಜ್ಞಾನಕ್ಕೆ ಬಹಳ ಸಹಕಾರಿಯಾಗಿರುವುದು. ನನ್ನ ವಿಷಯವಾಗಿ ಇನ್ನೂ ವಿಚಾರಿಸುವವರಿಗೆಲ್ಲಾ ದಯೆಯಿಟ್ಟು ನನ್ನ ಜ್ಞಾಪಕವನ್ನು ಕೊಡಿ. ಮೈಸೂರಲ್ಲಿ ನನಗಿರುವ ಪ್ರೀತಿಗೆ ಚ್ಯುತಿಯೇ ಇಲ್ಲ." ಇವರ ಪತ್ನಿ ಬರೆದ ಪತ್ರದಲ್ಲಿ ಕೆಲವು ವರ್ಷಗಳಿಂದ ಇವರು ಕಾಲು ಸ್ವಾಧೀನವಿಲ್ಲದೆ ಕಷ್ಟಪಡುತ್ತಿದ್ದರೆಂದೂ ಇನ್ನು ಒಂದು ವಾರ ಬದುಕಿದ್ದಿದ್ದರೆ 90 ವರುಷವು ಪೂರ್ತಿಯಾಗುತ್ತಿದ್ದಿತೆಂದೂ ತಿಳಿಸಿದ್ದಾರೆ. ಇವರು ಬಹಳ ಕುತೂಹಲದಿಂದ ಇದಿರು ನೋಡುತ್ತಿದ್ದ ಈ ಸಂಪುಟದ ಒಂದು ಪ್ರತಿಯನ್ನು ಬದುಕಿದ್ದಾಗಲೇ ಅವರಿಗೆ ಕಳುಹಿಸಿ ಕೊಡಲು ಲಭ್ಯವಿಲ್ಲದೆ ಹೋದುದಕ್ಕಾಗಿ ವ್ಯಸನಪಡಬೇಕಾಗಿದೆ.

## ಡಾಕ್ಟರ್ ಎ. ವೆಂಕಟಸುಬ್ಬಯ್ಯನವರ ಆಕ್ಷೇಪಣೆಗಳು.

ನನ್ನ ಗ್ರಂಥವನ್ನು ಕುರಿತು ಆಕ್ಷೇಪಣೆಗಳು ಬಂದಿವೆ ಎಂದು ಹಿಂದೆ [ಪುಟ xxxvi] ಸೂಚಿಸಿದ್ದೆನು. ಈ ಆಕ್ಷೇಪಕರಲ್ಲಿ ಡಾಕ್ಟರ್ ಎ. ವೆಂಕಟಸುಬ್ಬಯ್ಯ ಎಂ.ಎ., ಪಿಎಚ್.ಡಿ., ಎಲ್ಎಲ್.ಬಿ. ಇವರು ಪ್ರಥಮಸ್ಥಾನವನ್ನು ವಹಿಸಿದ್ದಾರೆ ಎಂದು ಹೇಳಬಹುದು. ಇವರು ನನ್ನ ಗ್ರಂಥಕ್ಕೆ, ಮುಖ್ಯವಾಗಿ

ಪ್ರಥಮ ಸಂಪುಟಕ್ಕೆ, ವಿಶೇಷವಾದ ಗಮನವನ್ನು ಕೊಟ್ಟು ಆಕ್ಷೇಪಣೆಗಳನ್ನು ಹೂಡಿ ಸುಮಾರು 280 ಪುಟಗಳನ್ನು ಮುದ್ರಿಸಿದ್ದಾರೆ. ಇವು ಪ್ರಬುದ್ಧ ಕರ್ಣಾಟಕ ಎಂಬ ತ್ರೈಮಾಸಿಕ ಪತ್ರಿಕೆಯಲ್ಲಿ ಅಚ್ಚಾಗುತ್ತ ಬಂದುವು ; ಪುಸ್ತಕರೂಪವಾಗಿಯೂ ಪ್ರಕಟವಾಗಿವೆ. ಇವುಗಳಲ್ಲಿ ದುರ್ಗಸಿಂಹ, ಚಂದ್ರರಾಜ, ರಾಜಾದಿತ್ಯ, ವೃತ್ತವಿಲಾಸ ಈ ಕವಿಗಳಿಗೆ ನಾನು ಹೇಳಿರುವ ಕಾಲದ ವಿಷಯದಲ್ಲಿಯೂ ಕೆಲವರು ಜೈನ ಗುರುಗಳ ನಾಮಸಾಮ್ಯದಿಂದ ನಾನು ಮಾಡಿರುವ ಸಮೀಕರಣದ ವಿಷಯದಲ್ಲಿಯೂ ಅಯ್ಯನವರು ಹೇಳಿರುವ ಆಕ್ಷೇಪಣೆಗಳು ನ್ಯಾಯವಾಗಿವೆ ಎಂಬುದರಲ್ಲಿ ಸಂದೇಹವಿಲ್ಲ. ಆದರೆ ಉಳಿದುವುಗಳಲ್ಲಿ ಕೆಲವಕ್ಕೆ ಸರಿಯಾದ ಆಧಾರವೇ ಇಲ್ಲ ; ಮತ್ತೆ ಕೆಲವಕ್ಕೆ ಬರಿಯ ಛಿದ್ರಾನ್ವೇಷಣ ದೋಷಾವಿಷ್ಕರಣೇಚ್ಛೆಗಳೇ ಮೂಲವೆಂದು ಹೇಳಬೇಕಾಗಿದೆ. ಹೀಗೆ ಇವರ ಆಕ್ಷೇಪಣೆಗಳಲ್ಲಿ ಹಲವು ಪ್ರಯೋಜನಕಾರಿಯಲ್ಲದೆ ಇದ್ದರೂ ನನ್ನ ಪಕ್ಷವನ್ನು ಪುನರ್ವಿಮರ್ಶೆ ಮಾಡಲು ನನಗೆ ಅವಕಾಶವನ್ನು ದೊರೆಯಿಸಿಕೊಟ್ಟುದಕ್ಕಾಗಿ ಇವರಿಗೆ ಧನ್ಯವಾದವನ್ನು ಹೇಳಬೇಕಾಗಿದೆ. ಮುಖ್ಯವಾಗಿ ಆಕ್ಷೇಪಣೆಗಳ ಸಮಗ್ರಪ್ರತಿಯನ್ನು ನನಗೆ ಕಳುಹಿಸಿ ಕೊಟ್ಟು ಪ್ರಬುದ್ಧ ಕರ್ಣಾಟಕದಲ್ಲಿ ಇವು ಪೂರ್ತಿಯಾಗಿ ಅಚ್ಚಾಗುವವರೆಗೆ ಕಾದುಕೊಂಡಿರುವ ಕಷ್ಟವನ್ನು ತಪ್ಪಿಸಿದುದಕ್ಕಾಗಿ ಇವರಿಗೂ ಶ್ರೀಮಾನ್ ಟಿ. ಎಸ್. ವೆಂಕಣ್ಣಯ್ಯನವರಿಗೂ ನನ್ನ ಕೃತಜ್ಞತೆಯನ್ನು ತಿಳಿಸಬೇಕಾಗಿದೆ ನನ್ನ ಗ್ರಂಥದಲ್ಲಿ ಸುಮಾರು 35 ಕವಿಗಳ ಚರಿತ್ರೆಯ ವಿಷಯವಾಗಿ ಶ್ರೀಮಾನ್ ವೆಂಕಟಸುಬ್ಬಯ್ಯನವರು ಆಕ್ಷೇಪಣೆಗಳನ್ನು ಲಂಬಿಸಿ ಬರೆದಿದ್ದಾರೆ. ಈ ಅವತರಣಿಕೆಯಲ್ಲಿ ಇವರ ಮತ್ತು ಇತರರ ಆಕ್ಷೇಪಣೆಗಳಿಗೆಲ್ಲಾ ವಿಸ್ತಾರವಾಗಿ ಸಮಾಧಾನವನ್ನು ಹೇಳುವುದು ಸಾಧ್ಯವಲ್ಲ ಎಂಬುದನ್ನು ನಾನು ಒತ್ತಿ ಹೇಳಬೇಕಾಗಿಲ್ಲ. ಮುಖ್ಯವಾದ ಆಕ್ಷೇಪಣೆಗಳನ್ನು ತೆಗೆದುಕೊಂಡು ಅವಕ್ಕೆ ತಕ್ಕಮಟ್ಟಿಗೆ ಸಂಗ್ರಹವಾಗಿ ಸಮಾಧಾನವನ್ನು ತಿಳಿಸುತ್ತೇನೆ- ಈ ಕೆಲಸವನ್ನು ತೊಡಗುವುದಕ್ಕೆ ಮುಂಚೆ ನೆನಪಿಗೆ ಬಂದ ಎರಡು ಶ್ಲೋಕಗಳನ್ನು ಇಲ್ಲಿ ಬರೆಯುತ್ತೇನೆ—

ಗಚ್ಛತಃ ಸ್ಖಲನಂ ಕ್ವಾಪಿ ಭವತ್ಯೇವ ಪ್ರಮಾದತಃ |
ಹಸಂತಿ ದುರ್ಜನಾಸ್ತತ್ರ ಸಮಾದಧತಿ ಸಜ್ಜನಾಃ ||
ದೋಷಾನುತ್ಸೃಜ್ಯ ದೋಷಜ್ಞಾಸ್ತುಷ್ಯಂತಿ ಗುಣಲೇಶತಃ
ಹಂಸಾ ಇವಾಂಬುಪಯಸೋರ್ಮೇಳನೇ ದುಗ್ಧಪಾಯಿನಃ ||

ಇದರಿಂದ ತಪ್ಪುಗಳನ್ನು ಉಪೇಕ್ಷಿಸಬೇಕೆಂದಾಗಲಿ ಗಣಿಸಲೇಕೂಡದೆಂದಾಗಲಿ ನನ್ನ ಭಾವವಲ್ಲ. ತಪ್ಪಿಲ್ಲದೆ ಶುದ್ಧವಾಗಿ ಗ್ರಂಥವನ್ನು ಬರೆಯಬೇಕೆಂಬುದೇ ಕೋರಿಕೆ. ಆದರೆ ನಾನು ಸರ್ವಜ್ಞನಲ್ಲ; ತಪ್ಪುಗಳಿರಬಹುದು.

ಹೊಸದಾಗಿ ಗ್ರಂಥರಚನೆ ಮಾಡುವುದು ಕಷ್ಟ, ದೋಷ ದರ್ಶನ ಸುಲಭ. ಉಕ್ತವಾದ ಅಂಶವನ್ನು ಖಂಡಿಸಬೇಕಾದರೆ ಪ್ರಬಲವಾದ ಹೇತುಗಳಿರಬೇಕು; ದುರ್ಬಲವಾದ ಹೇತ್ವಾಭಾಸಗಳು ಕಾರ್ಯಕಾರಿಯಾಗುವುದಿಲ್ಲ. ಆಕ್ಷೇಪಿಸುವುದರಲ್ಲಿಯೂ ಒಂದು ಕ್ರಮವೂ ಮರ್ಯಾದೆಯೂ ಉಂಟು. ಗ್ರಂಥದಲ್ಲಿರುವ ಪ್ರಮಾದಗಳನ್ನು ಸೌಹಾರ್ದದಿಂದ ತೋರಿಸಿಕೊಡುವವರು ಉಪಕಾರಿಗಳೇ ಸರಿ. ಆದರೆ ನಮ್ಮ ಅಯ್ಯನವರು ಹಲವು ಸಂದರ್ಭಗಳಲ್ಲಿ ಏತಿ ಎಂದರೆ ಪ್ರೇತಿ ಎನ್ನಬೇಕು ಎಂಬ ಉದ್ದೇಶದಿಂದಲೇ ಆಕ್ಷೇಪಿಸಿರುವಂತೆ ತೋರುವುದು; ಕೆಲವು ಸಂದರ್ಭಗಳಲ್ಲಿ ಕಾರಣವಿಲ್ಲದೆ ನಿಂದಾಗರ್ಭವಾಗಿಯೂ ಪರಿಹಾಸಗರ್ಭವಾಗಿಯೂ ಬರೆದಿರುವುದು ಶೋಚನೀಯವಾಗಿದೆ.

## ನಾಗಚಂದ್ರ.

ನಾಗಚಂದ್ರನು 10 ನೆಯ ಶತಮಾನದ ಅಂತ್ಯ ಭಾಗದಲ್ಲಿಯೋ ಅಥವಾ 11 ನೆಯ ಶತಮಾನದ ಆದಿಭಾಗದಲ್ಲಿಯೋ ಇದ್ದಿರಬೇಕೆಂದು ಅಯ್ಯನವರು ನಿರ್ಣಯಿಸಿರುವುದು (ಪುಟಗಳು 33–56) ಭ್ರಾಂತಿ ಮೂಲವು. ಏಕೆಂದರೆ 1024–1042ರಲ್ಲಿ ಇದ್ದನೆಂದು ಇವರು ಹೇಳುವ ದುರ್ಗಸಿಂಹನು ಸ್ತುತಿಸಿರುವ ಪಂಪನು ನಾಗಚಂದ್ರನೆಂದು ಭ್ರಮಿಸಿ ಹೀಗೆ ನಿರ್ಣಯಿಸಿದ್ದಾರೆ. ಆದರೆ ದುರ್ಗಸಿಂಹನಿಂದ ಸ್ತುತನಾದ ಪಂಪನು ಆದಿಪಂಪನೇ ಹೊರತು ಅಭಿನವ ಪಂಪನಲ್ಲ. ನಾಗಚಂದ್ರನು ಸುಮಾರು 1100ರಲ್ಲಿ ಇದ್ದನೆಂಬ ನನ್ನ ಹೇಳಿಕೆಯನ್ನು (I, 101) ಖಂಡಿಸಿ ತಮ್ಮ ಭ್ರಾಂತಿ ಮೂಲವಾದ ನಿರ್ಣಯವನ್ನು ಸ್ಥಾಪಿಸಲು ಅಯ್ಯನವರು ಬಹಳ ಶ್ರಮಪಟ್ಟಿದ್ದಾರೆ. ನನ್ನ ಪಕ್ಷಕ್ಕೆ ಸಾಧಕವಾದ ಅಂಶಗಳಲ್ಲಿ ಕೆಲವನ್ನು ಕೆಳಗೆ ಕೊಡುತ್ತೇನೆ:—

(1) ಅಯ್ಯನವರ ಹೇಳಿಕೆಯ ಪ್ರಕಾರ ಹಿಂದೆ ತಿಳಿಸಿದಂತೆ ನಾಗಚಂದ್ರನು 10 ನೆಯ ಶತಮಾನದ ಅಂತ್ಯಭಾಗದಲ್ಲಿಯೋ ಅಥವಾ 11 ನೆಯ ಶತಮಾನದ ಆದಿಭಾಗದಲ್ಲಿಯೋ, ಅಂತು 1024ಕ್ಕೆ ಹಿಂದೆ, ಇದ್ದಿರಬೇಕು. ಆದರೆ ನಾಗಚಂದ್ರನು 993ರಲ್ಲಿ ರನ್ನನಿಂದ ರಚಿತವಾದ ಅಜಿತಪುರಾಣವನ್ನು 'ಕೃತಿರತ್ನ' ವೆಂದು ಸ್ತುತಿಸಿದ್ದಾನೆ. ಇದರಿಂದ ಈ ಗ್ರಂಥವು ನಾಗಚಂದ್ರನ ಕಾಲದಲ್ಲಿ ಹುಟ್ಟಿರಲಾರದು ಎಂದು ತಿಳಿಯುತ್ತದೆ. ಅದಕ್ಕೆ ಇಷ್ಟು ಪ್ರಶಸ್ತಿ ಬರಬೇಕಾದರೆ ಅದು ಹುಟ್ಟಿದ ಕಾಲಕ್ಕೂ ನಾಗಚಂದ್ರನ ಕಾಲಕ್ಕೂ ಮಧ್ಯದಲ್ಲಿ ಕನಿಷ್ಠ ಪಕ್ಷ ಅರ್ಧ ಶತಮಾನದ ಅಂತರವಾದರೂ ಇದ್ದಿರಬೇಕು. ಆದುದರಿಂದ ನಾಗಚಂದ್ರನು 1024ಕ್ಕೆ ಹಿಂದೆ ಇದ್ದಿರಲಾರನು. ಅಲ್ಲದೆ ದುರ್ಗಸಿಂಹನು (ಸು. 1024) ರನ್ನನ ಹೆಸರನ್ನು ಹೇಳಿಲ್ಲ; ಅವನ ಕಾಲಕ್ಕೆ ರನ್ನನ್ನು

ಬಹಳ ಆಧುನಿಕನಾಗಿದ್ದನೆಂಬುದೇ ಇದಕ್ಕೆ ಕಾರಣವಾಗಿರಬೇಕು. ಹೀಗಿರುವಲ್ಲಿ ದುರ್ಗಸಿಂಹನಿಗೆ ಹಿಂದೆ ಇದ್ದನೆಂದು ಅಯ್ಯನವರು ಹೇಳುವ ನಾಗಚಂದ್ರನು ರನ್ನನ ಗ್ರಂಥವನ್ನು ಕೃತಿರತ್ನವೆಂದು ಸ್ತುತಿಸುವುದು ಅಸಂಭಾವ್ಯವೇ ಸರಿ.

(2) ನಾಗಚಂದ್ರನ ಕಾಲವನ್ನು ನಿರ್ಣಯಿಸುವುದಕ್ಕೆ "ಅದ್ಯತನನಾಗಿಯುಂ ನೆಗ। ಬ್ದಾದ್ಯರ ದೊರೆಯೆನಿಸಿ ಮೆರೆದಿದು.. ನಾಗಚಂದ್ರ ಕವೀಂದ್ರಂ॥" ಎಂದು ಅವನ ವಿಷಯವಾಗಿ ಕರ್ಣಪಾರ್ಯನು ಹೇಳಿರುವುದು (I, 101) ಬಹಳ ಸಹಕಾರಿಯಾಗಿದೆ. 'ಅದ್ಯತನ' ಎಂಬ ಪದದ ಪ್ರಯೋಗದಿಂದ ನಾಗಚಂದ್ರನು ಕರ್ಣಪಾರ್ಯನಿಗಿಂತ ಬಹಳ ಹಿಂದೆ ಇದ್ದಿರಲಿಲ್ಲ ಎಂದು ಭಾಸವಾಗುತ್ತದೆ ಅವನು ಕರ್ಣಪಾರ್ಯನಿಗಿಂತ ಸುಮಾರು ಒಂದು ತಲೆ ಹಿಂದೆ ಇದ್ದಿರಬಹುದು. ಕರ್ಣಪಾರ್ಯನಿಗೆ ನಾನು ಹೇಳಿರುವ ಕಾಲವು ಸು. 1140 ಆದುದರಿಂದ (I, 139) ನಾಗಚಂದ್ರನ ಕಾಲವು ಸ್ಥೂಲವಾಗಿ ಸು. 1100 ಎನ್ನಬಹುದು. ಆದರೆ ಕರ್ಣಪಾರ್ಯನು ಸು. 1174ರಲ್ಲಿದ್ದನು ಎಂಬ ಅಯ್ಯನವರ ನಿರ್ಣಯದ ಪ್ರಕಾರ (ಪುಟ 85) ನಾಗಚಂದ್ರನು ಸು.1100 ಕ್ಕಿಂತ ಈಚೆ ಇದ್ದಿರಬೇಕಾಗುತ್ತದೆ. ಹೀಗಿರುವಲ್ಲಿ ಅಯ್ಯನವರು ಹೇಳುವಂತೆ 1024ಕ್ಕೆ ಹಿಂದೆ ಬಾಳಿದ ನಾಗಚಂದ್ರನನ್ನು 1174ರಲ್ಲಿದ್ದ ಕರ್ಣಪಾರ್ಯನು ಅದ್ಯತನ ಎಂದು ನಿರ್ದೇಶಿಸಲು ಸಾಧ್ಯವೇ?

(3) ನಾಗಚಂದ್ರನು "ಮುನಿನಾಥಂ ದಶಧರ್ಮಧಾರಿ" ಎಂಬ ತನ್ನ ರಾಮಾಯಣದ ಪದ್ಯದಲ್ಲಿ (I, 20) ಮೇಘಚಂದ್ರತ್ರೈವಿದ್ಯನೆಂಬ ಒಬ್ಬ ಜೈನ ಗುರುವನ್ನು ಸ್ತುತಿಸಿದ್ದಾನೆ. ಸುಮಾರು 1115 ರಲ್ಲಿ ಹುಟ್ಟಿದ ಶ್ರವಣಬೆಳ್ಗೊಳದ 127ನೆಯ ಶಾಸನದಲ್ಲಿ ಇದೇ ಗುರು 1115 ರಲ್ಲಿ ಗತಿಸಿದನೆಂದು ಹೇಳಿದೆ. ನಾಗಚಂದ್ರನು ಸ್ತುತಿಸುವ ಪದ್ಯದಿಂದಲೇ ಶಾಸನದಲ್ಲಿಯೂ ಸ್ತುತನಾಗಿರುವುದರಿಂದ ಗುರು ಒಬ್ಬನೇ ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ನಾಗಚಂದ್ರನು 1024ಕ್ಕೆ ಹಿಂದೆ ಇದ್ದಿದ್ದ ಪಕ್ಷದಲ್ಲಿ ಆ ಕಾಲಕ್ಕಿಂತ ಸುಮಾರು ಒಂದು ಶತಮಾನ ಈಚೆ, ಎಂದರೆ 1115 ರಲ್ಲಿ, ಗತಿಸಿದ ಗುರುವನ್ನು ಸ್ತುತಿಸುವ ಬಗೆ ಹೇಗೆ? ಈ ಕಷ್ಟದ ಪರಿಹಾರಕ್ಕಾಗಿ ಅಯ್ಯನವರು "ಈ ಶಾಸನಗಳನ್ನು ಬರೆದವರು ಒಂದು ಶತಮಾನದವರೆಗೆ ಸುಮ್ಮನಿದ್ದು ಆಮೇಲೆ ನಾಗಚಂದ್ರನ ಪದ್ಯಗಳಿಂದ ಅದೇ ಹೆಸರಿನ ಬೇರೆ ಗುರುಗಳನ್ನು ಸ್ತುತಿಸಲು ತೊಡಗಿದರು" ಎಂಬ ವಿಚಿತ್ರವಾದ ಹೇಳಿಕೆಯನ್ನು ಹೇಳಿದ್ದಾರೆ (ಪುಟ 47). ಈ ಮಾತು ಹಾಸ್ಯಾಸ್ಪದವಾಗಿಯೂ ಜೈನ ಗ್ರಂಥಕರ್ತರ ವಿಷಯದಲ್ಲಿ ನಿಷ್ಕಾರಣವಾದ ನಿಂದಾರೂಪವಾಗಿಯೂ ಇದೆ. ಈ ಕಾರಣದಿಂದ ನಾಗಚಂದ್ರನ ಕಾಲವು ಸು. 1100

ಎಂದು ನಿರ್ಣಯಿಸಲೇ ಬೇಕಾಗುತ್ತದೆ. ಈ ನಿರ್ಣಯದಿಂದ ಶ್ರುತಕೀರ್ತಿಯೆಂಬ ಜೈನಗುರುವಿನ ವಿಷಯವಾಗಿ ಅಯ್ಯನವರು ಉದ್ಭಾವಿಸುವ ಕಷ್ಟವೂ (ಪುಟ 45) ಒಡನೆ ಪರಿಹಾರವಾಗುವುದು.

(4) ಮೇಘಚಂದ್ರನೆಂಬ ಒಬ್ಬ ಗ್ರಂಥಕರ್ತನು 1148ರಲ್ಲಿ 'ವಿತತಯಂ ಶ್ರೀನಿಧಿಪಂಪನ ಸುತಂಗೆ ತಿಳಿವಂತು ಪ್ರೋಚ್ಚಪ್ರೂಪಗನ್ನಡದಿಂ" ಪೂಜ್ಯಪಾದನ ಸಮಾಧಿಶತಕಕ್ಕೆ ವ್ಯಾಖ್ಯಾನವನ್ನು ಬರೆದುದಾಗಿ ತಿಳಿಯುತ್ತದೆ (ಇಂಡಿಯನ್ ಆಂಟಿಕ್ವರಿ, XII, 20). ಇಲ್ಲಿ ಹೇಳಿರುವ ಪಂಪನು ನಾಗಚಂದ್ರನೇ ಆಗಿರಬೇಕು; ಈ ಹೇಳಿಕೆಯಿಂದ ಅವನ ಕಾಲವು ಸುಮಾರು 1100 ಎಂದು ನಿರ್ಧರವಾಗುತ್ತದೆ. ಈ ಮೇಘಚಂದ್ರನು ಬಹುಶಃ ಶ್ರ. ಬೆ. 66 ನೆಯ ಶಾಸನದಲ್ಲಿ ನಯಕೀರ್ತಿಯ ಶಿಷ್ಯರೊಳಗೆ ಮೊದಲನೆಯವನಾಗಿ ಹೇಳಿರುವ ಮೇಘಚಂದ್ರನೇ ಆಗಿರಬಹುದು.

(5) ಕೊನೆಗೆ, ನಾನು ಹಿಂದೆ ಹೇಳಿರುವಂತೆ (I, 449), ಬಿಜಾಪುರದ ಮ್ಯೂಜಿಯಮಿನಲ್ಲಿ ಇಟ್ಟಿರುವ, ಚಾಳುಕ್ಯರಾಜನಾದ 6ನೆಯ ವಿಕ್ರಮಾದಿತ್ಯನ ಆಳಿಕೆಯಲ್ಲಿ (1076-1126) ಹುಟ್ಟಿದ ಎ 23 ಎಂಬ ಸಂಖ್ಯೆಯ ಶಾಸನವು ನಾಗಚಂದ್ರರಚಿತವೆಂದು ಊಹಿಸುವುದಕ್ಕೆ ಆ ಶಾಸನದ ಕೆಲವು ಪದ್ಯಗಳಿಗೂ ಪಂಪರಾಮಾಯಣದ ಕೆಲವು ಪದ್ಯಗಳಿಗೂ ಶಬ್ದದಲ್ಲಿಯೂ ಅರ್ಥದಲ್ಲಿಯೂ ಕಂಡುಬರುವ ಸಾಮ್ಯವು ಪ್ರಬಲಕಾರಣವಾಗಿದೆ. ಈ ಸಾಮ್ಯವು ಕೆಳಗಣ ಉದಾಹರಣೆಗಳಿಂದ ವ್ಯಕ್ತವಾಗುತ್ತದೆ :—

ಬಿಜಾಪುರ ಶಾಸನದ 2ನೆಯ ಪದ್ಯ

ಪಿರಿದಾಯಾಸದಿನಿನ್ನೆಗಂ ತಳೆದ ಧಾತ್ರೀಭಾರಮಂ ವಿಕ್ರಮಾ |
ಭರಣಂಗೊಪ್ಪಿಸಿ ಬೇಟಿಪ್ಪುದಂ ಪಡೆದುವೆಂತಾನುಂ ದಿಶಾದಂತಿ ದಿ ||
ಕ್ಕರಿಣೀಪೀಚಕ ಚುಂಬನೈಕಸುಖಮಂ ಶೇಷೋರಗಂ ಭೋಗಿನೀ
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ||

ಪಂಪರಾಮಾಯಣದ 6ನೆಯ ಆಶ್ವಾಸದ 84ನೆಯ ಪದ್ಯ

ಧರೆಯಂ ದ್ವಾದಶಚಕ್ರವರ್ತಿಗಳನಿತ್ತಲ್ ದೇವ ನಿಮ್ಮೀ ಭುಜಾ |
ಪರಿಘಕ್ಕೊಪ್ಪಿಸಿ ದೇಟಿಪ್ಪುದಂ ಪಡೆದುವೆತ್ತಾನುಂ ದಿಶಾದಂತಿ ದಿ ||
ಕ್ಕರಿಣೀಪೀಚಕ ಚುಂಬನೈಕಸುಖಮಂ ಶೇಷೋರಗಂ ಭೋಗಿನೀ |
ಪರಿರಂಭೋತ್ಸವಮಂ ಪುರಾಣಕಮಠಂ ನಿದ್ರಾಂಗನಾಸಂಗಮಂ ||

ಬಿಜಾಪುರ ಶಾಸನದ 3ನೆಯ ಪದ್ಯ

ಅಕ್ಷೋಣೀಧರವದುವುಂ (?) | ದಕ್ಷಿಣದಿಙ್ಮುಖದೊಳೆಸೆವ ಶಶಿಖಂಡ

ದವೋ

ಲೀಕ್ಷಣ ಸುಖಮಯುಮಿಪುದು । ದಕ್ಷಿಣಾಭರತ ತ್ರಿಖಂಡದಾರ್ಧಾ
ಖಂಡಂ ||

ಪಂಪರಾಮಾಯಣದ 1ನೆಯ ಆಶ್ವಾಸದ 45ನೆಯ ಪದ್ಯ

ಆಕ್ಷೋಣೀ ಧರವಲ್ಲಭ । ದಕ್ಷಿಣ ದಿಙ್ಮುಖದೊಳೆಸೆದು ಶಶಿಖಂಡ
ದವೋ ।
ಲೀಕ್ಷಣಸುಖಮಯುಮಿಪುದು । ದಕ್ಷಿಣಭರತ ತ್ರಿಖಂಡದಾರ್ಧಾ
ಖಂಡಂ ||

ಬಿಜಾಪುರ ಶಾಸನದ 1ನೆಯ ಪದ್ಯ

ಶ್ರೀಮಚ್ಚಾಳುಕ್ಯವಂಶಲ । ಲಾಮಂ ಚತುರುದಧಿ ಮೇಖಲಾಲಂಕೃತಧಾ।
ತ್ರೀಮಂಡಲಮಂ ವಿಕ್ರಮ । ಧಾಮಂ ನಿಜಭುಜ ಕೃಪಾಣದಿಂ ರಕ್ಷಿ
ಸಿದಂ ||

ಪಂಪರಾಮಾಯಣದ 10ನೆಯ ಆಶ್ವಾಸದ 77ನೆಯ ಪದ್ಯ

ಚತುರುದಧಿಮೇಖಲಾಲಂ । ಕೃತವಸುಧೆಯನಾಳ್ದು ಪಡೆದು ಸುತರಿ
ನ್ನರನಾ
ಜಿತ ಶತ್ರು ವಿಜಯಸಾಗರ । ರತರ್ಕ್ಯಭುಜವೀರ್ಯರರಸುಗೆಯ್ವುತ್ತಿ
ರ್ದರ್ ||

ಪಂಪರಾಮಾಯಣದ 2ನೆಯ ಆಶ್ವಾಸದ 39ನೆಯ ಪದ್ಯ

ಚತುರುದಧಿಮೇಖಲಾಲಂ । ಕೃತವಸುಧಾದೇವಿಗಜ್ಜಗಾಪಿನವರ್ ದ ।
ಕ್ಷಿತಿಗಳೆನೆ ಸಾರ್ವಭೌಮೋ । ನ್ನತಿಯಂ ತಳೆದಂ ಸುಕೌಶಲಕ್ಷಿತಿ
ನಾಥಂ ||

ಈ ವಿಷಯವೂ ಕೂಡ ನಾಗಚಂದ್ರನು ಸು. 1100 ರಲ್ಲಿ ಬಾಳಿದನು ಎಂಬುದನ್ನು ದೃಢೀಕರಿಸುತ್ತದೆ.

ನಾಗಚಂದ್ರನ ವಿಷಯವಾದ ಅಯ್ಯನವರ ಬರೆವಣಿಗೆಯಲ್ಲಿ ಇನ್ನು ಕೆಲ ವಂಶಗಳು ಪ್ರಾಸಂಗಿಕವಾಗಿ ಹೇಳಿವೆ (ಪುಟಗಳು 36-42,52-56). ಅವುಗಳನ್ನು ಕುರಿತು ಒಂದೆರಡು ಮಾತನ್ನು ಆಡಬೇಕಾಗಿದೆ. ಶ್ರ. ಬೆ. 127ನೆಯ ಶಾಸನದಲ್ಲಿ 1115ರಲ್ಲಿ ಗತಿಸಿದನೆಂದು ಹೇಳಿರುವ ಮೇಘಚಂದ್ರನೂ ಶ್ರ. ಬೆ. 69,66 ಇವುಗಳಲ್ಲಿ ಉಕ್ತರಾದ ಮೇಘಚಂದ್ರರೂ ಒಬ್ಬರೇ. ವಕ್ರಗಚ್ಛದ ಬಾಲಚಂದ್ರನೂ ಶ್ರ ಬೆ. 140 ರಲ್ಲಿ ಹೇಳಿರುವ ಶುಭಕೀರ್ತಿಯ ತಂದೆ ಬಾಲಚಂದ್ರನೂ ಒಂದೇ ವ್ಯಕ್ತಿ (I,102-103)-ಎಂಬಂಥ ಸನ್ನ ತಪ್ಪಾದ ಸಮೀಕರಣಗಳನ್ನು ಅಯ್ಯನವರು ಆಕ್ಷೇಪಿಸಿರುವುದು ನ್ಯಾಯವೇ ಸರಿ. ಈ ಸಂದರ್ಭದಲ್ಲಿ ನಾಗಚಂದ್ರನ ಗುರುವಾದ ಸುಮಾರು 1100 ರಲ್ಲಿದ್ದ ವಕ್ರಗಚ್ಛದ ಒಬ್ಬ ಬಾಳಚಂದ್ರನೂ ಸುಮಾರು 1180 ರಲ್ಲಿದ್ದ ಅಧ್ಯಾತ್ಮಿ ಎಂಬ ಉಪಪದವುಳ್ಳ

ಪುಸ್ತಕಗಚ್ಛದ ಒಬ್ಬ ಬಾಲಚಂದ್ರನು ಹೀಗೆ ಇಬ್ಬರು ಬಾಲಚಂದ್ರರಿದ್ದರೆಂದು ತೋರಿಸುವುದೇ ನನ್ನ ಮುಖ್ಯೋದ್ದೇಶವು. ಆದರೆ ಅಯ್ಯನವರು ಈ ಬಾಲಚಂದ್ರರಿಬ್ಬರೂ ಸಮಕಾಲದವರು ಎಂಬ ಕಲ್ಪನೆಯನ್ನು ಮಾಡಿಕೊಂಡು ಅದಕ್ಕೆ ಸರಿಯಾಗಿ ವಿಷಯಗಳನ್ನು ಹವಣಿಸಲು ಪ್ರಯತ್ನಿಸಿದ್ದಾರೆ. ಮೊದಲು ನಾನು ಸು. 1100 ರಲ್ಲಿ ಹುಟ್ಟಿತೆಂದು ಹೇಳುವ ಶ್ರ. ಬೆ. 69ನೆಯ ಶಾಸನವು ಸು. 1180 ರಲ್ಲಿ ಹುಟ್ಟಿತೆಂದು ವಾದವನ್ನು ಆರಂಭಿಸಿದ್ದಾರೆ (ಪುಟ 36). ಈ ಶಾಸನದಲ್ಲಿ ಕಾಲವು ಕೊಟ್ಟಿಲ್ಲ. ಇದರಲ್ಲಿ ಒಂದು ಕಡೆ ವಕ್ರಗಚ್ಛದ ಬಾಲಚಂದ್ರನು ಗೋಪನಂದಿಯ ಶಿಷ್ಯನಾದ ಗೌಳದೇವನ ಸಧರ್ಮನೆಂದೂ ಮತ್ತೊಂದು ಕಡೆ ಗೋಪನಂದಿಯ ಸಧರ್ಮನಾದ ಮಾಘನಂದಿಯ ಶಿಷ್ಯ ತ್ರಿರತ್ನನಂದಿಯ ಸಧರ್ಮನೆಂದೂ ಹೇಳಿದೆ ಅಂತು ಈತನು ಗೋಪನಂದಿಯ ಕಾಲಕ್ಕಿಂತ ಬಹಳ ಈಚೆಯವನಲ್ಲ ಎಂಬುದು ಸಿದ್ಧವಾಗುತ್ತದೆ. ಚೆನ್ನರಾಯಪಟ್ಟಣದ 148ನೆಯ ಶಾಸನದಲ್ಲಿ ಇದೇ ಗೋಪನಂದಿಗೆ ವಿನಯಾದಿತ್ಯನ ಮಗನಾದ ಎರೆಯಂಗನು 1094 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಆದುದರಿಂದ ವಕ್ರಗಚ್ಛದ ಬಾಲಚಂದ್ರನ ಕಾಲವು ಸು. 1100 ಆಗುತ್ತದೆ. ಇದೇ ಕಾಲವನ್ನೇ ನಾನು ಶ್ರ. ಬೆ. 69ಕ್ಕೆ ಕೊಟ್ಟಿದ್ದೇನೆ. ಈ ಬಾಲಚಂದ್ರನ ಶಿಷ್ಯನಾದ ನಾಗಚಂದ್ರನ ಕಾಲವೂ ಸುಮಾರು ಇದೇ ಆಗಿರಬೇಕು.

ಇದರಿಂದ ವಕ್ರಗಚ್ಛದ ಬಾಲಚಂದ್ರನೂ ಸು. 1180 ರಲ್ಲಿದ್ದ ಪುಸ್ತಕಗಚ್ಛದ ಅಧ್ಯಾತ್ಮಿ ಬಾಲಚಂದ್ರನೂ ಸಮಕಾಲದವರೆಂಬ ಅಯ್ಯನವರ ಕಲ್ಪನೆ ಅಸಮಂಜಸವೆಂಬುದು ಸ್ಪಷ್ಟವಾಗುತ್ತದೆ. ಅಯ್ಯನವರು ತಮ್ಮ ಕಲ್ಪನೆಯನ್ನು ಸ್ಥಾಪಿಸುವುದಕ್ಕಾಗಿ 3 ಶಾಸನಗಳನ್ನು ಉದಾಹರಿಸುತ್ತಾರೆ; ಆದರೆ ಇವು ಪ್ರಯೋಜನಕಾರಿಯಾಗುವುದಿಲ್ಲ. 1 ನೆಯ ಶಾಸನವು ಮೈಸೂರು ಶಾಸನದ ಇಲಾಖೆಯ 1923ನೆಯ ವರ್ಷದ ವರದಿಯಲ್ಲಿ (ಪುಟಗಳು 36–39) ಅಚ್ಚಾಗಿದೆ ಇದರಲ್ಲಿ ಕವಡಮಯ್ಯನ ದೇವಿಸೆಟ್ಟಿ ತಾನು ಕಟ್ಟಿಸಿದ ವೀರಬಲ್ಲಾಳಜಿನಾಲಯಕ್ಕಾಗಿ ಬಾಲಚಂದ್ರನೆಂಬ ಜೈನಗುರುವಿಗೆ 1176 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಶ್ರ. ಬೆ 69 ರಂತೆಯೇ ವಕ್ರಗಚ್ಛದ ಬಾಲಚಂದ್ರನ ಗುರುಪರಂಪರೆಯನ್ನು ಹೇಳಿದ ಬಳಿಕ ಈ ಶಾಸನವು ಈ ಬಾಲಚಂದ್ರನ ಗುಡ್ಡನು ಕವಡಮಯ್ಯನ ಅಣುವಂತಯ್ಯನೆಂದೂ ಈ ಅಣುವಂತಯ್ಯನಿಂದ ನಾಲ್ಕನೆಯ ತಲೆಯವನು ಕವಡಮಯ್ಯನ ದೇವಿಸೆಟ್ಟಿಯೆಂದೂ ತಿಳಿಸುತ್ತದೆ. ಆದುದರಿಂದ ಕವಡಮಯ್ಯನ ಅಣುವಂತಯ್ಯನ ಗುರುವಾದ ವಕ್ರಗಚ್ಛದ ಬಾಲಚಂದ್ರನೂ ಈ ಅಣುವಂತಯ್ಯನ ವಂಶೋದ್ಭವನಾದ ಕವಡಮಯ್ಯನ ದೇವಿಸೆಟ್ಟಿಯಿಂದ ದಾನವನ್ನು ಪಡೆದ ಬಾಲಚಂದ್ರನೂ ಬೇರೆ ಬೇರೆ ಮನುಷ್ಯರು ಎಂಬುದರಲ್ಲಿ ಸಂಶ

ಯವಿಲ್ಲ. ಈ 2ನೆಯ ಬಾಲಚಂದ್ರನು ಸು. 1180ರಲ್ಲಿ ಹುಟ್ಟಿದ ಶ್ರ. ಬೆ. 234 ನೆ ಶಾಸನದಿಂದ ಕವಡಮಯ್ಯನ ದೇವಿಸೆಟ್ಟಿಯ ಸಮಕಾಲದವನೆಂದು ತಿಳಿದು ಒರುವ ಅಧ್ಯಾತ್ಮಿಬಾಲಚಂದ್ರನಾಗಿರಬೇಕು. 2ನೆಯ ಶಾಸನವು 1196ರಲ್ಲಿ ಹುಟ್ಟಿದ ಬೇಲೂರು 129. ಇದರಲ್ಲಿ ಕವಡಮಯ್ಯನ ದೇವಿಸೆಟ್ಟಿ ಕಟ್ಟಿಸಿದ ಶಾಂತಿನಾಥಬಸ್ತಿಯ ಪ್ರಾಕಾರದಲ್ಲಿ ತಾವು ಪ್ರತಿಷ್ಠೆಮಾಡಿಸಿದ ಮಲ್ಲಿನಾಥ ದೇವರಿಗಾಗಿ ಕೆಲವರು ಜೈನರು ಭೂಮಿಯನ್ನು ಬಿಟ್ಟಂತೆ ಹೇಳಿದೆ. ಈ ದತ್ತಿ ದೇವಿಸೆಟ್ಟಿಯ ಕಾಲವಾದ ಮೇಲೆ ಬಿಡಲ್ಪಟ್ಟಿರಬಹುದು. ಶಾಸನದ ಆದಿಯಲ್ಲಿ ವಕ್ರಗಚ್ಛದ ಬಾಲಚಂದ್ರನ ಸ್ತುತಿ ಇದೆ. ದಾನಮಾಡಿದ ಭೂಮಿಯನ್ನು ಮಾಂಡವಿಯ ಬಾಲಚಂದ್ರನ ಶಿಷ್ಯ ರಾಮಚಂದ್ರನಿಂದ ಕೊಂಡುಕೊಂಡರು ಎಂದು ಹೇಳಿದೆ. ಇದರಿಂದ ಅಯ್ಯನವರು ವಕ್ರಗಚ್ಛದ ಬಾಲಚಂದ್ರನೂ ಮಾಂಡವಿಯ ಬಾಲಚಂದ್ರನೂ ಒಬ್ಬನೇ ಎಂದು ಭ್ರಮಿಸಿ ವಕ್ರಗಚ್ಛದ ಬಾಲಚಂದ್ರನು ಶಾಸನದ ಕಾಲವಾದ 1196ರಲ್ಲಿದ್ದನು ಎಂದು ಹೇಳಿದ್ದಾರೆ. ಇದು ಸರಿಯಲ್ಲ. 1 ನೆಯ ಶಾಸನದಲ್ಲಿ ಹೇಳಿರುವಂತೆ ವಕ್ರಗಚ್ಛದ ಬಾಲಚಂದ್ರನು ಕವಡಮಯ್ಯನ ದೇವಿಸೆಟ್ಟಿಯ ಕುಲಗುರುವಾದುದರಿಂದ ಅವನ ಸ್ತುತಿ ಆರಂಭದಲ್ಲಿ ಬಂದಿದೆ ಮಾಂಡವಿಯ ಬಾಲಚಂದ್ರನಿಗೂ ವಕ್ರಗಚ್ಛದ ಬಾಲಚಂದ್ರನಿಗೂ ಆವ ಸಂಬಂಧವೂ ಇಲ್ಲ. ಹಾಗೆಯೇ ಅವನಿಗೂ ಅಧ್ಯಾತ್ಮಿ ಬಾಲಚಂದ್ರನಿಗೂ ಆವ ಸಂಬಂಧವೂ ಕಾಣುವುದಿಲ್ಲ. ಶ್ರ. ಬೆ. 186ನೆಯದಾದ 3 ನೆಯ ಶಾಸನದಲ್ಲಿ ಅಧ್ಯಾತ್ಮಿಬಾಲಚಂದ್ರನ ಗುಡ್ಡ ಪದುಮಸೆಟ್ಟಿಯ ಮಗನಾದ ಗೊಮ್ಮಟಸೆಟ್ಟಿ 1231 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ದಾನವು ಅಧ್ಯಾತ್ಮಿ ಬಾಲಚಂದ್ರನಿಂದ ಎರಡುತಲೆ ಈಚೆ ನಡೆದಿರುವುದರಿಂದ ಅಯ್ಯನವರು ಭಾವಿಸುವಂತೆ ಅವನು 1231 ರಲ್ಲಿ ಬದುಕಿದ್ದನೆಂಬುದಕ್ಕೆ ಕಾರಣವೇ ಇಲ್ಲ.

ಅಯ್ಯನವರು ನೂತ ಎಂಬ ಪದವನ್ನು ನಾನು ನೂತ್ನ ಎಂಬ ಅರ್ಥದಲ್ಲಿ ಪ್ರಯೋಗಿಸಿದ್ದೇನೆಂದು ಭಾವಿಸಿಕೊಂಡು ಆಕ್ಷೇಪಣೆಯನ್ನು ಹೂಡಿ ನನಗೆ ಜ್ಞಾನೋದಯವಾಗಬೇಕೆಂದು ಈ ವಿಷಯವಾಗಿ ಎರಡು ಪುಟಗಳನ್ನು (53–54)ಬರೆದಿದ್ದಾರೆ. ನೂತ ಎಂಬುದಕ್ಕೆ ಪರ್ಯಾಯಶಬ್ದವಾಗಿ ನಾನು ಕೊಟ್ಟಿರುವ ಅಭಿನವ ಎಂಬ ಶಬ್ದವನ್ನೂ ಪರ್ಯಾಯಶಬ್ದಗಳೇ ಆಗಿರುವ ನೂತ, ವಿನುತ ಎಂಬ ಪದಗಳಿಗೆ ನಾನು ಸೂಚಿಸುವ ಅರ್ಥವ್ಯತ್ಯಾಸವನ್ನೂ (I, 100) ಸ್ವಲ್ಪವುಟ್ಟಿಗೆ ಗಮನಿಸಿದ್ದರೆ ನೂತ್ನ ಎಂಬುದಕ್ಕೆ ಪ್ರತಿಯಾಗಿ ನೂತ ಎಂದು ತಪ್ಪುಬಿದ್ದಿದೆ ಎಂದು ಆರೇ ಆಗಲಿ ತಿಳಿದುಕೊಳ್ಳುವುದರಲ್ಲಿ ಸಂದೇಹವಿಲ್ಲ. ನನಗೆ ಸಂಸ್ಕೃತದಲ್ಲಿ ಅವರಿಗಿರುವಷ್ಟು ಪಾಂಡಿತ್ಯವಿಲ್ಲವಾದರೂ ಅಲ್ಪಸ್ವಲ್ಪ ಜ್ಞಾನವಾದರೂ ಉಂಟು ಎಂದು ಅವರು ಭಾವಿಸಬಹುದಾಗಿದ್ದಿತು.

ನಾಗಚಂದ್ರನೇ ಜಿನಮುನಿತನಯುವನ್ನು ಬರೆದಿರಬೇಕು ಎಂದು ಹೇಳಿ ಅ ಯ್ಯನವರು ಹೀಗೆ ವಾದಿಸುತ್ತಾರೆ (ಪುಟಗಳು 55–56)—" ಪೊನ್ನನ ಶಾಂತಿ ಪುರಾಣಕ್ಕೂ ಜಿನಾಕ್ಷರ ಮಾಲೆಗೂ ಶೈಲಿಯಲ್ಲಿ ಸಾಮ್ಯವಿಲ್ಲದಿದ್ದರೂ ಜಿನಾ ಕ್ಷರಮಾಲೆ ಪೊನ್ನರಚಿತವೆಂದು ನಂಬುವಂತೆಯೇ ಜಿನಮುನಿತನಯಕ್ಕೂ ನಾಗ ಚಂದ್ರನ ಇತರ ಗ್ರಂಥಗಳಿಗೂ ಶೈಲಿಯಲ್ಲಿ ವ್ಯತ್ಯಾಸವಿದ್ದರೂ ಜಿನಮುನಿತನ ಯವನ್ನು ಅವನೇ ಬರೆದನೆಂದು ನಂಬಬೇಕು." ಕನ್ನಡ ಕಾವ್ಯಗಳಲ್ಲಿ ಸ್ವಲ್ಪ ಮಟ್ಟಿಗೆ ಪರಿಚಯವುಳ್ಳವರೂ ಕೂಡ ಪೊನ್ನನ ಎರಡು ಗ್ರಂಥಗಳ ಶೈಲಿಯಲ್ಲಿ ಇ ರುವ ಅತ್ಯಂತ ಸಾಮ್ಯವನ್ನೂ ನಾಗಚಂದ್ರನ ಇತರ ಗ್ರಂಥಗಳ ಮತ್ತು ಜಿನ ಮುನಿತನಯದ ಶೈಲಿಯಲ್ಲಿ ಇರುವ ಅತ್ಯಂತ ವೈಷಮ್ಯವನ್ನೂ ಒಡನೆ ಗ್ರಹಿಸು ವರು. ಅವರು ಕೇಳುವ, ಪೇಳುವ, ಚಿಸುಮುಯ, ಕೊಲುವರ್ ಎಂಬಂಥ ರೂಪಗಳನ್ನು ಪ್ರಯೋಗಿಸಿದನು, ಹಲವುಬಗೆಯಾದ ವ್ಯಾಕರಣ ದೋಷಗಳಿಗೆ ಎಡೆಗೊನು ಎಂಬ ಅಪವಾದವನ್ನು ಉದ್ದಾಮಕವಿಯಾದ ನಾಗಚಂದ್ರನ ಮೇಲೆ ಎಂದಿಗೂ ಹೊರಿಸಲಾರರು ಈ ವಿಷಯದಲ್ಲಿ ಅಭಿಪ್ರಾಯವನ್ನು ಕೊ ಡಲು ಸಾಕಾದ ಕಾವ್ಯಪರಿಚಯವು ಅಯ್ಯನವರಿಗೆ ಇಲ್ಲ ಎಂದು ಹೇಳಬೇಕಾಗಿದೆ.

ಇನ್ನು ಶ್ರ ಬೆ. 69ರಲ್ಲಿ ಬರುವ ಪರಿಯಳಿ ಎಂಬುದು ಒಂದು ಗ್ರಾಮದ ಹೆಸರೆಂದೂ ವಡ್ಡದೇವ ಎಂಬುದು ಆ ಗ್ರಾಮದ ಬಸ್ತಿಯ ಜಿನಬಿಂಬದ ಹೆಸರೆಂ ದೂ ಅಯ್ಯನವರು ಮಾಡಿರುವ (ಪುಟ 37) ವಿಚಿತ್ರವಾದ ವಿವರಣದ ಸಾಧುತ್ವಾ ಸಾಧುತ್ವಗಳ ನಿರ್ಣಯವನ್ನು ಜೈನಪಂಡಿತರಿಗೆ ಬಿಟ್ಟಿದ್ದೇನೆ.

## ರುದ್ರಭಟ್ಟ

ರುದ್ರಭಟ್ಟನ ಕಾಲದ ವಿಷಯವಾಗಿ ವಿಚಾರಮಾಡುತ್ತ ಅವನು ಸುಮಾ ರು 1218–19ರಲ್ಲಿ ಇದ್ದನೇ ಹೊರತು ನಾನು ಹೇಳಿರುವಂತೆ ಸು. 1180 ರಲ್ಲಿ (I, 269)ಇದ್ದಿರಲಿಲ್ಲ ಎಂದು ಅಯ್ಯನವರು ನಿರ್ಣಯಿಸಿದ್ದಾರೆ(ಪುಟಗಳು 95–115). ತಮ್ಮ ನಿರ್ಣಯಕ್ಕೆ ಕೊಟ್ಟಿರುವ ಆಧಾರಗಳು :— (1) 2 ನೆಯ ಬ ಲ್ಲಾಳನ ಮಹಿಷಿಯಾದ ಉಮಾದೇವಿಯನ್ನು ಹೆಸರಿಸುವ ಆದಿಶಾಸನವು 1185 ರಲ್ಲಿ ಹುಟ್ಟಿರುವುದರಿಂದ, ಅವಳು 1180 ರಲ್ಲಿ ಆ ರಾಜನ ಮಹಿಷಿಯಾಗಿದ್ದಿರಲಾ ರಳು. ಆದುದರಿಂದ ಉಮಾದೇವಿಯನ್ನು ಹೇಳುವ ರುದ್ರಭಟ್ಟನು 1185ಕ್ಕಿಂತ ಈಚೆಗೆ ತನ್ನ ಗ್ರಂಥವನ್ನು ಬರೆದಿರಬೇಕು (ಪುಟ 101).

(2) ಜಗನ್ನಾಥವಿಜಯದ 2ನೆಯ ಮಂಗಳ ಪದ್ಯದಲ್ಲಿ 2ನೆಯ ಬಲ್ಲಾಳನಿ ಗೆ ಪರಮೈಶ್ವರ್ಯಾಸ್ಪದಂ ಎಂಬ ವಿಶೇಷಣವನ್ನು ಕವಿ ಕೊಟ್ಟಿರುವುದರಿಂದ ಆ ರಾ ಜನಿಗೆ ಆ ಕಾಲದಲ್ಲಿ ಪರಮೇಶ್ವರ ಎಂಬ ಚಕ್ರವರ್ತಿತ್ವಸೂಚಕವಾದ ಬಿರುದು

ಇದ್ದಿರಬೇಕು. ಈ ಬಲ್ಲಾಳನು ಸೇವುಣರಾಜನಾದ ಭಿಲ್ಲಮನನ್ನು ಸೋಲಿಸಿದ ಮೇಲೆ ಸು.1190 ರಲ್ಲಿ ಚಕ್ರವರ್ತಿತ್ವಸೂಚಕವಾದ ಬಿರುದುಗಳನ್ನು ವಹಿಸಿದುದರಿಂದ ರುದ್ರಭಟ್ಟನು 1190 ಕ್ಕಿಂತ ಈಚೆಗೆ ತನ್ನ ಗ್ರಂಥವನ್ನು ರಚಿಸಿರಬೇಕು (ಪುಟ 102).

(3) ಅದೇ ಮಂಗಳ ಪದ್ಯದಲ್ಲಿ 2ನೆಯ ಬಲ್ಲಾಳನಿಗೆ ಕೊಟ್ಟಿರುವ ರಾಜರಾಜಪ್ರತಿಷ್ಠಾನಿರತಂ ಎಂಬ ವಿಶೇಷಣವು ಆ ರಾಜನ ಆಳಿಕೆಯಲ್ಲಿ ಅವನ ಮಗನಾದ 2ನೆಯ ನಾರಸಿಂಹನು ಚೋಳರಾಜನಾದ 3ನೆಯ ರಾಜರಾಜನನ್ನು (1216-1246) ಕಳೆದುಕೊಂಡಿದ್ದ ಸಿಂಹಾಸನದ ಮೇಲೆ ಕುಳ್ಳಿರಿಸಿದ ಸಂಗತಿಯನ್ನು ತಿಳಿಸುತ್ತದೆ. 1218ರಲ್ಲಿ ಬರೆದ ನಾಗಮಂಗಲ 29 2ನೆಯ ಬಲ್ಲಾಳನಿಗೆ ಚೋಳರಾಜಪ್ರತಿಷ್ಠಾಚಾರ್ಯ, ಮಗಧರಾಜ್ಯದಿಶಾಪಟ್ಟ, ಪಾಂಡ್ಯಗಜ ಕೇಸರಿ ಎಂಬ ಬಿರುದುಗಳನ್ನು ಹೇಳುವುದರಿಂದ ರಾಜರಾಜನನ್ನು ಸಿಂಹಾಸನದಮೇಲೆ ಕುಳ್ಳಿರಿಸಿದುದೂ ಮಗಧರಾಜ್ಯವನ್ನು ಜಯಿಸಿದುದೂ 1217 ರಲ್ಲಿ ನಡೆದಿರಬೇಕು (ಪುಟ 113 ). ತನ್ನ ಮಗ 2ನೆಯ ನಾರಸಿಂಹನು 1217 ರಲ್ಲಿ ಪಡೆದ ವಿಜಯಗಳ ದೆಸೆಯಿಂದ 2ನೆಯ ಬಲ್ಲಾಳನು ಈ ಬಿರುದುಗಳನ್ನು ವಹಿಸಿದನು (ಪುಟ 114). ರುದ್ರಭಟ್ಟನು 1217 ರಲ್ಲಿ 3 ನೆಯ ರಾಜರಾಜನನ್ನು ಸಿಂಹಾಸನದ ಮೇಲೆ ಸ್ಥಾಪಿಸಿದ ಸಂಗತಿಯನ್ನು ಹೇಳುವುದರಿಂದ ಆ ವರ್ಷಕ್ಕೆ ಈಚೆಯೂ 2ನೆಯ ಬಲ್ಲಾಳನು ಗತಿಸಿದ 1220 ಕ್ಕೆ ಹಿಂದೆಯೂ, ಎಂದರೆ ಸು. 1218-19 ರಲ್ಲಿ ಇದ್ದಿರಬೇಕು.

## ನನ್ನ ಸಮಾಧಾನಗಳು

(1) ಈಗ ಸಿಕ್ಕಿರುವ ಶಾಸನಗಳೊಳಗೆ 1185 ರಲ್ಲಿ ಹುಟ್ಟಿದ ಒಂದರಲ್ಲಿ ಉಮಾದೇವಿಯ ಹೆಸರು ಹೇಳಿದೆ ಎಂದ ಮಾತ್ರಕ್ಕೆ ಆ ವರ್ಷಕ್ಕೆ ಕೆಲವು ವರ್ಷಗಳ ಹಿಂದೆ, ಎಂದರೆ ಸು. 1180 ರಲ್ಲಿ, ಅವಳು 2 ನೆಯ ಬಲ್ಲಾಳನ ಮಹಿಷಿಯಾಗಿರಕೂಡದು ಎಂಬ ನಿರ್ಬಂಧವೇನೂ ಇಲ್ಲ. ಉಮಾದೇವಿಯನ್ನು ಹೇಳುವ, 1185 ಕ್ಕಿಂತ ಹಿಂದಣಕಾಲದ, ಆವುದಾದ ಒಂದು ಶಾಸನವು ಆವ ನಿಮಿಷದಲ್ಲಿಯಾದರೂ ದೊರೆಯಬಹುದು. ಅಲ್ಲದೆ ನಾನು ರುದ್ರಭಟ್ಟನಿಗೆ ಕೊಟ್ಟಿರುವ ಕಾಲವು ಸುಮಾರು 1180 ಆಗಿರುವುದರಿಂದ ಈ ವರ್ಷಸಂಖ್ಯೆಗೆ ಕೆಲವು ವರ್ಷಗಳನ್ನು ಸೇರಿಸುವುದಕ್ಕೂ ಇದರಿಂದ ಕೆಲವನ್ನು ಬಿಡುವುದಕ್ಕೂ ಅವಕಾಶವುಂಟು.

(2) ರುದ್ರಭಟ್ಟನು ಪರಮೈಶ್ವರ್ಯಾಸ್ಪದಂ ಎಂಬ ವಿಶೇಷಣವನ್ನು ಅಯ್ಯನವರು ಕಲ್ಪಿಸಿರುವ ಅರ್ಥದಲ್ಲಿ ಪ್ರಯೋಗಿಸಿದ್ದಾನೆ ಎಂದು ನಾನು ನಂಬಲಾರೆನು. ಇದಕ್ಕೆ "ವಿಶೇಷವಾದ ಪ್ರಭುತ್ವಕ್ಕೆ ಅಥವಾ ಸಂಪತ್ತಿಗೆ ನೆಲೆ"

ಎಂದು ಅರ್ಥವೇ ಹೊರತು ಮತ್ತೆ ಬೇರೆ ಇಲ್ಲ. ಚಕ್ರವರ್ತಿತ್ವ ಸೂಚಕವಾದ ಪರಮೇಶ್ವರ ಎಂಬ ವಿಶೇಷ ಬಿರುದನ್ನು ಹೇಳಬೇಕಾಗಿದ್ದರೆ ಕವಿ ಪಾರಮೈಶ್ವರ್ಯ (ಪರಮೇಶ್ವರತ್ವ) ಎಂಬ ರೂಪವನ್ನು ಪ್ರಯೋಗಿಸುತ್ತಿದ್ದನು. ಅಲ್ಲದೆ ಶ್ರ. ಬೆ. 240 (ಸು. 1175), 1926ನೆಯ ವರ್ಷದ ಮೈಸೂರು ಶಾಸನದ ಇಲಾಖೆಯ ವರದಿಯ 35ನೆಯ ಸಂಖ್ಯೆಯ ಶಾಸನ (1183), 1923ನೆಯ ವರ್ಷದ ಅದೇ ಇಲಾಖೆಯ ವರದಿಯ 5ನೆಯ ಸಂಖ್ಯೆಯ ಶಾಸನ (1185) ಮುಂತಾದ 1190ಕ್ಕೆ ಹಿಂದೆ ಹುಟ್ಟಿದ ಶಾಸನಗಳಲ್ಲಿಯೂ ಕೂಡ 2ನೆಯ ಬಲ್ಲಾಳನಿಗೆ ಚಕ್ರವರ್ತಿತ್ವ ಸೂಚಕವಾದ ಬಿರುದುಗಳು ಹೇಳಿವೆ. ಹಾಗೆಯೇ ನಂಜನಗೂಡು 71 (1192), ಶ್ರ. ಬೆ. 335 (1195), ತಿರುಮುಕೂಡಲು ನರಸೀಪುರ 31 (1195–96) ಮುಂತಾದ 1190ಕ್ಕೆ ಈಚೆಗೆ ಹುಟ್ಟಿದ ಶಾಸನಗಳಲ್ಲಿಯೂ ಸಹ ಆ ರಾಜನಿಗೆ ಅಧೀನತಾ ಸೂಚಕವಾದ ಮಹಾಮಂಡಲೇಶ್ವರ ಎಂಬ ಬಿರುದು ಮಾತ್ರ ಹೇಳಿದೆ.

(3) ಅಯ್ಯನವರು ಭಾವಿಸುವಂತೆ ರುದ್ರಭಟ್ಟನು ರಾಜರಾಜಪ್ರತಿಷ್ಠಾನಿರತಂ ಎಂಬ ವಿಶೇಷಣವನ್ನು 2ನೆಯ ಬಲ್ಲಾಳನಿಗೆ ಪ್ರಯೋಗಿಸಿದಾಗ ಆ ರಾಜನ ಮಗ 2ನೆಯ ನಾರಸಿಂಹನು 1217ರಲ್ಲಿ 3ನೆಯ ರಾಜರಾಜನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದ ಚಾರಿತ್ರಿಕ ಸಂಗತಿಯನ್ನು ಮನಸ್ಸಿನಲ್ಲಿಟ್ಟುಕೊಂಡಿದ್ದನು ಎಂಬುದು ಅಸಂಭಾವ್ಯವು. ಈ ವಿಶೇಷಣಕ್ಕೆ "ರಾಜ ಶ್ರೇಷ್ಠರನ್ನು ಸ್ಥಾಪಿಸುವುದರಲ್ಲಿ ಕುತೂಹಲವುಳ್ಳ" ಎಂದು ಅರ್ಥವೇ ಹೊರತು ಮತ್ತೆ ಬೇರೆ ಇಲ್ಲ. ರುದ್ರಭಟ್ಟನು ತನ್ನ ಗ್ರಂಥವನ್ನು ಬರೆದಾಗ ಉಮಾದೇವಿ 2ನೆಯ ಬಲ್ಲಾಳನ ಮಹಿಷಿಯಾಗಿಯೂ ಚಂದ್ರಮೌಳಿ ಮಂತ್ರಿಯಾಗಿಯೂ ಇದ್ದರೆಂಬ ವಿಷಯವನ್ನು ಜ್ಞಾಪಕದಲ್ಲಿಡಬೇಕು. ಶಾಸನಗಳಿಂದ ಉಮಾದೇವಿಯ ಕಾಲವು 1185–1209 ಎಂದು ಸ್ಥೂಲವಾಗಿ ನಿರ್ಣಯಿಸಬಹುದು. ಪ್ರಕೃತವಿಚಾರದಲ್ಲಿ ಜಗನ್ನಾಥವಿಜಯದ ರಚನೆಗೆ ಕಾರಣಭೂತನಾದ ಚಂದ್ರಮೌಳಿಯ ಕಾಲವು ಬಹು ಮುಖ್ಯವಾದುದು. ಚಂದ್ರಮೌಳಿಯ ಹೆಸರನ್ನು ಹೇಳುವ, ಈಗ ಉಪಲಬ್ಧವಾಗಿರುವ ಶ್ರ. ಬೆ. 327 (1181), ಚೆನ್ನರಾಯಪಟ್ಟಣ 150 (1182), ಅರಸಿಯಕೆರೆ 127 (1185) ಈ ಶಾಸನಗಳಿಂದ ಅವನ ಕಾಲವು 1181–1185 ಎಂದು ತಿಳಿಯುತ್ತದೆ. ಚಂದ್ರಮೌಳಿಯನ್ನು ಹೇಳುವ, 1185ಕ್ಕೆ ಈಚೆ ಹುಟ್ಟಿದ, ಶಾಸನವಾವುದೂ ದೊರೆತಿಲ್ಲವಾದುದರಿಂದ ಅವನು ಮೇಲೆ ಹೇಳಿದ ಕಾಲಾವಧಿಗಿಂತ ಬಹಳ ಕಾಲ ಈಚೆ ಮಂತ್ರಿಯಾಗಿರಲಿಲ್ಲವೆಂದೂ ಜಗನ್ನಾಥವಿಜಯದ ರಚನೆಯೂ ಆ ಕಾಲದಲ್ಲಿಯೇ ಆಗಿರಬೇಕೇ ಹೊರತು ಅದಕ್ಕಿಂತ ಸುಮಾರು 35 ವರ್ಷ ಈಚೆ 1218–19 ರಲ್ಲಿ ಆಗಿರಲಾರದೆಂದೂ ಭಾವಿಸುವುದು ತಪ್ಪಾಗಲಾರದು.

1

ಇದಲ್ಲದೆ ನನಗೆ ತಿಳಿದಮಟ್ಟಿಗೆ 2ನೆಯ ಬಲ್ಲಾಳನಿಗಾಗಲಿ ಅವನ ಮಗ 2ನೆಯ ನಾರಸಿಂಹನಿಗಾಗಲಿ ಅವನ ಹಿಂದೆ ಬಂದ ಆವ ರಾಜನಿಗೇ ಆಗಲಿ ರಾಜರಾಜಪ್ರತಿಷ್ಠಾನಿರತ ಎಂಬ ಬಿರುದು ಆವ ಶಾಸನದಲ್ಲಿಯೂ ಹೇಳಿಲ್ಲ. 3ನೆಯ ರಾಜರಾಜನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿದ 2ನೆಯ ನಾರಸಿಂಹನಿಗೆ ಈ ಬಿರುದು ಸಲ್ಲುವುದಾದರೂ ಅವನಿಗೆ ಚೋಳರಾಜ್ಯ ಪ್ರತಿಷ್ಠಾಚಾರ್ಯ ಎಂಬ ಬಿರುದಿರುವುದೇ ಹೊರತು ಈ ಬಿರುದಿಲ್ಲ. ಮಗರರಾಜ್ಯವನ್ನು ಜಯಿಸಿದುದರಿಂದ ಅವನಿಗೆ ಮಗರರಾಜ್ಯ ನಿರ್ಮೂಲನ ಎಂಬ ಬಿರುದೂ ಉಂಟು. ಈ ಎರಡು ಬಿರುದುಗಳನ್ನೂ ಪಾಂಡ್ಯಗಂಡಶೈಲವಜ್ರದಂಡ ಎಂದಾಗಲಿ ಅಥವಾ ಅದೇ ಅರ್ಥವನ್ನು ಕೊಡುವ ಬೇರೆ ಪದಸಮುದಾಯ ರೂಪವಾಗಿಯಾಗಲಿ ಇರುವ ಮತ್ತೊಂದು ಬಿರುದನ್ನೂ 2ನೆಯ ನಾರಸಿಂಹನಿಗೆ ಚೆನ್ನರಾಯಪಟ್ಟಣ 197 ಮತ್ತು 203 (1223), ಚೆನ್ನಗಿರಿ 72 (1221), ದಾವಣಗೆರೆ 25 (1224), ಗುಬ್ಬಿ 45 (1233) ಮೊದಲಾದ ಹಲವು ಶಾಸನಗಳಲ್ಲಿ ಕೊಟ್ಟಿರುವುದು ನ್ಯಾಯವಾಗಿಯೇ ಇದೆ. ಪರಂತು ಈ ಬಿರುದುಗಳನ್ನು 2ನೆಯ ನಾರಸಿಂಹನ ತಂದೆಯಾದ 2ನೆಯ ಬಲ್ಲಾಳನಿಗೆ ನಾಗಮಂಗಲ 29 (1218) ಎಂಬ ಒಂದೇ ಒಂದು ಶಾಸನದಲ್ಲಿ[1] ಕೊಟ್ಟಿರುವುದು ತಪ್ಪೆಂದು ಭಾವಿಸಬೇಕಾಗಿದೆ, 1217 ರಲ್ಲಿ ಮಗನು ಪಡೆದ ವಿಜಯಗಳ ದೆಸೆಯಿಂದ ತಂದೆಯಾದ 2ನೆಯ ಬಲ್ಲಾಳನು ಈ ಬಿರುದುಗಳನ್ನು ವಹಿಸಿದನು ಎಂದು ಅಯ್ಯನವರು ಹೇಳುತ್ತಾರೆ (ಪುಟ 114). ಆದರೆ ತಂದೆಯ ಬಿರುದುಗಳನ್ನು ಮಗನು ವಹಿಸುವುದು ವಾಡಿಕೆಯಾಗಿದೆಯೇ ಹೊರತು ಮಗನ ಬಿರುದುಗಳನ್ನು ತಂದೆ ವಹಿಸುವ ವಾಡಿಕೆ ಇಲ್ಲ. ಮತ್ತೊಂದು ಕಡೆ (ಪುಟ 110) ಅಯ್ಯನವರು ಪಾಂಡ್ಯಗಂಡಶೈಲವಜ್ರದಂಡ ಎಂಬ ಅಥವಾ ಅದೇ ಅರ್ಥವನ್ನು ಕೊಡುವ ಪಾಂಡ್ಯಗಜಕೇಸರಿ, ಪಾಂಡ್ಯರಾಜದಿಶಾಪಟ್ಟ ಇತ್ಯಾದಿ ರೂಪವಾದ ಬಿರುದನ್ನು ಮೊತ್ತಮೊದಲು 2ನೆಯ ಬಲ್ಲಾಳನೂ ಆಮೇಲೆ ಅವನ ಮಗನೂ ಮೊಮ್ಮಗನೂ ವಹಿಸಿದರೆಂದು ಹೇಳುತ್ತಾರೆ. ಇದು ತಪ್ಪು. ಇಂಥ ಬಿರುದು 2ನೆಯ ಬಲ್ಲಾಳನ ತಾತನಾದ ವಿಷ್ಣುವರ್ಧನನಿಗೂ ತಂದೆಯಾದ 1ನೆಯ ನಾರಸಿಂಹನಿಗೂ ಉಂಟು; ವಿಷ್ಣುವರ್ಧನನಿಗೆ ನಾಗಮಂಗಲ 76ರಲ್ಲಿ (1145) ಪಾಂಡ್ಯಕುಲಪಯೋಧಿ ಬಡಬಾನಲ ಎಂಬ ಬಿರುದೂ ಕಡೂರು 96 ರಲ್ಲಿ (1141) ಪಾಂಡ್ಯ ಗಂಡಗರ್ವಪರ್ವತಪಾಕಶಾಸನ ಎಂಬ ಬಿರುದೂ ಹೇಳಿವೆ; 1ನೆಯ ನಾರಸಿಂಹನಿಗೆ ಶ್ರ. ಬೆ. 345 ರಲ್ಲಿಯೂ (ಸು 1159) ಕೃಷ್ಣರಾಜಪೇಟೆ 53 ರಲ್ಲಿಯೂ (1171) ಪಾಂಡ್ಯಕುಲಕಮಲವೇತಂಡ ಎಂಬ ಬಿರುದು ಹೇಳಿದೆ. ಪಾಂಡ್ಯಕುಲಕಮಲವೇತಂಡ ಎಂಬ

---

1 ಅರಸಿಯಕೆರೆ 183ರ ಕಾಲವು ಸಂದೇಹಾಸ್ಪದವಾಗಿದೆ.

1ನೆಯ ನಾರಸಿಂಹನ ಬಿರುದೇ ಅವನ ಮಗ 2ನೆಯ ಬಲ್ಲಾಳನಿಗೂ ಶ್ರ. ಬೆ. 327 (1181) ಮತ್ತು 335 (1195), ಅರಸಿಯುಕೆರೆ 8890 (1184) ಮತ್ತು 93 (1189), ಮುಂತಾದ ಶಾಸನಗಳಲ್ಲಿ ಹೇಳಿದೆ.

ಅಂತು ರುದ್ರಭಟ್ಟನಿಗೆ ನಾನು ಹೇಳಿರುವ ಸು. 1180 ಎಂಬ ಕಾಲವನ್ನು ಮಾರ್ಪಡಿಸುವುದಕ್ಕೆ ಸಾಕಾದ ಕಾರಣವಾವುದೂ ಉಕ್ತವಾಗಿಲ್ಲ. ಆದರೂ ಉಮಾದೇವಿಚಂದ್ರ ಮೌಳಿಗಳ ಕಾಲಕ್ಕೆ ಸರಿಹೋಗುವಂತೆ ನಾನೇ ಅದನ್ನು ಸು. 1185 ಎಂದು ತಿದ್ದುತ್ತೇನೆ.

## ಸುಮನೋಬಾಣ

ಸುಮನೋಬಾಣನನ್ನು ಕುರಿತು ಅಯ್ಯನವರು ಬಹಳ ವಿಸ್ತಾರವಾಗಿ (124 ರಿಂದ 149 ರವರೆಗೆ 26 ಪುಟಗಳನ್ನು) ಬರೆದಿದ್ದಾರೆ. ಈ ಬರವಣಿಗೆಯಲ್ಲಿ ಬಹಳ ಭಾಗವು ಪ್ರಕೃತವಿಷಯಕ್ಕೆ ಸಂಬಂಧಿಸುವುದೇ ಇಲ್ಲ. ಜನ್ನನ ಅನಂತನಾಥ ಪುರಾಣದಲ್ಲಿ ಬರುವ (I,162, 329).

ಜನನಾಥಂ ಜಗದೇಕನಲ್ಲಿ ಕಟಕೋಪಾಧ್ಯಾಯನಾನಾಗವ ।
ರ್ಮನಿದಾನೀಂತನ ಶರ್ವವರ್ಮನೆ ಗಡಂ ಜನ್ನಂಗುಪಾಧ್ಯಾಯನಿಂ ॥
ದು ನೃಸಿಂಹಕ್ಷಿತಿಪಾಲನಲ್ಲಿ ಕಟಕೋಪಾಧ್ಯಾಯನಾರೆಂಬ ಸೂ ।
ಕ್ತನವೀನೋಜ್ವಲ ಬಾಣನಪ್ಪ ಸುಮನೋ ಬಾಣಂ ಕವಿಶ್ರೇಷ್ಠರೊಳ್ ॥

ಎಂಬ ಪದ್ಯಕ್ಕೆ ಅಯ್ಯನವರು ಅಪಾರ್ಥಮಾಡಿ ಅದರ ಮೇಲೆ ಕೆಲವು ಊಹೆಗಳನ್ನು ಕಟ್ಟಿದ್ದಾರೆ. ಕನ್ನಡ ಪಂಡಿತರಾರೇ ಆಗಲಿ ಉಪಾಧ್ಯಾಯಂ ಎಂಬುದರವರೆಗೆ ಒಂದು ವಾಕ್ಯ, ಉಳಿದ ಭಾಗವು ಒಂದು ವಾಕ್ಯ ಹೀಗೆ ಈ ಪದ್ಯವು ಎರಡು ವಾಕ್ಯಗಳನ್ನು ಒಳಕೊಂಡಿದೆ ಎಂದೂ ಇದಕ್ಕೆ "ಜಗದೇಕಮಲ್ಲ ರಾಜನಲ್ಲಿ ಕಟಕೋಪಾಧ್ಯಾಯನೂ ಅಭಿನವ (ಇದಾನೀಂತನ) ಶರ್ವವರ್ಮನೆನ್ನಿಸಿಕೊಂಡವನೂ ಪ್ರಸಿದ್ಧ ಪ್ರಸಿದ್ಧನಾದ ನಾಗವರ್ಮನು ಜನ್ನನಿಗೆ ಉಪಾಧ್ಯಾಯನು; ಈಗ ನೃಸಿಂಹರಾಜನಲ್ಲಿ ಕಟಕೋಪಾಧ್ಯಾಯನಾರೆಂದು ಕೇಳುವೆಯಾ? ಅವನು ಕವಿಶ್ರೇಷ್ಠರೊಳಗೆ ಸೂಕ್ತಿಯಲ್ಲಿ ಅಭಿನವ ಬಾಣನಾದ ಸುಮನೋಬಾಣನು" ಎಂಬುದು ಅರ್ಥವೆಂದೂ ಹೇಳುವರು. ಈ ಪದ್ಯದಲ್ಲಿ ಹಿಂದಣ ಸಂಗತಿ ಒಂದು, ಈಗಿನ ಸಂಗತಿ ಒಂದು ಹೀಗೆ ಎರಡು ವಿಷಯಗಳು ಹೇಳಿವೆ. ಆದರೆ ಅಯ್ಯನವರು ಈ ಪದ್ಯವನ್ನು ನಾಗವರ್ಮಂ ಎಂಬಲ್ಲಿಗೆ ಒಂದು ಭಾಗ, ಉಳಿದುದು ಒಂದು ಭಾಗ ಹೀಗೆ ಎರಡು ಭಾಗವಮಾಡಿ ನಾಗವರ್ಮನು ಜಗದೇಕಮಲ್ಲರಾಜನ ಕಟಕೋಪಾಧ್ಯಾಯನಾಗಿದ್ದನು, ಅಭಿನವ ಶರ್ವವರ್ಮನೂ ಜನ್ನನಿಗೆ ಉಪಾಧ್ಯಾಯನೂ ಅಭಿನವಬಾಣನೂ ಆದ ಸುಮನೋಬಾಣನು ನೃಸಿಂಹರಾಜನ ಕಟಕೋಪಾಧ್ಯಾಯನಾಗಿದ್ದನು ಎಂದು ಅರ್ಥ

ಮಾಡಿದ್ದಾರೆ. ಕನ್ನಡ ಕಾವ್ಯಪರಿಚಯವುಳ್ಳವರಾರೂ ಈ ವಿಚಿತ್ರವಾದ ವಿವರಣೆವನ್ನು ಒಪ್ಪಲಾರರು. ಈ ವಿವರಣದಲ್ಲಿ ಬಹಳ ಮುಖ್ಯವಾದ ಇಂದು ಎಂಬ ಪದದ ಅರ್ಥವೇ ಬಿಟ್ಟು ಹೋಗಿದೆ; ಅರೆಂಬ ಎಂಬುದಕ್ಕೆ ಅರ್ಥವು ತಿಳಿದಂತೆ ತೋರುವುದಿಲ್ಲ. 2ನೆಯ ನಾಗವರ್ಮನ ಕಾವ್ಯಾವಲೋಕನದಲ್ಲಿಯ

ಅಭಿಮತ ಶಬ್ದ ಸಂಸ್ಕರಣದಿಂ ಜನಮಂ ತಿಳಿಪಂತು ಮಾಡಿ ಮಾ ।
ಗ್ರಿಭವಮದ ಪ್ರತರ್ಕ್ಯಮನೆ ಸಂದೆಸಕಂದೆನೆಯಂತನೆಯ್ದ ತ ॥
ತ್ಸಭೆಗಳೊಳಗ್ರ ಪೂಜೆವಡೆದೊಂದು ಮಹಾಮಹಿಮಾನುಭಾವದಿಂ ।
ದಭಿನವಶರ್ವವರ್ಮನಿವನೆಂದ ಪುದುವರೆ ನಾಗವರ್ಮನಂ ॥

ಎಂಬ ಪದ್ಯದಲ್ಲಿ (I,145) ಕೆಲವು ಕಾರಣಗಳನ್ನು ಕೊಟ್ಟು 2ನೆಯ ನಾಗವರ್ಮನಿಗೆ ಅಭಿನವಶರ್ವವರ್ಮ ಎಂಬ ಬಿರುದನ್ನು ಹೇಳಿದೆ. ಈ ಕಾರಣಗಳಲ್ಲಿ ಮುಖ್ಯವಾದುದು ಕನ್ನಡ ಭಾಷೆಗೆ ಶಬ್ದಸ್ಮೃತಿ ಎಂಬ ಸುಲಭವಾದ ವ್ಯಾಕರಣವನ್ನು ಬರೆದುದು. ಶರ್ವವರ್ಮನು ಸಂಸ್ಕೃತ ಭಾಷೆಗೆ ಕಾತಂತ್ರವೆಂಬ ಸುಲಭವಾದ ವ್ಯಾಕರಣವನ್ನು ಬರೆದಿದ್ದಾನೆ. ಆದುದರಿಂದ ಅಭಿನವ ಶರ್ವವರ್ಮ ಎಂಬುದಕ್ಕೆ ಪರ್ಯಾಯವಾಗಿ ಜನ್ನನು ಪ್ರಯೋಗಿಸಿರುವ ಇದಾನೀಂತನ ಶರ್ವವರ್ಮ ಎಂಬುದು ನಾಗವರ್ಮನಿಗೆ ಅನ್ವಯಿಸಬೇಕೇ ಹೊರತು ಸುಮನೋಬಾಣನಿಗಲ್ಲ. ಈ ಕಾರಣದಿಂದಲೇ "ಜನ್ನಂಗುಪಾಧ್ಯಾಯಂ" ಎಂಬುದೂ ನಾಗವರ್ಮನಿಗೇ ಅನ್ವಯಿಸಬೇಕು; ಸುಮನೋಬಾಣನಿಗಲ್ಲ. ಜನ್ನನು ತನ್ನ ಯಶೋಧರ ಚರಿತೆಯಲ್ಲಿ ತಾನು "ಕವಿಸುಮನೋಬಾಣನ ಮಗನೆಂದಖಿಳ ಕ್ಷೋಣಿಗೆ ಪೆಸರಾಯ್ತು" ಎಂದೂ ತನ್ನ ಅನಂತನಾಥಪುರಾಣದಲ್ಲಿ 'ಶಂಕರಪುತ್ರಂ" ಎಂದೂ ಹೇಳಿಕೊಂಡಿರುವುದರಿಂದ ಸುಮನೋಬಾಣನ ನಿಜವಾದ ಹೆಸರು ಶಂಕರ ಎಂದು ವ್ಯಕ್ತವಾಗುತ್ತದೆ. ಆದರೆ ಅಯ್ಯನವರು ಸುಮನೋಬಾಣ, ಶಂಕರ ಎಂಬವರು ಬೇರೆ ಬೇರೆ ಮನುಷ್ಯರು ಎಂದು ಭಾವಿಸುವುದು ಮಾತ್ರವಲ್ಲದೆ "ಜನ್ನಂಗುಪಾಧ್ಯಾಯಂ" ಎಂಬುದು ಸುಮನೋಬಾಣನಿಗೆ ಅನ್ವಯಿಸುತ್ತದೆ ಎಂಬ ತಮ್ಮ ಕಲ್ಪನೆಗೆ ಹೊಂದಿಕೆಯಾಗಬೇಕೆಂದು "ಕವಿಸುಮನೋಬಾಣನಮಗಂ" ಎಂಬಲ್ಲಿ ಮಗ ಎಂಬುದಕ್ಕೆ ಶಿಷ್ಯ ಎಂದು ಅರ್ಥಮಾಡಿದ್ದಾರೆ. ಸುಮನೋಬಾಣನು ಜೈನನಲ್ಲ ಎಂದೂ ಸೂಚಿಸಿದ್ದಾರೆ. ಅಯ್ಯನವರ ಈ ಕಲ್ಪನೆಯೂ ಅಪಾರ್ಥವೂ ಕಾರ್ಯಕಾರಿಯಾಗುವಂತಿಲ್ಲ. ಜನ್ನನು ಸುಮನೋಬಾಣನ ಮಗನೆಂಬುದಕ್ಕೂ ಜೈನರಾದ ಮಲ್ಲಿಕಾರ್ಜುನ ಕೇಶಿರಾಜರಬಂಧುವೆಂಬುದಕ್ಕೂ ಆವ ಸಂದೇಹವೂ ಇಲ್ಲ. ಮಲ್ಲಿಕಾರ್ಜುನ ಕೇಶಿರಾಜರು ಜೈನರೆಂಬುದು ಮುಖ್ಯವಾಗಿ ಮೊದಲಯವನು ತನ್ನ ಸೂಕ್ತಿಸುಧಾರ್ಣವದ ಆರಂಭದಲ್ಲಿ ಮಾಡಿರುವ ಜಿನಸ್ತುತಿಯಿಂದಲೂ ಎರಡನೆಯವನು ತನ್ನ ಶಬ್ದ

ಮಣಿದರ್ಪಣದ 9ನೆಯ ಸೂತ್ರದಲ್ಲಿ "ಶಬ್ದದ್ರವ್ಯಂಶ್ವೇತಂ" ಎಂಬುದರಿಂದಲೂ ಸ್ಪಷ್ಟವಾಗಿದೆ. ಜೈನರು ಮತಾಂತರದವರನ್ನು ತಮ್ಮ ಸಮುದಾಯಕ್ಕೆ ಸೇರಿದವರೆಂದು ಎಂದಿಗೂ ಭಾವಿಸಲಾರರು.

ಸುಮನೋಬಾಣನ ಕಾಲದ ವಿಷಯದಲ್ಲಿ ಮೇಲಣ ಪದ್ಯದಲ್ಲಿ "ಇಂದು" ಎಂಬ ಪದದ ಪ್ರಯೋಗದಿಂದ ಅವನು ಹೊಯ್ಸಳರಾಜನಾದ 2ನೆಯ ನಾರಸಿಂಹನ ಆಳಿಕೆಯಲ್ಲಿ (1220-1235) ಕಟಕೋಪಾಧ್ಯಾಯನಾಗಿದ್ದನೆಂದು ಹೇಳಬೇಕು, 1 ನೆಯ ನಾರಸಿಂಹನ ಆಳಿಕೆಯಲ್ಲಲ್ಲ (I. 162). ಈ ಕವಿ 2ನೆಯ ನಾರಸಿಂಹನ ಆಳಿಕೆಯ ಆದಿಭಾಗದಲ್ಲಿ ಇದ್ದಿರಬಹುದಾದರೂ ಇವನ ಮಗನಾದ ಜನ್ನನು ಚೆನ್ನರಾಯಪಟ್ಟಣ 179ನೆಯ ಶಾಸನವನ್ನು ರಚಿಸಿದಾಗ (1190) ಸುಮಾರು 25 ವರ್ಷದವನಾಗಿದ್ದಿರಬೇಕೆಂದು ಭಾವಿಸಿದರೆ ತಂದೆಯ ಕಾಲವನ್ನು ಹಿಂದಕ್ಕೆ ಎಂದರೆ ಸು. 1175 ಕ್ಕಾದರೂ ತಳ್ಳಬೇಕಾಗುತ್ತದೆ. ಇದರಿಂದ ಸುಮನೋಬಾಣನ ಕಾಲಕ್ಕೂ (ಸು. 1150) ಅವನ ಅಳಿಯನಾದ ಮಲ್ಲಿಕಾರ್ಜುನನ ಕಾಲಕ್ಕೂ (ಸು. 1245) ಅಯ್ಯನವರು ತೋರಿಸುವ 95 ವರ್ಷಗಳ ಅಂತರದಲ್ಲಿ 25 ವರ್ಷಗಳು ಕಡಮೆಯಾಗುತ್ತವೆ. ಅಲ್ಲದೆ ಮಲ್ಲಿಕಾರ್ಜುನನಿಗೆ ಕೊಟ್ಟಿರುವ ಸು. 1245 ಎಂಬುದು ಅವನಿಗೆ ಮದುವೆಯಾದ 30ನೆಯ ಅಥವಾ 40 ನೆಯ ವರ್ಷವನ್ನು ತಿಳಿಸುತ್ತದೆಂದು ಭಾವಿಸುವುದು ತಪ್ಪಲ್ಲವಾದುದರಿಂದ ಮೇಲೆ ಹೇಳಿದ ಅಂತರವು ಇದರಿಂದ ಇನ್ನೂ ಕಡಮೆಯಾಗಿ ಸಹಜ ಸ್ಥಿತಿಗೆ ಬರುವುದು. "ಸು. 1145 ರಲ್ಲಿದ್ದ 2ನೆಯ ನಾಗವರ್ಮನು 1230 ರಲ್ಲಿದ್ದ ಜನ್ನನಿಗೆ ಹೇಗೆ ಉಪಾಧ್ಯಾಯನಾಗಬಲ್ಲನು?" ಎಂಬ ಅಯ್ಯನವರ ಪ್ರಶ್ನೆಗೂ ಹೀಗೆ ಉತ್ತರವನ್ನು ಹೇಳಬಹುದು:—"ಸಾಮಾನ್ಯವಾಗಿ ಹುಡುಗರಿಗೆ ಪಾಠ ಹೇಳುವುದಕ್ಕೋಸ್ಕರ ಉಪಾಧ್ಯಾಯನನ್ನು ಗೊತ್ತುಮಾಡುತ್ತಾರೆ. ಜನ್ನನು ಅನಂತನಾಥಪುರಾಣವನ್ನು ಬರೆದಾಗ (1230), ಎಂದರೆ ಅವನಿಗೆ ಸ್ವಲ್ಪ ಹೆಚ್ಚು ಕಡಮೆ 70 ವರ್ಷವಾಗಿದ್ದಾಗ, 2ನೆಯ ನಾಗವರ್ಮನು ಅವನಿಗೆ ಉಪಾಧ್ಯಾಯನಾಗಿದ್ದನು ಎಂದು ಆವ ವಿವೇಕಿಯಾದರೂ ಭಾವಿಸುವನೇ? ನಾನು ಹಿಂದೆ ಹೇಳಿದಂತೆ 1190ರಲ್ಲಿ ಜನ್ನನು 25 ವರ್ಷದ ಪ್ರಾಯದವನಾಗಿಯಾದರೂ ಇದ್ದಿರಬೇಕು. 2ನೆಯ ನಾಗವರ್ಮನು ಸು. 1145 ಕ್ಕಿಂತ ಈಚೆ ಸುಮಾರು ಇಪ್ಪತ್ತು ಮೂವತ್ತು ವರ್ಷಗಳ ವರೆಗೆ ಬದುಕಿದ್ದಿರಬಹುದು ಎಂಬುದಕ್ಕೆ ಅಡ್ಡಿಯೇನೂ ಕಾಣುವುದಿಲ್ಲ. ಆದುದರಿಂದ ಉಪಾಧ್ಯಾಯನಾದ 2ನೆಯ ನಾಗವರ್ಮನಿಗೂ ವಿದ್ಯಾರ್ಥಿಯಾದ ಜನ್ನನಿಗೂ ಸಂಬಂಧವನ್ನು ಕಲ್ಪಿಸುವುದರಲ್ಲಿ ಆವ ಕಷ್ಟವೂ ಇಲ್ಲ.

ಇದಾದಮೇಲೆ ಅಯ್ಯನವರು—ಜನ್ನನು ಜೈನನಾದ ಮಾತ್ರಕ್ಕೆ ಅವನ ತಂದೆತಾಯಿಗಳು ಜೈನರಾಗಿದ್ದರು ಎಂದು ನಾನು ಹೇಳಿರುವುದು ತಪ್ಪೆಂದು

ಹೇಳಿ ಹಿಂದುಗಳು ಜೈನಸ್ತ್ರೀಯರನ್ನು ಮದುವೆಯಾದ ಕೆಲವು ಉದಾಹರಣಗಳನ್ನು ಕೊಟ್ಟಿದ್ದಾರೆ. ಆದರೆ ತಂದೆಯ ಮತವನ್ನು ಮಗನು ಅನುಸರಿಸುವುದು ಸರ್ವಸಾಧಾರಣವಾದುದರಿಂದ ಈ ಉದಾಹರಣಗಳು ಪ್ರಕೃತ ವಿಷಯಕ್ಕೆ ಹೊಂದಿಕೆಯಾಗಿಲ್ಲ. ಇನ್ನು ಅಯ್ಯನವರು 10 ರಿಂದ 13 ನೆಯ ಶತಮಾನದ ವರೆಗಿನ ಕಾಲದಲ್ಲಿ ಶಿವಭಕ್ತರೂ ವಿಷ್ಣುಭಕ್ತರೂ ಜಿನನನ್ನು ಪೂಜಿಸಿದರು, ಜಿನಭಕ್ತರು ಶಿವ ವಿಷ್ಣುಗಳನ್ನು ಪೂಜಿಸಿದರು; ವೇದಮಾರ್ಗಾನುಸಾರಿಗಳು, ಜೈನರು, ಬೌದ್ಧರು ಎಂಬಂಥ ಭೇದವಿರಲಿಲ್ಲ; ಜನರು ಜಿನನನ್ನಾಗಲಿ ಬುದ್ಧನನ್ನಾಗಲಿ ಪರದೈವವೆಂದು ಪೂಜಿಸಿದರೂ ವೇದಮಾರ್ಗಾನುಸಾರಿಗಳೆಂದು ಭಾವಿಸಲ್ಪಡುತ್ತಿದ್ದರು—ಎಂಬ ವಿಚಿತ್ರವಾದ ಮಾತುಗಳನ್ನಾಡಿ ಅವಕ್ಕೆ ಆಧಾರವಾಗಿ ದೊರೆಗಳೂ ಮಂಡಲಿಕರೂ ಮತಾಂತರದ ಜನರಿಗೂ ದೇವಸ್ಥಾನ ಮಠಾದಿಗಳಿಗೂ ದಾನವನ್ನು ಕೊಟ್ಟ ಹಲವು ಉದಾಹರಣಗಳನ್ನು (ಪುಟಗಳು 136—148) ಶಾಸನಗಳಿಂದ ಕೊಟ್ಟಿದ್ದಾರೆ. ಇವು ದಾತೃಗಳ ಹೃದಯ ವಿಶಾಲತೆಯನ್ನೂ ಔದಾರ್ಯವನ್ನೂ ತೋರಿಸುತ್ತವೆಯೇ ಹೊರತು ಅವರ ಮತಾಂತರಾವಲಂಬನವನ್ನು ತೋರಿಸುವುದಿಲ್ಲ.

## ನಾಗವರ್ಮ

ಅಯ್ಯನವರು ನಾಗವರ್ಮರಿಬ್ಬರಿಲ್ಲ, ಆ ಹೆಸರಿನ ಒಬ್ಬನೇ ಒಬ್ಬ ಗ್ರಂಥಕರ್ತನು ಸು. 1050 ರಲ್ಲಿದ್ದು ಕಾವ್ಯಾವಲೋಕನ, ಕರ್ಣಾಟಕಭಾಷಾಭೂಷಣ, ವಸ್ತುಕೋಶ, ಛಂದೋಂಬುಧಿ, ಕಾದಂಬರಿ ಎಂಬ 5 ಗ್ರಂಥಗಳನ್ನೂ ಬರೆದಿದ್ದಾನೆ—ಎಂಬ ಆಧಾರಶೂನ್ಯವಾದ ಕಲ್ಪನೆಯನ್ನು ಮಾಡಿಕೊಂಡು ಅದನ್ನು ಸ್ಥಾಪಿಸುವುದಕ್ಕೆ ಎಷ್ಟೋ ಸಾಹಸಪಟ್ಟಿದ್ದಾರೆ. "ಜನನಾಥಂ ಜಗದೇಕನಲ್ಲಿ" ಎಂಬ ಪದ್ಯಕ್ಕೂ "ಭಾಳಲೋಚನಂ ಕವಿಸುಮನೋಬಾಣನ ಮಗಂ" ಎಂಬ ವಾಕ್ಯಕ್ಕೂ ಅವರು ಮಾಡಿರುವ ಅಪಾರ್ಥವನ್ನು ಹಿಂದೆಯೇ ತಿಳಿಸಿದ್ದೇನೆ. ಆ ಪದ್ಯವು ನಾಗವರ್ಮನು ಜನ್ನನಿಗೆ ಉಪಾಧ್ಯಾಯನಾಗಿದ್ದನು ಎಂದು ಸ್ಪಷ್ಟವಾಗಿ ಹೇಳುತ್ತದೆ. ಇದನ್ನು ಒಪ್ಪಿಕೊಂಡರೆ ನಾಗವರ್ಮನು ಸು. 1050 ರಲ್ಲಿದ್ದನೆಂಬ ಕಲ್ಪನೆಯನ್ನು ಬಿಡಬೇಕಾಗುವುದರಿಂದ ಅಯ್ಯನವರು ಜನ್ನನಿಗೆ ಸುಮನೋಬಾಣನು ಉಪಾಧ್ಯಾಯನಾಗಿದ್ದನು ಎಂದು ಪದ್ಯಕ್ಕೆ ವಿಚಿತ್ರವಾದ ಅರ್ಥವನ್ನು ಮಾಡಿದ್ದಾರೆ. ಅಲ್ಲದೆ ಪದ್ಯದಲ್ಲಿ ಉಕ್ತನಾದ ಜಗದೇಕನು 1015 ರಿಂದ 1042 ರ ವರೆಗೆ ಆಳಿದ 1ನೆಯ ಜಗದೇಕಮಲ್ಲನೆಂದು ಹೇಳುತ್ತಾರೆ. ಹಾಗಿದ್ದ ಪಕ್ಷದಲ್ಲಿ ತನ್ನ ಕಾಲಕ್ಕೆ ಸುಮಾರು ಒಂದು ಶತಮಾನ ಹಿಂದೆ ನಾಗವರ್ಮನು 1ನೆಯ ಜಗದೇಕಮಲ್ಲನಲ್ಲಿ ಕಟಕೋಪಾಧ್ಯಾಯನಾಗಿದ್ದನೆಂಬ ತನಗೆ ಆವ ವಿಧದಲ್ಲಿಯೂ ಸಂಬಂಧಪಡದ ಹಿಂದಣ ವಿಷಯವನ್ನು

ಹೇಳುವುದರಲ್ಲಿ ಜನ್ನನ ಉದ್ದೇಶವೆಂಥದು ಎಂದು ಕಂಡುಹಿಡಿವುದು ಕಷ್ಟವಾಗಿದೆ. ಈ ಪದ್ಯವನ್ನು ರಚಿಸುವುದರಲ್ಲಿ ಜನ್ನನ ಉದ್ದೇಶವೇನೆಂದರೆ ಮಹಾಪ್ರಭುಷರಾದ ನಾಗವರ್ಮ ಸುಮನೋಬಾಣರ ಸಂಬಂಧವು ತನಗುಂಟು ಎಂಬ ಮಹತ್ವದ ವಿಷಯವನ್ನು ತಿಳಿಸುವುದೇ. ಆದುದರಿಂದ ಈ ಜಗದೇಕಮಲ್ಲನು 1ನೆಯವನಲ್ಲ. ಅಲ್ಲದೆ ಹಿಂದೆ ತಿಳಿಸಿದಂತೆ ಅಯ್ಯನವರು "ಕವಿಸುಮನೋಬಾಣನ ಮಗಂ" ಎಂಬಲ್ಲಿ ಮಗಂ ಎಂಬ ಶಬ್ದಕ್ಕೆ ಶಿಷ್ಯ ಎಂಬ ವಿಶೇಷಾರ್ಥವನ್ನು ಬೇಕೆಂದು ಮಾಡಿದ್ದಾರೆ ಗುರುಪರಂಪರೆಯನ್ನು ಹೇಳುವಾಗ ಎಲ್ಲಿಯಾದರೂ ಶಿಷ್ಯ ಎಂಬರ್ಥದಲ್ಲಿ ಮಗ ಎಂಬ ಶಬ್ದವು ಬರುವುದುಂಟು. ಪ್ರಕೃತ ಸಂದರ್ಭದಲ್ಲಿ ಆ ಅರ್ಥಕ್ಕೆ ಅವಕಾಶವೇ ಇಲ್ಲ. ಇನ್ನು ಅಯ್ಯನವರು ಮೂರನೆಯ ಅಪಾರ್ಥಕ್ಕೆ ಹೊರಟಿದ್ದಾರೆ. ಛಂದೋಂಬುಧಿಯನ್ನು ಬರೆದ ನಾಗವರ್ಮನೂ ಕಾವ್ಯಾವಲೋಕನ ವಸ್ತುಕೋಶಗಳನ್ನು ಬರದ ನಾಗವರ್ಮನೂ ಒಬ್ಬನೇ ಎಂಬ ತಮ್ಮ ಕಲ್ಪನೆಯನ್ನು ಸಾಧಿಸುವುದಕ್ಕೋಸ್ಕರ ಮಗ ಎಂಬ ಶಬ್ದಕ್ಕೆ ಮಮ್ಮಗ ಎಂದು ಅರ್ಥಮಾಡುತ್ತಾರೆ ಛಂದೋಂಬುಧಿಯಲ್ಲಿ ಕವಿ ತಾನು ದಾಮಮಯ್ಯನ ಮಮ್ಮಗನೆಂದು ಹೇಳಿದ್ದಾನೆ. ದಾಮ ಎಂಬುದಕ್ಕೆ ದಾಮೋದರ ಎಂಬರ್ಥದಲ್ಲಿ ಕೆಲವುಕಡೆ ಪ್ರಯೋಗವುಂಟು. ಕಾವ್ಯಾವಲೋಕನ ವಸ್ತುಕೋಶಗಳನ್ನು ಬರೆದ ಕವಿ ಆ ಗ್ರಂಥಗಳ

ವಾಮನನುಂ ರುದ್ರಟನುಂ । ಭಾಮಹನುಂ ದಂಡಿಯುಂ ಮನಂಗೊಳೆ ಪೇೞ್ದಿ ।
ತೀವುಹಿಗೆನೆಗಟ್ಟಿ ಪೇೞ್ದಿಂ । ದಾಮೋದರ ತನಯನೀ ವಚೋಲಂಕೃತಿಯಂ ॥
ಸಾಮಾನ್ಯ ವಾಚಿಗಳನೀತೆಱದಿಂದನನ್ಯ ಸಾಮಾನ್ಯಮಾನ್ಯ ಸುಚರಿತ್ರ ಗುಣಾವತಾರಂ
ಸಾಮಾನ್ಯಮಪ್ಪ ಜನಮುಂ ತಿಳಿವಂತು ಪೇೞ್ದಿಂ ದಾಮೋದರ ಪ್ರಿಯ ಸುತಂ ಕವಿಕರ್ಣಪೂರಂ ॥

ಎಂಬ ಪದ್ಯಗಳಲ್ಲಿ ತಾನು ದಾಮೋದರನ ಮಗ ಎಂದು ಹೇಳಿದ್ದಾನೆ. ಇಲ್ಲಿ ಮಗ ಎಂಬುದು ಮಮ್ಮಗ ಎಂಬರ್ಥದಲ್ಲಿ ಬಂದಿದೆ ಎಂದೂ ಇದಕ್ಕೆ ಧರ್ಮಶಾಸ್ತ್ರಗಳ ವ್ಯಾಖ್ಯಾನಗಳಲ್ಲಿ ಪ್ರಮಾಣವುಂಟೆಂದೂ ಅಯ್ಯನವರು ಬರೆದಿದ್ದಾರೆ. ಕವಿಗಳು ವಾಚಕರಿಗೆ ಭ್ರಮೆ ಹುಟ್ಟುವಂತೆ ಹೀಗೆ ಎಂದಿಗೂ ಬರೆಯಲಾರರು ಅಯ್ಯನವರು ಹೇಳುವಂತೆ ಕಾವ್ಯಾವಲೋಕನ ವಸ್ತುಕೋಶಗಳ ಕವಿ ತಂದೆಯ ಹೆಸರನ್ನು ಬಿಟ್ಟುಬಿಟ್ಟು ತಾತನ ಹೆಸರನ್ನು ಮಾತ್ರ ಹೇಳಿಕೊಳ್ಳುವುದಕ್ಕೆ ಕಾರಣವೇನೋ ತಿಳಿಯಲಿಲ್ಲ. ಆದರೆ ಅಯ್ಯನವರು ಮೇಲಣ ಪದ್ಯಗಳಲ್ಲಿ

ಮಕಾರ ಪ್ರಾಸದ ಅವಶ್ಯಕತೆಯೇ ಇದಕ್ಕೆ ಕಾರಣವೆಂದು ಹೇಳಿಬಿಟ್ಟಿದ್ದಾರೆ (ಪುಟ 162). ಇದರಿಂದ ಗ್ರಂಥಕರ್ತನ ಕವಿತಾಶಕ್ತಿಗೆ ಕುಂದನ್ನು ಕಲ್ಪಿಸಿದಂತಾಯಿತೇ ಹೊರತು ಮತ್ತೆ ಬೇರೆ ಅಲ್ಲ. ಮಮ್ಮಗ ಎಂದು ಹೇಳುವುದು ಕವಿಯ ಉದ್ದೇಶವಾಗಿದ್ದ ಪಕ್ಷದಲ್ಲಿ ಛಂದಸ್ಸಿಗೂ ಪ್ರಾಸಕ್ಕೂ ಯಾವ ಕೊರತೆಯೂ ಇಲ್ಲದಂತೆ 1 ನೆಯ ಪದ್ಯದಲ್ಲಿ ದಾಮೋದರಪೌತ್ರನೀವಚೋಲಂಕೃತಿಯಂ ಎಂದೂ 2ನೆಯದರಲ್ಲಿ ದಾಮೋದರಾತ್ಮಜಸುತಂ ಕವಿಕರ್ಣಪೂರಂ ಎಂದೂ ಬಹಳ ಸುಲಭವಾಗಿ ಬರೆದುಬಿಡುತ್ತಿದ್ದನು.

ನಾಗಚಂದ್ರನು ಸು- 1100 ರಲ್ಲಿ ಬಾಳಿದನೆಂದು ಹಿಂದೆಯೇ ತೋರಿಸಿದ್ದೇನೆ (ಪುಟ xliv) ಕರ್ಣಾಟಕ ಭಾಷಾಭೂಷಣವನ್ನು ರಚಿಸಿದವನು ಆ ಗ್ರಂಥದ "ಆಸಾಂವ್ಯತ್ಯಯೋ ಬಹುಳಂ" ಎಂಬ 88 ನೆಯ ಸೂತ್ರದ ಕೆಳಗೆ "ಬಹು ತಾಪಕ್ಕೆ ಬಿಗುರ್ತು ವಿಷ್ಣುಪಡೆದಂ ಮತ್ಸ್ಯಾವತಾರಕ್ಕೆ" ಎಂಬ ಪಂಪರಾಮಾಯಣದ ಪದ್ಯಭಾಗವನ್ನು (VII, 98) ಉದಾಹರಿಸಿರುವುದರಿಂದ ಅವನು ಸು 1100 ಕ್ಕಿಂತ ಈಚೆಯವನಾಗಿರಬೇಕು. ಅವನು "ದೀರ್ಘೋಕ್ತಿರ್ನಯ ಸೇನಸ್ಯ" (ನಯಸೇನಾಚಾರ್ಯನ ಮತದಿಂ ಸಂಬೋಧನೆಯೊಳ್ ದೀರ್ಘಾದೇಶಮಕ್ಕುಂ) ಎಂಬ 73ನೆಯ ಸೂತ್ರದಲ್ಲಿ ನಯಸೇನನೆಂಬ ಒಬ್ಬ ಕನ್ನಡ ವೈಯ್ಯಾಕರಣನ ಹೆಸರನ್ನೂ ಹೇಳುತ್ತಾನೆ. ಈ ನಯಸೇನನು 1053 ರಲ್ಲಿ ಹುಟ್ಟಿದ ಮುಳುಗುಂದದ ಶಾಸನದಲ್ಲಿ (ಎಪಿಗ್ರಾಫಿಯಾ ಇಂಡಿಕ XVI, 54) ಉಕ್ತನಾದ ನಯಸೇನನೇ ಎಂದು ಅಯ್ಯನವರು ಬರೆದಿದ್ದಾರೆ (ಪುಟಗಳು 179-181). ಆದರೆ ಶಾಸನೋಕ್ತನಾದ ನಯಸೇನನು ಸಂಸ್ಕೃತ ವೈಯ್ಯಾಕರಣನಾದುದರಿಂದ ಸೂತ್ರೋಕ್ತ ನಯಸೇನನು ಅವನಲ್ಲ, 1112ರಲ್ಲಿ ಧರ್ಮಾಮೃತವನ್ನು ಬರೆದ ಕನ್ನಡಕವಿ ನಯಸೇನನೇ ಆಗಿರಬೇಕು. ಕಾವ್ಯಾವಲೋಕನದಲ್ಲಿ ಉದಾಹೃತವಾಗಿರುವ

ತೀವೇಟಿರ್ ಮಾಣಿಕ್ಯಭಂಡಾರರ ಪುಟಿಕೆಗಳಂ ಪುಂಜಿಸಲ್ವೇಟಿರ್ ಸುವ
ರ್ಣೋ |
ತ್ಕರಮಂ ತೋಱಲ್ಕೆವೇಟಿರ್ ದಂತಿಗಳ ನಿರಿಸವೇಟಿರ್ ಮುಂದೆ ವಾಹಂ
ಗಳಂ ಬಿ ||
ತ್ತರಿಸಲ್ವೇಟಿರ್ ಚಿತ್ರಚೀನಾಂಬರ ಪರಿಕರಮಂ ಮಾಣದೆಂದೋಳಿಯಿಂ
ಲೆಂ |
ಕರನಾಗಳ್ ಪೇಟ್ದಿನೀಯಲ್ಕೆರೆದವರ್ಗೆ ಮಹಾದಾನಮಂ ವಿಕ್ರಮಾಂಕಂ ||

ಎಂಬ ಪದ್ಯದಲ್ಲಿ (284) ಉಕ್ತನಾದ ವಿಕ್ರಮಾಂಕನು 1076 ರಿಂದ 1126 ರ

ವರೆಗೆ ಆಳಿದ 6 ನೆಯ ಚಾಳುಕ್ಯ ವಿಕ್ರಮಾದಿತ್ಯನೇ ಹೊರತು ಅಯ್ಯನವರು ಹೇಳುವಂತೆ (ಪುಟಗಳು 178-179) 4 ನೆಯವನಾಗಲಿ 5 ನೆಯವನಾಗಲಿ ಅಲ್ಲ. ಅಲ್ಲದೆ ಕಾವ್ಯಾವಲೋಕನ ಕರ್ತನು ಉದಾಹರಿಸಿರುವ

ಪ್ರಣುತಗುಣರೆನಿಪವಿಬುಧ ೄ । ಗ್ರಣಿಗಳ್ ಕೆಯ್ಕೊಂಡು ಪೊಗೞ್ವೆ ಸಲೆ ನೆ
ಗೞ್ದುವು ಧಾ ।
ರಿಣಿಯೊಳಗೆ ನಾಗವರ್ಮನ । ಗುಣವರ್ಮನ ಶಂಖವರ್ಮನ ಧ್ವಾನಂ
ಗಳ್ ॥185॥

ತಾರಾಪತಾರಾವಳಿವ ಗುಳಿಕಾಹಾರ ನೀಹಾರ ನೀಕಾ ।
ಶೋರುಸ್ಫೂರ್ಜತ್ಪ್ರವಿತತಯಶೋರಂಜಿತಾ ಶೇಷಲೋಕಂ ॥
ಸಾರಾಸಾರಾದ್ಯನುಗತವಿಚಾರೋಚಿತಾತ್ಮೀಯಚಿತ್ತೋ ।
ದಾರ ಪ್ರಜ್ಞಂ ನೆಗೞ್ದಿನವನೀಭಾಗದೊಳ್ ನಾಗವರ್ಮಂ ॥547॥

ಎಂಬ ಪದ್ಯಗಳಲ್ಲಿ ಕವಿಗೆ ಹಿಂದೆ ಇದ್ದ ಒಬ್ಬ ನಾಗವರ್ಮನ ಸ್ತುತಿ ಇದೆ. ಈ ನಾಗವರ್ಮನು ಕವಿಯೇ ಎಂದು ಅಯ್ಯನವರು ಹೇಳುತ್ತಾರೆ. ಆದರೆ ಕವಿಯ ಸ್ತುತಿರೂಪವಾದ ಪದ್ಯಗಳು ಪ್ರಕರಣಗಳ ಅಂತ್ಯದಲ್ಲಿ ಬರುತ್ತವೆಯೇ ಹೊರತು ಮಧ್ಯದಲ್ಲಿ ಉದಾಹರಣರೂಪವಾಗಿ ಎಲ್ಲಿಯೂ ಬರುವುದಿಲ್ಲ. ಇದೂ ಅಲ್ಲದೆ ಛಂದೋಂಬುಧಿ ಕರ್ತನಿಗೆ ಕವಿರಾಜಹಂಸ, ಬುಧಾಬ್ಜವನಕಲಹಂಸ, ಕಂದ ಕಂದರ್ಪ, ನೆಗೞ್ತೆಗೋಜ ಎಂಬ ಬಿರುದುಗಳೂ ಸಮ್ಯಗ್ದಿಯಾತ ಎಂಬ ಉಪನಾಮವೂ ಉಂಟು. ಕಾವ್ಯಾವಲೋಕನ ವಸ್ತುಕೋಶಕರ್ತನಿಗಾದರೋ ಅಭಿನವಶರ್ವವರ್ಮ, ಕವಿತಾ ಗುಣೋದಯ, ಕವಿಕರ್ಣಪೂರ, ಕವಿಕಂಠಾಭರಣ ಎಂಬ ಬಿರುದುಗಳು ಹೇಳಿವೆ. ಛಂದೋಂಬುಧಿಯನ್ನು ಬರೆದವನೂ ಕಾವ್ಯಾವಲೋಕನವಸ್ತುಕೋಶಗಳನ್ನು ಬರೆದವನೂ ಒಬ್ಬನೇ ಆಗಿದ್ದ ಪಕ್ಷದಲ್ಲಿ ಮೊದಲು ಹೇಳಿದ ಬಿರುದುಗಳಲ್ಲಿ ಒಂದಾದರೂ ಕಾವ್ಯಾವಲೋಕನವಸ್ತುಕೋಶಗಳಲ್ಲಿಯಾಗಲಿ ಎರಡನೆಯಸಲ ಹೇಳಿದ ಬಿರುದುಗಳಲ್ಲಿ ಒಂದಾದರೂ ಛಂದೋಂಬುಧಿಯಲ್ಲಿಯಾಗಲಿ ಬಾರದೆ ಇರುವುದು ಆಶ್ಚರ್ಯಕವೇ ಸರಿ. ಛಂದೋಂಬುಧಿಕರ್ತನು ಯುದ್ಧವೀರನೆಂದು (ಕುಂತೀಪುತ್ರಂ ಪೂಣ್ದರ್ದಣದೊಳ್) ಹೇಳಿದೆ; ಮತ್ತೊಬ್ಬನಿಗೆ ಇಂಥ ವಿಶೇಷಗುಣವೆಲ್ಲಿಯೂ ಹೇಳಿಲ್ಲ.

ಕಾವ್ಯಾವಲೋಕನದ ಅಂತ್ಯದಲ್ಲಿ ಬರುವ

ಛಂದೋವಿಚಿತಿಯಲಂಕೃತಿ । ಸಂದಭಿಧಾನ. ಕೋಶವೆಂಬಿವು ವಾಕ್ಸ್ತ್ರೀ ।
ಸುಂದರಿಗೆ ರತ್ನಮಂಡನ । ದಂದದೊಳಿರ್ಪುವು ನಾಗವರ್ಮನ ಕೃತಿ
ಗಳ್ ॥

ಎಂಬ ಪದ್ಯದಲ್ಲಿ ಈ ಗ್ರಂಥಕರ್ತನ ಕೃತಿಗಳೊಳಗೆ ಛಂದೋವಿಚಿತಿಯನ್ನು ಒಂದಾಗಿ ಹೇಳಿದೆ. ಇದನ್ನು ನೋಡಿ ಅಯ್ಯನವರು ಈ ಗ್ರಂಥವು ಛಂದೋಂಬುಧಿಯೆಂದು ನಿಶ್ಚಯಿಸಿ ಬಿಟ್ಟಿದ್ದಾರೆ (ಪುಟ 166). ಕಾವ್ಯಾವಲೋಕನ ಕರ್ತನು ಛಂದೋವಿಚಿತಿಯನ್ನು ಬರೆದಿರಬೇಕೆಂಬುದಕ್ಕೆ ಒಂದು ವಿಚಿತ್ರಕಾರಣವನ್ನೂ ಹೇಳಿದ್ದಾರೆ ಏನೆಂದರೆ—ಈ ಕವಿ ದಂಡಿಯನ್ನು ಅನುಸರಿಸುವಂತೆ ಹೇಳುತ್ತಾನೆ; ದಂಡಿ ಛಂದೋವಿಚಿತಿಯನ್ನು ಬರೆದಿದ್ದಾನೆ; ಆದುದರಿಂದ ಇವನೂ ಬರೆದಿರಬೇಕು—ಎಂಬುದೇ (ಪುಟ 168) ಇವನು ಛಂದೋವಿಚಿತಿಯನ್ನು ಬರೆದಿರಬಹುದು; ಪರಂತು ನಾನು ಹಿಂದೆ ಹೇಳಿರುವ ಕಾರಣಗಳಿಂದ ಅದು ಛಂದೋಂಬುಧಿಯಾಗಿರಲಿಕ್ಕಿಲ್ಲ. ಈ ಗ್ರಂಥವನ್ನೇ ಬರೆದಿದ್ದ ಪಕ್ಷದಲ್ಲಿ "ಛಂದೋವಿಚಿತಿಯಲಂಕೃತಿ" ಎಂಬುದಕ್ಕೆ ಪ್ರತಿಯಾಗಿ "ಛಂದೋಂಬುನಿಧಿಯಲಂಕೃತಿ" ಎಂದು ಬರೆಯುತ್ತಿದ್ದನು ಅಯ್ಯನವರು ಈಚೆಗೆ ಬಂದ ಚಾವುಂಡರಾಯರುಗಳಿಗೂ ರಾಯ ಎಂಬ ಬಿರುದುಂಟು ಎಂದು ವಾದಿಸುತ್ತಾರೆ (ಪುಟ 169). ಈ ಅಂಶವು ಇವರುಗಳು ಪ್ರಸಿದ್ಧನಾದ ಹಿಂದಣ ಚಾವುಂಡರಾಯನನ್ನು ಅನುಕರಿಸಿದರು ಎಂಬುದನ್ನು ತೋರಿಸುವುದೇ ಹೊರತು ಮತ್ತೇನೂ ಇಲ್ಲ. ಆದುದರಿಂದ ಗಂಗರಾಜನಾದ ರಾಚಮಲ್ಲನು ತನ್ನ ದಂಡನಾಯಕನಾದ ಚಾವುಂಡರಾಜನ ಔದಾರ್ಯಕ್ಕೆ ಮೆಚ್ಚಿ ಅವನಿಗೆ ರಾಯ ಎಂಬ ಬಿರುದನ್ನು ಕೊಟ್ಟನು ಎಂದು ಭುಜಬಲಿಶತಕದಲ್ಲಿ ಹೇಳಿರುವುದನ್ನು ನಂಬದೆ ಇರುವುದಕ್ಕೆ ಅವಕಾಶವೂ ಇಲ್ಲ.

ಈ ವಿಷಯಗಳನ್ನೆಲ್ಲಾ ಆಲೋಚಿಸಿದ ಪಕ್ಷದಲ್ಲಿ ಅಯ್ಯನವರು ತಮ್ಮ ಕಲ್ಪನೆಯನ್ನು ಸ್ಥಾಪಿಸುವುದಕ್ಕಾಗಿ ಮಾಡಿರುವ ಪ್ರಯತ್ನವು ನಿಷ್ಪ್ರಯೋಜನವೆಂಬುದು ಸ್ಪಷ್ಟವಾಗದೆ ಇರಲಾರದು. ಆದುದರಿಂದ ನಾನು ಹೇಳಿರುವಂತೆ (I, 52-54) ಬೇರೆ ಬೇರೆ ಕಾಲಗಳಲ್ಲಿ ಇಬ್ಬರು ನಾಗವರ್ಮರಿದ್ದರು ಎಂಬುದರಲ್ಲಿ ಆವ ಸಂಶಯವೂ ಇಲ್ಲ.

## ಮಲ್ಲಿಕಾರ್ಜುನ

ಮಲ್ಲಿಕಾರ್ಜುನನು ಸೂಕ್ತಿಸುಧಾರ್ಣವವನ್ನು ಸು. 1263 ರಲ್ಲಿ ಬರೆದನೆಂದೂ ಅವನು ಮಂಡ್ಯ 121, 122ನೆಯ ಶಾಸನಗಳನ್ನು ಬರೆದ ಚಿದಾನಂದಕವಿಯಿಂದ (I, 354) ಅಭಿನ್ನನೆಂದೂ ಅಯ್ಯನವರು ಹೇಳುತ್ತಾರೆ (ಪುಟಗಳು 182—189). ಈ ಹೇಳಿಕೆಗಳು ಭ್ರಮಮೂಲವಾದುವು. ಸೂಕ್ತಿಸುಧಾರ್ಣವದಲ್ಲಿಯ

ಹಣಿದಂಬೆಳ್ವೊಲ್ ಜವಂ ರಾಯನನೊಯಿಸಿ ಬರ್ಪಂತೆ ನೋಮ್ಪೇಶ್ವ
ರಂ ತಂ।

ಕಣರಾಯಂ ಬಂದನಾಶಾಜಯಕೆಲೆಲೆಮಹಾದೇವ ಏದ್ವಿಣ್ಣೃಪಗೆ ॥
ತ್ತಣ ತೋರ್ಪಿನ್ನೆತ್ತಣಾರ್ಪೆತ್ತಣ ಜಯದೊರದಿನ್ನೆತ್ತಣಾ ಟೋಪಮಿನ್ನೆ।
ತ್ತಣ ಧಾತ್ರೀಚಕ್ರಮಿನ್ನೆತ್ತಣ ಗಜಘಟೆಯಿನ್ನೆತ್ತಣಾತ್ಮೀಯಸೈನ್ಯಂ ॥

ಎಂಬ ಪದ್ಯದಲ್ಲಿ ಬರುವ "ಎಲೆಲೆ ಮಹಾದೇವ" ಎಂಬುದು ಸೋಮೇಶ್ವರನ ಪರಾಕ್ರಮಕ್ಕಾಗಿ ಆಶ್ಚರ್ಯವನ್ನು ಸೂಚಿಸುವ ಉಕ್ತಿಯೆಂದು ತಿಳಿಯದೆ ಸೇವುಣ ರಾಜನಾದ ಮಹಾದೇವನನ್ನು (1260—1271) ಹೇಳುತ್ತದೆ ಎಂದು ಭಾವಿಸಿ ಅಯ್ಯಂಗಾರರು ಮಲ್ಲಿಕಾರ್ಜುನನಿಗೆ ಸು 1263 ಎಂಬ ಕಾಲವನ್ನು ಕೊಟ್ಟಿದ್ದಾರೆ. ನಾಗಮಂಗಲದ 39ನೆಯ ಶಾಸನದಿಂದ ಸೋಮೇಶ್ವರನ ಮಗನಾದ 3ನೆಯ ನಾರಸಿಂಹನು ಸುಮಾರು 1271ರಲ್ಲಿ ಸೇವುಣರಾಜನಾದ ಮಹಾದೇವನನ್ನು ಸೋಲಿಸಿದಂತೆ ತಿಳಿಯುತ್ತದೆ. ಹೀಗಿರುವಲ್ಲಿ 1264 ರಲ್ಲಿ ಗತಿಸಿದುದಾಗಿ ತಿಳಿದು ಬರುವ ಸೋಮೇಶ್ವರನಿಗೂ ಈ ಮಹಾದೇವನ ಸೋಲಿಗೂ ಹೇಗೆ ಸಂಬಂಧವನ್ನು ಕಲ್ಪಿಸಬಹುದು ? ಸೋಮೇಶ್ವರನು ತನ್ನ ಬಾಳಿಕೆಯಲ್ಲಿ ಬಹಳಕಾಲವನ್ನು ಶ್ರೀರಂಗದ ಸಮೀಪದಲ್ಲಿರುವ ಕಣ್ಣನೂರಿನಲ್ಲಿ ಕಳೆದನು. ಆದರೂ ಅವನು ಕನ್ನಡದೇಶದಲ್ಲಿ 1236 (1897–98 ರ ಬಾಂಬೆ ಶಾಸನದ ಇಲಾಖಾ ವರದಿ), 1237 (ಮಂಡ್ಯ 122), 1252 (1907 ರ ಮೈಸೂರು ಶಾಸನ ಇಲಾಖಾ ವರದಿ, ಪುಟ 4) ಈ ವರ್ಷಗಳಲ್ಲಿದ್ದನು ; ಇತರ ಕಾಲಗಳಲ್ಲಿಯೂ ಇದ್ದಿರಬಹುದು. ಮಲ್ಲಿಕಾರ್ಜುನನು

ಒರಂತೆ ಮೆಚ್ಚಿದಂ ಕೃತಿ । ಸಾರಂ ಕೃತಿಶೇಖರಕ್ಕೆ ಹೊಯ್ಸಳವಂಶೋ ।
ದ್ಧಾರಂ ನರಸಿಂಹಸುತಂ । ದೋರಸಮುದ್ರಾಧಿನಾಯಕಂ ಸೋಮ
ನೃಪಂ ॥

ಎಂಬ ಪದ್ಯದಲ್ಲಿ ಪ್ರಯೋಗಿಸಿರುವ 'ದೋರಸಮುದ್ರಾಧಿ ನಾಯಕಂ' ಎಂಬ ವಿಶೇಷಣದಿಂದ ಈಗ್ರಂಥಶ್ರವಣವು ಸೋಮೇಶ್ವರನಿಗೆ ದೋರಸಮುದ್ರದಲ್ಲಿಯೇ ಆಗಿರಬೇಕೆಂದು ತೋರುತ್ತದೆ. ಆದುದರಿಂದ ಸೂಕ್ತಿಸುಧಾರ್ಣವದ ರಚನೆಗೆ ನಾನು ಹೇಳಿರುವ ಸು. 1245 ನ್ನು ಮಾರ್ಪಡಿಸಬೇಕಾದ ಆವಶ್ಯಕತೆಯೇನೂ ಕಾಣಬರುವುದಿಲ್ಲ. ಆ ಗ್ರಂಥರಚನೆ ಆ ಕಾಲಕ್ಕಿಂತ ಇನ್ನೂ ಕೆಲವುವರ್ಷಗಳು ಹಿಂದೆ ಆಗಿದ್ದರೂ ಇರಬಹುದು.

ಇನ್ನು ಮಲ್ಲಿಕಾರ್ಜುನ ಚಿದಾನಂದರ ಸಮೀಕರಣಕ್ಕೆ ಅವರುಗಳ ನಾಮೈಕದೇಶ ಸಾಮ್ಯವೂ ಶಾಸನಪದ್ಯಗಳಲ್ಲಿ ಎರಡು ಸೂಕ್ತಿ ಸುಧಾರ್ಣವದಲ್ಲಿರುವುದೂ ಕಾರಣವೆಂದು ತೋರುತ್ತದೆ. ಮಲ್ಲಿಕಾರ್ಜುನನಿಗೆ ಮಲ್ಲ, ಮಲ್ಲಪ, ಚಿದಾನಂದ ಮಲ್ಲಿಕಾರ್ಜುನ ಎಂಬ ಹೆಸರುಗಳೂ ಉಂಟು. ಒಂದು ಪದ್ಯದಲ್ಲಿ ಮಾತ್ರ (I, 370) ಚಿದಾನಂದ ಎಂಬ ಸಂಕ್ಷಿಪ್ತವಾದ ಹೆಸರು ಹೇಳಿದೆ. ಆದರೆ

ಶಾಸನ ಕವಿಗೆ ಚಿದಾನಂದ ಎಂಬ ಒಂದು ಹೆಸರು ಮಾತ್ರ ಹೇಳಿದೆಯೇ ಹೊರ ತು ಇನ್ನಾವುದೂ ಹೇಳಿಲ್ಲ. ಅಲ್ಲದೆ ನಾನು ಹಿಂದೆ ತಿಳಿಸಿದಂತೆ (ಪುಟ lii) ಮಲ್ಲಿಕಾರ್ಜುನನು ಜೈನನು, ಶಾಸನ ಕವಿಯಾದರೋ 'ಬ್ರಹ್ಮವಿದ್ಯೆಗಾಸ್ಪದ ರೂಪಂ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿರುವುದರಿಂದ ಬ್ರಾಹ್ಮಣನೆಂ ಬುದರಲ್ಲಿ ಸಂದೇಹವಿಲ್ಲ. ಸೂಕ್ತಿಸುಧಾರ್ಣವವು ಹಲವು ಕಡೆಯಿಂದ ಪದ್ಯಗ ಳನ್ನು ಆರಿಸಿ ಸಂಯೋಜಿಸಿದ ಗ್ರಂಥವಾದುದರಿಂದ ಶಾಸನದ ಎರಡು ಪದ್ಯಗ ಳು ಈ ಗ್ರಂಥದಲ್ಲಿ ಕಂಡ ಮಾತ್ರಕ್ಕೆ ಶಾಸನ ಕವಿಯೂ ಈ ಗ್ರಂಥಕರ್ತನೂ ಒಬ್ಬನೇ ಎಂಬ ಭಾವನೆಗೇ ಅವಕಾಶವಿಲ್ಲ.

ಸುಮನೋಬಾಣ, ಮಲ್ಲಿಕಾರ್ಜುನ, ಕೇಶಿರಾಜ ಇವರು ಸ್ಮಾರ್ತ ಬ್ರಾಹ್ಮಣರಾಗಿದ್ದಿರಬಹುದು ಎಂಬ ಅಯ್ಯಂಗಾರರ ಶಂಕೆಗೆ (ಪುಟ 189) ಆಧಾರ ವೇ ಇಲ್ಲ. ಇವರೆಲ್ಲರೂ ಜೈನರು ಎಂದು ಹಿಂದೆಯೇ ತೋರಿಸಿದ್ದೇನೆ (ಪುಟ lii). ಇವರು ಜೈನರಲ್ಲದ ಪಕ್ಷದಲ್ಲಿ ಜೈನರು ಇವರನ್ನು ತಮ್ಮ ಸಮು ದಾಯಕ್ಕೆ ಸೇರಿದವರೆಂದು ಎಂದಿಗೂ ಹೇಳಲಾರರು. ಶಂಕರ, ಗಂಗೆ, ಜನಾರ್ದನ ಎಂಬ ಹೆಸರುಗಳು (ಪುಟ 149) ಜೈನರಲ್ಲಿ ಬಳಕೆಯಲ್ಲಿವೆ. ರನ್ನನು ಶಂಕರ ಗಂಡ ಎಂಬ ಒಬ್ಬ ಜೈನ ರಾಜಕುಮಾರನನ್ನು ಹೇಳಿ ಅವನಿಗಿಂತ ತನ್ನ ಪೋಷಕಿ ಯಾದ ಅತ್ತಿಮಬ್ಬೆ ದಾನಶೀಲಳು ಎಂದು ಬರೆದಿದ್ದಾನೆ (I, 66). ಸಾಳ್ವನು ಶಂಕರಾಂಬಿಕೆ ಎಂಬ ಒಬ್ಬ ಜೈನಸ್ತ್ರೀಯನ್ನು ಹೇಳಿದ್ದಾನೆ (II, 244). ಶಿವದೇ ವಮ್ಮ ಎಂಬ ಹೆಸರು ಜೈನರಲ್ಲಿ ಈಗಲೂ ವಾಡಿಕೆಯಲ್ಲಿದೆ. ಗಂಗಿಸೆಟ್ಟಿ, ಗಂಗಾ ಯಿ ಎಂಬುವು ಶ್ರ. ಬೆ. 235, 300 ನೆಯ ಶಾಸನಗಳಲ್ಲಿ ಒಬ್ಬ ಜೈನನ ಮತ್ತು ಜೈನಸ್ತ್ರೀಯ ಹೆಸರುಗಳಾಗಿ ಬಂದಿವೆ. ಜನ್ನಕವಿಯ ಹೆಸರು ಜನಾರ್ದನ ಎಂಬುದರ ಸಂಕ್ಷಿಪ್ತರೂಪವು. ಜನಾರ್ದನ ಎಂಬ ಹೆಸರು ಜೈನರಲ್ಲಿ ಬಹಳ ಸಾಧಾರಣವಾಗಿದೆ. ಮಧುರನು ತನ್ನ ಧರ್ಮನಾಥಪುರಾಣವನ್ನು ಒಬ್ಬ ಜೈನ ಮಲ್ಲಿಕಾರ್ಜುನನ ಪ್ರೇರಣೆಯಿಂದ ಬರೆದಂತೆ ಹೇಳುತ್ತಾನೆ (I, 427). ಶಬ್ದಮ ಣಿದರ್ಪಣದ ಕೊನೆಯಲ್ಲಿ ಹೇಳಿರುವ ಕೇಶಿರಾಜನ ಗ್ರಂಥಗಳ ಹೆಸರಿನಿಂದ ಅವನು ಶಿವಪೂಜಕನೆಂದು ತಿಳಿಯಬಹುದು ಎಂಬ ಅಯ್ಯಂಗಾರರ ಅಭಿಪ್ರಾಯವು (ಪುಟಗಳು 148–149) ಯುಕ್ತವಾಗಿ ತೋರುವುದಿಲ್ಲ, ಏಕೆಂದರೆ ಆ ಗ್ರಂಥ ಗಳನ್ನು ನೋಡದೆಯೇ ಹೀಗೆ ಅಭಿಪ್ರಾಯಪಡುವವು ಅಸಮೀಕ್ಷ್ಯಕಾರಿ ತ್ವವೇ ಸರಿ.

## ಕರ್ಣಪಾರ್ಯ.

ಕರ್ಣಪಾರ್ಯನ ವಿಷಯದಲ್ಲಿ ಅವನು ಹೇಳಿರುವ ಕೆಲವರು ಗುರುಗಳನ್ನು ಶ್ರ. ಬೆ. ಶಾಸನಗಳಲ್ಲಿ ಉಕ್ತರಾದ ಅದೇ ಹೆಸರಿನ ಗುರುಗಳೊಡನೆ ನಾನು

ಮಾಡಿರುವ ಸಮೀಕರಣವು ಸರಿಯಲ್ಲವೆಂದು ಮೊದಲೇ ಒಪ್ಪಿಕೊಳ್ಳುತ್ತೇನೆ. ಶಿಲಾಹಾರರಾಜನಾದ ಗಂಡರಾದಿತ್ಯನಿಗೆ ಗೋವರ್ಧನ, ಗೋಪಣ, ಶ್ರೀಭೂಷಣ ಎಂಬ ನಾಮಾಂತರಗಳಿದ್ದುವೆಂದೂ ಅವನಿಗೆ ವಿಜಯಾದಿತ್ಯ, ಲಕ್ಷ್ಮಣ, ವರ್ಧಮಾನ, ಶಾಂತ ಎಂಬ ನಾಲ್ವರು ಮಕ್ಕಳಿದ್ದರೆಂದೂ ನಾನು ಬರೆದಿರುವುದು (I, 140) ಅವುದೋ ಒಂದು ಕೈಬರಹದ ಪುಸ್ತಕದ ಆಧಾರದಿಂದಲೇ ಎಂದು ತಿಳಿಯುತ್ತೇನೆ ; ಆದರೆ ಪುಸ್ತಕವು ಇಂಥದು ಎಂದು ಜ್ಞಾಪಕಕ್ಕೆ ಬರಲಿಲ್ಲ. ಮೈಸೂರು ಪ್ರಾಚ್ಯಕೋಶಾಲಯದಲ್ಲಿ ಈಗ ದೊರೆವ ಎ. 52 ಮತ್ತು 4 ಎಂಬ ಸಂಖ್ಯೆಯುಳ್ಳ ನೇಮಿನಾಥಪುರಾಣದ 2 ಹಸ್ತಲಿಖಿತ ಪ್ರತಿಗಳಲ್ಲಿ ನಾನು ಮೇಲೆ ಹೇಳಿರುವ ಅಂಶಗಳು ಉಕ್ತವಾಗಿಲ್ಲ. ನೇಮಿನಾಥಪುರಾಣದ ಮತ್ತೊಂದು ಪ್ರತಿಯನ್ನು ಸಂಪಾದಿಸಲು ಒಂದು ವರ್ಷದಿಂದ ಮಾಡಿದ ಪ್ರಯತ್ನವು ಫಲಿಸಲಿಲ್ಲ. ಅಯ್ಯನವರು ವಿಜಯಾದಿತ್ಯನಿಗೆ ತಮ್ಮಂದಿರಿಲ್ಲ, ಲಕ್ಷ್ಮಣನು ರಾಜವಂಶಕ್ಕೆ ಸೇರಿದವನಲ್ಲ ಎನ್ನುತ್ತಾರೆ (ಪುಟ 78). ಈ ಸಂದರ್ಭದಲ್ಲಿ ಈಗ ದೊರೆತಿರುವ ಆಧಾರದಮೇಲೆ ಒಂದೆರಡಂಶಗಳನ್ನು ಹೇಳಬಹುದು. ಅಯ್ಯನವರು ಸೂಚಿಸಿರುವ (ಪುಟ 85) ವಿಜಯಾದಿತ್ಯನ 1165 ರಲ್ಲಿ ಹುಟ್ಟಿದ ಎಕ್ಸಂಬಿ ಶಾಸನದಲ್ಲಿ (ಮೈಸೂರು ಶಾಸನ ಇಲಾಖೆಯ 1916 ನೆಯ ವರ್ಷದ ವರದಿ, ಪುಟಗಳು 48–50) ವಿಜಯಾದಿತ್ಯನು ಗಂಡರಾದಿತ್ಯನ ಜ್ಯೇಷ್ಠಪುತ್ರನೆಂದು ಹೇಳಿದೆ. ಇದರಿಂದ ವಿಜಯಾದಿತ್ಯನಿಗೆ ತಮ್ಮನಾಗಲಿ ತಮ್ಮಂದಿರಾಗಲಿ ಇದ್ದರು ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಗಂಡರಾದಿತ್ಯನಿಗೂ ವಿಜಯಾದಿತ್ಯನಿಗೂ ಹೇಳಿರುವ ರೂಪನಾರಾಯಣ ಎಂಬ ಬಿರುದನ್ನು ಲಕ್ಷ್ಮಣನಿಗೂ ಹೇಳಿರುವುದರಿಂದ (ಪುಟ 80, ಪದ್ಯ 27) ಅವನೂ ರಾಜವಂಶಕ್ಕೆ ಸೇರಿದವನೆಂದು ತೋರುತ್ತದೆ. ಕರ್ಣಪಾರ್ಯನೇಮಿಚಂದ್ರರಿಬ್ಬರೂ ಸೌಂದತ್ತಿಯ ರಟ್ಟರಾಜನಾದ ಲಕ್ಷ್ಮೀದೇವನ ಆಶ್ರಿತರಾಗಿದ್ದರೆಂದೂ ( 1, ಅವತರಣಿಕೆ 17 ; ಮೈಸೂರು ಶಾಸನ ಇಲಾಖೆಯ 1916 ನೆಯ ವರ್ಷದ ವರದಿ, ಪುಟ 50 ) ಈ ಕವಿಗಳಿಬ್ಬರೂ ಶಿಲಾಹಾರರಾಜರ ಪ್ರೋತ್ಸಾಹದಿಂದ ಗ್ರಂಥಗಳನ್ನು ಬರೆದರೆಂದೂ (II, ಇಂಗ್ಲಿಷ್ ಮತ್ತು ಕನ್ನಡ ಅವತರಣಿಕೆಗಳು, ಕ್ರಮವಾಗಿ ಪುಟಗಳು 10 ಮತ್ತು 16) ನಾನು ಬರೆದಿರುವುದನ್ನು ತಿದ್ದಬೇಕಾಗಿದೆ. ಕರ್ಣಪಾರ್ಯನು ಶಿಲಾಹಾರರಾಜನಾದ ವಿಜಯಾದಿತ್ಯನ ಆಳಿಕೆಯಲ್ಲಿ ಲಕ್ಷ್ಮಣನ ಅಥವಾ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ ನೇಮಿಚಂದ್ರನು ಸೌಂದತ್ತಿಯ ರಟ್ಟರಾಜನಾದ 3 ನೆಯ ಕಾರ್ತವೀರ್ಯನ ಮಗ ಲಕ್ಷ್ಮೀದೇವನ ಪ್ರೋತ್ಸಾಹದಿಂದಲೂ ಗ್ರಂಥಗಳನ್ನು ಬರೆದರು. ಇವರಿಬ್ಬರಿಗೂ ಲಕ್ಷ್ಮೀದೇವ ಎಂಬ ಒಂದೇ ಹೆಸರಿರುವುದರಿಂದಲೂ ಇಬ್ಬರ ಹೆಂಡತಿಯರಿಗೂ ಚಂದ್ರಿಕಾ ದೇವಿ ಎಂಬ ಒಂದೇ ಹೆಸರಿರುವುದರಿಂದಲೂ ಈ ಭ್ರಮವುಂಟಾಯಿತು.

ಇನ್ನು ಕರ್ಣಪಾರ್ಯನ ಕಾಲದ ವಿಚಾರದಲ್ಲಿ ಹಿಂದೆ ಹೇಳಿದಂತೆ ಅವನು ವಿಜಯಾದಿತ್ಯನ ಆಳಿಕೆಯಲ್ಲಿ ತನ್ನ ಗ್ರಂಥವನ್ನು ಬರೆದನು. ವಿಜಯಾದಿತ್ಯನು 1143, 1153 (ಕನ್ನಡ ಜಿಲ್ಲೆಗಳ ವಂಶಾವಳಿಗಳು, 545), 1165 (ಹಿಂದೆ ಹೇಳಿದ ಎಕ್ಸಂಬಿ ಶಾಸನ) ಈ ವರ್ಷಗಳಲ್ಲಿ ಆಳಿದಂತೆ ಶಾಸನಗಳಿಂದ ತಿಳಿಯುತ್ತದೆ. ಆದರೆ ಕರ್ಣಪಾರ್ಯನು ಶ್ರೀಭೂಷಣನ (ಗಂಡರಾದಿತ್ಯನ) ಇಷ್ಟಾನುಸಾರವಾಗಿ ತನ್ನ ಗ್ರಂಥವನ್ನು ಬರೆದಂತೆ ಹೇಳುವುದರಿಂದ ಗ್ರಂಥರಚನೆ 1143 ಕ್ಕೆ ಸ್ವಲ್ಪ ಕಾಲ ಹಿಂದೆಯೇ ಆರಂಭವಾಗಿರಬೇಕು. ಆದುದರಿಂದ ಈ ಕವಿಯ ಕಾಲವು ಸು.1140 ಎಂದು ಹೇಳಿದ್ದೇನೆ. ಅಯ್ಯನವರು ಕವಿಯ ಕಾಲವೆಂದು ಕೊಟ್ಟಿರುವ 1174ಕ್ಕೆ ಆಧಾರವಿಲ್ಲ. ಪರಮಜಿನಮತಕ್ಷೀರವಾರಾಶಿಚಂದ್ರ, ಭವ್ಯವನಜವನ ಮಾರ್ತಾಂಡ ಎಂಬ ಬಿರುದುಗಳು ಕರ್ಣಪಾರ್ಯನ ಪೋಷಕನಾದ ಲಕ್ಷ್ಮಣನಿಗೆ ಅನ್ವಯಿಸುತ್ತವೆಯೇ ಹೊರತು ಕರ್ಣಪಾರ್ಯನಿಗಲ್ಲ ಎಂದು ಅಯ್ಯನವರು ಅಭಿಪ್ರಾಯಪಡುತ್ತಾರೆ. ಆದರೆ ಜೈನ ಕವಿಗಳ ಮಾರ್ಗವನ್ನು ತಿಳಿದ ಕನ್ನಡ ಪಂಡಿತರು ಈ ಯಭಿಪ್ರಾಯವನ್ನು ಅಂಗೀಕರಿಸಲಾರರು.

ದುರ್ಗಸಿಂಹನು (ಸು. 1025) ಮಾಳವೀ ಮಾಧವ ಕರ್ತೃ ಎಂದು ಸ್ತುತಿಸುವ ಕರ್ಣಪಾರ್ಯನ ಕಾಲವು ಸು. 1000 ಎಂದು ಹೇಳಬಹುದು.

## ಸೋಮರಾಜ

ಸೋಮರಾಜನು ಚಾಳುಕ್ಯವಂಶದವನಾಗಿರಬಹುದು ಎಂಬ ನನ್ನ ಹೇಳಿಕೆ (I,339) ಊಹೆಯೇ ಹೊರತು ನಿರ್ಣಯವಾದ ಮಾತಲ್ಲ. ಈ ಅಂಶವನ್ನು ನಾನು ಸ್ಪಷ್ಟವಾಗಿ ತಿಳಿಸಿದ್ದೇನೆ.

ಸೋಮರಾಜನು ನುಗ್ಗೆಹಳ್ಳಿ ಪಾಳೆಯಗಾರನೆಂದೂ ಅವನು ನಾನು ಹೇಳಿರುವಂತೆ 1222 ರಲ್ಲಿ ಗ್ರಂಥವನ್ನು ಬರೆಯಲಿಲ್ಲ, ಪರಂತು 1522 ರಲ್ಲಿ ಬರೆದನು ಎಂದೂ ಅಯ್ಯನವರು ಸಿದ್ಧಾಂತ ಮಾಡಿದ್ದಾರೆ (ಪುಟಗಳು 219-227). ಇದಕ್ಕೆ ಅವರು ಹೇಳುವ ಮುಖ್ಯ ಕಾರಣಗಳು: (1) 1573 ರಲ್ಲಿ ಹುಟ್ಟಿದ ಹಾಸನ 117ನೆಯ ಶಾಸನದಲ್ಲಿ ಚಂದ್ರವಂಶದ ತಿರುಮಲನ ಮಮ್ಮಗನೆಂದೂ ರಾಯಣನ ಮಗನೆಂದೂ ಹೇಳಿರುವ ನುಗ್ಗೆಹಳ್ಳಿ ಪಾಳೆಯಗಾರನಾದ ಇಂದುಶೇಖರನು ಸೋಮರಾಜನ ತಂದೆಯಾಗಿರಬೇಕು; (2) ಸಾಸಿರದ ನಾನೂರ್ನಂದ ನಾಲ್ವತ್ತುನಾಲ್ಕು (1444) ಎಂಬ ಶುದ್ಧವಾದ ಪಾಠವನ್ನು ನಾನು ಸಾಸಿರದ ನೂರಿಂಪ್ಪತ್ತರಿಂದ ನಾಲ್ವತ್ತುನಾಲ್ಕು (1144) ಎಂದು ಮಾರ್ಪಡಿಸಿದ್ದೇನೆ—ಎಂಬುವೇ, ಆದರೆ ಈ ಕಾರಣಗಳು ತೃಪ್ತಿಕರವಾಗಿಲ್ಲ. ಸೋಮರಾಜನ ಗ್ರಂಥದಿಂದ ಅವನು ವೀರಶೈವನೆಂಬುದು ಸ್ಪಷ್ಟವಾಗಿದೆ.

ನಾಮಸಾಮ್ಯವಿದ್ದರೂ ನುಗ್ಗೆಹಳ್ಳಿ ಪಾಳೆಯಗಾರರು ವೀರಶೈವರು ಬೇರೆ ಅಲ್ಲ! ಏಕೆಂದರೆ ಅವರಿಗೆ ಹಾಸನ 117 ರಲ್ಲಿ ಆತ್ರೇಯಗೋತ್ರವೂ ಆಪಸ್ತಂಬ ಸೂತ್ರವೂ ಯಜುಶ್ಶಾಖೆಯೂ ಹೇಳಿವೆ. ಅಲ್ಲದೆ ಹಾಸನ 117 ಸೋಮರಾಜನ ಹೆಸರನ್ನು ಹೇಳುವುದಿಲ್ಲ. ಪರಂತು ಇಂದುಶೇಖರನ ಮಗ ಬಸವರಾಜ ಎಂದು ಹೇಳಿ ಅವನ ಕಾಲವು 1573 ಎನ್ನುತ್ತದೆ. ಅಯ್ಯನವರು ಕಲ್ಪಿಸಿರುವಂತೆ ಸೋಮರಾಜನು ಈ ಇಂದುಶೇಖರನ ಮಗನಾಗಿದ್ದಪಕ್ಷದಲ್ಲಿ ಅವನ ಕಾಲವೂ 1573 ಆಗಬೇಕೇ ಹೊರತು 1522 ಆಗಕೂಡದು. ಇದೂ ಅಲ್ಲದೆ ನುಗ್ಗೆಹಳ್ಳಿ ಪಾಳೆಯಗಾರನಾದ ರಾಯಣನು ವಿಜಯನಗರದ ರಾಜನಾದ ಅಚ್ಯುತನ (1530—1542) ಸಾಮಂತನಾಗಿದ್ದಂತೆ ಶಾಸನಗಳಿಂದ ತಿಳಿಯುತ್ತದೆ (II, 215); ಸೋಮರಾಜನು ಈ ರಾಯಣನ ಮಮ್ಮಗನಾಗಿದ್ದ ಪಕ್ಷದಲ್ಲಿ ಅವನ ಕಾಲವು 1522ಕ್ಕಿಂತ ಬಹಳ ವರ್ಷಗಳು ಈಚೆ ಆಗಬೇಕಾಗುತ್ತದೆ. ಇನ್ನು ಎರಡನೆಯ ಕಾರಣವನ್ನು ನೋಡುವ. ಸೋಮರಾಜನ ಕಾಲವನ್ನು ಹೇಳುವ ಪದ್ಯದಲ್ಲಿ ನಾನು ಆವ ವಿಧವಾದ ಮಾರುಪಾಡನ್ನೂ ಮಾಡಲಿಲ್ಲವೆಂಬ ನಂಬಿಕೆಯಿದೆ; ಪರಂತು ಈ ಕವಿಯ ಚರಿತೆಯನ್ನು ಆವ ಕೈಬರಹದ ಪುಸ್ತಕವನ್ನು ಇಟ್ಟುಕೊಂಡು ಬರೆದೆನೋ ಜ್ಞಾಪಕವಿಲ್ಲ. ಅಯ್ಯನವರು ಸೂಚಿಸಿರುವ ಪಾಠವು ವ್ಯಾಕರಣಕ್ಕೆ ವಿರೋಧವಾಗಿರುವುದರಿಂದ ಸಮಂಜಸವಾಗಲಾರದು. ಶುದ್ಧವಾದ 'ನೂಱುಸಂದ' ಎಂಬ ರೂಪಕ್ಕೆ ಪ್ರತಿಯಾಗಿ 'ನೂರ್ಸಂದ' ಎಂಬ ರೂಪವನ್ನು ಗಣ್ಯನಾದ ಆವ ಕವಿಯೂ ಪ್ರಯೋಗಿಸಲಾರನು. ಸಮಾಸವಿಲ್ಲದಾಗ ನೂಱು ಎಂಬ ಪದದ ಅಂತ್ಯಸ್ವರಕ್ಕೆ ಲೋಪವಿಲ್ಲ. ಈಯಂಶವು ಶಬ್ದಾನುಶಾಸನದ 82ನೆಯ ಸೂತ್ರದ ಕೆಳಗೆ ಕೊಟ್ಟಿರುವ ದೂಱುಪುಟ್ಟಿತು ಎಂಬ ನಿಷೇಧೋದಾಹರಣದಿಂದ ವ್ಯಕ್ತವಾಗುತ್ತದೆ. ಮೂಱು ಎಂಬ ಪದಕ್ಕೂ ಹೀಗೆಯೇ: 'ಅಱುವತ್ತುಮೂಱು ಸಂದಂದು' (1,30) ಎಂಬ ಆದಿಪಂಪನ ಪ್ರಯೋಗವನ್ನು ನೋಡಬಹುದು.

ತಮ್ಮ ಕಲ್ಪನೆಗೆ ಮತ್ತೊಂದಾಧಾರವಾಗಿ ಅಯ್ಯನವರು ಉದ್ಭಟಕಾವ್ಯವನ್ನು ಪ್ರತಿ ಮಾಡಿದ ರಾಯಸದ ಲಿಂಗರಸನೂ ನುಗ್ಗೆಹಳ್ಳಿ ಪಾಳೆಯಗಾರನಾದ ರಾಯಣನ ಮಂತ್ರಿಯೂ ಕಬ್ಬಿಗರ ಕೈಪಿಡಿಯನ್ನು ಬರೆದವನೂ ಆದ ಲಿಂಗಮಂತ್ರಿಯೂ (II, 215) ಒಬ್ಬನೇ ಎಂದು ಗ್ರಹಿಸಿದ್ದಾರೆ (ಪುಟ227) ಈ ಗ್ರಹಿಕೆಗೆ ಆ ಹೆಸರುಗಳ ಏಕದೇಶಸಾಮ್ಯವೇ ಮೂಲವಾಗಿರಬೇಕು. ಇದು ಸಾಲದು. ಅಲ್ಲದೆ ಮಂತ್ರಿಪದವಿಯಲ್ಲಿರುವವನು ರಾಯಸದ ಕೆಲಸದವನಾಗಿರುವುದು ಅಸಂಭವವು. ಅಯ್ಯನವರು ಹೇಳುವ ಮತ್ತೊಂದಂಶವೇನೆಂದರೆ—ಸೋಮರಾಜನ ಉದ್ಭಟಕಾವ್ಯದ 8ನೆಯ ಆಶ್ವಾಸದ 43ನೆಯ ಪದ್ಯವನ್ನು

ತನ್ನ ರಸರತ್ನಾಕರದಲ್ಲಿ ಉದಾಹರಿಸಿರುವ ಸಾಳ್ವನು 1529ಕ್ಕೆ ಹಿಂದೆ ಇದ್ದಿರಬೇಕು (ತ್ರುಟಿ 224), ನಾನು ಹೇಳಿರುವಂತೆ (11,244) ಸು. 1550 ರಲ್ಲಿ ಅಲ್ಲ—ಎಂಬುದು. ಈ ಅಂಶವು ಅಯ್ಯನವರ ಕಲ್ಪನೆಗೆ ಹೇಗೆ ಸಾಧಕವಾಗುವುದೋ ತಿಳಿಯಲಿಲ್ಲ. ಆದರೆ ಸಾಳ್ವನ ಪೋಷಕನಾದ ಸಾಳ್ವದೇವನು 1559ರ ವರೆಗೆ ಆಳಿದಂತೆ ಶಾಸನಗಳಿಂದ ತಿಳಿಯುತ್ತದೆ (ಪಂಚಕಜ್ಜಾಯ, 162). ಆದುದರಿಂದ ಸಾಳ್ವನಿಗೆ ನಾನು ಕೊಟ್ಟಿರುವ ಕಾಲವು ಬಹಳ ತಪ್ಪಾಗಿರಲಾರದು. 1488ರಲ್ಲಿ ಹುಟ್ಟಿದ ಸಾಗರ 163ನೆಯ ಶಾಸನವನ್ನು ಆಧಾರವಾಗಿಟ್ಟುಕೊಂಡು ಅಯ್ಯನವರು ಸಂಗೀತಪುರದ ಸಂಗಮರಾಜನ ಆಜ್ಞಾನುಸಾರವಾಗಿ ಜೀವಂಧರ ಷಟ್ಪದಿಯನ್ನು ಬರೆದ ಕೋಟೀಶ್ವರನು ಸು. 1480ರಲ್ಲಿದ್ದನು; ನಾನು ಹೇಳಿರುವಂತೆ (11,145) ಸು. 1500 ರಲ್ಲಿರಲಿಲ್ಲ—ಎಂದು ಪ್ರಸ್ತಾಪಿಸಿದ್ದಾರೆ (ತ್ರುಟಿ 227). ಆದರೆ ಈ ಸಂಗಮರಾಜನಿಗೂ ಸಾಗರ 163 ರಲ್ಲಿ ಹೇಳಿರುವ ಸಂಗಿರಾಜನಿಗೂ ಆವ ಸಂಬಂಧವೂ ಇಲ್ಲ. ಸಂಗಮರಾಜನು ಸಾಳ್ವದೇವನ ಕಾಲವಾದ ಮೇಲೆ ಆಳಿದಂತೆ ತೋರುವುದರಿಂದ (ಪಂಚಕಜ್ಜಾಯ, 161) ಅವನ ಕಾಲವು ಸು. 1560 ಆಗಬಹುದು; ಕೋಟೀಶ್ವರನ ಕಾಲವೂ ಇದೇ ಆಗಬೇಕಾಗುವುದು.

ಶ್ರೀಮಾನ್ ಮಂಜೇಶ್ವರದ ಎಂ ಗೋವಿಂದ ಪೈಯವರೂ ಸಹ ಸೋಮರಾಜನ ವಿಷಯವಾಗಿ ಸ್ವದೇಶಾಭಿಮಾನಿಯಲ್ಲಿಯೂ (19 ಮತ್ತು 26, 8, 1927) ಕನ್ನಡ ಪರಿಷತ್ಪತ್ರಿಕೆಯಲ್ಲಿಯೂ (XII, 48–66) ಬರೆದಿದ್ದಾರೆ. ಈ ಕವಿ ತನ್ನ ಗ್ರಂಥವನ್ನು 1222 ರಲ್ಲಿ ಬರೆಯಲಿಲ್ಲ, 1522ರಲ್ಲಿ ಬರೆದನು ಎಂದು ಇವರೂ ಅಭಿಪ್ರಾಯಪಡುತ್ತಾರೆ. ತಮ್ಮ ಅಭಿಪ್ರಾಯಕ್ಕೆ ಇವರು ಹೇಳಿರುವ ಮುಖ್ಯವಾದ ಆಧಾರಗಳೂ ಅವಕ್ಕೆ ನನ್ನ ಸಮಾಧಾನಗಳೂ ಕೆಳಗೆ ಕೊಟ್ಟಿವೆ:—

(1) 1222 ರಲ್ಲಿ ಆಶ್ವಯುಜ ಶುದ್ಧ ಏಕಾದಶಿ ಆದಿತ್ಯವಾರವಾಗುತ್ತದೆ; ಸೋಮರಾಜನ ಪದ್ಯದಲ್ಲಿ ಹೇಳಿರುವಂತೆ—ವನಜಾರಾತಿತನೂಜವಾಸರದೊಳಾದತ್ತು—ಬುಧವಾರವಾಗುವುದಿಲ್ಲ. ಆದರೆ 1522 ರಲ್ಲಿ ವಾರವು ಸರಿಹೋಗುತ್ತದೆ. ಆದುದರಿಂದ ನಾನು ಕೊಟ್ಟಿರುವ 'ನೂಱಿಂಸಂದ' ಎಂಬುದಕ್ಕೆ ಪ್ರತಿಯಾಗಿ 'ನಾಲ್ನೂರ್ಸಂದ' ಎಂಬ ಪಾಠವಿರಬೇಕು. ನೂಱಿಂಸಂದ ನಾಲ್ವತ್ತುನಾಲ್ಕು ಎಂಬುದಕ್ಕೆ ಇವರು 100–44 ಎಂದು ವಿಚಿತ್ರವಾದ ಅರ್ಥವನ್ನು ಮಾಡಿದ್ದಾರೆ. ನೂಱಿಂಸಂದ ಎಂದರೆ ನೂರರಿಂದ ಮೇಲೆ ಸಂದ (100+44) ಎಂದೇ ಅರ್ಥವು. ನಾನು ಹಿಂದೆ ತಿಳಿಸಿದಂತೆ ನೂರ್ಸಂದ ಎಂಬ ಪ್ರಯೋಗವು ವ್ಯಾಕರಣ ವಿರುದ್ಧವಾದುದು. ಎಷ್ಟೋ ಶಾಸನಗಳಲ್ಲಿ ಹೇಳಿ

ರುವ ಕಾಲದ ಅಂಗಗಳೊಳಗೆ ಒಂದೆರಡು ಹೊಂದಿಕೆಯಾಗುವುದಿಲ್ಲ. ಇಷ್ಟು ಮಾತ್ರಕ್ಕೆ ಆ ಶಾಸನದ ಕಾಲವನ್ನು ನೂರಾರು ವರ್ಷ ಈಚೆಗೆ ಎಳೆವುದು ನ್ಯಾಯವಲ್ಲ. ಪ್ರಕೃತದಲ್ಲಿ ಚಿತ್ರಭಾನುವಿನಲ್ಲಿ(1222)ಆಶ್ವಯುಜ ಶುದ್ಧ ಏಕಾದಶಿ ಬುಧವಾರವಾಗದಿದ್ದರೂ ಅದರ ಹಿಂದಣವರ್ಷವಾದ ವೃಷ(ವಿಷು)ದಲ್ಲಿ(1221) ಬುಧವಾರವಾಗುತ್ತದೆ.[1] ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಕೊಟ್ಟಿರುವ ಕಾಲದಲ್ಲಿ ಹೀಗೆ ಒಂದು ವರ್ಷ ಹಿಂದುಮುಂದಾಗುವುದು ಬಹಳ ಸಾಧಾರಣವಾಗಿದೆ.

(2) ಕಥಾನಾಯಕನಾದ ಕುಮಾರಪಾಲನ ಅಥವಾ ಉದ್ಭಟನ ಕಾಲಕ್ಕೂ (ಸು. 1150) ಕಥೆಯನ್ನು ಹೇಳುವ ಸೋಮರಾಜನ ಕಾಲಕ್ಕೂ (1222) ಇರುವ ಅಂತರವು ಈ ಕಥೆ ಗುಜರಾತಿನಿಂದ ಕರ್ಣಾಟಕಕ್ಕೆ ಹರಡುವುದಕ್ಕೆ ಸಾಲದು. ಕಥೆ ಹರಡುವುದಕ್ಕೆ ಮುಕ್ಕಾಲು ಶತಮಾನದ ಕಾಲವು ಬೇಕಾದಷ್ಟಾಯಿತು ಎಂದು ನಾನು ಭಾವಿಸುತ್ತೇನೆ.

(3) ಶೈಲಿ 13ನೆಯ ಶತಮಾನದ ಶೈಲಿಯಂತಿಲ್ಲ, 16ನೆಯ ಶತಮಾನದ ಶೈಲಿಯಂತಿದೆ. ಪ್ರಮಾಣಾಂತರವಿಲ್ಲದೆ ಶೈಲಿಯನ್ನು ಮಾತ್ರ ನಂಬಿಕೊಂಡು ಗ್ರಂಥಗಳ ಕಾಲವನ್ನು ನಿರ್ಣಯಿಸಲು ಹೊರಡುವುದು ಅಪಾಯಕರವೇ ಸರಿ.

ಈ ಇಬ್ಬರು ವಿದ್ವಾಂಸರು ಹೇಳುವಂತೆ ಸೋಮರಾಜನು ತನ್ನ ಗ್ರಂಥವನ್ನು 1522 ರಲ್ಲಿ ಬರೆದಿದ್ದ ಪಕ್ಷದಲ್ಲಿ ಅವನು ಪೂರ್ವಕವಿಗಳಲ್ಲಿ 1200ಕ್ಕೆ ಹಿಂದೆ ಇದ್ದವರನ್ನು ಮಾತ್ರ ಹೇಳಿ 1200ರಿಂದ 1500ರ ವರೆಗಿನ ಮೂರು ಶತಮಾನಗಳಲ್ಲಿದ್ದ ಒಬ್ಬ ಕವಿಯನ್ನಾದರೂ, ಬಸವಪುರಾಣಕರ್ತೃವಾದ ಭೀಮಕವಿಯನ್ನೂ ಸಹ, ಸ್ಮರಿಸದೆ ಇರುವುದಕ್ಕೆ ಕಾರಣವನ್ನು ಊಹಿಸುವುದು ಕಷ್ಟವಾಗಿದೆ. ಆದುದರಿಂದ ಮಾರ್ಪಡಿಸುವುದಕ್ಕೆ ಅಚಾಲ್ಯವಾದ ಆಧಾರವು ದೊರೆವವರೆಗೆ ಸೋಮರಾಜನ ಕಾಲವನ್ನು 1222 ಎಂದೇ ಇಟ್ಟುಕೊಳ್ಳಬಹುದು.

## ಹರೀಶ್ವರ, ರಾಘವಾಂಕ, ಕೆರೆಯಪದ್ಮರಸ

ಹರೀಶ್ವರ ರಾಘವಾಂಕ ಕೆರೆಯಪದ್ಮರಸರು ಸು. 1165 ರಲ್ಲಿ ಬಾಳಿದರು ಎಂಬ ನನ್ನ ಹೇಳಿಕೆಯನ್ನು (I, 222) ಅಯ್ಯನವರು ಕೆಳಗಣ ಕಾರಣಗಳನ್ನು ಹೇಳಿ ಆಕ್ಷೇಪಿಸುತ್ತಾರೆ (ಪುಟಗಳು 260–278):—

---

1 ಈಯಂಶವನ್ನು ಮೈಸೂರು ಶಾಸನ ಇಲಾಖೆಯ ಶ್ರೀಮಾನ್ ಆರ್ ರಾಮರಾಯರು ಬಿ. ಎ. ತಿಳಿಸಿದುದಕ್ಕಾಗಿ ಅವರಿಗೆ ನನ್ನ ಧನ್ಯವಾದವು.

(1) ಹರೀಶ್ವರ ಕೆರೆಯಪದ್ಮರಸರನ್ನು ಸ್ತುತಿಸುವ ಸೋಮರಾಜನು ತನ್ನ ಉದ್ಭಟಕಾವ್ಯವನ್ನು 1522 ರಲ್ಲಿ ಬರೆದನು, 1222 ರಲ್ಲಿ ಅಲ್ಲ.

(2) ಮಲ್ಲಿಕಾರ್ಜುನನು ( ಸು. 1263 ) ತನ್ನ ಸೂಕ್ತಿಸುಧಾರ್ಣವದಲ್ಲಿ ಹರೀಶ್ವರನ ಗಿರಿಜಾಕಲ್ಯಾಣದಿಂದ ಪದ್ಯಗಳನ್ನು ಅನುವಾದ ಮಾಡಿರುವುದರಿಂದ ಆ ಗ್ರಂಥವು 1263 ಕ್ಕೆ ಹಿಂದೆ ಇದ್ದಿತೆಂದು ಹೇಳಬಹುದೇ ಹೊರತು ರಾಘವಾಂಕ ಕೆರೆಯಪದ್ಮರಸರು ಆಕಾಲಕ್ಕೆ ಹಿಂದೆ ಇದ್ದರೆಂದು ಹೇಳುವುದಕ್ಕಾಗುವುದಿಲ್ಲ.

(3) ಪದ್ಮರಾಜಪುರಾಣದಲ್ಲಿ ಬರುವ ' ನರಸಿಂಹ ಬಲ್ಲಾಳ ' ಎಂಬುದಕ್ಕೆ ನರಸಿಂಹನ ಮಗ ಬಲ್ಲಾಳ ಎಂದು ಅರ್ಥಮಾಡಬೇಕು. ಎಂದರೆ 3 ನೆಯ ನರಸಿಂಹನ ಮಗ 3 ನೆಯ ಬಲ್ಲಾಳ (1291–1342) ಎಂದರ್ಥವು ; ಅದೇಗ್ರಂಥದಲ್ಲಿ ಹೇಳಿರುವ ಬಿಟ್ಟಿದೇವನು 4 ನೆಯ ಬಲ್ಲಾಳನು.

(4) 1162 ರಲ್ಲಿ ರುದ್ರದೇವನೆಂಬ ರಾಜನಿದ್ದನು. ಇವನ ರಾಜಧಾನಿ ಅನುಮಕೊಂಡ, ಓರಗಲ್ಲಲ್ಲ. ಆ ಕಾಲದಲ್ಲಿ ಪ್ರತಾಪರುದ್ರ ಎಂಬ ರಾಜನಿರಲಿಲ್ಲ.

(5) ವಿಜಯನಗರದ ರಾಜನಾದ 1 ನೆಯ ಹರಿಹರನಿಗೆ ಹಿಂದೆ ಬ್ರೌನ್ ಹೇಳುವಂತೆ ಪಂಪಾಪುರದಲ್ಲಿ ದೇವರಾಜನೆಂಬ ದೊರೆ 1286 ರಿಂದ 1328ರ ವರೆಗೆ ಆಳಿದನು ಎಂಬುದು ಅಸಂಭಾವ್ಯವಲ್ಲ.

(6) ಕೆರೆಯಪದ್ಮರಸನ ತಂದೆ ಬಸವನ ಸಮಕಾಲದವನಾದುದರಿಂದ ಕೆರೆಯಪದ್ಮರಸನು 1165 ರಲ್ಲಿ ಬಹಳ ಚಿಕ್ಕವಯಸ್ಸಿನವನಾಗಿರಬೇಕು. ಆದುದರಿಂದ ಅವನು 1ನೆಯ ನಾರಸಿಂಹನ (1141–1173) ಆಳಿಕೆಯಲ್ಲಿ ಇದ್ದಿರಲಾರನು.

(7) 1 ನೆಯ ನರಸಿಂಹನು ಹರೀಶ್ವರನನ್ನು ಹಂಪೆಗೆ ಕಳುಹಿಸಿದಂತೆ ಹೇಳಿದೆ. ಹಂಪೆ ಹೊಯ್ಸಳರಾಜ್ಯಕ್ಕೆ 2ನೆಯ ಬಲ್ಲಾಳನ (1173–1220) ಆಳಿಕೆಯಲ್ಲಿ ಸೇರಿತಾದುದರಿಂದ 1 ನೆಯ ನರಸಿಂಹನ ರಾಜ್ಯಕ್ಕೆ ಸೇರಲಿಲ್ಲ. ಆದುದರಿಂದ ಹರೀಶ್ವರನನ್ನು ಹಂಪೆಗೆ ಕಳುಹಿಸಿದವನು 1 ನೆಯ ನರಸಿಂಹನಲ್ಲ.

ಈ ಆಕ್ಷೇಪಣೆಗಳಲ್ಲಿ ಒಂದೂ ತೃಪ್ತಿಕರವಾಗಿಲ್ಲ. ಇವಕ್ಕೆ ನನ್ನ ಸಮಾಧಾನಗಳು—

(1) ಹರೀಶ್ವರನನ್ನು ಸ್ತುತಿಸುವ ಉದ್ಭಟಕಾವ್ಯವು 1222 ರಲ್ಲಿ ರಚಿತವಾದ್ದೆಂದೂ ಹರೀಶ್ವರನ ಗಿರಿಜಾ ಕಲ್ಯಾಣದ ಪದ್ಯಗಳನ್ನು ಅನುವಾದ ಮಾ

ಡುವ ಮಲ್ಲಿಕಾರ್ಜುನನು ಸು. 1245 ರಲ್ಲಿ ಬಾಳಿದನೆಂದೂ ಹಿಂದೆಯೇ ತೋರಿಸಿದ್ದೇನೆ [ಪುಟಗಳು lix, lxv]. ಆದುದರಿಂದ ಹರೀಶ್ವರನು ಮೇಲೆ ನಿರ್ದಿಷ್ಟವಾದ ವರ್ಷಗಳಿಗೆ ಹಿಂದೆ ಇದ್ದನೆಂಬುದಕ್ಕೆ ಆವ ಸಂದೇಹವೂ ಇಲ್ಲ.

[2] ಹರೀಶ್ವರ ರಾಘವಾಂಕ ಕೆರೆಯ ಪದ್ಮರಸರು ಸಮಕಾಲದವರೆಂಬುದನ್ನು ವೀರಶೈವ ಗ್ರಂಥಗಳಿಂದ ತೋರಿಸಿದ್ದೇನೆ [I, 222]. ರಾಘವಾಂಕನು ಹರೀಶ್ವರನ ಸೋದರದಳಿಯನು; ಹರೀಶ್ವರನೂ ಕೆರೆಯ ಪದ್ಮರಸನೂ 1ನೆಯ ನಾರಸಿಂಹನ ಕೈಯ ಕೆಳಗೆ ಅಧಿಕಾರಿಗಳಾಗಿದ್ದರು.

[3] ನರಸಿಂಹಬಲ್ಲಾಳ ಎಂಬುದಕ್ಕೆ ನರಸಿಂಹನ ಮಗ ಬಲ್ಲಾಳ ಎಂದು ಅರ್ಥವನ್ನು ಕಲ್ಪಿಸುವುದು ಸಮಂಜಸವಲ್ಲ. ಈ ವಿಧವಾದ ಅರ್ಥವು ತೆಲುಗುದೇಶದಲ್ಲಿ ಮಾತ್ರ ವಾಡಿಕೆಯಲ್ಲಿದೆ. ಆದರೆ ಇಲ್ಲಿ ಬಲ್ಲಾಳ ಶಬ್ದವು ಹೊಯ್ಸಳ ಎಂಬರ್ಥದಲ್ಲಿ ಪ್ರಯೋಗಿಸಿದೆ. ಹಲವು ಕನ್ನಡ ಗ್ರಂಥಗಳಲ್ಲಿ ಹೊಯ್ಸಳರಿಗೆ ಬಲ್ಲಾಳರು ಎಂಬ ಹೆಸರು ಹೇಳಿದೆ. ಆದುದರಿಂದ ನರಸಿಂಹಬಲ್ಲಾಳ ಎಂದರೆ ಹೊಯ್ಸಳರಾಜನಾದ ನರಸಿಂಹ [I] ಎಂದೂ ಅವನ ಮಗ ಬಿಟ್ಟಿದೇವನು ಎಂದರೆ ಬಿಟ್ಟಿದೇವನ ಅಥವಾ ವಿಷ್ಣುವರ್ಧನನ ಮೊಮ್ಮಗನಾದ ಬಲ್ಲಾಳ [II] ನೆಂದೂ ತಿಳಿಯಬೇಕು. ನರಸಿಂಹ ಬಲ್ಲಾಳ ಎಂಬುದಕ್ಕೆ 3ನೆಯ ನರಸಿಂಹನ ಮಗ 3ನೆಯ ಬಲ್ಲಾಳ [1291–1342] ಎಂದೂ ಅವನ ಮಗ ಬಿಟ್ಟಿದೇವ ಎಂದರೆ 3ನೆಯ ಬಲ್ಲಾಳನ ಮಗ 4ನೆಯ ಬಲ್ಲಾಳನೆಂದೂ ಅರ್ಥಮಾಡಿದರೆ ಹರೀಶ್ವರನಿಗೂ ಈ ದೊರೆಗಳ ಕಾಲಕ್ಕೂ ಸಂಬಂಧವೇ ಇರುವುದಿಲ್ಲ. ಬಿಟ್ಟಿದೇವ, ಬಲ್ಲಾಳ ಎಂಬ ಶಬ್ದಗಳು ಪರ್ಯಾಯನಾಮಗಳಲ್ಲ.

[4] 1162 ರಲ್ಲಿ ಪ್ರತಾಪರುದ್ರನೆಂಬ ಒಬ್ಬ ಕಾಕತೀಯರಾಜನಿದ್ದನು. ಇವನು 1140 ರಿಂದ 1196ರ ವರೆಗೆ ಆಳಿದನು. ಈತನು ನೀತಿಸಾರವೆಂಬ ಒಂದು ತೆಲುಗು ಗ್ರಂಥವನ್ನು ಬರೆದನೆಂದೂ ಓರಗಲ್ಲಿಗೆ ಹೋಗಿದ್ದನೆಂದೂ ಅಲ್ಲಿ ಪಾಲ್ಕುರಿಕೆ ಸೋಮನಾಥನ ಬಸವಪುರಾಣವನ್ನು ಕೇಳಿದನೆಂದೂ ಅಮೇಲೆ ಪಾಲ್ಕುರಿಕೆ ಸೋಮನಾಥನಿಗೆ ಒಂದಗ್ರಹಾರವನ್ನು ಕೊಟ್ಟನೆಂದೂ ತೆಲುಗು ಪಂಡಿತರು ಬರೆದಿದ್ದಾರೆ. [ವೀರೇಶಲಿಂಗಂಪಂತುಲು, ತೆಲುಗು ಕವಿಗಳು I, 217–222]. ಆ ಕಾಲದಲ್ಲಿ ಓರಗಲ್ಲು ರಾಜಧಾನಿಯಾಗಿರಲಿಲ್ಲ ಎಂಬುದಕ್ಕೆ ಅಯ್ಯನವರು ಆವಪ್ರಮಾಣವನ್ನೂ ತೋರಿಸಿಲ್ಲ. ರಾಜನಿಗೆ ತನ್ನ ರಾಜ್ಯದಲ್ಲಿ ಒಂದಕ್ಕಿಂತ ಹೆಚ್ಚಾದ ರಾಜಧಾನಿಗಳಿದ್ದಿರಬಹುದು. 'ತಸ್ಯಾಸ್ತೇನುಮಕೊಂಡ ನಾಮನಗರೀ ಶ್ರೀ ರಾಜಧಾನೀಮಯೀ' ಎಂಬ ಶಾಸನಪದ್ಯದಲ್ಲಿ [ಪುಟ 263] ಅನುಮಕೊಂಡವು ರಾಜಧಾನಿಯು ಹಾಗಿದೆ [ರಾಜಧಾನೀವ] ಎಂಬುದರಿಂದ ರಾಜಧಾನಿ ಮತ್ತೊಂದು ಸ್ಥಳ ಎಂದು ಭಾಸವಾಗುತ್ತದೆ.

(5) ಪಂಪಾಪುರದಲ್ಲಿ 1286 ರಿಂದ 1328ರ ವರೆಗೆ ದೇವರಾಜನೆಂಬ ದೊರೆ ಆಳಿದನು ಎಂಬ ಹೇಳಿಕೆಗೆ ಆವ ಶಾಸನದ ಅಥವಾ ಪೂರ್ವಗ್ರಂಥದ ಆಧಾರವೂ ಇಲ್ಲ.

(6) ಕೆರೆಯ ಪದ್ಮರಸನ ತಂದೆಯೂ ಬಸವನೂ ಸಮಕಾಲದವರಾದ ಮಾತ್ರಕ್ಕೆ ಕೆರೆಯ ಪದ್ಮರಸನು 1165 ರಲ್ಲಿ ಬಹಳ ಚಿಕ್ಕವಯಸ್ಸಿನವನಾಗಿರಬೇಕೆಂಬ ನಿರ್ಬಂಧವೇನೂ ಇಲ್ಲ. ಕೆರೆಯ ಪದ್ಮರಸನ ತಂದೆ ಬಸವನಿಗಿಂತ ಹೆಚ್ಚು ವಯಸ್ಸಿನವನಾಗಿದ್ದಿರಬಹುದು.

(7) 1ನೆಯ ನರಸಿಂಹನು ಹರೀಶ್ವರನನ್ನು ಹಂಪೆಗೆ ಕಳುಹಿಸಬೇಕಾದರೆ ಹಂಪೆ ತನ್ನ ರಾಜ್ಯದಲ್ಲಿಯೇ ಇದ್ದಿರಬೇಕೆಂಬ ನಿರ್ಬಂಧವೇನೂ ಕಾಣುವುದಿಲ್ಲ ಆ ಸ್ಥಳವು ಆರಾಜನ ಅಧೀನದಲ್ಲಿರಲಿಲ್ಲ ಎಂಬುದಕ್ಕೆ ಸಾಕಾದ ಪ್ರಮಾಣವು ಕೊಡಲ್ಪಟ್ಟೂ ಇಲ್ಲ.

ಅಯ್ಯನವರು ಇನ್ನೂ ಕೆಲವಂಶಗಳನ್ನು ಹೇಳಿದ್ದಾರೆ. ಅವಕ್ಕೂ ಉತ್ತರವಾಗಿ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ.

ಹರೀಶ್ವರ ರಾಘವಾಂಕರು ಬಸವನ ಹೆಸರನ್ನು ಹೇಳಿಲ್ಲವಾದುದರಿಂದ ಅವರು ವೀರಶೈವರಲ್ಲ ಎಂದು ಅಯ್ಯನವರು ಬರೆದಿದ್ದಾರೆ. ಹಾಗೆ ನೋಡಿದರೆ ನಿಜಗುಣ ಶಿವಯೋಗಿಯೇ ಮೊದಲಾದ ಪ್ರಸಿದ್ಧ ವೀರಶೈವರು ಬಸವನ ಹೆಸರನ್ನು ಹೇಳಿಲ್ಲ.

ಬಿಜ್ಜಳನ ಮಕ್ಕಳ ಶಂಕರ, ಸೋಮೇಶ್ವರ ಎಂಬ ಹೆಸರುಗಳಿಂದ ಅವನು ಜೈನನಲ್ಲ ಎಂಬುದು ವ್ಯಕ್ತವಾಗುತ್ತದೆ ಎಂದು ಅಯ್ಯನವರು ಹೇಳುತ್ತಾರೆ. ಜೈನರಲ್ಲಿ ಶಂಕರ ಎಂಬ ಹೆಸರು ವಾಡಿಕೆಯಲ್ಲಿರುವ ವಿಷಯವನ್ನು ಹಿಂದೆಯೇ ತಿಳಿಸಿದ್ದೇನೆ (ಪುಟ lx). ಮತ್ತೊಂದು ಹೆಸರೂ ಹಾಗೆಯೇ ಇರಬಹುದು. ಜೈನರಲ್ಲಿ ಮಾತ್ರವೇ ಅಲ್ಲದೆ ವೀರಶೈವರಲ್ಲಿಯೂ ಸಹ ಬಿಜ್ಜಳನು ಜೈನನು ಎಂಬ ಪ್ರತೀತಿ ಇದೆ

ಮಲ್ಲಿಕಾರ್ಜುನನು ತನ್ನ ಸೂಕ್ತಿಸುಧಾರ್ಣವದಲ್ಲಿ ರಾಘವಾಂಕನ ಹರಿಶ್ಚಂದ್ರ ಕಾವ್ಯದಿಂದ ಏಕೆ ಪದ್ಯಗಳನ್ನು ಅನುವಾದಮಾಡಿಲ್ಲ ಎಂದು ಅಯ್ಯನವರು ಕೇಳುತ್ತಾರೆ. ಮಲ್ಲಿಕಾರ್ಜುನನು ಕಂದ ವೃತ್ತಗಳನ್ನು ಮಾತ್ರ ಅನುವಾದಮಾಡಿದ್ದಾನೆ; ಹರಿಶ್ಚಂದ್ರ ಕಾವ್ಯವು ಷಟ್ಪದೀ ಗ್ರಂಥವಾದುದರಿಂದ ಅದರಿಂದ ಪದ್ಯಗಳನ್ನು ಅನುವಾದಮಾಡಿಲ್ಲ.

ವೀರಶೈವ ಜೈನ ಗ್ರಂಥಗಳಲ್ಲಿ ಬಸವಚೆನ್ನಬಸವರು ಬಿಜ್ಜಳನ ಆಸ್ಥಾನ

ದಲ್ಲಿದ್ದರು ಎಂದು ಬರೆದಿರುವುದು ತಪ್ಪೆಂದು ಹೇಳಿ ಅಯ್ಯನವರು ಈ ಹೇಳಿಕೆಗೆ ಆಧಾರವಾಗಿ "ಬಸವನ ಸತ್ತೆಗೆ ಶಾಸನ ಪ್ರಮಾಣವಿಲ್ಲದುದರಿಂದ ವೀರಶೈವ ಮತಸ್ಥಾಪಕನು ಬಹುಶಃ ಏಕಾಂತದ ರಾಮಯ್ಯನಾಗಿರಬಹುದು, ಬಸವನಲ್ಲ" ಎಂದು ಡಾಕ್ಟರ್ ಫ್ಲೀಟ್ ಬರೆದಿರುವುದನ್ನು ಅನುವಾದ ಮಾಡಿದ್ದಾರೆ. ವ್ಯಕ್ತಿಗಳ ಸತ್ತೆಗೆ ಶಾಸನವೇ ಪ್ರಮಾಣವಾದ ಪಕ್ಷದಲ್ಲಿ ಶಾಸನೋಕ್ತರಲ್ಲದ ಶಂಕರಾಚಾರ್ಯ ರಾಮಾನುಜಾಚಾರ್ಯಾದಿಗಳ ಸತ್ತೆಯನ್ನು ಹೇಗೆ ನಂಬುವುದು ? ಬಸವನ ವಿಷಯವಾಗಿ ಒಂದು ಹೊಸ ಶಾಸನವು ಬೆಳಗಾಂ ತಾಲ್ಲೂಕಿನ ಅರ್ಜುನವಾಡದಲ್ಲಿ ಈಗತಾನೆ ದೊರೆತಿರುವುದು ಸಂತೋಷಿಸತಕ್ಕ ಸಂಗತಿಯಾಗಿದೆ. ಇದು ಸೇವುಣರಾಜನಾದ ಕಂಧಾರನ ಆಳಿಕೆಯಲ್ಲಿ(1247–1260) ಶಕ1182ರಲ್ಲಿ(1259–1260) ಹುಟ್ಟಿದೆ. ಇದರಲ್ಲಿ ಬಸವನೂ ಅವನ ತಂದೆಯೂ ಬಸವನ ಸಂತತಿಯಲ್ಲಿ ಐದುತಲೆಯವರೂ ಉಕ್ತರಾಗಿದ್ದಾರೆ (ಶಿವಾನುಭವ III,94). ಇದು ಬಿಜ್ಜಳನಕಾಲದಲ್ಲಿ ಬಸವನ ಸತ್ತೆಗೆ ಅಚಾಲ್ಯವಾದ ಪ್ರಮಾಣವಾಗಿದೆ.

ಅಯ್ಯನವರಂತೆ ಆವ ವಿದ್ವಾಂಸನೂ ಎಲ್ಲಾ ವೀರಶೈವ ಜೈನಬ್ರಾಹ್ಮಣ ಸಂಪ್ರದಾಯ ಗ್ರಂಥಗಳನ್ನೂ ಅತ್ಯಂತಿಕವಾಗಿ ನಿಂದಿಸಿ ಅವುಗಳಲ್ಲಿ ದೊರೆಯಬಹುದಾದ ಸಹಾಯವನ್ನು ನಿರಾಕರಿಸಲಾರನು ಎಂದು ನಂಬಿದ್ದೇನೆ. ಒಂದು ಗ್ರಂಥದಲ್ಲಿ ಕೆಲವು ದೋಷಗಳಿದ್ದ ಮಾತ್ರಕ್ಕೆ ಅದನ್ನು ಸಂಪೂರ್ಣವಾಗಿ ನಿರಾಕರಿಸುವುದು ವಿವೇಕವಲ್ಲ. ಚರಿತ್ರವೆಂದು ಹೇಳಿಸಿಕೊಳ್ಳುವ ಗ್ರಂಥಗಳಲ್ಲಿಯೂ ಕೂಡ ಅಂಥ ದೋಷಗಳು ದೊರೆಯುತ್ತವೆ. ವೀರಶೈವಾದಿ ಗ್ರಂಥಗಳಿಂದ ನಾನು ಅನುವಾದ ಮಾಡಿರುವುದರಿಂದ ಅಯ್ಯನವರು ನನಗೆ ಮೂಢ ಶ್ರದ್ಧಾಳುತೆಯನ್ನು ಕಲ್ಪಿಸಿದ್ದಾರೆ. ಒಂದು ಗ್ರಂಥದಿಂದ ಅನುವಾದ ಮಾಡಿದ ಮಾತ್ರಕ್ಕೆ ಆ ಗ್ರಂಥದಲ್ಲಿ ಹೇಳಿರುವುದನ್ನೆಲ್ಲಾ ನಂಬಬೇಕೆಂಬ ನಿರ್ಬಂಧವೇನೂ ಇಲ್ಲ ಒಂದು ಗ್ರಂಥದ ಕಾಲವು ತಿಳಿದಿದ್ದರೆ ಆ ಗ್ರಂಥದಲ್ಲಿ ಉಕ್ತರಾದ ಗ್ರಂಥಕರ್ತರು ಆ ಕಾಲಕ್ಕೆ ಹಿಂದೆ ಇದ್ದರು ಎಂಬುದು ನ್ಯಾಯವಾಗಿಯೇ ಇದೆ. ವೀರಶೈವಾದಿ ಗ್ರಂಥಗಳಲ್ಲಿ ಅಯ್ಯನವರು ತೋರಿಸಿರುವಂಥ ಪರಸ್ಪರ ವಿರೋಧಗಳು ಶಾಸನಗಳಲ್ಲಿಯೂ ಕಂಡುಬರುತ್ತವೆ.

ಮೇಲೆ ಹೇಳಿದ ಕಾರಣಗಳಿಂದ ಹರೀಶ್ವರ ರಾಘವಾಂಕ ಕೆರೆಯ ಪದ್ಮರಸರುಗಳಿಗೆ ನಾನು ಹೇಳಿರುವ ಕಾಲವನ್ನು ಮಾರ್ಪಡಿಸಬೇಕಾಗಿಲ್ಲ ಎಂಬುದು ಸ್ಪಷ್ಟವಾಗದೆ ಇರಲಾರದು.

## ಇನ್ನು ಕೆಲವು ಆಕ್ಷೇಪಣೆಗಳು

ಅಯ್ಯನವರ ಆಕ್ಷೇಪಣೆಗಳಲ್ಲಿ ಮುಖ್ಯವಾದುವೆಂದು ನನಗೆ ತೋರಿದ ಕೆಲವಕ್ಕೆ ಸಮಾಧಾನವನ್ನು ಹೇಳಿದುದಾಯಿತು. ಇನ್ನು ಕೆಲವಕ್ಕೆ ಬಹು ಸಂಗ್ರಹವಾಗಿ ಸಮಾಧಾನವನ್ನು ಸೂಚಿಸಬೇಕಾಗಿದೆ.

## ದೇವಕವಿ, ಕಮಲಭವ

ರುದ್ರಭಟ್ಟನನ್ನು ಸ್ತುತಿಸುವುದರಿಂದ ದೇವಕವಿ 1217ಕ್ಕೆ ಈಚೆ ಇದ್ದಿರಬೇಕು ಎಂದು ಅಯ್ಯನವರು ಬರೆದಿದ್ದಾರೆ (ಪುಟ 116). ಆದರೆ ರುದ್ರಭಟ್ಟನ ಕಾಲವು ಸು. 1185 ಎಂದು ನಾನು ಹಿಂದೆಯೇ ತೋರಿಸಿರುವುದರಿಂದ ದೇವಕವಿ ಸು. 1200 ರಲ್ಲಿದ್ದನು ಎಂದು ನಾನು ಹೇಳಿರುವುದು (I,314) ಸರಿಯಾಗಿಯೇ ಇದೆ.

ದೇವಕವಿ 1245-50 ರಲ್ಲಿ ಇದ್ದಿರಬೇಕೆಂದು ಭಾವಿಸಿ ಅದಕ್ಕೆ ಅಯ್ಯನವರು ಇನ್ನು ಕೆಲವು ಕಾರಣಗಳನ್ನು ಹೇಳಿದ್ದಾರೆ (ಪುಟಗಳು 116-118). ಆದರೆ ಈ ಕಾರಣಗಳು ಬರಿಯ ಊಹೆಗಳೇ ಹೊರತು ಮತ್ತೆ ಬೇರೆ ಅಲ್ಲ. ಈ ಊಹೆಗಳ ಆಧಾರದ ಮೇಲೆ ಕಮಲಭವನ ಕಾಲವು ಸು 1255 ಎಂದು ಕಲ್ಪಿಸಿ ಅವನಿಗೆ ಕವಿತಾ ವಿಷಯದಲ್ಲಿ ದೇವಕವಿ ಪ್ರೋತ್ಸಾಹಕನಾಗಿದ್ದುದರಿಂದ ಇವನು ಅವನಿಗಿಂತ ಕೆಲವು ವರ್ಷಗಳು ಹಿಂದೆ ಇದ್ದಿರಬೇಕು ಎಂದು ತೀರ್ಮಾನಿಸಿದ್ದಾರೆ. ಕಮಲಭವನು ಹೇಳುವ ಈಚೆಯ ಕಾಲದ ಗುರುಗಳಲ್ಲಿ ಒಬ್ಬನಾದ ವಿನಯೇಂದು ಸೇವುಣರಾಜನಾದ ಸಿಂಹಣನಿಂದ (1210-1247) ಗೌರವಿಸಲ್ಪಟ್ಟನು ಎಂದು ಹೇಳಿರುವುದರಿಂದ ಕಮಲಭವನು ತನ್ನ ಗ್ರಂಥವನ್ನು 1247ಕ್ಕೆ ಈಚೆ ಬರೆದಿರಬೇಕು ಎಂದು ಅಯ್ಯನವರು ಊಹಿಸುತ್ತಾರೆ. ವಿನಯೇಂದುವೂ ಅವನ ಜತೆಯಲ್ಲಿ ಉಕ್ತರಾದ ಇನ್ನು ಕೆಲವರು ಗುರುಗಳೂ ಕವಿಯ ಸಮಕಾಲದವರಾಗಿದ್ದಿರಬಹುದಾದುದರಿಂದ 1247ಕ್ಕೆ ಈಚೆಯೇ ಕವಿ ಗ್ರಂಥವನ್ನು ಬರೆದಿರಬೇಕೆಂಬ ನಿರ್ಬಂಧವೇನೂ ಇಲ್ಲ. ಅಲ್ಲದೆ ಕವಿ ಹೇಳಿರುವ ಕುಮುದೇಂದುವಿನ ಶಿಷ್ಯನಾದ ಮಾಘನಂದಿ 1253 ರಲ್ಲಿ ಶ್ರಾವಕಾಚಾರಸಾರವನ್ನು ಬರೆದ (I,389) ಅಭಿನವಸಾರಚತುಷ್ಟಯಕರ್ತೃ ಎಂದು 1265 ರಲ್ಲಿ ಹುಟ್ಟಿದ ಬೆಣ್ಣೆಗುಡ್ಡದ ಶಾಸನದಲ್ಲಿ (1911ನೆಯ ವರ್ಷದ ಮೈಸೂರು ಶಾಸನದ ಇಲಾಖೆಯ ವರದಿ, ಪುಟಗಳು 48-49) ಉಕ್ತನಾದ, ಬಲಾತ್ಕಾರಗಣದ ಮಾಘನಂದಿಯೇ ಎಂದು ಊಹಿಸಿದ್ದಾರೆ. ಮಾಘನಂದಿಗೆ ಈ ಶಾಸನದಲ್ಲಿ ಹೇಳಿರುವ ಕಾಲವನ್ನು ಗ್ರಹಿಸಿ ಕಮಲಭವನು 1275ರಲ್ಲಿದ್ದನು ಎಂದು ಹೇಳುವುದನ್ನು ಬಿಟ್ಟು 1255 ರಲ್ಲಿದ್ದನು ಎಂದೇ ಹೇಳಿರುವುದಕ್ಕೆ ಕಾರಣ

ವೇನೋ ತಿಳಿಯುಲಿಲ್ಲ. ಇದು ಹೇಗಾದರೂ ಇರಲಿ. ಕವಿ ಹೇಳಿರುವ ಗುರು ಗಳೆಲ್ಲಾ ದೇಶೀಯ ಗಣದವರು, ಭಾನುಕೀರ್ತಿ ಒಬ್ಬನು ಮಾತ್ರ ಕಾಣೂ ರ್ಗಣದವನು. ಕವಿ ಜಯಕೀರ್ತಿಯನ್ನು ದೇಶೀಯಗಣದವನೆಂದು ಹೇಳಿ ಅವನ ಹಿಂದೆ ಮಾಘನಂದಿಯನ್ನು ಹೇಳಿರುವುದರಿಂದ ಇವನೂ ಅದೇ ಗಣದವ ನಾಗಿರಬೇಕು; ಹಾಗಿಲ್ಲದ ಪಕ್ಷದಲ್ಲಿ ಭಾನುಕೀರ್ತಿಯ ವಿಷಯದಲ್ಲಿ ಬೇರೆ ಗಣ ವನ್ನು ಹೇಳಿದಂತೆ ಇಲ್ಲಿಯೂ ಹೇಳುತ್ತಿದ್ದನು. ಆದುದರಿಂದ ಕವಿ ಹೇಳುವ ದೇಶೀಯಗಣದ ಮಾಘನಂದಿಗೂ ಶಾಸನೋಕ್ತನಾದ ಬಲಾತ್ಕಾರ ಗಣದ ಮಾಘನಂದಿಗೂ ಏನೂ ಸಂಬಂಧವಿಲ್ಲ. ಹೀಗಿರುವುದರಿಂದ ನಾನು ಕಮಲ ಭವನಿಗೆ ಕೊಟ್ಟಿರುವ ಕಾಲವನ್ನು ಮಾರ್ಪಡಿಸಬೇಕಾದ ಆವಶ್ಯಕತೆ ಏನೂ ಇಲ್ಲ.

## ಕೀರ್ತಿವರ್ಮ, ಬ್ರಹ್ಮಶಿವ

ಕೀರ್ತಿವರ್ಮನು (I, 129) ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಮಗನಲ್ಲ, ಆ ದೊರೆಯ ಹೆಸರನ್ನು ವಹಿಸಿದ್ದ ಒಬ್ಬ ಸಾಮಂತನ ಮಗನು ಎಂದು ಅಯ್ಯನವರು ಬರೆದಿದ್ದಾರೆ (ಪುಟಗಳು 204–205). ಇದು ನಿರಾಧಾ ರವಾದ ಮಾತು. ಏಕೆಂದರೆ ಕೀರ್ತಿವರ್ಮನ ಸಮಕಾಲಿಕನಾದ ಬ್ರಹ್ಮಶಿ ವನು ಅವನ ವಿಷಯವಾಗಿ ಬರದಿರುವ

ಜನತಾನಂದಂ ಚಳುಕ್ಯಾಭರಣ ನವನಿಪಾಲೋತ್ತಮಂ ಸಾರ್ವಭೌಮಂ ।
ಜನಕಂ ತ್ರೈಲೋಕ್ಯಮಲ್ಲಂ ಸಕಲವಸುಮತೀವಲ್ಲಭಂ ವಿಕ್ರಮಾಂಕಾ ॥
ಪನಿಪಂ ತಾನಗ್ರಜಾತಂ ತ್ರಿಭುವನಪತಿ ದೇವಾದಿದೇವಂ ಜಿನೇಂದ್ರಂ ।
ತನಗಾಪ್ತಂ ಮತ್ತೆನಲ್ಕೇಂ ಪಿರಿಯನೊಜಗತೀನಾಥರೊಳ್ ಕೀರ್ತಿ ವರ್ಮಂ ॥

ಎಂಬ ಪದ್ಯದಲ್ಲಿ ಪ್ರಯೋಗಿಸಿರುವ ಚಳುಕ್ಯಾಭರಣಂ, ಅವನಿಪಾಲೋ ತ್ತಮಂ, ಸಾರ್ವಭೌಮಂ ಎಂಬ ವಿಶೇಷಣಗಳು ಕೀರ್ತಿವರ್ಮನ ತಂದೆಯಾದ ತ್ರೈಲೋಕ್ಯಮಲ್ಲನು ಚಾಳುಕ್ಯ ರಾಜನೆಂಬುದನ್ನು ಸ್ಪಷ್ಟಪಡಿಸುತ್ತವೆ. ಆದರೆ ಅಯ್ಯನವರು ತಮ್ಮ ಹೇಳಿಕೆಯನ್ನು ಸಾಧಿಸುವುದಕ್ಕೋಸ್ಕರ ಪದ್ಯದ ಮೊದಲು ಪಾದವೇ ಒಂದು ಪ್ರತ್ಯೇಕ ವಾಕ್ಯವು ಎಂದು ಪದ್ಧತಿಯುಪ್ರಕಾರ ಅಪಾರ್ಥಮಾ ಡಿದ್ದಾರೆ. ಈ ಅಪಾರ್ಥವನ್ನು ಆವ ಕನ್ನಡ ಪಂಡಿತನೂ ಅಂಗೀಕರಿಸಲಾರನು ಇನ್ನು ಕೀರ್ತಿವರ್ಮನು 6ನೆಯ ವಿಕ್ರಮಾದಿತ್ಯನ ತಮ್ಮಂದಿರಾದ ಜಯಸಿಂಹ, ವಿಷ್ಣುವರ್ಧನ ವಿಜಯಾದಿತ್ಯ ಎಂಬವರಲ್ಲಿ ಒಬ್ಬನಾಗಿರಬಹುದೋ ಎಂದು ನಾನು ಊಹಿಸಿದುದಕ್ಕಾಗಿ ಆಕ್ಷೇಪಿಸಿ ಇವರಿಬ್ಬರಲ್ಲಿ ಒಬ್ಬರೂ 1125 ರಲ್ಲಿ ಬದುಕಿರಲಿಲ್ಲವೆಂದು ಸರಿಯಾದ ಆಧಾರವಿಲ್ಲದೆ ಬರೆದಿದ್ದಾರೆ (ಪುಟ 201).

ನಾನು ಹೇಳಿರುವುದು ಬರಿಯ ಊಹೆ. ವಿಕ್ರಮಾದಿತ್ಯನಿಗೆ ಕೀರ್ತಿವರ್ಮನು 3ನೆಯ ತಮ್ಮನಾಗಿದ್ದರೂ ಇರಬಹುದು ತ್ರೈಲೋಕ್ಯಮಲ್ಲನು 1068 ರಲ್ಲಿ ಗತಿಸಿದುದರಿಂದ ಅವನ ಮಗನಾದ ಕೀರ್ತಿವರ್ಮನ ಕಾಲವು 1100 ಎಂದು ಭಾವಿಸುವುದು ಉಚಿತವೆಂದು ಆಗಲೇ 1125ನ್ನು ಮಾರ್ಪಡಿಸಿದ್ದೇನೆ. ಅಯ್ಯನವರ ಮತ್ತೊಂದಾಕ್ಷೇಪಣೆ ಎನೆಂದರೆ—1163ರಲ್ಲಿ ಗತಿಸಿದ ದೇವಕೀರ್ತಿಯ ಶಿಷ್ಯನ ಸಧರ್ಮನೆಂದು ಶ್ರ. ಬೆ 64 ರಲ್ಲಿ ಹೇಳಿರುವ ದೇವಚಂದ್ರನು ಸು. 1163ರಲ್ಲಿ ಇದ್ದಿರಬೇಕಾದುದರಿಂದ ಇವನು ಕೀರ್ತಿವರ್ಮನ ಗುರುವಲ್ಲ-ಎಂಬುದೇ (ಪುಟ 202). ಈ ಹೇಳಿಕೆಗೆ ಈ ಶಾಸನವನ್ನು ಚನ್ನಾಗಿ ಪರಿಶೀಲಿಸದೆ ಹೋದುದೇ ಮೂಲವು ಈ ಶಾಸನದ 96ನೆಯ ಪದ್ಯದಲ್ಲಿ ದೇವಚಂದ್ರನ ಸಧರ್ಮ ಮಾಘನಂದಿ ಎಂದು ಹೇಳಿ ವಾಕ್ಯವು ಮುಗಿಯುತ್ತದೆ. ಮುಂದಣ 97–100 ಪದ್ಯಗಳಲ್ಲಿ ದೇವಕೀರ್ತಿಯ ಶಿಷ್ಯರು ಉಕ್ತರಾಗಿದ್ದಾರೆ. ಇವರಿಗೂ ದೇವಚಂದ್ರನಿಗೂ ಆವ ಸಂಬಂಧವೂ ಇಲ್ಲ. ಏಕೆಂದರೆ-ಗಂಡವಿಮುಕ್ತನ ಸಧರ್ಮನೂ ರಾಘವಪಾಂಡವೀಯ ಕರ್ತನೂ ಆದ ಶ್ರುತಕೀರ್ತಿಯ ಅಣ್ಣನೆಂದು ಹೇಳಿರುವ ದೇವಚಂದ್ರನು ಗಂಡವಿಮುಕ್ತನ ಶಿಷ್ಯನಾದ ದೇವಕೀರ್ತಿಯ ಶಿಷ್ಯರ ಸಧರ್ಮನಾಗಿರುವುದು ಎಂದಿಗೂ ಸಾಧ್ಯವಲ್ಲ. ಅಯ್ಯನವರು ಇಲ್ಲಿಯೂ ಈ ಶ್ರುತಕೀರ್ತಿ ರಾಘವಪಾಂಡವೀಯವನ್ನು ಬರದವನಲ್ಲ ಎಂದು ಬರೆದಿದ್ದಾರೆ. ಇದು ತಪ್ಪು ಎಂದು ನಾಗಚಂದ್ರನ ವಿಷಯವಾಗಿ ವಿಚಾರಮಾಡಿದಾಗಲೇ ತೋರಿಸಿದ್ದೇನೆ.

ಬ್ರಹ್ಮಶಿವನು ಕೀರ್ತಿವರ್ಮನ ಸಮಕಾಲದವನಾದುದರಿಂದ ಅವನ ಕಾಲವೂ 1100 ಆಗುವುದು. ಆದುದರಿಂದ 1115 ರಲ್ಲಿ ಗತಿಸಿದ ಮೇಘಚಂದ್ರನ ಮಗ ವೀರಣಂದಿ ಬ್ರಹ್ಮಶಿವನ ಗುರುವಾಗಿರಲಾರನು ಎಂಬ ಅಯ್ಯನವರ ಆಕ್ಷೇಪಣೆಗೆ (ಪುಟ 207) ಈಗ ಅವಕಾಶವಿಲ್ಲ.

## ಅಭಿನವ ಶ್ರುತಮುನಿ

ಅಭಿನವ ಶ್ರುತಮುನಿ ಎಂಬ ಗ್ರಂಥಕರ್ತನು (I,422) ಶ್ರ ಬೆ. 254ರಲ್ಲಿ ಹೇಳಿರುವವನಲ್ಲ, 1371ರಲ್ಲಿ ಹುಟ್ಟಿದ ನಂಜನಗೂಡು 64 ರಲ್ಲಿ ಹೇಳಿರುವ ನೂತ್ನ ಶ್ರುತಮುನಿ ಎಂದು ಅಯ್ಯನವರು ಬರೆದಿದ್ದಾರೆ (ಪುಟಗಳು 208–209). ಆದರೆ ಆ ಎರಡು ಶಾಸನಗಳಲ್ಲಿಯೂ ಉಕ್ತರಾದ ಶ್ರುತಮುನಿಗಳು ಒಬ್ಬ ವ್ಯಕ್ತಿಗೇ ಅನ್ವಯಿಸುತ್ತವೆ ಎಂಬುದರಲ್ಲಿ ಆವ ಸಂಶಯವೂ ಇಲ್ಲ; ಏಕೆಂದರೆ ಇಬ್ಬರ ಗುರುಪರಂಪರೆಯೂ ಒಂದೇ ಆಗಿದೆ–ಅಭಯಚಂದ್ರ, ಶ್ರುತಮುನಿ, ಚಂದ್ರಕೀರ್ತಿ, ಅಭಿನವ ಶ್ರುತಮುನಿ; ಆದರೆ ಶ್ರ. ಬೆ. 254 ರಲ್ಲಿ ಚಂದ್ರಕೀರ್ತಿಯ ಹೆಸರನ್ನು ಹೇಳದೆ ಅಭಿನವ ಶ್ರುತಮುನಿ ಶ್ರುತಮುನಿಯ ಪ್ರಶಿಷ್ಯ

ಎಂದು ಹೇಳಿದೆ. ಇಷ್ಟೇ ವ್ಯತ್ಯಾಸ. ಅಲ್ಲದೆ ಶ್ರ ಬೆ. 254 ರಲ್ಲಿ ಉಕ್ತನಾದ ಅಭಿನವ ಶ್ರುತಮುನಿ 1398ಕ್ಕೆ ಈಚೆ ಇದ್ದಿರಬೇಕು ಎಂದು ಅಯ್ಯಂಗಾರರು ಹೇಳುತ್ತಾರೆ. ಈ ಹೇಳಿಕೆಗೆ ಆಧಾರವಿರುವಂತೆ ತೋರುವುದಿಲ್ಲ. ಈ ಶಾಸನದ 87ನೆಯ ಪಙ್ಕ್ತಿಯಿಂದ ಶ್ರುತಕೀರ್ತಿ ವಿಶ್ವವಿದ್ಯಾವಿನೋದನ ಅಥವಾ ಅಭಿನವ ಶ್ರುತಮುನಿಯ (77ನೆಯ ಪಙ್ಕ್ತಿಯನ್ನು ನೋಡಿ) ಶಿಷ್ಯನೆಂದು ತಿಳಿಯುತ್ತದೆ. ಆದುದರಿಂದ ಶ್ರುತಕೀರ್ತಿಯಾದಮೇಲೆ ಬರುವ ಗುರುಗಳೆಲ್ಲರೂ ಅಭಿನವ ಶ್ರುತಮುನಿಗೆ ಈಚೆಯವರಾಗಿರಬೇಕು ಇದರಿಂದ ನಾನು ಅಭಿನವ ಶ್ರುತಮುನಿಗೆ ಕೊಟ್ಟಿರುವ ಕಾಲವು ಸರಿಯಾಗಿದೆ ಎಂದು ತಿಳಿಯಬಹುದು.

## ಶಿಶುಮಾಯಣ

1233ರಿಂದ ದೇವರಾಜನ (II, 43) ಕಾಲವಾದ 1410 ರ ವರೆಗೆ ಸಾಂಗತ್ಯಗ್ರಂಥಗಳಿಲ್ಲವಾದುದರಿಂದ ಶಿಶುಮಾಯಣನು (I, 349) 1233 ರಷ್ಟು ಹಿಂದೆ ಗ್ರಂಥರಚನೆಮಾಡಿರಲಾರನು ಎಂದು ಹೇಳಿ, ಈ ಕವಿ ಹೇಳಿರುವ ಜೈನ ಗುರುಗಳ ಸಮೀಕರಣಕ್ಕಾಗಿ ವಿಚಿತ್ರವಾದ ಊಹೆಗಳನ್ನು ಮಾಡಿ, ಕೊನೆಗೆ ಕವಿ 17ನೆಯ ಶತಮಾನದ ಮಧ್ಯಭಾಗದಲ್ಲಿದ್ದನೆಂದು ಅಯ್ಯಂಗಾರರು ಸಿದ್ಧಾಂತ ಮಾಡಿದ್ದಾರೆ (ಪುಟಗಳು 228-231) ಮೇಲೆ ಹೇಳಿದ ಕಾಲದ ಸಾಂಗತ್ಯಗ್ರಂಥಗಳು ಈಗ ದೃಷ್ಟಿಗೋಚರವಾಗದ ಮಾತ್ರಕ್ಕೆ ಆ ಕಾಲದಲ್ಲಿ ಅಂಥ ಗ್ರಂಥಗಳು ರಚಿತವಾಗಲೇ ಇಲ್ಲ ಎಂದು ಹೇಳಲಾಗುವುದಿಲ್ಲ. ಮುಂದೆ ಶೋಧನಮಾಡಿದರೆ ಅವು ದೊರೆಯಬಹುದು. ಶಿಶುಮಾಯಣನು ತನ್ನ ಗ್ರಂಥಗಳಲ್ಲಿ ಒಂದನ್ನು ಬೆಳುಕೆರೆಯ ಪ್ರಭು ಗುಮ್ಮಟದೇವನ ಪ್ರೇರಣೆಯಿಂದ ಬರೆದಂತೆ ಸ್ಪಷ್ಟವಾಗಿ ಹೇಳಿದ್ದಾನೆ. ಈ ಗುಮ್ಮಟದೇವನು 1313 ರಲ್ಲಿ ಹುಟ್ಟಿದ ಶ್ರ. ಬೆ. 65 ರಲ್ಲಿ ಉಕ್ತನಾಗಿರುವ ಬೆಳುಕೆರೆಯ ಪ್ರಭು ಗುಮ್ಮಟ್ಟನಿಂದ ಅಭಿನ್ನನಾಗಿರಬೇಕು. ಇದರಿಂದ ಈ ಕವಿ 1313 ರಲ್ಲಿ ಇದ್ದನೆಂಬುದಕ್ಕೆ ಆಧಾರವು ದೊರೆತಂತಾಯಿತು. ಅವನು 1233ಕ್ಕೆ ಸಂವಾದಿಯಾದ ಕಾಲವನ್ನು ಸೂಚಿಸಿರುವಂತೆ ತೋರುತ್ತದೆ. ಇದು ನಿಜವಾಗಿದ್ದಪಕ್ಷದಲ್ಲಿ ಕವಿ ಹೇಳುವ ಗುಮ್ಮಟನು ಶಾಸನೋಕ್ತನಾದ ಗುಮ್ಮಟನ ತಾತನಾಗಿರಬಹುದೆಂದು ನನಗೆ ತೋರುತ್ತದೆ- ಕವಿ 17ನೆಯ ಶತಮಾನದವನು ಎಂಬುದಕ್ಕೆ ಆವ ಆಧಾರವೂ ಇಲ್ಲ.

## ನಾಗವರ್ಮಾಚಾರ್ಯ.

ನಾಗವರ್ಮಾಚಾರ್ಯನ (I, 87) ವಿಷಯದಲ್ಲಿ ನಾನು ಶಿಕಾರಿಪುರ 129, 130 ಇವುಗಳಲ್ಲಿ ಉಕ್ತರಾದ ಇಬ್ಬರು ಉದಯಾದಿತ್ಯರ ಬಿರುದುಗಳನ್ನು ಮಿಶ್ರಮಾಡಿರುವುದು ತಪ್ಪೆಂದು ಅಯ್ಯಂಗಾರರು ತೋರಿಸಿರುವುದು (ಪುಟಗಳು

234–235) ನ್ಯಾಯವೇ ಸರಿ. ನಮಗೆ ಬೇಕಾದ ಉದಯಾದಿತ್ಯನು 129 ರಲ್ಲಿ ಉಕ್ತನಾದವನು. ಈ ತಪ್ಪಿಗೆ ಮೂಲವೇನೋ ತಿಳಿಯಲಿಲ್ಲ; ಬಹುಶಃ ಮಿ|| ರೈಸ್ ಮಾಡಿರುವ ಈ ಇಬ್ಬರು ಉದಯಾದಿತ್ಯರ ಸಮೀಕರಣವೇ [ಶಿವಮೊಗ್ಗ I, ಪೀಠಿಕೆ 21) ಆಗಿರಬಹುದು

ಅಯ್ಯನವರು ದುರ್ಬಲವಾದ ಆಧಾರಗಳ ಮೇಲೆ ಚಂದ್ರಚೂಡಾಮಣಿ ಶತಕದಲ್ಲಿ ಉಕ್ತರಾದ ಉದಯಾದಿತ್ಯ ನಾಗವರ್ಮಾಚಾರ್ಯರು ಶಿಕಾರಿಪುರ 129 ರಲ್ಲಿ ಹೇಳಿರುವ ಅದೇ ಹೆಸರಿನ ವ್ಯಕ್ತಿಗಳಿಂದ ಭಿನ್ನರೆಂದು ಹೇಳುತ್ತಾರೆ (ಪುಟ135). ಅವರ ಆಧಾರಗಳಾವುವೆಂದರೆ—1. ಶಾಸನವು ನಾಗವರ್ಮಾಚಾರ್ಯನು ಉದಯಾದಿತ್ಯನ ಸಂಧಿವಿಗ್ರಹಿ ಎಂದು ಹೇಳುವುದಿಲ್ಲ, 2. ರಾಜನಾದ ಭುವನೈಕಮಲ್ಲನು ತನ್ನ ಸೇವಕನ ಕೈಯಕೆಳಗಿರುವವನ ಕಾಲನ್ನು ತೊಳೆಯಲಾರನು—ಎಂಬುವೇ. ಗ್ರಂಥದಲ್ಲಿ ಉಕ್ತವಾದ ಒಂದೊಂದಂಶವೂ ಶಾಸನದಲ್ಲಿ ಹೇಳಿಯೇ ಇರಬೇಕು ಎಂಬ ನಿಯಮವೇನೂ ಇಲ್ಲ. ಸಂಧಿ ವಿಗ್ರಹಿ ಎಂಬವನು ಕೇವಲ ಸೇವಕನಾಗಿಯೇ ಇರಬೇಕೆಂಬುದಿಲ್ಲ. ಅವನು ಬ್ರಾಹ್ಮಣನಾಗಿದ್ದರೆ ಸೇವಕನಾದರೂ ಅವನ ಕಾಲನ್ನು ಮೇಲಣ ಅಧಿಕಾರಿ ಸಮಯ ಬಿದ್ದಾಗ ತೊಳೆಯಲು ಹಿಂದೆಗೆವುದಿಲ್ಲ. ಪ್ರಕೃತ ವಿಷಯವನ್ನು ಈ ರೀತಿ ಸ್ಪಷ್ಟಪಡಿಸುತ್ತೇನೆ — ಚಂದ್ರ ಚೂಡಾಮಣಿ ಶತಕದಲ್ಲಿ ಉದಯಾದಿತ್ಯನೆಂಬ ಒಬ್ಬ ಅಧಿಕಾರಿಯೊಡನೆ ಸಂಬಂಧವುಳ್ಳ ಒಬ್ಬ ನಾಗವರ್ಮಾಚಾರ್ಯನು ಉಕ್ತನಾಗಿದ್ದಾನೆ; ಪರಸ್ಪರ ಸಂಬಂಧವುಳ್ಳ ಅದೇ ಹೆಸರಿನ ಇಬ್ಬರು ವ್ಯಕ್ತಿಗಳು ಒಂದೇ ಒಂದು ಶಾಸನದಲ್ಲಿ (ಶಿಕಾರಿಪುರ 129) ಉಕ್ತರಾಗಿದ್ದಾರೆ, ಈ ಸಾಮ್ಯವು ಕಾಕತಾಳೀಯವಾಗಿರಲಾರದು, ಗ್ರಂಥೋಕ್ತ ವ್ಯಕ್ತಿಗಳು ಶಾಸನೋಕ್ತ ವ್ಯಕ್ತಿಗಳಿಂದ ಅಭಿನ್ನರಾಗಿರಬಹುದು ಎಂದು ಭಾವಿಸುವುದು ತಪ್ಪೇ ?

ಬಳಿಕ ಅಯ್ಯನವರು ಈ ಶತಕವು ನಾಗವರ್ಮಾಚಾರ್ಯ ಕೃತವಲ್ಲವೆಂಬ ತಮ್ಮ ಕಲ್ಪನೆಯನ್ನು ಸಾಧಿಸಲಿಕ್ಕೆ ಪದ್ಧತಿಯ ಪ್ರಕಾರ

ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ ಸಮಂ |
ತುದಯಾದಿತ್ಯನ ರಾಯಭಾರಿಯೆನಿಸಿರ್ದಾತ್ಮಾಗ್ರಜಂ ಭಾಸ್ಕರಂ ||
ಮೊದಲಾದೀಶ್ವರ ಭಕ್ತರಪ್ಪವರ್ಗೆ ಪೇಳ್ದೀ ಜ್ಞಾನಸಾರಂ ಸುಖಾ |
ಸ್ಪದಮೊಳ್ಪೋದುಗೆ ಭುಕ್ತಿಮುಕ್ತಿ ಫಲಮಂ ಶ್ರೀಚಂದ್ರಚೂಡಾಮಣೀ ||

ಎಂಬ ಪದ್ಯಕ್ಕೆ ಅಪಾರ್ಥ ಮಾಡಿದ್ದಾರೆ(ಪುಟ 236). ಈ ಪದ್ಯದ ಮೊದಲನೆಯ ಪಾದದಲ್ಲಿರುವ ನಾಗವರ್ಮಂ ಎಂಬುದು 3 ನೆಯ ಪಾದದಲ್ಲಿರುವ ಪೇಳ್ದ ಎಂಬುದರೊಡನೆ ಅನ್ವಯಿಸುವುದಿಲ್ಲವಂತೆ, ಸಮಂತು ಎಂಬ ಪದದ ಪ್ರಯೋಗದಿಂದ ನಾಗವರ್ಮಂ ಎಂಬುದು ಈಶ್ವರಭಕ್ತರ್ ಎಂಬುದರೊಡನೆ ಸೇರುತ್ತದಂತೆ.

ಹೀಗಾದರೆ ಆತ್ಮಾಗ್ರಜಂ ಎಂಬುದರಲ್ಲಿ ಆತ್ಮ ಶಬ್ದಕ್ಕೆ ಪ್ರಯೋಜನವೇನೋ ಹೇಳಿದ್ದಿ ಎಂಬುದಕ್ಕೆ ಕರ್ತೃವಾವುದೋ ತಿಳಿವುದಿಲ್ಲ. ಕನ್ನಡದಲ್ಲಿ ಸ್ವಲ್ಪಮಟ್ಟಿಗೆ ಕಾವ್ಯಪರಿಚಯವಿರುವರೂ ಕೂಡ ಈ ವಿಚಿತ್ರ ವ್ಯಾಖ್ಯಾನವನ್ನು ಒಪ್ಪಲಾರರು. ಆಮೇಲೆ ಅಯ್ಯನವರು ಆರು ಉದಯಾದಿತ್ಯರನ್ನು ಹೇಳುತ್ತಾರೆ. ಆದರೆ ನಮಗೆ ಷಿಕಾರಿಪುರ 129 ರಲ್ಲಿರುವಂತೆ ನಾಗವರ್ಮಾಚಾರ್ಯನೊಡನೆ ಸಂಬಂಧವುಳ್ಳ ಉದಯಾದಿತ್ಯನು ಬೇಕೆ ಹೊರತು ಉಳಿದವರು ಬೇಕಿಲ್ಲ. ಆದುದರಿಂದ ನನ್ನ ಬರೆವಣಿಗೆಯನ್ನು ಮಾರ್ಪಡಿಸುವದಕ್ಕೆ ಸಾಕಾದ ಕಾರಣಗಳು ದೊರೆವವರೆಗೆ ಹಾಗೆಯೇ ಇಟ್ಟುಕೊಳ್ಳುತ್ತೇನೆ.

## ಮೌಕ್ತಿಕ ಕವಿ.

ಮೌಕ್ತಿಕಕವಿಗೆ (I, 128) ನಾನು ಹೇಳಿರುವ ಸು. 1120 ಎಂಬ ಕಾಲಕ್ಕೆ ಆಧಾರವಿಲ್ಲ ಎಂದು ಅಯ್ಯನವರು ಬರೆದಿದ್ದಾರೆ. (ಪುಟಗಳು 238-240) ಅದೇಕಾಲವೆಂದು ನಾನು ಖಂಡಿತವಾಗಿ ಹೇಳಿಲ್ಲ, ಕೆಲವು ಸಂದರ್ಭಗಳಿಂದ ಹಾಗಿರಬಹುದು ಎಂದು ಊಹಿಸಿದ್ದೇನೆ. ಜೈನರಾದ ಕೊಂಗಾಳ್ವರಾಜರ ಆಳಿಕೆ ಸು. 1100 ಕ್ಕಿಂತ ಈಚೆ ಬಹಳ ದಿನ ನಡೆಯಲಿಲ್ಲ, (ಹಾಸನ ಶಾಸನಗಳು, ಪೀಠಿಕೆ, ಪುಟ 7). ಕವಿಯೂ ಜೈನನು, ಇವನು ಸು 1120 ರಲ್ಲಿ ವೀರಕೊಂಗಾಳ್ವರಾಜನು ಒಬ್ಬ ಜೈನ ಗುರುವಿಗೆ ಕೊಟ್ಟ ಪೆರ್ಣ್ಣಂಗಡಲು ಎಂಬ ಸ್ಥಳವನ್ನು ಹೇಳುತ್ತಾನೆ. ಜೈನರಾಜರ ಆಳಿಕೆ ಕೊನೆಗಂಡ ಮೇಲೆ ಜೈನಮತದ ಪ್ರಾಬಲ್ಯವು ಕಡಮೆಯಾಯಿತು ಎಂಬುದು ನ್ಯಾಯವಾಗಿಯೇ ಇದೆ. ಕವಿ ಕೊಂಗಾಳ್ವರಾಜರ ಆಶ್ರಯದಲ್ಲಿ ಗ್ರಂಥರಚನೆ ಮಾಡಿದನೆಂಬುದರಲ್ಲಿ ಸಂಶಯವಿಲ್ಲ. ಆದುದರಿಂದ ನಾನು ಹೇಳಿರುವ ಕಾಲವು ಅಸಮಂಜಸವಲ್ಲ.

ಈ ಸಂದರ್ಭದಲ್ಲಿ ಅಯ್ಯನವರು ಕೆಲವು ವಿಚಿತ್ರವಾದ ಮಾತುಗಳನ್ನು ಬರೆದಿದ್ದಾರೆ. ಮೂರು ಶಾಸನಗಳಲ್ಲಿ ಮಾತ್ರ ಉಕ್ತವಾಗಿ ಉಳಿದವುಗಳಲ್ಲಿ ಉಕ್ತವಾಗದೆ ಇರುವುದರಿಂದ ಪೆರ್ಣ್ಣಂಗಡಲು ಪ್ರಸಿದ್ಧವಾದ ಸ್ಥಳವಲ್ಲ ಎನ್ನುತ್ತಾರೆ. ಒಂದು ಸ್ಥಳದ ಪ್ರಸಿದ್ಧಿ ಅದು ಹೇಳಲ್ಪಟ್ಟಿರುವ ಶಾಸನಗಳ ಸಂಖ್ಯೆಯಿಂದ ನಿರ್ಣೀತವಾಗಬೇಕೆಂಬ ನಿಯಮವೇನೂ ಇಲ್ಲ. ಅಲ್ಲದೆ ರಾಮನಿಂದ ಪ್ರತಿಷ್ಠಿತವಾದ ಚಂದ್ರನಾಥ ಜಿನಬಿಂಬವನ್ನುಳ್ಳ ತ್ರಿಭುವನ ತಿಲಕ ಎಂಬ ಬಸ್ತಿ ಪೆರ್ಣ್ಣಂಗಡಲಲ್ಲಿ ಇದ್ದಿತು ಎಂದು ಇನ್ನೆಲ್ಲಿಯೂ ಹೇಳಿಲ್ಲವಾದುದರಿಂದಲೂ ಕೊಲ್ಲಾಪುರದಲ್ಲಿ ಚಂದ್ರನಾಥ ಜಿನಬಿಂಬವನ್ನುಳ್ಳ ತ್ರಿಭುವನ ತಿಲಕ ಬಸ್ತಿಯಿರುವುದರಿಂದಲೂ

ಕೃತಕೃತ್ಯಂ ಮೌಕ್ತಿಕಂ ಸತ್ಕವಿವಿರಚಿಸಿದೀ ಸಾರಮಪ್ಪಷ್ಟಕಶ್ರೀ ।
ಸ್ತುತಿಯಂ ಪೇೞ್ದಿರ್ದುದಾಲಿಪ್ಪವರ್ಗೆ ನಿರುಪಮಾನಂದಮಂ ಮಾ
ೞ್ಕಿಸೀತಾ ॥
ಪತಿರಾಮಸ್ಥಾಪಿತೋದ್ಯತ್ತ್ರಿಭುವನತಿಲಕಾಲಂಕೃತ ಖ್ಯಾತಿನಾಮಾಂ ।
ಕಿತಮಾಗೊಪ್ಪಿಪರ್ಪೆಣ್ಣೆಂಗಡಲ ಪುರವರಾಧೀಶ್ವರಂ ಚಂದ್ರನಾಥಾ ॥

ಎಂಬ ಪದ್ಯದಲ್ಲಿ ಕವಿ ಹೇಳಿರುವ ಬಸ್ತಿಯೂ ಜಿನಬಿಂಬವೂ ಕೊಲ್ಹಾಪುರಕ್ಕೆ ಅನ್ವಯಿಸಬಹುದು ಎಂದು ಅಯ್ಯನವರು ಹೇಳುತ್ತಾರೆ. ಕವಿ ಕಂಠೋಕ್ತವಾಗಿ ಆ ಬಸ್ತಿ ಪೆಣ್ಣೆಂಗಡಲಲ್ಲಿದ್ದಿತು ಎಂದು ಹೇಳಿರುವಾಗ ಅದು ಮತ್ತೊಂದು ಕಡೆ ಇದ್ದಿತು ಎಂದು ಕಲ್ಪಿಸುವುದಕ್ಕೆ ನಾನಾಗು? ಜಿನಬಿಂಬವು ರಾಮನಿಂದ ಪ್ರತಿಷ್ಠಿತವಾದುದು ಎಂಬುದಕ್ಕೆ ಮೈಸೂರು ಸೀಮೆಯಲ್ಲಿಯೇ ಎಡತೊರೆ 26 ರಲ್ಲಿ ಮತ್ತೊಂದುದಾಹರಣವು ದೊರೆಯುತ್ತದೆ. ಇದರಲ್ಲಿ ಚಿಕ್ಕಹನಸೋಗೆಗ್ರಾಮದ ಶಾಂತೀಶ್ವರ ಬಸ್ತಿಯ ಬಿಂಬವು "ದಶರಥಸುತನುಂ ಲಕ್ಷ್ಮಣಾಗ್ರಜನುಂ ಸೀತಾವಲ್ಲಭನುಂ ಇಕ್ಷ್ವಾಕು ಕುಳಜನುಮಪ್ಪ ರಾಮನ ಪ್ರತಿಷ್ಠೆ" ಎಂದು ಹೇಳಿದೆ. ಕವಿ ಹೇಳಿರುವಂತೆ ಪೆಣ್ಣೆಂಗಡಲಲ್ಲಿ ತ್ರಿಭುವನ ತಿಲಕ ಎಂಬ ಬಸ್ತಿ ಏಕಿರಕೂಡದು?

## ಶ್ರೀವರ್ಧದೇವ

ಶ್ರೀವರ್ಧದೇವನು (I, 7) ತುಂಬುಲೂರಾಚಾರ್ಯನಿಂದ ಭಿನ್ನನೆಂದೂ, ತದ್ರಚಿತವಾದ ಚೂಡಾಮಣಿ ಸಂಸ್ಕೃತಕಾವ್ಯವಾಗಿರಬೇಕು ಅದಕ್ಕೂ ತುಂಬುಲೂರಾಚಾರ್ಯಕೃತವಾದ ಚೂಡಾಮಣಿಯೆಂಬ ಕನ್ನಡ ವ್ಯಾಖ್ಯಾನಕ್ಕೂ ಸಂಬಂಧವಿಲ್ಲ ಎಂದೂ, ಶ್ರೀ ವರ್ಧದೇವನು ಸು. 710ರಲ್ಲಿದ್ದನು, ನಾನು ಹೇಳಿರುವಂತೆ ಸು. 650ರಲ್ಲಿ ಅಲ್ಲ ಎಂದೂ ಒರೆದಿದ್ದಾರೆ (ಪುಟಗಳು 243–245). ಶ್ರೀವರ್ಧದೇವನ ಚೂಡಾಮಣಿಕಾವ್ಯ, ತುಂಬಲೂರಾಚಾರ್ಯನ ಚೂಡಾಮಣಿವ್ಯಾಖ್ಯಾನ ಇವುಗಳ ಅಭಿನ್ನತೆಯ ವಿಷಯದಲ್ಲಿ ನನ್ನ ಸಂದೇಹವನ್ನು ಹಿಂದೆಯೇ (I, 9) ತಿಳಿಸಿದ್ದೇನೆ. ಅಲ್ಲದೆ ನನ್ನ ಯೂನಿವರ್ಸಿಟಿ ರೀಡರ್ಷಿಪ್ ಉಪನ್ಯಾಸದಲ್ಲಿ ಶ್ರ ಬೆ. 67ರಲ್ಲಿ ಹೇಳಿರುವ ಚೂಳಾಮಣಿಕಾವ್ಯವು ಶ್ರೀವರ್ಧದೇವ ಎಂಬ ನಾಮಾಂತರವುಳ್ಳ ತೋಲಾಮೊಳಿದೇವನೆಂಬ ಜೈನಕವಿಯಿಂದ ರಚಿತವಾದ ಚೂಳಾಮಣಿಯೆಂಬ ತಮಿಳು ಪುರಾತನಕಾವ್ಯವಾಗಿರಬಹುದು ಎಂದು ಹೇಳಿದ್ದೇನೆ. ಅಯ್ಯನವರು ಶ್ರೀವರ್ಧದೇವನಿಗೆ ಕೊಟ್ಟಿರುವ ಕಾಲಕ್ಕೆ ಕೆಲವು ನಿರಾಧಾರವಾದ ಕಲ್ಪನೆಗಳೇ ಮೂಲವಾಗಿವೆ. ಅವರು ಶ್ರ ಬೆ. 67ರಲ್ಲಿ ಶ್ರೀವರ್ಧದೇವನ ಶಿಷ್ಯ ಮಹೇಶ್ವರ, ಅವನ ಶಿಷ್ಯ ಅಕಳಂಕ ಎಂದು ಹೇಳಿದೆ ಎಂದು ತಿಳಿದುಕೊಂಡಿದ್ದಾರೆ. ಆದರೆ ಶಾಸನದಲ್ಲಿ ಹಾಗೆ ಹೇಳಿಲ್ಲ. ಅಲ್ಲದೆ ಶ್ರ.ಬೆ. 254ನ್ನು ನಿರ್ದೇ

ಶಿಸಿ ನೃಪತುಂಗನಿಂದ ಪೂಜಿತನಾದ ಮತ್ತು 783ರಲ್ಲಿ ಹರಿವಂಶವನ್ನು ಬರೆದ, ಜಿನಸೇನನಿಗೆ ಅಕಳಂಕನು ಗುರುವಾಗಿದ್ದನು ಎನ್ನುತ್ತಾರೆ. ಈ ಶಾಸನವು ಹೀಗೆ ಹೇಳುವುದಿಲ್ಲ; ಭಟ್ಟಾಕಳಂಕನ ಹೆಸರನ್ನು ಹೇಳಿ ಆಮೇಲೆ ಮಹಾಪುರಾಣಕರ್ತೃವಾದ ಜಿನಸೇನನ ಹೆಸರನ್ನು ಹೇಳುತ್ತದೆ. ಹರಿವಂಶವನ್ನು 783ರಲ್ಲಿ ಬರೆದ ಜಿನಸೇನನೂ ಮಹಾಪುರಾಣವನ್ನು ಸು. 838ರಲ್ಲಿ ಬರೆದ ಜಿನಸೇನನೂ ಒಬ್ಬನೇ ಎಂದು ರೈಸ್ ಅವರು ಭ್ರಮಿಸಿದ್ದಾರೆ. ಅಕಳಂಕನು ಜಿನಸೇನನ ಗುರು ಎಂದು ಎಲ್ಲಿಯೂ ಹೇಳಿಲ್ಲ. ಆದುದರಿಂದ ಅಕಳಂಕನಿಗೆ ಹೇಳಿರುವ 770ಕ್ಕೂ ಅನಂತರ ಶಾಬಾಶಿ ಶ್ರೀವರ್ಧದೇವನಿಗೆ ಹೇಳಿರುವ 710ಕ್ಕೂ ಆಧಾರವಿಲ್ಲ.

## ಗುಣನಂದಿ

ಅಯ್ಯಂಗಾರರು ಒಂದು ಕಡೆ (ಪುಟ 247) ಗುಣನಂದಿ 700ಕ್ಕೆ ಹಿಂದೆ ಇದ್ದಿರಬೇಕು, ನಾನು ಹೇಳಿರುವಂತೆ ಸು. 900ರಲ್ಲಿ (I, 221) ಅಲ್ಲ ಎಂದೂ ಮತ್ತೊಂದು ಕಡೆ (ಪುಟ 248) ಅವನು ಸು. 1250ರಲ್ಲಿ ಇದ್ದಿರಬೇಕು ಎಂದೂ ಹೇಳಿದ್ದಾರೆ. ಈ ಹೇಳಿಕೆಗಳಿಗೆ ಆಧಾರ ಬಹಳ ದುರ್ಬಲವಾದುದು. ಮೊದಲ ಹೇಳಿಕೆಗೆ ಗುಣನಂದಿ ಬೌದ್ಧರನ್ನು ವಾದದಲ್ಲಿ ಸೋಲಿಸಿದ ಅಕಳಂಕನಿಗೆ ಹಿಂದೆ ಇದ್ದನೆಂಬ ಕಲ್ಪನೆಯೇ ಮೂಲವು. ಶ್ರ. ಬೆ 127 ರಲ್ಲಿ ಸ್ಪಷ್ಟವಾಗಿ ಗುಣನಂದಿ ಬಲಾಕಪಿಂಛನ ಶಿಷ್ಯನೆಂದು ಹೇಳಿದೆ. ಈ ಹೇಳಿಕೆಯನ್ನೇ ಶ್ರ. ಬೆ. 117,140,66 ಇವುಗಳಲ್ಲಿಯೂ ಅನುವಾದಮಾಡಿದೆ. ಆದರೆ ಗುಣನಂದಿ ಬಲಾಕಪಿಂಛನ ಸಾಕ್ಷಾಚ್ಛಿಷ್ಯನಲ್ಲ, ಅವನ ಶಿಷ್ಯಪರಂಪರೆಗೆ ಸೇರಿದವನು ಎಂಬುದು ಶ್ರ. ಬೆ. 64ರಿಂದ ಸ್ಪಷ್ಟವಾಗುತ್ತದೆ. ಇದರಲ್ಲಿ ಸಮಂತಭದ್ರ, ಪೂಜ್ಯಪಾದ, ಅಕಳಂಕ ಮುಂತಾದವರು ಬಲಾಕಪಿಂಛನ ಶಿಷ್ಯಪರಂಪರೆಗೆ ಸೇರಿದವರು ಎಂದು ಪರೋಕ್ಷವಾಗಿ ಹೇಳಿದೆ. ಗುಣನಂದಿ ಪೂಜ್ಯಪಾದನ ಜೈನೇಂದ್ರ ವ್ಯಾಕರಣಕ್ಕೆ ವ್ಯಾಖ್ಯಾನವನ್ನು ಬರೆದಿರುವುದು ನಮಗೆ ಗೊತ್ತೇ ಇದೆ. ಅಯ್ಯಂಗಾರರು ತಮ್ಮ ಹೇಳಿಕೆಗೆ ಪಂಪನು ಪ್ರಮಾಣವೆಂದು ಹೇಳುತ್ತಾರೆ. ಪಂಪನು ತನ್ನ ಗುರು ದೇವೇಂದ್ರನನ್ನು ಹೇಳಿ ಆಮೇಲೆ ಅಕಳಂಕನೆಂಬ ಒಬ್ಬ ಗುರುವನ್ನು ಹೇಳುತ್ತಾನೆ. ಈ ಅಕಳಂಕನು ಪಂಪನ ಸಮಕಾಲದವನಾಗಿರಬೇಕೇ ಹೊರತು ಅವನ ಕಾಲಕ್ಕೆ ಹಿಂದೆ ಬೌದ್ಧರನ್ನು ನಿಗ್ರಹಿಸಿದ ಅಕಳಂಕನು ಬೇರೆ ಅಲ್ಲ. ಶ್ರ. ಬೆ 127 ರಂತೆ ದೇವೇಂದ್ರನಿಗೂ ಮೇಘಚಂದ್ರನಿಗೂ ಮಧ್ಯೆ ಏಳು ತಲೆಗಳಾಗುತ್ತವೆ ಎಂಬ ನನ್ನ ಹೇಳಿಕೆ (I, 23) ತಪ್ಪಾಗಿರಬಹುದು; ಆದರೆ ಇನ್ನೂ ಕೆಲವು ತಲೆಗಳಿದ್ದರೂ ನಾನು ಗುಣನಂದಿಗೆ ಹೇಳಿರುವ ಕಾಲಕ್ಕೆ ಭಂಗವೇನೂ ಇಲ್ಲ.

ಗುಣನಂದಿ ಸು. 1250 ರಲ್ಲಿದ್ದನು ಎಂಬ ಅಯ್ಯನವರ ಎರಡನೆಯ ಹೇಳಿಕೆಗೆ ಕೊಟ್ಟಿರುವ ಕಾರಣವೇನೆಂದರೆ—ನೃಪತುಂಗ ನಾಗವರ್ಮರಂಥ ಹಿಂದಣ ಕವಿಗಳೂ ಮಲ್ಲಿಕಾರ್ಜುನ, ಕೇಶಿರಾಜರ ಹೊರತು ಆಚಣ್ಣ, ಜನ್ನ, ಪಾರ್ಶ್ವ, ಗುಣವರ್ಮ ಇವರಂಥ ಈಚೆಯ ಕವಿಗಳೂ ಕೂಡ ಅವನ ಹೆಸರನ್ನು ಹೇಳಿಲ್ಲ ಎಂಬುದೇ. ಒಬ್ಬ ಕವಿಯ ಹೆಸರನ್ನು ಇನ್ನು ಕೆಲವರು ಕವಿಗಳು ಹೇಳದ ಮಾತ್ರಕ್ಕೆ ಆ ಕವಿ ಅವರಿಗಿಂತ ಈಚೆ ಇದ್ದಿರಬೇಕು ಎಂಬ ವಾದವು ಪರಿಹಾಸಾಸ್ಪದವೇ ಸರಿ.

## ಕಂತಿ

ಕಂತಿಯ (I, 110) ವಿಷಯವಾಗಿ ಮಾತನಾಡುತ್ತ ಅಯ್ಯನವರು ಅಸಂಬದ್ಧವಾದ ಹಲವು ವಿಷಯಗಳನ್ನು ಪ್ರತಿಪಾದಿಸಿ (ಪುಟಗಳು 149-159) ಕೊನೆಗೆ ಆ ಹೆಸರಿನ ಕಬ್ಬಿಗಿತಿಯೇ ಇರಲಿಲ್ಲ ಎಂದು ಸಿದ್ಧಾಂತಮಾಡಿದ್ದಾರೆ. ಸು. 1560ರಲ್ಲಿದ್ದ ಬಾಹುಬಲಿಕವಿ ತನ್ನ ನಾಗಕುಮಾರ ಚರಿತೆಯಲ್ಲಿ ಕಂತಿಯ ವಿಷಯವಾಗಿ ಬರೆದಿರುವ

ವಿಬುಧ ಜನಸ್ತುತ ಶ್ರೀವೀರಸೋಮನ । ಸಭೆಗೆ ಮಂಗಳ ಲಕ್ಷ್ಮಿಯೆನಿಪ ।
ಶುಭಗುಣ ಚರಿತೆ ಕಂತಿಕೆಯರ ಪೊಗಳ್ತಿನಾ । ನಭಿನವವಾಗ್ದೇವಿಯರ ॥

ಎಂಬ ಪದ್ಯದಿಂದ ಅವಳು ದೋರಸಮುದ್ರದ ರಾಜನ ಸಭೆಯಲ್ಲಿ ಪಂಡಿತೆಯಾಗಿದ್ದುದು ಸ್ಪಷ್ಟವಾಗುತ್ತದೆ. ಬಾಹುಬಲಿ ನೇಮಿಚಂದ್ರನ ಲೀಲಾವತಿಯನ್ನು ಕೇಳುವಾಗ ಬಾಣನ ಕಾದಂಬರಿಯನ್ನು ಸುಡಿಸಿದ ಇತಿಹಾಸವನ್ನು ಹೇಳುವುದರಿಂದ (I, 259) ಅವನನ್ನು ನಂಬಕೂಡದು ಎಂದು ಅಯ್ಯನವರು ಹೇಳುತ್ತಾರೆ. ಬಾಹುಬಲಿ 16ನೆಯ ಶತಮಾನದಲ್ಲಿ ಪ್ರಚಾರದಲ್ಲಿದ್ದ ಇತಿಹಾಸವನ್ನು ಅನುವಾದ ಮಾಡಿದ್ದಾನೆಯೇ ಹೊರತು ಬಾಣನು ನೇಮಿಚಂದ್ರನ ಸಮಕಾಲದವನು ಎಂದು ಹೇಳಿಲ್ಲ. ಇದೇ ಇತಿಹಾಸವನ್ನು ಸು. 1550ರಲ್ಲಿದ್ದ ದೊಡ್ಡಯ್ಯನೂ ತನ್ನ ಚಂದ್ರಪ್ರಭ ಚರಿತೆಯಲ್ಲಿ ಹೇಳಿದ್ದಾನೆ (I, 260). ಆದುದರಿಂದ ಬಾಹುಬಲಿಯನ್ನು ನಂಬದೆ ಇರುವುದಕ್ಕೆ ಕಾರಣವಿಲ್ಲ. ಕಂತಿಹಂಪನ ಸಮಸ್ಯೆಗಳು ಎಂಬ ಗ್ರಂಥದಿಂದ ಕಂತಿ ಪಂಪನ ಸಮಕಾಲದವಳು ಎಂಬುದು ವ್ಯಕ್ತವಾಗುತ್ತದೆ. ಈ ಪಂಪನು ಅಭಿನವಪಂಪನಾಗಿರಬೇಕು: ಏಕೆಂದರೆ ಆದಿಪಂಪನಕಾಲವಲ್ಲಿ (941) ಹೊಯ್ಸಳರಾಜನಾರೂ ಇರಲಿಲ್ಲ. ಅಭಿನವ ಪಂಪನಕಾಲವು ಸು. 1100 ಎಂದು ಹಿಂದೆಯೇ ತೋರಿಸಿದ್ದೇನೆ. ಆದುದರಿಂದ ಕಂತಿಯ ಕಾಲವೂ ಅದೇ ಆಗಿರಬೇಕು. ಬಾಹುಬಲಿ ದೊರೆಯ ಹೆಸರನ್ನು ಹೇಳದಿದ್ದರೂ ಕಂತಿಯ ಕಾಲದಲ್ಲಿ ಆಳುತ್ತಿದ್ದ ರಾಜನು 1ನೆಯ ಬಲ್ಲಾ

ಳನು (1100-1106) ಎಂದು ತಿಳಿಯಬಹುದು. ಸು. 1100 ರಲ್ಲಿ ರಾಜಧಾನಿಯಾಗಿದ್ದ ಬೇಲೂರನ್ನು ಹೇಳದೆ ದೋರಸಮುದ್ರವು ರಾಜಧಾನಿ ಎಂಬುದರಿಂದ ಬಾಹುಬಲಿದೇವಚಂದ್ರರೂ ಕಂತಿಹಂಪನ ಸಮಸ್ಯೆಗಳು ಎಂಬ ಗ್ರಂಥವೂ ನಂಬಿಕೆಗೆ ಅರ್ಹವಲ್ಲ ಎಂದು ಅಯ್ಯನವರು ಹೇಳುತ್ತಾರೆ. ದೋರಸಮುದ್ರವು ಹೊಯ್ಸಳರ ಪ್ರಸಿದ್ಧ ರಾಜಧಾನಿಯಾದುದರಿಂದ ಅದು ಹೇಳಲ್ಪಟ್ಟಿದೆ. ಅದು ಆ ಕಾಲದಲ್ಲಿ ರಾಜಧಾನಿಯಾಗಿರಲಿಲ್ಲ ಎಂದು ಆವ ಶಾಸನವೂ ಹೇಳುವುದಿಲ್ಲ. ಶ್ರ. ಬೆ. 143 ರಲ್ಲಿ ವಿನಯಾದಿತ್ಯನೇ ದೋರಸಮುದ್ರವನ್ನು ಸಿದ್ಧವಾಗಿ ಅಲಂಕರಿಸುತ್ತಿದ್ದನು ಎಂದು ಹೇಳುವಂತಿದೆ. ಬೇಲೂರು 147 ದೋರಸಮುದ್ರವು 1121 ರಲ್ಲಿ ರಾಜಧಾನಿಯಾಗಿದ್ದಿತೆಂದು ಹೇಳುತ್ತದೆ; ಅದರೆ ಹಾಸನ 116 ಬೇಲೂರು 1123 ರಲ್ಲಿ ರಾಜಧಾನಿಯಾಗಿದ್ದಿತೆಂದು ಹೇಳುತ್ತದೆ; ಇದರಿಂದ ದೋರಸಮುದ್ರವು 1123 ರಲ್ಲಿ ರಾಜಧಾನಿಯಾಗಿರಲಿಲ್ಲ ಎಂದು ಊಹಿಸುವುದಕ್ಕಾಗುವುದಿಲ್ಲ. ಆದುದರಿಂದ ಕಂತಿಯು ಸತ್ತೆಯನ್ನು ಶಂಕಿಸುವುದಕ್ಕೆ ಆವ ಆಧಾರವೂ ಇಲ್ಲ ಎಂಬುದು ಸ್ಪಷ್ಟವಾಗದೆ ಇರಲಾರದು. ಕಂತಿ ಎಂಬುದಕ್ಕೆ ಸನ್ಯಾಸಿನಿ ಎಂದರ್ಥವು, ಶಿಷ್ಯಳು ಎಂದಲ್ಲ.

## ಕವಿಗಳಲ್ಲ, ಕವಿಮಾರ್ಗವೇತ್ತೃಗಳು

ನಾನು ಸಾಕಾದ ಆಧಾರವಿಲ್ಲದ ಕೆಲವರನ್ನು ಕವಿಗಳು ಅಥವಾ ಗ್ರಂಥಕರ್ತೃಗಳು ಎಂದು ಕರೆದಿದ್ದೇನೆ ಎಂದು ಅಯ್ಯನವರು ಆಕ್ಷೇಪಿಸುತ್ತಾರೆ (ಪುಟಗಳು 22–27). ಈ ವಿಷಯದಲ್ಲಿ ನಾನು ಆ ಆ ವ್ಯಕ್ತಿಗಳ ವಿಶೇಷಣಗಳು, ವರ್ಣನೆ ಇವುಗಳನ್ನು ಪರಿಶೀಲಿಸಿ ಅರ್ಹತೆಯನ್ನು ಊಹಿಸಿ ಬಳಿಕ ಕವಿ ಅಥವಾ ಗ್ರಂಥ ಕರ್ತೃ ಎಂಬ ಹೆಸರನ್ನು ಹೇಳಿದ್ದೇನೆ. ಇತರ ದ್ರಾವಿಡ ಭಾಷೆಗಳಲ್ಲಿ ಸಾಹಿತ್ಯ ಚರಿತೆಯನ್ನು ಬರೆದಿರುವವರೂ ಹೀಗೆಯೇ ಮಾಡಿದ್ದಾರೆ. ತಿಕ್ಕನ ಸೋಮಯಾಜಿಯ ತಾತ ಮಂತ್ರಿ ಭಾಸ್ಕರನ ವಿಷಯವಾಗಿ ಕೇತನಕೃತದಶಕುಮಾರ ಚರಿತದಲ್ಲಿ "ಸಾಹಿತ್ಯವಿದ್ಯಾಪಾರೀಣುಡು ಅನಿ ಚೆಪ್ಪಬಡೆಯಾತಡು ಕವಿಯೈನಟ್ಲೂಹಚೇಯವಚ್ಚುನು" ಎಂದು ಶ್ರೀಮಾನ್ ವೀರೇಶಲಿಂಗಂಪಂತುಲು ತೆಲುಗು ಕವಿಗಳ ಚರಿತ್ರೆಯ 1ನೆಯ ಸಂಪುಟದಲ್ಲಿ ಬರೆದಿದ್ದಾರೆ. (ಪುಟ 121) ಈ ವ್ಯಕ್ತಿಗಳಿಗೆ ಕವಿ ಎಂಬ ಉಪಪದವು ಹೇಳಿದ್ದರೂ ಅದಕ್ಕೆ ಕವಿಮಾರ್ಗವೇತ್ತೃ ಎಂದು ಅರ್ಥಮಾಡಬೇಕೇ ಹೊರತು ಕವನ ಮಾಡುವವನು ಎಂದು ಅರ್ಥಮಾಡಕೂಡದು ಎಂದು ಅಯ್ಯನವರು ಹೇಳುತ್ತಾರೆ. ಈ ಸೂಕ್ಷ್ಮಭೇದವನ್ನು ಗ್ರಹಿಸುವುದು ಸಾಮಾನ್ಯ ಜನರಿಗೆ ಸಾಧ್ಯವಲ್ಲ. ಕವಿಮಾರ್ಗವೇತ್ತೃ ಕವಿಯಾಗಿ ಏಕಿರಕೂಡದು ಎಂಬ ಸಂದೇಹವು ಅನೇಕರಿಗೆ ಹುಟ್ಟದೆ

ಇಲ್ಲಾರದು. ದುರ್ಗಸಿಂಹ, ರನ್ನ, ಚಂದ್ರರಾಜ ಇವರಂಥ ಉದ್ದಾಮ ಕವಿಗಳ ಕಾವ್ಯಗಳನ್ನು ತಿದ್ದಬೇಕಾದರೆ ಸ್ವತಃ ಪ್ರೌಢಕವಿಗಳಲ್ಲದವರಿಗೆ ಎಂದಿಗಾದರೂ ಸಾಧ್ಯವಾಗುವುದೇ? ಉದಾಹರಣೆಗಾಗಿ ಬೂಚಿರಾಜನನ್ನು (I, 266) ತೆಗೆದುಕೊಳ್ಳುವ. ಶಾಸನ 119 ರಲ್ಲಿ ಈತನನ್ನು ಕನ್ನಡ, ಸಂಸ್ಕೃತ ಎರಡರಲ್ಲಿಯೂ ಪೊನ್ನನಿಗೆ ಸಮಾನನಾದ ಕವಿ ಎಂದು ವರ್ಣಿಸಿದೆ. ಇವನನ್ನು ಕವಿ ಎಂದು ಕರೆವುದೂ ಇವನು ಗ್ರಂಥಗಳನ್ನು ಬರೆದಿರಬಹುದೆಂದು ಊಹಿಸುವುದೂ ಅಸಾಧುವೇ?

ಈ ಪ್ರಕಾರವಾಗಿ ನನಗೆ ತಿಳಿದ ಮಟ್ಟಿಗೆ ಶ್ರೀಮಾನ್ ವೆಂಕಟಸುಬ್ಬಯ್ಯನವರ ಆಕ್ಷೇಪಣೆಗಳಿಗೆ ಸಮಾಧಾನವನ್ನು ಹೇಳಿದ್ದೇನೆ. ಇನ್ನೂ ಕೆಲವು ಸಣ್ಣ ಆಕ್ಷೇಪಣೆಗಳಿವೆ, ಅವಕ್ಕೆ ನಾನು ಇದುವರೆಗೂ ಬರೆದಿರುವುದರಲ್ಲಿಯೇ ಬಹಳ ಮಟ್ಟಿಗೆ ಸಮಾಧಾನವು ದೊರೆಯಬಹುದು. ಅಂತು ಇಲ್ಲಿ ಈ ವಿಷಯವನ್ನು ಮುಗಿಸಿ ಮುಂದೆ ಇನ್ನು ಕೆಲವರು ಮಾಡಿರುವ ಆಕ್ಷೇಪಣೆಗಳನ್ನು ವಿಚಾರ ಮಾಡುತ್ತೇನೆ.

## ಇತರರ ಆಕ್ಷೇಪಣೆಗಳು

### ಸಿಂಗಿರಾಜ

ಶ್ರೀಮಾನ್ ಹರ್ಡೇಕರ್ ಮಂಜಪ್ಪನವರು ತಮ್ಮ ಶ್ರೀ ಬಸವ ಚರಿತ್ರೆಯಲ್ಲಿಯೂ ಶ್ರೀಮಾನ್ ಸಿಂದಗಿ ಸಿದ್ದಪ್ಪನವರು ತಮ್ಮ ಶ್ರೀ ಬಸವೇಶ್ವರನ ಚರಿತ್ರೆಯಲ್ಲಿಯೂ ಬಸವನ ಚರಿತೆಯನ್ನು ಹೇಳುವ ಕನ್ನಡ ಗ್ರಂಥಗಳೊಳಗೆ ಸಿಂಗಿರಾಜಪುರಾಣವೇ ಮೊದಲನೆಯದೆಂದೂ ಅದನ್ನು ಬರೆದ ಸಿಂಗಿರಾಜನು ದಶಗಣದಲ್ಲಿ (I, 214, 294) ಉಕ್ತನಾದ ಸಿಂಗಿರಾಜನಿಂದ ಅಭಿನ್ನನೆಂದೂ ಆದುದರಿಂದ ಬಸವನ ಸಮಕಾಲದವನೆಂದೂ ಅಭಿಪ್ರಾಯಪಟ್ಟಿದ್ದಾರೆ. ಬಿಜ್ಜಳನ ಸಾಮಂತನಾದ ಸಿಂಗಿರಾಜನು ಮೊದಲು ವೈಷ್ಣವನಾಗಿದ್ದು ಆಮೇಲೆ ವೀರಶೈವನಾಗಿ ಸಿಂಗಿರಾಜಪುರಾಣವನ್ನು ಬರೆದನೆಂದೂ ಈ ಕಾರಣದಿಂದ ಪಾಲ್ಕುರಿಕೆ ಸೋಮನಾಥನು ತನ್ನ ಸಹಸ್ರಗಣನಾಮದಲ್ಲಿ ಅವನನ್ನು ದಶಗಣದೊಳಗೆ ಸೇರಿಸಿದನೆಂದೂ ಶ್ರೀಮಾನ್ ಮೈಸೂರು ಬಸವಲಿಂಗಶಾಸ್ತ್ರಿಗಳು ಸಿಂಗಿರಾಜ ಪುರಾಣದ ಗದ್ಯಾನುವಾದವಾದ ತಮ್ಮ ಸಿಂಗಿರಾಜ ಪುರಾಣವಿಜಯದ ಪೀಠಿಕೆಯಲ್ಲಿ ಬರೆದಿರುವ ಕಥೆಯೇ ಈ ಅಭಿಪ್ರಾಯಕ್ಕೆ ಆಧಾರವೆಂದು ತೋರುತ್ತದೆ. ಆದರೆ ಶ್ರೀಮಾನ್ ಬಸವಲಿಂಗಶಾಸ್ತ್ರಿಗಳು ಈ ಕಥೆಗೆ ಮೂಲವನ್ನು ತಿಳಿಸಿಲ್ಲ. ನನಗೆ ತಿಳಿದಮಟ್ಟಿಗೆ ಈ ಕಥೆಗೆ ಶಾಸನಗಳಲ್ಲಿಯಾಗಲಿ ಪೂರ್ವಗ್ರಂಥಗಳಲ್ಲಿಯಾಗಲಿ ಆಧಾರವಿರುವಂತೆ ತೋರುವುದಿಲ್ಲ. ಶ್ರೀಮಾನ್ ಹರ್ಡೇಕರ್

ಮಂಜಪ್ಪನವರು ತಮ್ಮ ಗ್ರಂಥದ ಪೀಠಿಕೆಯಲ್ಲಿ [ಪುಟ 6) ಸಿಂಗಿರಾಜನ ಕಾಲವು 1650 ಎಂದು ನಾನು ಕವಿಚರಿತೆಯಲ್ಲಿ ಬರೆದಿರುವುದಾಗಿ ಹೇಳಿದ್ದಾರೆ. ಈ ಹೇಳಿಕೆಗೆ ಆಧಾರವಿಲ್ಲ: ನಾನು ಸಿಂಗಿರಾಜನಿಗೆ ಕೊಟ್ಟಿರುವ ಕಾಲವು ಸು. 1500 [II, 148]. ಭೀಮಕವಿಯ ಬಸವಪುರಾಣವೇ ಕನ್ನಡ ಬಸವ ಚರಿತೆಗಳಲ್ಲಿ ಮೊದಲನೆಯದು ಎಂದು ವೀರಶೈವರಲ್ಲಿ ಪ್ರಬಲವಾದ ಪ್ರತೀತಿ ಇದೆ. ಭೀಮಕವಿಯ ಕಾಲಕ್ಕೆ ಹಿಂದೆ ಸಿಂಗಿರಾಜಪುರಾಣವು ರಚಿತವಾಗಿದ್ದ ಪಕ್ಷದಲ್ಲಿ ಅವನು ಆ ಗ್ರಂಥದ ಆಧಾರದಿಂದ ತನ್ನ ಗ್ರಂಥವನ್ನು ಬರೆಯದೆ ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣವನ್ನು ಪ್ರಮಾಣವಾಗಿಟ್ಟುಕೊಂಡು ಗ್ರಂಥರಚನೆ ಮಾಡುವುದಕ್ಕೆ ಕಾರಣವನ್ನು ಹೇಳುವುದು ಕಷ್ಟವಾಗಿದೆ. 16ನೆಯ ಶತಮಾನದ ಮಧ್ಯಭಾಗಕ್ಕೆ ಹಿಂದೆ ಬಾಳಿದ ವೀರಶೈವಕವಿಗಳಾರೂ ಸಿಂಗಿರಾಜನ ಹೆಸರನ್ನು ಹೇಳಿಲ್ಲ; ಪರಂತು ಪಾಲ್ಕುರಿಕೆ ಸೋಮನಾಥನ ಅಥವಾ ಭೀಮಕವಿಯ ಹೆಸರನ್ನು ತಪ್ಪದೆ ಹೇಳಿದ್ದಾರೆ. ಸಿಂಗಿರಾಜನ ಹೆಸರನ್ನು ಹೇಳುವವರಲ್ಲಿ ಮೊದಲನೆಯ ಕವಿ ಮಹಾದೇವಿಯಕ್ಕನ ಪುರಾಣಕರ್ತೃವಾದ ಚೆನ್ನಬಸವಾಂಕನ [ಸು. 1550) ಅಲ್ಲದೆ ಸಿಂಗಿರಾಜನು ಬಸವನ ವಿಷಯವಾದ ಕೆಲವು ಹೇಳಿಕೆಗಳನ್ನು ಆಕ್ಷೇಪಿಸುತ್ತಾನೆ. ಉದಾಹರಣೆಗಾಗಿ "ಬಲದೇವಕಬ್ಬಿಂದೊಡಾಪದವ ಬಸವಂಗಿತ್ತರೆಂಬರ್; ಅದಂತಲ್ಲ" (6ನೆಯ ಸಂಧಿ) ಎಂಬ ಭಾಗವನ್ನು ತಿಳಿಸಬಹುದು. ಇದರಿಂದ ಸಿಂಗಿರಾಜನ ಕಾಲಕ್ಕೆ ಹಿಂದೆ ಬಸವಚರಿತೆಗಳಿದ್ದುವು ಎಂದು ಊಹಿಸಬಹುದಾಗಿದೆ. ಅವನೇ ಬಸವ ಚರಿತೆಯನ್ನು ಮೊತ್ತಮೊದಲು ಬರೆದವನಾಗಿದ್ದ ಪಕ್ಷದಲ್ಲಿ ಹೀಗೆ ಹೇಳುತ್ತಿರಲಿಲ್ಲ. ದಶಗಣದ ಸಿಂಗಿರಾಜನನ್ನು [illegible] ವಿರೂಪಾಕ್ಷ ಪಂಡಿತನು (1584) ತನ್ನ ಚೆನ್ನಬಸವಪುರಾಣದಲ್ಲಿ (ಕಾಂಡ 5, ಸಂಧಿ 2, ಪದ್ಯ 50) ಪರಮ ಶಿವಭಕ್ತ ಎಂದಿರುವನೇ ಹೊರತು ಕವಿ ಎಂದು ಹೇಳಿಲ್ಲ. ಈ ಕಾರಣಗಳಿಂದ ಸಿಂಗಿರಾಜಪುರಾಣಕರ್ತನು ದಶಗಣದ ಸಿಂಗಿರಾಜನು ಬೇರೆ ಅಲ್ಲ; ಸು. 1500ರಲ್ಲಿದ್ದ ಮತ್ತೊಬ್ಬ ಈಚಿನ ಕವಿಯಾಗಬೇಕು. ದಶಗಣಕ್ಕೆ ಸೇರಿದ ಸಿಂಗಿದೇವಯ್ಯನು ಬಸವನ ಸಮಕಾಲಿ [illegible] ವಚನಗಳನ್ನು ಬರೆದಿದ್ದಾನೆ [ಪುಟ 352).

## ರತ್ನಾಕರ ವರ್ಣಿ

ಭರತೇಶ್ವರ ಚರಿತೆಯ ಪ್ರಕಾಶಕರಾದ ಶ್ರೀಮಾನ್ ಉಗ್ರಾಣ ಮಂಗೇಶರಾಯರೂ ಶತಕತ್ರಯಿಯ ಪ್ರಕಾಶಕರಾದ ಶ್ರೀಮಾನ್ ನ್ಯಾಯತೀರ್ಥ ಶಾಂತಿರಾಜಶಾಸ್ತ್ರಿಗಳೂ ದೇವಚಂದ್ರನ ಹೇಳಿಕೆಯನ್ನು ನಂಬಿ ರತ್ನಾಕರವರ್ಣಿ ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರ ಶತಕ, ತ್ರಿಲೋಕ ಶತಕ ಎಂಬ ಮೂರು ಶತಕಗಳನ್ನೂ ಬರೆದಿದ್ದಾನೆ ಎಂದು ಹೇಳುತ್ತಾರೆ. ಹೀಗೆ ಶತಕತ್ರ

ಯುವೂ ಏಕಕವಿರಚಿತವೆಂಬ ಪ್ರತೀತಿ ಪ್ರಚಾರದಲ್ಲಿದ್ದರೂ ರತ್ನಾಕರವರ್ಣಿಕೃತವಾದ ಅಪರಾಜಿತೇಶ್ವರ ಶತಕ ತ್ರಿಲೋಕ ಶತಕ ಭರತೇಶ್ವರ ಚರಿತೆಗಳಲ್ಲಿ ನಿಯತವಾಗಿ ಬರುವ ಅಪರಾಜಿತೇಶ್ವರ ಮಂದರಸ್ವಾಮಿಗಳ ಸ್ತುತಿಯೂ ಚಿದಂಬರಪುರುಷ, ನಿರಂಜನಸಿದ್ಧ ಎಂಬ ವಿಶೇಷಣಗಳ ಪ್ರಯೋಗವೂ ಶೃಂಗಾರಕವಿ ಹಂಸರಾಜಕೃತವಾದ ರತ್ನಾಕರಾಧೀಶ್ವರ ಶತಕದಲ್ಲಿ ದೊರವುದಿಲ್ಲವಾದುದರಿಂದಲೂ, ರತ್ನಾಕರವರ್ಣಿಯ ಗುರು ಚಾರುಕೀರ್ತಿಯೆಂದೂ ಹಂಸರಾಜನ ಗುರು ದೇವೇಂದ್ರ ಕೀರ್ತಿಯೆಂದೂ ಸ್ಪಷ್ಟವಾಗಿ ಹೇಳಿರುವುದರಿಂದಲೂ ರತ್ನಾಕರವರ್ಣಿ ಹಂಸರಾಜನಿಂದ ಭಿನ್ನನೆಂದು ನಾನು ಬರೆದಿದ್ದೇನೆ [II, 274). ಕವಿಭಿನ್ನತೆಗೆ ನಾನು ಹೇಳಿರುವ ಕಾರಣಗಳಿಗೆ ಮೇಲೆ ಹೇಳಿದ ಪ್ರಕಾಶಕರು ಸರಿಯಾದ ಸಮಾಧಾನವನ್ನು ಹೇಳಿಲ್ಲ. ರತ್ನಾಕರವರ್ಣಿಯ ಗುರು ಮಹೇಂದ್ರಕೀರ್ತಿ ಎಂಬ ದೇವಚಂದ್ರನ ಹೇಳಿಕೆಯನ್ನು ಅವಲಂಬಿಸಿ ಪ್ರಕಾಶಕರು ಮಹೇಂದ್ರಕೀರ್ತಿ, ದೇವೇಂದ್ರಕೀರ್ತಿ ಎಂಬುವು ಪರ್ಯಾಯ ಶಬ್ದಗಳಾದುದರಿಂದ ಒಂದೇ ವ್ಯಕ್ತಿಯನ್ನು ನಿರ್ದೇಶಿಸುತ್ತವೆ ಎಂದು ತಿಳಿದುಕೊಂಡು ಕವಿಗಳು ಅಭಿನ್ನರು ಎನ್ನುತ್ತಾರೆ. ಈ ಹೇಳಿಕೆ ಸಮಂಜಸವಾಗಿಲ್ಲ: ಏಕೆಂದರೆ ರತ್ನಾಕರವರ್ಣಿ ತನ್ನ ಗುರು ಚಾರುಕೀರ್ತಿ ಎಂದು ಕಂಠೋಕ್ತವಾಗಿ ಹೇಳಿಕೊಂಡಿರುವಾಗ ದೇವಚಂದ್ರನ ಹೇಳಿಕೆಯನ್ನು ಹೇಗೆ ನಂಬುವುದು? ಒಂದುವೇಳೆ ನಂಬಿದರೂ ಮಹೇಂದ್ರಕೀರ್ತಿ, ದೇವೇಂದ್ರಕೀರ್ತಿ ಎಂಬುವು ಬೇರೆಬೇರೆ ವ್ಯಕ್ತಿಗಳನ್ನು ಸೂಚಿಸುತ್ತವೆ ಎಂಬುದಕ್ಕೆ ಶಾಸನಗಳಲ್ಲಿಯೂ ಗ್ರಂಥಗಳಲ್ಲಿಯೂ ಎಷ್ಟೋ ಉದಾಹರಣಗಳು ದೊರೆಯುತ್ತವೆ. ಅವು ಪರ್ಯಾಯನಾಮಗಳು ಬೇರೆ ಅಲ್ಲ. ಇದಲ್ಲದೆ ಪ್ರಕಾಶಕರು ಆವ ಪ್ರಮಾಣವನ್ನೂ ತೋರಿಸದೆ ರತ್ನಾಕರವರ್ಣಿಗೆ ಶೃಂಗಾರಕವಿ ಹಂಸರಾಜ ಎಂಬ ಬಿರುದುಂಟು ಎಂದು ಹೇಳಿದ್ದಾರೆ ಶೃಂಗಾರಕವಿ ಎಂಬ ಬಿರುದು ಕೆಲವರು ಕವಿಗಳಿಗುಂಟು. ಅವರ ಅದರೊಂದಿಗೆ ಸೇರಿರುವ ಹಂಸರಾಜ ಎಂಬುದಕ್ಕೆ ಅರ್ಥವಿಲ್ಲ. ಶಬ್ದಮಣಿದರ್ಪಣದ 289ನೆಯ ಸೂತ್ರದ ಕೆಳಗೆ ಕೇಶಿರಾಜನು ಹಂಸರಾಜನೆಂಬ ಒಬ್ಬ ಪೂರ್ವಕವಿಯನ್ನು ಹೇಳಿದ್ದಾನೆ (1, 139). ರತ್ನಾಕರಾಧೀಶ್ವರ ಶತಕ ಕರ್ತನು ತದ್ಭಿನ್ನನೆಂದು ತೋರಿಸುವುದಕ್ಕೆ ಶೃಂಗಾರ ಕವಿ ಎಂಬ ಉಪಪದವು ಸೇರಿಸಿದೆ ಎಂಬುದಕ್ಕೆ ಸಂದೇಹವಿಲ್ಲ ಆದುದರಿಂದ ಹಂಸರಾಜ ಎಂಬುದು ಬೇರೊಬ್ಬ ಕವಿಯ ಹೆಸರು ಎಂದು ಗ್ರಹಿಸಬೇಕು.

ಶ್ರೀಮಾನ್ ಶಾಂತಿರಾಜಶಾಸ್ತ್ರಿಗಳು ರತ್ನಾಕರಾಧೀಶ್ವರಶತಕದ ಅಂತ್ಯದಲ್ಲಿರುವ "ಶ್ರೀಮದ್ದೇವೇಂದ್ರ ಕೀರ್ತಿ" ಇತ್ಯಾದಿ ಗದ್ಯವನ್ನು ಉಳಿದ ಎರಡು ಶತಕಗಳ ಅಂತ್ಯದಲ್ಲಿಯೂ ಮುದ್ರಿಸಿದ್ದಾರೆ. ಇದಕ್ಕೆ ನಾನು ನೋಡಿದ ಕೈಬರ

ಹದ ಪುಸ್ತಕಗಳಲ್ಲಿ ಆಧಾರವಿರುವಂತೆ ತೋರುವುದಿಲ್ಲ. ಅಲ್ಲದೆ ತ್ರಿಲೋಕಶತಕದ ಕೊನೆಯ ಪದ್ಯದಲ್ಲಿ ಆ ಗ್ರಂಥವು ರತ್ನಾಕರಾರ್ಯಕೃತ ಎಂದು ಸ್ಪಷ್ಟವಾಗಿ ಹೇಳಿದೆ. (ಸೃಜಿಸಿದಂ ರತ್ನಾಕರಾರ್ಯಂ). ನಿರಂಜನಸಿದ್ಧ, ಚಿದಂಬರ ಪುರುಷ ಎಂಬ ಮಾತುಗಳನ್ನು ರತ್ನಾಕರವರ್ಣಿ ತನ್ನ ಗುರುವಿಗೆ ವಿಶೇಷಣವಾಗಿ ಹೇಳಿರುವುದರಿಂದ (ಭರತೇಶ್ವರ ಚರಿತೆ, I, 4) ನಿರಂಜನಸಿದ್ಧ ಎಂಬುದು ಕವಿಯ ಬಿರುದು ಎಂದು ನಾನು ಬರೆದಿರುವುದು (II, 274) ತಪ್ಪು.

ಇಷ್ಟರ ಮೇಲೆ ಶತಕತ್ರಯವನ್ನೂ ರತ್ನಾಕರವರ್ಣಿಯೇ ಬರೆದನುಎಂಬುದಕ್ಕೆ ದೇವಚಂದ್ರನ ಹೇಳಿಕೆಯೇ ಪ್ರಮಾಣವು. ಈತನು ಬರೆದಿರುವ ರಾಜಾವಳೀ ಕಥೆಯಲ್ಲಿ ಹಲವು ತಪ್ಪುಗಳು ಸೇರಿರುವುದರಿಂದ ಇದನ್ನು ಸಂಪೂರ್ಣವಾಗಿ ನಂಬುವುದಕ್ಕಾಗುವುದಿಲ್ಲ. ಉದಾಹರಣೆಗಾಗಿ ರತ್ನಾಕರ ವರ್ಣಿಯ ವಿಷಯವಾಗಿಯೇ ದೇವಚಂದ್ರನು ಬರೆದಿರುವ ಒಂದಂಶವನ್ನು ಇಲ್ಲಿ ತಿಳಿಸಬಹುದು. ಅದೇನೆಂದರ ದ್ವಾದಶಾನುಪ್ರೇಕ್ಷೆಯನ್ನು ಬರೆದ ವಿಜಯಣ್ಣನೂ ರತ್ನಾಕರ ವರ್ಣಿಯೂ ಸಮಕಾಲದವರು ಎಂಬುದು (II, 276). ಅವರವರೇ ಹೇಳಿಕೊಂಡಿರುವಂತೆ ವಿಜಯಣ್ಣನು 1448 ರಲ್ಲಿಯೂ ರತ್ನಾಕರವರ್ಣಿ 1557 ರಲ್ಲಿಯೂ ಇದ್ದುದರಿಂದ ದೇವಚಂದ್ರನ ಮೇಲಣ ಬರೆವಣಿಗೆ ತಪ್ಪೆಂಬುದು ಕರತಲಾಮಲಕವು.

## ಲಕ್ಷ್ಮೀಶ

ಜೈಮಿನಿ ಭಾರತ ಕರ್ತನಾದ ಲಕ್ಷ್ಮೀಶನ ಸ್ಥಳ, ಮತ, ಕಾಲ ಇವುಗಳನ್ನು ಕುರಿತು ಕನ್ನಡ ಪತ್ರಿಕೆಗಳಲ್ಲಿ ಬಹಳ ಕಾಲದಿಂದ ಅನೇಕ ವಾಗ್ಯುದ್ಧಗಳು ನಡೆಯುತ್ತಿವೆ. ಈ ಕವಿಯ ಸ್ಥಳವು ಮೈಸೂರು ಸೀಮೆಯ ಕಡೂರು ತಾಲ್ಲೂಕಿನಲ್ಲಿರುವ ದೇವನೂರು ಎಂದು ಬಹು ಜನಗಳ ಅಭಿಪ್ರಾಯವು. ಈ ಊರನ್ನು ಕವಿ ಸುರಪುರ, ಗೀರ್ವಾಣಪುರ ಇತ್ಯಾದಿ ಪರ್ಯಾಯ ನಾಮಗಳಿಂದ ನಿರ್ದೇಶಿಸಿದ್ದಾನೆ. ತನ್ನ ಗ್ರಂಥವನ್ನು ಆ ಊರ ಲಕ್ಷ್ಮೀರಮಣ ದೇವರಿಗೆ ಅರ್ಪಿಸಿದ್ದಾನೆ ಈ ದೇವರ ದೇವಸ್ಥಾನದಲ್ಲಿ ಕವಿಗೆ ಅಗ್ರಮರ್ಯಾದೆ ನಡೆಯುತ್ತಿದೆ ಎಂದೂ ಇವನ ಗ್ರಂಥದ ಕೆಲವು ಭಾಗಗಳನ್ನು ಕೆಲವು ವಿಶೇಷ ಸಮಯಗಳಲ್ಲಿ ದೇವಸ್ಥಾನದಲ್ಲಿ ಪಠಿಸುವ ವಾಡಿಕೆ ಇದೆ ಎಂದೂ ಹೇಳುತ್ತಾರೆ. ಗ್ರಾಮಸ್ಥರು ಈಗಲೂ ಇವನ ಮನೆಯನ್ನು ತೋರಿಸುತ್ತಾರೆ. ಕೆಲವು ವರ್ಷಗಳಿಗೆ ಹಿಂದೆ ಇವನ ಸಂತತಿಯವರು ಈ ಗ್ರಾಮದಲ್ಲಿ ವಾಸಮಾಡಿಕೊಂಡಿದ್ದರು. ಕವಿಗೂ ಈ ಗ್ರಾಮಕ್ಕೂ ಸಂಬಂಧವನ್ನು ತೋರಿಸುವ ಇಷ್ಟು ಅಂಶಗಳಿದ್ದರೂ ಕೆಲವರು ಕವಿಯ ಸ್ಥಳವು ಹೈದರಾಬಾದಿನಲ್ಲಿರುವ ಸುರಪುರವೆಂದು ನಿಶ್ಶಂಕರಾಗಿ ಹೇಳುತ್ತಿದ್ದಾರೆ.

ಕವಿಯ ಮತದ ವಿಷಯದಲ್ಲಿ ಇವನು ಅದ್ವೈತಿಯೋ ಅಥವಾ ಭಾಗವತ ಸಂಪ್ರದಾಯದ ಸ್ಮಾರ್ತನೋ ಆಗಿರಬೇಕೇ ಹೊರತು ಶ್ರೀವೈಷ್ಣವನಲ್ಲ ಎಂದು ಕೆಲವರು ಹೇಳಿದ್ದಾರೆ. ಕೆಲವು ವರ್ಷಗಳಿಗೆ ಹಿಂದೆ ದೇವನೂರಲ್ಲಿ ವಾಸಮಾಡಿಕೊಂಡಿದ್ದರೆಂದು ಹಿಂದೆ ಹೇಳಿದ ಕವಿಯ ಸಂತತಿಯವರು ಶ್ರೀವೈಷ್ಣವರೇ ಆಗಿದ್ದರು. ಶ್ರೀವೈಷ್ಣವರು ಸ್ಮಾರ್ತರನ್ನು ತಮ್ಮ ಪೂರ್ವಿಕರೆಂದು ಎಂದೂ ಭಾವಿಸಲಾರರು. ಕವಿ ಶ್ರೀವೈಷ್ಣವನಲ್ಲ ಎಂಬುದಕ್ಕೆ ಅವನು ಗ್ರಂಥಾದಿಯಲ್ಲಿ ಶಿವ, ಪಾರ್ವತಿ, ಗಣಪತಿ ಇವರುಗಳನ್ನು ಸ್ತುತಿಸಿರುವುದೇ ಸಾಕ್ಷಿ ಎಂದು ಕೆಲವರು ಬರೆದಿದ್ದಾರೆ. ಆದರೆ ಶ್ರೀವೈಷ್ಣವನು ಎಂಬುದರಲ್ಲಿ ಸ್ವಲ್ಪವೂ ಸಂದೇಹಕ್ಕೆ ಆಸ್ಪದವಿಲ್ಲವು. ಇತರ ಕವಿಗಳೂ ಹೀಗೆ ಮಾಡಿರುವುದಕ್ಕೆ ಉದಾಹರಣೆಗಳು ದೊರೆಯುತ್ತವೆ. (1) ಭಾರತಾದಿ ಗ್ರಂಥಗಳನ್ನು ಬರೆದಿರುವ ಲಕ್ಷ್ಮೀಕವಿ (ಪುಟ 15) ಆನೆಕಲ್ಲು ತಾಲ್ಲೂಕಿಗೆ ಸೇರಿದ ಹಾರುಗದ್ದೆಯ ಶ್ರೀವೈಷ್ಣವನು. ಇವನ ಸಂತತಿಯವರು ಈಗಲೂ ಆ ಗ್ರಾಮದ ಚನ್ನಕೇಶವಸ್ವಾಮಿದೇವಸ್ಥಾನದ ಅರ್ಚಕರಾಗಿದ್ದಾರೆ. ರಾಮಾನುಜಾಚಾರ್ಯರ ಶಿಷ್ಯರಾದ ಎಂಬಾರರೆಂಬವರ ಸಂತತಿಯವರು ತನಗೆ ಗುರುಗಳು ಎಂಬುದರಿಂದ ಕವಿ ಶ್ರೀವೈಷ್ಣವನು ಎಂಬುದಕ್ಕೆ ಯಾವ ಸಂದೇಹವೂ ಇಲ್ಲ. ಆದರೂ ಇವನು ತನ್ನ ಗ್ರಂಥಗಳಲ್ಲಿ ಶಿವಗಣಪತಿಗಳನ್ನು ಸ್ತುತಿಸಿದ್ದಾನೆ. (2) ಆನಂದರಾಮಾಯಣವನ್ನು ಬರೆದ ತಿಮ್ಮಾಮಾತ್ಯನು (ಪುಟ 74) ಶ್ರೀವೈಷ್ಣವನು. ಇವನ ಸಂತತಿಯವರು ಬೆಂಗಳೂರಿನ ಪೂರ್ವದಿಕ್ಕಿಗೆ ಸುಮಾರು 6 ಮೈಲಿ ದೂರದಲ್ಲಿರುವ ಆಗರವೆಂಬ ಗ್ರಾಮದಲ್ಲಿ ಅರ್ಚಕರಾಗಿದ್ದಾರೆ. ಈ ಕವಿಯೂ ಶಿವಗಣಪತಿಗಳನ್ನು ಸ್ತುತಿಸಿದ್ದಾನೆ.

ದೇವನೂರು ಸುರಪುರ ಎಂಬುದಕ್ಕೆ ಸರಿಯಾದ ನಾಮಾಂತರವಲ್ಲ ಎಂದು ಭಾವಿಸಿ ಕೆಲವರು ಬೇರೆ ಸ್ಥಳವನ್ನು ಹುಡುಕಲು ಹೊರಟು ಹೈದರಾಬಾದಿನಲ್ಲಿಯ ಸುರಪುರವೇ ಆ ಸ್ಥಳವೆಂದು ನಿಶ್ಚಯಿಸಿದ್ದಾರೆ. ಆದರೆ ತಿಮ್ಮಾಮಾತ್ಯನು ಸಾದನಹಳ್ಳಿಯನ್ನು ಸಹದೇವಪುರವೆಂದೂ ಲಕ್ಷ್ಮೀಕವಿ ಹಾರುಗದ್ದೆಯನ್ನು ಖಗಪುರವೆಂದೂ ಭಾಷಾಂತರ ಮಾಡಿರುವುದನ್ನು ನೋಡಿದರೆ ಅವರು ಆಶ್ಚರ್ಯಪಡದೆ ಇರಲಾರರು. ಈ ರೂಪಗಳೊಡನೆ ಹೋಲಿಸಿದರೆ ದೇವನೂರೆಂಬುದು ಸುರಪುರಕ್ಕೆ ಬಹಳ ಅನುರೂಪವಾದ ಭಾಷಾಂತರವೆನ್ನಬಹುದು.

ಲಕ್ಷ್ಮೀಶನಕಾಲದ ವಿಷಯದಲ್ಲಿ ಭಿನ್ನಾಭಿಪ್ರಾಯಗಳಿವೆ. ಆದರೂ ಅವನು 1415 ರಲ್ಲಿದ್ದನೆಂದು ಬಹುಮಂದಿ ಅಭಿಪ್ರಾಯಪಡುತ್ತಾರೆ. ಈ ಕವಿ 17ನೆಯ ಶತಮಾನದ ಅಂತ್ಯಭಾಗದಲ್ಲಿದ್ದನೆಂದು ನಾನು ಬರೆದಿದ್ದೇನೆ (II, 523). ಇವನು 1415ರಲ್ಲಿ ಇದ್ದ ಪಕ್ಷದಲ್ಲಿ 15, 16, 17 ಈ ಶತಮಾನಗಳಲ್ಲಿದ್ದ ಒಬ್ಬ

ಕವಿಯಾದರೂ ಈತನ ಹೆಸರನ್ನು ಹೇಳದಿರುವುದಕ್ಕೆ ಕಾರಣವೇನೋ ಗೊತ್ತಾಗುವುದಿಲ್ಲ; ಭಾರತ ರಾಮಾಯಣ ಭಾಗವತಗಳನ್ನು ಬರೆದ ಸ್ಮಾರ್ತ ಕವಿಗಳೂ ಸ್ಮಾರ್ತನಾದ ರುದ್ರಭಟ್ಟನನ್ನು ಕೂಡ ಸ್ತುತಿಸುವ ಶ್ರೀವೈಷ್ಣವಕವಿ ಚಿಕ್ಕುಪಾಧ್ಯಾಯನೂ ಸಹ ಇವನನ್ನು ಸ್ಮರಿಸದೆ ಬಿಟ್ಟಿರುವುದು ಆಶ್ಚರ್ಯಕರವೇ ಸರಿ. ಇವನನ್ನು ಸ್ತುತಿಸುವ ಕವಿಗಳೆಲ್ಲಾ 18ನೆಯ ಶತಮಾನದವರು. ಈ ಕಾರಣಗಳಿಂದ ನಾನು ಈ ಕವಿಗೆ ಮೇಲೆ ಹೇಳಿದ ಕಾಲವನ್ನು ಕೊಟ್ಟೆನು. ಜನರಲ್ಲಿ ಸಾಮಾನ್ಯವಾಗಿರುವ ಪ್ರತೀತಿಯೂ ಹೀಗೆಯೇ ಇದೆ. ಕೆಲವರು ಜೈಮಿನಿ ಭಾರತಕ್ಕೂ ವಿರೂಪಾಕ್ಷ ಪಂಡಿತ (1584) ಚೆನ್ನಬಸವ ಪುರಾಣಕ್ಕೂ ಇರುವ ಕೆಲವು ಸಾಮ್ಯಗಳನ್ನು ದೊಡ್ಡವು ಮಾಡಿ ಲಕ್ಷ್ಮೀಶನು ವಿರೂಪಾಕ್ಷ ಪಂಡಿತನಿಗೆ ಹಿಂದೆ ಇದ್ದನು ಎಂದು ಊಹಿಸಿದ್ದಾರೆ. ಆದರೆ ಈ ಸಾಮ್ಯಗಳಿಗೆ ಎರಡು ವಿಧವಾಗಿಯೂ ಅರ್ಥಮಾಡಬಹುದಾದುದರಿಂದ ಇವು ಲಕ್ಷ್ಮೀಶನ ಕಾಲವನ್ನು ನಿಸ್ಸಂದೇಹವಾಗಿ ನಿರ್ಣಯಿಸುವುದಕ್ಕೆ ಸಹಕಾರಿಯಾಗಲಾರವು.

ಕರ್ನಾಟಕ ಕುವಲಯಾನಂದವನ್ನು ಬರೆದಿರುವ ಜಾಯೇಂದ್ರನು ಜೈಮಿನಿಭಾರತದಿಂದ ಪದ್ಯಗಳನ್ನು ಉದಾಹರಿಸಿದ್ದಾನೆ. ಇವನ ಕಾಲವು 1734 ಎಂದು ನಾನು ಬರೆದಿದ್ದೇನೆ (ಪುಟ 38). ಆದರೆ ಶ್ರೀಮಾನ್ ಮಂಜೇಶ್ವರದ ಎಂ. ಗೋವಿಂದಪೈ ತಾವು ಗುಣಿಸಿ ನೋಡಿದುದರಲ್ಲಿ ಜಾಯೇಂದ್ರನ ಕಾಲವು 1674 ಕ್ಕೆ ಸರಿಹೋಗುತ್ತದೆ ಎಂದು ನನಗೆ ಬರೆದಿದ್ದಾರೆ. ಇವರು ಗುಣಿಸಿರುವುದು ಸರಿಯಾಗಿದ್ದ ಪಕ್ಷದಲ್ಲಿ ಲಕ್ಷ್ಮೀಶನ ಕಾಲವು ಸು. 1650 ಎನ್ನಬಹುದು.

ಲಕ್ಷ್ಮೀಶನ ವಿಷಯವಾಗಿ ತನ್ನ ಮತಕ್ಕೆ ವಿರೋಧವಾದ ಗ್ರಂಥವನ್ನು ಆರೂ ಪರಿವರ್ತಿಸುವುದಿಲ್ಲ ಎಂಬ ಕನ್ನಡ ಪರಿಷತ್ಪತ್ರಿಕೆಯಲ್ಲಿಯ (V, 5) ಉಕ್ತಿಯ ಸಂಬಂಧವಾಗಿ ಕನ್ನಡ ಸಾಹಿತ್ಯದಲ್ಲಿ ಗಮನಿಸತಕ್ಕ ಒಂದು ವಿಶೇಷಾಂಶವನ್ನು ಇಲ್ಲಿ ಪ್ರಸಂಗವಶಾತ್ ತಿಳಿಸಬಹುದು, ಜೈನರು ತಮ್ಮ ಹಿಂದು ಮಿತ್ರರಿಗೋಸ್ಕರ ತಾವು ಹಿಂದುಗಳೋ ಎಂಬಂತೆಯೂ ಹಿಂದುಗಳು ತಮ್ಮ ಜೈನ ಮಿತ್ರರಿಗೋಸ್ಕರ ತಾವು ಜೈನರೋ ಎಂಬಂತೆಯೂ ಗ್ರಂಥಗಳನ್ನು ಬರೆದಿರುತ್ತಾರೆ. ಇದಕ್ಕೆ ಒಂದೊಂದುದಾಹರಣವನ್ನು ಕೊಡುತ್ತೇನೆ—ಜೈನನಾದ ಪದ್ಮರಸನು (II, 314) ಬಹುಶಃ ಒಬ್ಬ ಹಿಂದುಮಿತ್ರನಿಗಾಗಿ ಶೃಂಗಾರ ಕಥೆ ಎಂಬ ಗ್ರಂಥವನ್ನು 1599 ರಲ್ಲಿ ಬರೆದಿದ್ದಾನೆ. ಗ್ರಂಥಾದಿಯಲ್ಲಿ ಕವಿ ಹಿಂದುವಾಗಿದ್ದರೆ ಹೇಗೋ ಹಾಗೆ ಸದಾಶಿವ, ಗಣೇಶ ಇವರ ಸ್ತುತಿಯನ್ನು ಮಾಡಿದ್ದಾನೆ. ಹಾಗೆಯೇ ಹಿಂದುವಾದ ಪಟ್ಟಾಭಿರಾಮನು (ಪುಟ 25) ಪದುಮನೆಂಬ ಜೈನಮಿತ್ರನಿಗಾಗಿ ರತ್ನಶೇಖರಚರಿತೆ ಎಂಬ ಜೈನ ಗ್ರಂಥವನ್ನು ಸು. 1725 ರಲ್ಲಿ ಬರೆದಿದ್ದಾನೆ. ಗ್ರಂಥವು ಪುಷ್ಪಾಂಜಲಿ ಎಂಬ ಜೈನವ್ರತದ ಆಚರಣೆಗೆ ಸಂ

ಬಂಧಿಸಿದ ಒಂದು ಕಥೆಯನ್ನು ಹೇಳುತ್ತದೆ. ಕವಿ ಜೈನನಾಗಿದ್ದರೆ ಹೇಗೋ ಹಾಗೆ ಗ್ರಂಥಾದಿಯಲ್ಲಿ ಜಿನ, ಸಿದ್ಧಾದಿಗಳು ಇವರುಗಳ ಸ್ತುತಿಯನ್ನು ಮಾಡಿದ್ದಾನೆ.

## ಪಂಡಿತಾರಾಧ್ಯ, ಶ್ರೀಪತಿಪಂಡಿತ.

ಆರಾಧ್ಯಚಾರಿತ್ರ ಮೊದಲಾದ ಗ್ರಂಥಗಳ ಕಥಾನಾಯಕನಾದ ಪಂಡಿತಾರಾಧ್ಯನು (I. 213) ವೀರಶೈವ ಮತಸ್ಥಾಪಕರಾದ ಪಂಚಾಚಾರ್ಯರಲ್ಲಿ ಒಬ್ಬನಾದ ಪಂಡಿತಾರಾಧ್ಯನಲ್ಲ, ಆತನ ವಂಶೋದ್ಭವನಾದ ಬೇರೊಬ್ಬ ಅರ್ವಾಚೀನಪಂಡಿತಾರಾಧ್ಯನೆಂದೂ ಶ್ರೀಪತಿ ಪಂಡಿತನು ಬಸವನ ಹೆಸರನ್ನು ಎತ್ತಿಲ್ಲವಾದುದರಿಂದ ಅವನಿಗಿಂತ ಬಹಳ ಹಿಂದೆ ಇದ್ದನೆಂದೂ[1] ಕೆಲವರು ವೀರಶೈವಮಿತ್ರರು ನನಗೆ ಬರೆದಿದ್ದಾರೆ. ಈ ಹೇಳಿಕೆಗೆ ಸರಿಯಾದ ಆಧಾರವು ನನಗೆ ದೊರೆತಿಲ್ಲ; ದೊರೆತ ಕೂಡಲೆ ನಾನು ಬರೆದಿರುವುದನ್ನು ತಿದ್ದುವುದಕ್ಕೆ ಸಿದ್ಧನಾಗಿದ್ದೇನೆ. ಪ್ರಾಚೀನಪಂಡಿತಾರಾಧ್ಯನ ಚರಿತ್ರವು ಎಲ್ಲಿ ಹೇಳಿದೆಯೋ ಅವನ ಚರಿತ್ರಕ್ಕೂ ಅರ್ವಾಚೀನ ಪಂಡಿತಾರಾಧ್ಯನ ಚರಿತ್ರಕ್ಕೂ ಇರುವ ವ್ಯತ್ಯಾಸಗಳಾವುವೋ ತಿಳಿಯಬೇಕಾಗಿದೆ. ನನಗೆ ತಿಳಿದ ಮಟ್ಟಿಗೆ ವೀರಶೈವ ಗ್ರಂಥಗಳಲ್ಲಿ ಒಬ್ಬ ಪಂಡಿತಾರಾಧ್ಯನೇ ಉಕ್ತನಾಗಿರುವನು. ಒಬ್ಬ ಪ್ರಾಚೀನ ಪಂಡಿತಾರಾಧ್ಯನು ಇದ್ದಿದ್ದ ಪಕ್ಷದಲ್ಲಿ ಶ್ರೀಪತಿ ಪಂಡಿತನು ತನ್ನ ಶ್ರೀಕರಭಾಷ್ಯದ ಅವತರಣಿಕೆಯಲ್ಲಿ ರೇವಣ, ಮರುಳಸಿದ್ಧ, ಏಕೋರಾಮ ಎಂಬ ಮೂವರು ಆಚಾರ್ಯರುಗಳನ್ನು ಮಾತ್ರ ಸ್ತುತಿಸಿ ನಾಲ್ಕನೆಯ ಆಚಾರ್ಯನಾದ ಇವನ ಹೆಸರನ್ನು ಬಿಡುವುದಕ್ಕೆ ಕಾರಣವೇನಿರಬಹುದೋ ತಿಳಿವುದಿಲ್ಲ. ಪಂಡಿತಾರಾಧ್ಯನು ತೆಲುಗಿನಲ್ಲಿ ತಾನು ಬರೆದಿರುವ ಶಿವತತ್ತ್ವಸಾರದಲ್ಲಿ ಶ್ರೀಪತಿ ಪಂಡಿತನನ್ನು ಸ್ತುತಿಸಿದ್ದಾನೆ. ಆದುದರಿಂದ ಪಂಡಿತಾರಾಧ್ಯನು ಶ್ರೀಪತಿ ಪಂಡಿತನಿಗೆ ವಯಸ್ಸಿನಲ್ಲಿ ಚಿಕ್ಕಸಮಕಾಲಿಕನಾಗಿದ್ದನೆಂದೂ ಈ ಕಾರಣದಿಂದಲೇ ಅವನ ಹೆಸರು ಶ್ರೀಕರಭಾಷ್ಯದಲ್ಲಿ ಹೇಳಿಲ್ಲವೆಂದೂ ನಾನು ಭಾವಿಸುತ್ತೇನೆ. ಪಂಡಿತಾರಾಧ್ಯನು ಬಸವನಿಗಿಂತ ಎರಡು ವರ್ಷ ಊಚೆ ಗತಿಸಿದನೆಂದು ತೆಲುಗು ಪಂಡಿತರುಗಳು ಬರೆದಿದ್ದಾರೆ.

ಶ್ರೀಪತಿ ಪಂಡಿತನು ಬಸವನ ಹೆಸರನ್ನು ಎತ್ತದಮಾತ್ರಕ್ಕೆ ಅವನು ಬಸವನಿಗಿಂತ ಬಹಳ ಕಾಲ ಹಿಂದೆ ಇದ್ದನೆಂದು ನಿಶ್ಚಯಿಸಿಬಿಡುವುದು ಯುಕ್ತವಲ್ಲವೆಂದು ನನಗೆ ತೋರುತ್ತದೆ. ಹಾಗೆ ನೋಡಿದರೆ ಹರೀಶ್ವರ, ರಾಘವಾಂಕ,

---

1. ವೀರಶೈವ ಕರದರ್ಪಣದಲ್ಲಿ ಶ್ರೀಪತಿ ಪಂಡಿತನು ಬಸವನಿಗಿಂತ 200 ವರ್ಷ ಹಿಂದೆ ಇದ್ದನೆಂದು ಹೇಳಿದೆ.

ಕೆರೆಯಪದ್ಮರಸ, ನಿಜಗುಣಶಿವಯೋಗಿ ಇವರುಗಳು ಬಸವನ ಹೆಸರನ್ನು ಹೇಳಿಲ್ಲ; ಆದರೂ ಇವರೆಲ್ಲಾ ಬಸವನಕಾಲಕ್ಕೆ ಈಚೆಯವರು ಎಂಬುದರಲ್ಲಿ ಅವಸಂದೇಹವೂ ಇಲ್ಲ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣದ ಪ್ರಕಾಶಕರಾದ ಶ್ರೀಮಾನ್ ಎ. ಪ್ರಭಾಕರ ಶಾಸ್ತ್ರಿಗಳು ಆ ಗ್ರಂಥದ ಅವತರಣಿಕೆಯಲ್ಲಿ ಶ್ರೀಪತಿ ಪಂಡಿತನು ಚಾಳುಕ್ಯರಾಜನಾದ 6ನೆಯ ವಿಕ್ರಮಾದಿತ್ಯನ (1076–1126) ದಂಡನಾಯಕ ಅನಂತಪಾಲನ ಗುರು ಎಂದು ಬರೆದಿದ್ದಾರೆ. ಹೀಗಿದ್ದ ಪಕ್ಷದಲ್ಲಿ ಶ್ರೀಪತಿಪಂಡಿತನು ಬಸವನಿಗೆ ವಯಸ್ಸಿನಲ್ಲಿ ದೊಡ್ಡ ಸಮಕಾಲಿಕನೆಂದು ಹೇಳಬಹುದು. ಭೀಮಕವಿಯ ಬಸವನ ಪುರಾಣದ 9, 58 ಈ ಸಂಧಿಗಳಿಂದಲೂ ಈ ವಿಷಯವು ಹೊರಪಡುವಂತೆ ತೋರುತ್ತದೆ.

## ಗೊಮ್ಮಟೇಶ್ವರ ಪ್ರತಿಷ್ಠೆ.

ಶ್ರವಣ ಬೆಳ್ಗೊಳದಲ್ಲಿ ನಡೆದ ಗೊಮ್ಮಟೇಶ್ವರ ಪ್ರತಿಷ್ಠೆಯ (I, 46) ಕಾಲದ ವಿಷಯದಲ್ಲಿ ಒಂದೆರಡು ಮಾತುಗಳನ್ನು ಹೇಳಿ ಈ ಅವತರಣಿಕೆಯನ್ನು ಮುಗಿಸುತ್ತೇನೆ. ಗಂಗರಾಜನಾದ ರಾಚಮಲ್ಲನ ಮಂತ್ರಿ ಚಾಮುಂಡರಾಯನು ಶ್ರವಣಬೆಳ್ಗೊಳದಲ್ಲಿ ನಡಸಿದ ಗೊಮ್ಮಟೇಶ್ವರ ಪ್ರತಿಷ್ಠೆ ಸುಮಾರು 983 ರಲ್ಲಿ ಆಗಿರಬಹುದೆಂದು ಗತಿಸಿದ ಮೆ|| ರೈಸ್ ಅಭಿಪ್ರಾಯ ಪಟ್ಟಿದ್ದರು. ಆದರೆ 16ನೆಯ ಶತಮಾನದ ಮಧ್ಯಭಾಗದಲ್ಲಿ ಹುಟ್ಟಿದ ಭುಜಬಲಿಶತಕವೆಂಬ ಸಂಸ್ಕೃತ ಗ್ರಂಥದ ಒಂದು ಪದ್ಯದಲ್ಲಿಯ ಕಲ್ಕ್ಯಬ್ದ 600 (ಕಲ್ಕಿಶಕದ 600) ಎಂಬ ಪಾಠವನ್ನು ಅವಲಂಬಿಸಿ ಡಾಕ್ಟರ್ ಶಾಮಶಾಸ್ತ್ರಿಗಳು ಗೊಮ್ಮಟೇಶ್ವರ ಪ್ರತಿಷ್ಠೆ 1029ರಲ್ಲಿ ನಡೆಯಿತೆಂದು ನಿರ್ಧರಿಸಿದ್ದಾರೆ (1923ನೆಯ ಶಾಸನದ ಇಲಾಖಾ ವರದಿ ಪುಟಗಳು 16, 30). ಈ ವರ್ಷವನ್ನು ಅಂಗೀಕರಿಸುವುದರಲ್ಲಿ ಕೆಲವು ಕಷ್ಟಗಳಿವೆ. ಆ ಕಾಲದಲ್ಲಿ ಗಂಗರ ಆಳಿಕೆ ನಿಂತು ಹೋಗಿ ಚೋಳರು ಮೈಸೂರು ಸೀಮೆಯನ್ನು ಆಳುತ್ತಿದ್ದರು. ಆದುದರಿಂದ ಈ ಪ್ರತಿಷ್ಠೆ ರಾಚಮಲ್ಲನ ಆಳಿಕೆಯಲ್ಲಿ (974–984) ನಡೆಯಿತೆಂದು ಜೈನರಲ್ಲಿ ಬಹಳ ಮಟ್ಟಿಗೆ ಪ್ರಚಾರದಲ್ಲಿರುವ ಪ್ರತೀತಿಗೆ ಆಸ್ಪದವೇ ಇಲ್ಲದಂತಾಗುವುದು. ನಾನು ನೋಡಿದ ಭುಜಬಲಿಶತಕದ ಹಲವು ಕೈಬರಹದ ಪ್ರತಿಗಳಲ್ಲಿ ಕಲ್ಯಬ್ದ ಎಂಬ ಪಾಠ ಎಡೆಯೇ ಹೊರತು ಕಲ್ಕ್ಯಬ್ದ ಎಂದಿಲ್ಲ. ಕವಿಚರಿತೆಗಾಗಿ ನಾನು 2000 ಕ್ಕಿಂತಲೂ ಹೆಚ್ಚಾದ ಓಲೆಯ ಪುಸ್ತಕಗಳನ್ನು ಪರೀಕ್ಷಿಸಿರುವೆನು. ಒಂದರಲ್ಲಿಯಾದರೂ ಕಲ್ಕಿಶಕವು ಹೇಳಿಲ್ಲ. ಅನಂತ ಕವಿಯ ಬೆಳ್ಗೊಳದ ಗೊಮ್ಮಟೇಶ್ವರ ಚರಿತೆಯ

> ಕಲ್ಯಬ್ದ ಷಟ್ಛತವಿನುತ ವಿಭವ ಚೈತ್ರ । ದಲ್ಲಿಯ ಶುಕ್ಲಪಂಚಮಿಯ ।
> ಮಲ್ಲಿಯ ರವಿವಾರ ಕುಂಭಲಗ್ನದಿ ಜಿನ । ವಲ್ಲಭಗಾಯ್ತು ಪ್ರತಿಷ್ಠೆ ||

ಎಂಬ ಪದ್ಯದಲ್ಲಿಯೂ (ಪುಟ 143) ಕಲಿ 600 ಎಂದೇ ಹೇಳಿದೆ. ಶ್ರವಣ ಬೆಳ್ಗೊಳದ ಸ್ಥಲ ಪುರಾಣದಲ್ಲಿ ಈ ವಿಷಯವಾಗಿ ಹೀಗೆ ಬರೆದಿದೆ :—

ವರ್ಧಮಾನ ಸ್ವಾಮಿ ಮುಕ್ತಿಗೆ ಸಂದು 605 ವರ್ಷಕ್ಕೆ ಕಲಿಕಾಲವು ಪ್ರಾರಂಭವಾಯ್ತು. ಈ ಕಲಿ ಕಾಲವು 610 ವರ್ಷ ಸಂದ ವಿಭವ ಸಂವತ್ಸರದ ಚೈತ್ರ ಮಾಸದಲ್ಲಿ ಪ್ರತಿಷ್ಠೆಯನ್ನು ಮಾಡಿ ಚಾಮುಂಡರಾಯನು ಮುಂದಕ್ಕೆ ಪ್ರಯಾಣ ತೆರಳಿದನು.

ಇದರಿಂದ ಕ್ರಿಸ್ತಪೂರ್ವ 2502ಕ್ಕೆ ಸರಿಯಾದ ಕಲಿಯುಗದ 600ನೆಯ ವರ್ಷವು ಪ್ರತಿಷ್ಠೆಯ ಕಾಲವೆಂದು ಐತಿಹ್ಯವಿರುವಂತೆ ತಿಳಿಯಬರುತ್ತದೆ. ಗೊಮ್ಮಟೇಶ್ವರ ಪ್ರತಿಮೆ ರಾಮ, ರಾವಣ, ಮಂಡೋದರಿ ಇವರಿಂದ ಪೂಜಿಸಲ್ಪಡುತ್ತಿದ್ದಿತು ಎಂಬ ಕಥೆಗಳಿಗೆ ಅನುಸಾರವಾಗಿ ಅದರ ಪ್ರತಿಷ್ಠೆಗೆ ಈ ಪ್ರಾಚೀನತೆಯನ್ನು ಜನರು ಕಲ್ಪಿಸಿರಬೇಕು. ಇಂಥ ಕಲ್ಪನೆಗೆ ಬಿಜ್ಜಳನ ಮಂತ್ರಿಯಾದ ಬಸವನು ಶಕ 707ರಲ್ಲಿ ಗತಿಸಿದನೆಂದು ವೀರಶೈವ ಗ್ರಂಥಗಳಲ್ಲಿ ಹೇಳಿರುವುದು (I. 175) ಒಂದು ಉದಾಹರಣವಾಗಿದೆ. ಇದಲ್ಲದೆ ಗೊಮ್ಮಟೇಶ್ವರ ಬಿಂಬವು ಅಜಿತ ಪುರಾಣದ ಕಾಲಕ್ಕಿಂತ (993) ಹಿಂದೆಯೇ ಇದ್ದಿತು ಎಂಬುದಕ್ಕೆ ಸರಿಯಾದ ಆಧಾರವಿದೆ. ಆ ಪುರಾಣದ 1ನೆಯ ಆಶ್ವಾಸದ 61ನೆಯದಾದ

ಉನ್ನತ ಕುಕ್ಕುಟೇಶ್ವರ ಜಿನೇಶ್ವರನಂ ಜಿನ ಭಕ್ತಿಪೋಗಿ ಕಾ।
ಣ್ಬನ್ನೆಗ ಮನ್ನಮಂಬಿಸುಟು ಪರ್ವತಮಂ ಪರಿದೇಱಿ ತಜ್ಜಿನಾ ॥
ಸನ್ನದೊಳತ್ತಿಮಬ್ಬೆಗೆ ಪಥಶ್ರಮಮಾಱಿಲ ಕಾಲವೃಷ್ಟಿಯಾ।
ಯ್ತೆನ್ನದೊ ದೇವಭಕ್ತಿಗದು ಚೋದ್ಯಮೆ ಕೊಳ್ಳವೆ ಪುಷ್ಪವೃಷ್ಟಿಗಳ್ ॥

ಎಂಬ ಪದ್ಯದಲ್ಲಿ[1]

ರನ್ನನ ಪೋಷಕಿಯಾದ ಅತ್ತಿಮಬ್ಬೆ ಕುಕ್ಕುಟೇಶ್ವರ ದೇವರ ಎಂದರೆ ಗೊಮ್ಮಟೇಶ್ವರ ದೇವರ ದರ್ಶನಕ್ಕಾಗಿ ಬೆಟ್ಟವನ್ನು ಹತ್ತಿದಳು ಎಂದು ಹೇಳಿದೆ. ಶ್ರವಣ ಬೆಳ್ಗೊಳದ 234, 335, 349 ಈ ಶಾಸನಗಳಲ್ಲಿ ಉತ್ತರ ದೇಶದ ಪೌದನ ಪುರದಲ್ಲಿಯ ಕುಕ್ಕುಟೇಶ್ವರನಿಂದ ಬೇರ್ಪಡಿಸುವುದಕ್ಕಾಗಿ ಗೊಮ್ಮಟೇಶ್ವರನಿಗೆ ದಕ್ಷಿಣ ಕುಕ್ಕುಟೇಶ್ವರ ಎಂಬ ಹೆಸರು ಹೇಳಿದ್ದರೂ ಅದೇ ಶ್ರವಣ ಬೆಳ್ಗೊಳದ 397 ಮೊದಲಾದ ಶಾಸನಗಳಲ್ಲಿ ದಕ್ಷಿಣ ಎಂಬ ಉಪಪದವಿಲ್ಲದೆ ಸುಮ್ಮನೆ ಕುಕ್ಕುಟೇಶ್ವರ ಎಂಬ ಹೆಸರು ಹೇಳಿದೆ. ಅಲ್ಲದೆ ಪರ್ವತವನ್ನು ಹೇಳಿರುವುದರಿಂದ ಅಜಿತಪುರಾಣದಲ್ಲಿ ಹೇಳಿರುವ ಕುಕ್ಕುಟೇಶ್ವರನು ಶ್ರವಣ

1 ಈ ಪದ್ಯವನ್ನು ಮಂಜೇಶ್ವರದ ಶ್ರೀಮಾನ್ ಎಂ. ಗೋವಿಂದಪೈ ನನ್ನ ಅವಗಾಹನೆಗೆ ತಂದರು.

ಬೆಳ್ಗೊಳದ ಗೊಮ್ಮಟೇಶ್ವರನೇ ಎಂಬುದರಲ್ಲಿ ಸಂದೇಹವಿಲ್ಲ: ಏಕೆಂದರೆ ಪೌದನಪುರದ ಬಿಂಬವು ಬೆಟ್ಟದ ಮೇಲೆ ಇದ್ದಂತೆ ತಿಳಿವುದಿಲ್ಲ ; ಮತ್ತು ಅದು ಚಾಮುಂಡರಾಯನ ಕಾಲದಲ್ಲಿಯೇ ಅಗೋಚರವಾಯ್ತು ಎಂದು ತಿಳಿಯುತ್ತದೆ (ಶ್ರ ಬೆ. 234). ಈ ಸಂದರ್ಭಗಳನ್ನೆಲ್ಲಾ ನೋಡಿದರೆ ಗೊಮ್ಮಟೇಶ್ವರ ಪ್ರತಿಷ್ಠೆ 1029ರಲ್ಲಿ ನಡೆಯಿತೆಂಬ ಹೇಳಿಕೆ ಸರಿಯಲ್ಲವೆಂದು ತೋರುತ್ತದೆ.

## ಉಪಸಂಹಾರ

ಕರ್ಣಾಟಕ ಕವಿಚರಿತೆಯಲ್ಲಿ ಹಲವು ಕೊರತೆಗಳಿವೆ ಎಂಬುದನ್ನು ನಾನು ಚೆನ್ನಾಗಿ ಬಲ್ಲೆನು. ಈಗ ತಾನೆ ಸ್ವಲ್ಪ ಕಾಲಕ್ಕೆ ಹಿಂದೆ ಮಾರಮರಸನೆಂಬ ಕವಿಯಿಂದ 1199ರಲ್ಲಿ ರಚಿತವಾದ ಒಂದು ಹಂಪೆಯ ಶಾಸನವು (ದಕ್ಷಿಣ ಹಿಂದೂ ದೇಶದ ಶಾಸನಗಳು IV, ಸಂಖ್ಯೆ 260) ನನ್ನ ದೃಷ್ಟಿಗೆ ಗೋಚರವಾಯಿತು. ಪ್ರಸಿದ್ಧ ಕವಿಯಾದ ಮಧುರನಿಂದ 1410ರಲ್ಲಿ ರಚಿತವಾದ ಅದೇ ಸ್ಥಳದ ಮತ್ತೊಂದು ಶಾಸನವು (ಅದೇ, ಸಂಖ್ಯೆ 267) ಈ ಸಂಪುಟದ 376-378 ಪುಟಗಳಲ್ಲಿ ಸ್ವಲ್ಪಮಟ್ಟಿಗೆ ಮಾತ್ರ ವಿಚಾರ ಮಾಡಲ್ಪಟ್ಟಿದೆ. ಮೈಸೂರು ತುಮಕೂರು ಡಿಸ್ಟ್ರಿಕ್ಟುಗಳಲ್ಲಿ ಕೆಲವರಲ್ಲಿ ಪುಸ್ತಕ ಸಂಗ್ರಹಗಳಿವೆ ಎಂದೂ ಅವುಗಳಲ್ಲಿ ಕವಿಚರಿತೆಯಲ್ಲಿಲ್ಲದ ಹಲವು ಗ್ರಂಥಗಳಿವೆ ಎಂದೂ ಕೇಳಿದ್ದೇನೆ ಆದರೆ ಅಲ್ಲಿಗೆ ಹೋಗಿ ಆ ಪುಸ್ತಕ ಸಂಗ್ರಹಗಳನ್ನು ಪರೀಕ್ಷಿಸಲು ಅನುಕೂಲಿಸಲಿಲ್ಲ. ಕೆಲವರು ಮಿತ್ರರು ಒಬ್ಬಿಬ್ಬರು ಕವಿಗಳ ವಿಷಯವಾಗಿ ಕೆಲವಂಶಗಳನ್ನು ಈಗ ಬರೆದು ಕಳುಹಿಸಿದ್ದಾರೆ ಇವುಗಳನ್ನು ಸೇರಿಸಲು ಸಾಧ್ಯವಿಲ್ಲ. ಇನ್ನು ಕೆಲವರು ಮಿತ್ರರು ಇಂಥಿಂಥ ಜನರಲ್ಲಿ ಇಂಥಿಂಥ ಅಪೂರ್ವವಾದ ಪುಸ್ತಕಗಳಿವೆ ಎಂದು ಹೇಳಿದುದರ ಮೇಲೆ ಅವುಗಳ ಅವಲೋಕನಕ್ಕಾದರೂ ಅವಕಾಶವನ್ನು ಪಡೆಯಬೇಕೆಂದು ಮಾಡಿದ ಪ್ರಯತ್ನಗಳು ಫಲಿಸಲಿಲ್ಲ. ದ್ವಿತೀಯ ಸಂಪುಟದ ಅವತರಣಿಕೆಯಲ್ಲಿ (ಪುಟ 30) ನಾನು ಹೇಳಿರುವಂತೆ ಕೈ ಬರಹದ ಪುಸ್ತಕಗಳನ್ನು ಇಟ್ಟುಕೊಂಡಿರುವವರಲ್ಲಿ ಕೆಲವರು ಅವುಗಳನ್ನು ಇತರರಿಗೆ ಒಂದೆರಡು ದಿವಸಗಳ ಮಟ್ಟಿಗಾದರೂ ಕೂಡ ಕೊಡಲು ಸಮ್ಮತಿಸುವುದಿಲ್ಲ; ಇನ್ನು ಕೆಲವರು ಅವುಗಳನ್ನು ತೋರಿಸಲಿಕ್ಕೂ ಹಿಂದೆಗೆಯುತ್ತಾರೆ; ಮತ್ತೆ ಕೆಲವರು ತಮ್ಮಲ್ಲಿ ಪುಸ್ತಕಗಳೇ ಇಲ್ಲ ಎಂದು ಬಿಡುತ್ತಾರೆ. ಈ ಶೋಚನೀಯಾವಸ್ಥೆ ಎಂದು ಪರಿಹಾರವಾಗುವುದೋ ತಿಳಿಯಲಿಲ್ಲ. ಕೊರತೆಗಳಿವೆ ಎಂದು ತಿಳಿದೂ ಈ ಗ್ರಂಥವನ್ನು ನನ್ನ ಕನ್ನಡಿಗ ಮಿತ್ರರಿಗೆ ಕಾಣಿಕೆಯಾಗಿ ಒಪ್ಪಿಸುತ್ತೇನೆ. ಇದರಿಂದ ಕನ್ನಡ ನುಡಿಯ ಏಳಿಗೆಗೆ ಅಲ್ಪ ಸ್ವಲ್ಪ ಸಹಾಯವಾದ ಪಕ್ಷದಲ್ಲಿ ನನ್ನ ಶ್ರಮವು ಸಫಲವಾಯಿತೆಂದು ಸಂತೋಷಿಸುವೆನು.

ಈ ಸಂಪುಟವನ್ನೂ ತಮಗೆ ಅರ್ಪಿಸಲು ಅಪ್ಪಣೆಯನ್ನು ದಯೆಪಾಲಿಸಿದುದ

ಕ್ಕಾಗಿ ಶ್ರೀಮನ್ಮಹಾರಾಜರವರಿಗೆ ನನ್ನ ಕೃತಜ್ಞತೆಯನ್ನು ನಮ್ರಭಾವದಿಂದ ತಿಳಿಸುತ್ತೇನೆ.

ಪ್ರಥಮ ಸಂಪುಟದ ತಿದ್ದಿದ ಮುದ್ರಣದ ವಿಷಯವಾಗಿ ಸದಭಿಪ್ರಾಯಗಳನ್ನು ತಿಳಿಸಿದ ಮಹನೀಯರುಗಳ, ಈ ಸಂಪುಟದ ಮುದ್ರಣಕ್ಕೆ ತಕ್ಕಮಟ್ಟಿಗೆ ದ್ರವ್ಯಸಹಾಯ ಮಾಡಿದ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳ, ಉಪಕಾರವು ಚಿರಸ್ಮರಣೀಯವಾಗಿದೆ.

ಕನ್ನಡ ಕವಿಗಳ ಜನಮಂ। ಕನ್ನಡಿಪೀಗ್ರಂಥದಾದ್ಯ ಸಂಪುಟ ಯುಗಮಂ।
ಮುನ್ನಂ ಕನ್ನಡನಾಡಿನ। ಬಿನ್ನಣಿಗಳೊಲ್ದು ಕಾಣ್ಕೆಯಾಗರ್ಪಿಸಿದೆಂ ॥
ಇನ್ನಿತ್ತಮೆಱೆದ ಕವಿಗಳ। ಸನ್ನುತಚರಿತಂಗಳಲ್ಲಿ ನಾನಱಿವನಿತಂ।
ಕನ್ನಡಿಗರ್ ಸಂತಸವಡೆ। ಬಿನ್ನವಿಸಿದೆನಿಂತು ಮೂಱನೆಯ ಸಂಪುಟದೊಳ್ ॥
ಇದಱಲ್ಲಿ ದೋಷವಿರ್ದೊಡೆ। ಸದಯರ್ ವಿಬುಧರ್ ಸಮಂತು ತಿರ್ದುಗೆ ಮುದದಿಂ।
ಇದಱಲ್ಲಿನಿಸಾನುಂ ಗುಣ। ಮೊದವಿರ್ದೊಡೆ ಮೆಚ್ಚಿಕೊಳ್ಗೆ ಸೌಹೃದದಿಂದಂ ॥
ಶ್ರೀರಾಮಾನುಜಪದಸರ। ಸೀರುಹಷಟ್ಪದನ ಸಂತದೇಶಿಕವಂಶ್ಯಂ।
ನಾರಾಯಣಾರ್ಯತನುಭವ। ನೋರಂತೊರೆದಂ ನೃಸಿಂಹ ಕವಿಯೀ ಕೃತಿಯಂ ॥

ಬೆಂಗಳೂರು — ರಾ. ನರಸಿಂಹಾಚಾರ್ಯ.

22-1-1929

# ಶುದ್ಧಿಪತ್ರ

| ಪುಟ | ಪಙ್ಕ್ತಿ | ಶುದ್ಧ | ಅಶುದ್ಧ |
|---|---|---|---|
| iii | 21 | ಟಕಾರ | ಎಕಾರ |
| iv | 16 | ಹಳ್ಳಿ | ಹಳಿ |
| v | 28 | ವಿಷಯವು | ವಿಷಯದಿಂದ |
| vii | 15 | ಸಂಸ್ಕೃತಿ | ಸಂಸುಷ್ಟಿ |
| ,, | 24 | ತೋರಿಸುತ್ತವೆ | ತೋರಿಸುತ್ತದೆ |
| x | 1 | ಅನುಸರಿಸಿ | ನುಸರಿಸಿ |
| ,, | 26 | ಇಂದೋ | ಹಿಂದೋ |
| xi | 3 | ಗೆಯ್ದುವಂ | ಗೈಯ್ದುವಂ |
| xii | 30 | ತನ್ನೊಟ್ಟಿಯ್ಯೆ | ತನ್ನೊಟಿಯ್ಯೆ |
| ,, | 31 | ವಲಿಯುಉತ್ತಾರ್ | ವಲಿಯು ಅಉತ್ತಾರ |
| xiv | 3 | ಶತಮಾನದ | ಶತಮಾದ |
| ,, | 14 | ಪೋರ್ಚುಗೀಸ್ | ಪೋರ್ತುಗೀಸ್ |
| xv | 22 | ಅಭಿಪ್ರಾಯಗಳು | ಅಭಿಪ್ರಾಯಗಳನ್ನು |
| ,, | 23 | ಕೊಟ್ಟಿವೆ | ಕೊಟ್ಟಿದೆ |
| xvii | 6 | ತೆಲುಗಿಗೂ | ತೇಲಗಿಗೂ |
| xviii | 11 | ಮುಕ.<br>ಟಿ | ಮುಕ,<br>ಅ |
| ,, | 16 | ಮುಗು<br>ಟಿ | ಮುಗ,<br>ಟಿ |
| xx | 15 | ಮಹರಾಜ | ಮಹಾರಾಜ |
| xxi | 29 | ತಿರುಳಕನ್ನಡಂ | ತಿತುಳಕನ್ನಡಂ |
| xxii | 11 | ನಾಡವರ್ಗಳ್ | ನಾಡನರ್ಗಳ್ |
| ,, | 12 | ಚದುರರ್ | ಚುದುರರ್ |
| ,, | 12 | ದದೆಯುಂ | ದರೆಯುಂ |
| ,, | 14 | ಪೆಅರುಂ | ಪೆರಉಂ |
| , | 20 | ಬರುತ್ತದೆ4 | ಬರುತ್ತದೆ1 |

| ಪುಟ | ಪಙ್ಕ್ತಿ | ಶುದ್ಧ | ಅಶುದ್ಧ |
|---|---|---|---|
| xxiii | 10 | ಸೇವುಣ | ಸೇಫುಣ |
| ,, | 19 | ದೇಶ್ಯಪದ | ದೇಶ್ಯಪರ |
| ,, | 26 | ಪಟ್ತೀ | ಪಟ್ತು |
| xxiv | 11 | ದೇವಸ್ಥಾನ | ದೇಸ್ಥಾನ |
| xxv | 10 | ಪ್ರಾಯಿಕ | ಪ್ರಾಯಕ |
| xxvi | 10 | ತಕ್ಕವರು. | ತಕ್ಕವರು– |
| ,, | 13 | ಕೊಟ್ಟವೆ | ಕೊಟ್ಟಿದೆ |
| ,, | 16 | 19 | 79 |
| ,, | 30 | ಗ್ರಂಥ | ಗಂಥ |
| xxviii | 3 | ಮುಸಲ್ಮಾನ | ಮುಸಲ್ಮಾಸ |
| xxx | 9 | ಇವರಲ್ಲಿ, | ಇವರಲ್ಲಿ2 |
| xxxiii | 24 | ನಂಜುಂಡ | ನಜುಂಡ |
| xlii | 6 | ನೆಗಟ್ಟಾದ್ಯರ | ನೆಗಟ್ಟಾದ್ಯಪ |
| xliii | 1 | ಶ್ರುತಕೀರ್ತಿಯೆಂ | ಶ್ರುತಕೀರ್ತಿಯೆ |
| ,, | 4 | ಏತತಯು ಶೋ | ಏತತಯುಂಶೋ |
| xliv | 10 | ತ್ರೀಮಂಡಲ | ಶ್ರೀಮಂಡಲ |
| xlv | 1 | ಬಾಲಚಂದ್ರನೂ | ಬಾಲಚಂದ್ರನು |
| xlvi | 1 | 234ನೆಯ | 234ನೆ |
| xlvii | 12 | ಎಡೆಗೊಟ್ಟನು | ಎಡೆಗೊನು |
| xlviii | 24 | ಆವುದಾದರೂ | ಆವುದಾದ |
| li | 2 | 88 \|1184), 90 | 8890 (1184) |
| lii | 30 | ಮೊದಲನೆಯವನು | ಮೊದಲಯವನು |
| lviii | 22 | ಎಂಬುದ | ಎಂಬು |
| lxx | 2 | ತೋರಿದ | ತೋರಿದು |
| lxxii | 30 | ಚಂದ್ರಕೀ | ಚಂದ್ರಕಿ |
| lxxvi | 21 | ಎಂದೂ ಅಯ್ಯನವರು | ಎಂದೂ |
| lxxxiv | 29 | ಅಭಿಪ್ರಾಯ | ಅಭಿಪಾಯ |
| lxxvii | 10 | ಕವಿಯ ಬಸವ | ಕವಿಯು ಬಸವನ |

ಶ್ರೀ.

# ಕರ್ಣಾಟಕ ಕವಿಚರಿತೆ.



## ತೃತೀಯ ಸಂಪುಟ

### ಹದಿನೆಂಟನೆಯ ಶತಮಾನದ ಕವಿಗಳು

---

### ಅಪ್ಪಯ್ಯ ಸು. 1705

ಈತನು ಹಾಡುಗಳನ್ನು ಬರೆದಿದ್ದಾನೆ. ಇತರ ಗ್ರಂಥಗಳನ್ನೂ ಬರೆದಿರುವಂತೆ ಹೇಳುತ್ತಾರೆ. ಆದರೆ ನಮಗೆ ಅವುವೂ ದೊರೆತಿಲ್ಲ.

ಇವನು ಸಾರಸ್ವತಬ್ರಾಹ್ಮಣನು; ಕೌಂಡಿನ್ಯ ಗೋತ್ರದವನು. ಇವನ ತಂದೆ ಭಟಕಳದ ಸೇನಬೋವ ರಾಮರಾಯ; ಸ್ಥಳ ಭಟಕಳ; ಗುರು ವಿಮಲಾನಂದ; ಹೆಂಡತಿ ಭಾಗೀರಥಿ, ಕುಲದೇವತೆ ಗೋವೆಗೆ ಸೇರಿದ ಕುಶಸ್ಥಲದ ಮಂಗೀಶ (ಮಹಾಗಿರೀಶ). ಇವನ ನಿಜವಾದ ಹೆಸರು ಲಕ್ಷ್ಮಣ. ಆದರೆ ಬಾಲ್ಯದಲ್ಲಿ ತಂದೆತಾಯಿಗಳು ಕರೆದ ಅಪ್ಪು ಎಂಬ ಹೆಸರೇ ನೆಲೆಯಾಗಿ ನಿಂತಿತು. ಇಕ್ಕೇರಿ ಬಸವಪ್ಪನಾಯಕನು ತನ್ನ ಕುಲದೇವತೆಯಾದ ಕೊಲ್ಲೂರು ಮೂಕಾಂಬಿಕೆಯ ದರ್ಶನಕ್ಕೆ ಹೋಗಿದ್ದಾಗ ಕವಿ ಬಸವಪ್ಪನಾಯಕನ ಆಶೀರ್ವಾದರೂಪವಾಗಿ ಕೆಲವು ಹಾಡುಗಳನ್ನು ಬರೆದಂತೆ ತಿಳಿವುದರಿಂದ ಇವನು ಬಸವಪ್ಪನಾಯಕನ ಸಮಕಾಲನವನಾಗಿರಬೇಕು. ಆದರೆ ಇಕ್ಕೇರಿ ದೊರೆಗಳಲ್ಲಿ ಈ ಹೆಸರಿನವರು ಇಬ್ಬರು ಇದ್ದರು; ಒಂದನೆಯವನು 1697 ರಿಂದ 1714 ರವರೆಗೂ, ಎರಡನೆಯವನು 1739ರಿಂದ 1754ರ ವರೆಗೂ ಆಳಿದಂತೆ ತಿಳಿವುದರಿಂದ ಕವಿಯ ಕಾಲದವನು ಅವ

ಬಸವಪ್ಪನಾಯಕನೋ ಎಂಬ ಸಂದೇಹವುಂಟಾಗಬಹುದು. ಆದರೆ ಕವಿಯ ಗುರುವಾದ ವಿಮಲಾನಂದನು ಕರ್ಣಾರ್ಜುನರ ಕಾಳಗವೆಂಬ ಯಕ್ಷಗಾನವನ್ನು 1684ರಲ್ಲಿ ಬರೆದಂತೆ ಪ್ರತೀತಿಯಿರುವುದರಿಂದ ಕವಿ ಒಂದನೆಯ ಬಸವಪ್ಪನಾಯಕನ ಆಳಿಕೆಯಲ್ಲಿಯೇ ಇದ್ದಿರಬೇಕು. ಇವನ ಹಾಡುಗಳಲ್ಲಿ ಒಂದನ್ನು ಉದಾಹರಿಸುತ್ತೇವೆ—

ಹೂವ ಕೊಟ್ಟಳು ಮಹಾದೇವಿ ಮೂಕಾಂಬಾ |
ಭೂವರ ಬಸವನೃಪನ ಭಾವಭಕ್ತಿಗೆ ಒಲಿದು ||ಪಲ್ಲವಿ||
ತನ್ನ ಮಗನೆಂಬ ತಾತ್ಪರ್ಯದಲಿ ಕೈವಿಡಿದು |
ಮನ್ನಿಸುವೆನೆನುತ ಮೋಹದಲಿ ತರೆದು ||
ಅನ್ಯವೈರಿಗಳ ಜಯಿಸೆಂದು ಆಶೀಯುವನಿತ್ತು |
ಚೆನ್ನಾಗಿ ಸಾಮ್ರಾಜ್ಯಪದವಿಯನು ಧರಿಸುತ || 1 ||
ದೃಢಭಕ್ತಿವಿಡಿದು ತನ್ನಡಿಗಳನು ಪೂಜಿಸಲು |
ಒಡನೊಡನೆ ಬಂದು ಭೂಮಿಪನ ನೋಡಿ ||
ಪಡುಗಡಲ ಒಡೆಯ ಬಾರೆಂದು ನಂಬುಗೆಯನ್ನು |
ಕೊಡುವತೆಱದಲಿ ವಿಶ್ವದೊಡತಿ ತನ್ನಯ ಬಲದ ||ಹೂವ|| 2 ||
ಇಂದ್ರರವಿಗಳು ಇರುವ ಪರಿಯಂತ ನೃಪನೆನಿಸಿ |
ಚಂದದಿಂದಲಿ ವಿಮಲ ಆನಂದನಾಗಿ ||
ಎಂದೆಂದು ಸ್ಥಿರದಿ ಬಾಳೆಂದು ಬಸವೇಂದ್ರನಿಗೆ |
ಇಂದೀವರಾಕ್ಷಿ ಕೊಲ್ಲೂರ ಮೂಕಾಂಬಾ || 3 ||

---

## ಸಿಂಹಗಿರಿಕೃಷ್ಣವಾರ್ಯ. 1712

ಈತನು ಒಂದು ಕಾಲಜ್ಞಾನವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಇವನ ತಂದೆ ನಾರಣಯ್ಯ; ಇವನ ಸ್ಥಳ ಸಿಂಹಗಿರಿಯಾಗಿರಬಹುದು. ಇವನ ಕಾಲಜ್ಞಾನದಲ್ಲಿ 1712 ರಲ್ಲಿ ನಡೆದ ಸಂಗತಿಯನ್ನು ಹೇಳುವುದರಿಂದ ಇವನು ಆ ಕಾಲದಲ್ಲಿ ಇದ್ದಿರಬಹುದೆಂದು ಊಹಿಸಿ ಆ

ವರ್ಷವನ್ನೇ ಮೇಲೆ ಕೊಟ್ಟಿದ್ದೇವೆ. ತನ್ನ ಕಾಲಜ್ಞಾನವು ಸುಳ್ಳಾಗಲಾರದು ಎಂಬ ವಿಷಯದಲ್ಲಿ ಹೀಗೆ ಹೇಳಿಕೊಂಡಿದ್ದಾನೆ—

ಕೃಷ್ಣಮಾಚಾರ್ಯರು ಕಾಲಜ್ಞಾನವ ಮುಂಚಿತವಾಗಿ ಹೇಳಿದರು ಎಂದು ಜನರು ತಿರಸ್ಕರಿಸಾರು. ಇದಕ್ಕೆ ಪ್ರಮಾಣವಾಗಿ ಹೇಳುತ್ತ ಇದ್ದಾನೆ. ಗಂಗೆ, ಯಮುನೆ, ಗೋದಾವರಿ, ತುಂಗಭದ್ರೆ; ಗೌತಮಿ, ಜಾಹ್ನವಿ, ಪುಷ್ಕರಿಣಿ, ಕೃಷ್ಣವೇಣಿ ಈ ಅಷ್ಟನದಿಗಳಲ್ಲಿ ತಮ್ಮ ತಂದೆ ನಾರಣಯ್ಯನ ಹಿಂಸೆಯು ಮಾಡಿ ರಕ್ತಮಾಂಸಗಳ ಧುಂಡಿಸಿದ ದೋಷಗಳಿಗೆ ತಾನು ಹೋದೇನು. ಈರೀತಿಯಲ್ಲಿ ತಾನು ಹೇಳಿದ ಕಾಲಜ್ಞಾನ ತಪ್ಪುವುದಿಲ್ಲ. ತಮ್ಮ ನಾರಣಯ್ಯನ ಆಣೆ.

ಇವನ ಗ್ರಂಥ

ಕಾಲಜ್ಞಾನ

ಇದರಿಂದ ಸ್ವಲ್ಪಭಾಗವನ್ನು ಉದ್ಧರಿಸಿ ಬರೆಯುತ್ತೇವೆ—

ಕಲಿಯುಗ ಹುಟ್ಟಿದತರುವಾಯದಲ್ಲಿ 3799 ವರ್ಷಸಂದ ತರುವಾಯದಲ್ಲಿ ಅಶ್ವಪತಿ ಗಜಪತಿ ನರಪತಿ ಚಲುವಾನದೊರೆಗಳೆಲ್ಲರೂ 1000 ವರ್ಷ ರಾಜ್ಯವನಾಳುವರು. ಓರುಗಲ್ಲ ಪ್ರತಾಪರುದ್ರನು ದುಂದುಭಿಸಂವತ್ಸರದಲ್ಲಿ ಮ್ಲೇಚ್ಛರಿಂದ ಸಿಕ್ಕಿ ಹೋಗುವನು. ಆಮೇಲೆ 300 ವರ್ಷ ಸಂದ ಬಳಿಕ ರೌದ್ರಿಸಂವತ್ಸರದಲ್ಲಿ ಗಜಪತಿಗೆ ಸಿಂಹಾಸನ ಮ್ಲೇಚ್ಛರಿಂದ ಹೋಗುವುದು. ಕ್ಷಯಸಂವತ್ಸರದಲ್ಲಿ ಪ್ರಭವಸಂವತ್ಸರದಲ್ಲಿ ವಿಜಾಪುರ ಗೋಲುಕೊಂಡೆಯು ಮ್ಲೇಚ್ಛರ ವಶವಾಗಿ ಹೋಗುವುದು. ಆಮೇಲೆ ಭೂಮಿಗೆ ಪಾಪಪ್ರವೇಶ ಹೇರಳವಾಗಿ ಬ್ರಾಹ್ಮಣರಿಗೆ ಅವರೋಧನ ತಪ್ಪುವುದು. ಜಾತಿ, ನೀತಿ, ಮಾನ, ವರ್ತನೆ ಕೆಟ್ಟು ಅನ್ಯಾಯವೇ ಅಧಿಕವಾಗುವುದು. ವಿಪ್ರರು ಆಚಾರ ವ್ಯವಹಾರಗಳ ಬಿಟ್ಟು ಶೂದ್ರರ ಸಂಗವ ಮಾಡುವರು. ಕಲಿಯುಗಪ್ರವೇಶವಾದ 4799 ವರ್ಷಕ್ಕೆ ಬಹುಧಾನ್ಯಕಾರ್ತಿಕಶುಕ್ಲ ಸಪ್ತಮೀ ಸೋಮವಾರ ಶ್ರವಣ ನಕ್ಷತ್ರ ಮಕರಲಗ್ನದಲ್ಲಿ (1698) ಕಾರ್ತವೀರ್ಯಾರ್ಜುನನು ವೀರವಸಂತನೆಂಬ ಹೆಸರುಳ್ಳವನಾಗಿ ಗೌತಮೀನದೀತೀರದಲ್ಲಿ ಈಶಾನ್ಯಭಾಗದಲ್ಲಿ ಉದ್ಭವಿಸುವನು. ಆಮೇಲೆ ನಂದನಸಂವತ್ಸರದಲ್ಲಿ (1712) ಆ ವೀರವಸಂತರಾಯನು ಸಕಲಸೇನಾಸಮೇತನಾಗಿ ಕೃಷ್ಣವೇಣೀ ಗೋದಾವರೀ ತೀರದಲ್ಲಿ ಚಕ್ರಾವತೀಪಟ್ಟಣವನು ಸ್ಥಾಪಿಸಿಕೊಂಡು ಮಾರ್ಗಶಿರ ಶುಕ್ಲ ತ್ರಯೋದಶೀ ರೋಹಿಣೀ ನಕ್ಷತ್ರದಲ್ಲಿ ಪಟ್ಟಾಭಿಷೇಕವಾಗಿ 108

ವರ್ಷ ಸಕಲಸಾಮ್ರಾಜ್ಯವನ್ನಾಳಿದನು. ಆ ವೀರವಸಂತರಾಯನ ವಂಶದವರು 1109 ವರ್ಷ ರಾಜ್ಯವನ್ನಾಳಿದರು.

---

## ನಗರದ ಪುಟ್ಟಯ್ಯ 1713

ಈತನು ಮೈಸೂರರಸುಗಳ ಪೂರ್ವಾಭ್ಯುದಯವನ್ನು ಬರೆದಿದ್ದಾನೆ. ಈ ಗ್ರಂಥವನ್ನು ಶಕ 1635 ರಲ್ಲಿ, ಎಂದರೆ 1713 ರಲ್ಲಿ, ಬರೆದಂತೆ ತಿಳಿಯುತ್ತದೆ. ಇದು ಗದ್ಯಗ್ರಂಥ; ಇದರಲ್ಲಿ ಮೈಸೂರುರಾಜರ ಚರಿತವು ಸಂಗ್ರಹವಾಗಿ ಹೇಳಿದೆ.

---

## ? ವೈದ್ಯೇಶ್ವರಭಕ್ತ 1715

ಈತನು ಸೇತುಮಾಹಾತ್ಮ್ಯವನ್ನು ಬರೆದಿದ್ದಾನೆ. ತನ್ನ ಹೆಸರನ್ನು ಹೇಳಿಕೊಂಡಿಲ್ಲ; ಆದರೆ ತನ್ನ ಗ್ರಂಥವನ್ನು "ಗಜವನನಿಲಯವೈದ್ಯೇಶ್ವರನ" ಅಂಕಿತದಲ್ಲಿ ಬರೆದು "ವೈದ್ಯನಭಕ್ತನುಸಿರಿದನು" ಎಂದು ಹೇಳಿಕೊಂಡಿರುವುದರಿಂದ ಆ ನಾಮವನ್ನೇ ಮೇಲೆ ಕೊಟ್ಟಿದ್ದೇವೆ. ಈತನು ಬ್ರಾಹ್ಮಣಕವಿ; ಇವನ ಸ್ಥಳ ಗಜವನ (ತಲಕಾಡು) ಆಗಿರಬಹುದು. ಈ ಗ್ರಂಥವನ್ನು ಶಕ 1635 ನೆಯ ಜಯಸಂವತ್ಸರದ ಫಾಲ್ಗುಣದಲ್ಲಿ-ಎಂದರೆ 1715 ರಲ್ಲಿ-ಬರೆದಂತೆ ಹೇಳುತ್ತಾನೆ.

ಇವನಗ್ರಂಥ

### ಸೇತುಮಾಹಾತ್ಮ್ಯ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಅಧ್ಯಾಯ 41, ಪದ್ಯ 1925. ಈ ಸೇತುಮಹಿಮೆಯನ್ನು ಮೊದಲು ವ್ಯಾಸನು ಸೂತನಿಗೆ ಹೇಳಿದಂತೆಯೂ ಆಮೇಲೆ ಸೂತನು ಶೌನಕಾದಿಋಷಿಗಳಿಗೆ ನಿರೂಪಿಸಿದಂತೆಯೂ ತಿಳಿಯುತ್ತದೆ. ಗ್ರಂಥಾರಂಭದಲ್ಲಿ ವೈದ್ಯೇಶ್ವರಸ್ತುತಿಯಿದೆ. ಬಳಿಕ ಕವಿ ಗಣೇಶ, ಕೀರ್ತಿನಾರಾಯಣ, ಬ್ರಹ್ಮ, ಸರಸ್ವತಿ, ಪಾರ್ವತಿ, ಮಹಾಲಕ್ಷ್ಮಿ, ವ್ಯಾಸ

ವಾಲ್ಮೀಕಿ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಅಯೋಧ್ಯೆ

ಹಗಲ ದೆಸೆಗಳುಕುತ್ತ ಚಂದ್ರಿಕೆ | ನಗರವನು ಪುಗಲೆಳವಿಸಲು ಬಲು |
ಪಗೆತನನಿ ಮುತ್ತಿಗೆಯನಿಕ್ಕಿದುದೆಂಬವೊಲು ಭರದಿ ||
ಗಗನಕಡರಿದ ನಿರ್ಮಲದ ಸೌ | ಧಗಳ ಕಾಂತಿಯು ಪೊನ್ನಕೋಂಟೆಯು |
ಪೊಗರೊಗುವ ಮಿಗೆ ಕಾಂತಿ ಮುಸುಕಿದುದೆಂಟುದಿಕ್ಕಿನಲಿ ||

ಅಯೋಧ್ಯಾಯ ಸ್ತ್ರೀಯರು

ಪೊಡವಿಗತಿಶಯವೆನಿಪ ಸ್ತ್ರೀಯರ | ನುಡಿನಡೆಗೆ ಬಡಬಾಸೆಕುಚಗಳ |
ಗೊಡವೆಯಿಗಿದರಗಿಳಿಮದೇಭಭುಜಂಗಕೋಕಗಳು ||
ಕಡೆದುವವು ವೈಡೂರ್ಯರತ್ನದ | ಕಡಗಕಟಿಕಚಲಪನಗಳ ಕಂ |
ದೊಡನಯೋಧ್ಯೆಯ ತರುಣಿಯರ ಸೊಬಗೆನಿತೊ ಪೇಟಿಂದ ||

ಸೀತಾದೇವಿ

ಉರದ ಚೆಲುವಿನಲೊಪ್ಪಿತಂದಾ | ವರಪದಕತಾಲಿಗಳು ಮುಕ್ತಾ |
ಕರದ ಕಾಂತಿಯಲೊಪ್ಪಿದುದು ಮರಕತದ ಕಡಗಗಳು ||
ತರಳಕಾಂಚಿಯು ಘನಜಘನದಿಂ | ದಿರದೆ ಪೂಜ್ಯತೆವಡೆದುದಾನೂ |
ಪುರಗಳೊಪ್ಪಿದುವಂದಲಕ್ತದ ಚರಣಕಾಂತಿಯಲಿ ||

---

## ಬಾಲವೈದ್ಯದ ಚೆಲುವ ಸು. 1715

ಈತನು ಕನ್ನಡಲೀಲಾವತಿ, ರತ್ನಶಾಸ್ತ್ರ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಇವನ ಪಿತಾಮಹ ರಾಮಾವಧಾನಿ, ತಂದೆ ವೆಂಕಾವಧಾನಿ ಅಥವಾ ವೆಂಕಟಭಟ್ಟ; ಸ್ಥಳ ಚಿಕ್ಕನಾಯಕನಪುರ. ಬೇಲೂರು ಜೋಯಿಸರ ಉಪದೇಶಬಲದಿಂದ ಕನ್ನಡಲೀಲಾವತಿಯನ್ನು ಬರೆದಂತೆ ಹೇಳುತ್ತಾನೆ. ಈ ಜೋಯಿಸರಾರೋ ತಿಳಿಯದು. ಶ್ರೀರಂಗಪಟ್ಟಣವನಾಳ್ವ ಶ್ರೀಕೃಷ್ಣರಾಜೊಡೆಯರಯ್ಯನವರ ಬೊಕ್ಕಸದ ಕರಣಿಕನಾದ ವೆಂಕಟಪತಿಯ ಪ್ರೋತ್ಸಾಹದಿಂದ ರತ್ನಶಾಸ್ತ್ರವನ್ನು ಬರ

ದಂತೆ ಹೇಳುತ್ತಾನೆ. ಕನ್ನಡಲೀಲಾವತಿಯ ಕೆಲವು ಉದಾಹರಣಪದ್ಯಗಳಲ್ಲಿ ದೇವರಾಜನ ವಿಜಯಗಳು ಹೇಳಿವೆ. ಈ ದೇವರಾಜನು ಚಿಕ್ಕದೇವರಾಜನೆಂದು (1672-1704) ತೋರುತ್ತದೆ. ಮೇಲೆ ಹೇಳಿದ ಕೃಷ್ಣರಾಜನು 1713 ರಿಂದ 1731 ರ ವರೆಗೆ ಆಳಿದ ದೊಡ್ಡ ಕೃಷ್ಣರಾಜನಾಗಿರಬೇಕು. ಆದುದರಿಂದ ಕವಿಯ ಕಾಲವು ಸುಮಾರು 1715 ಆಗಬಹುದು. ಇವನು ಚಿಕ್ಕದೇವರಾಜನ ಆಳಿಕೆಯ ಅಂತ್ಯಭಾಗದಲ್ಲಿಯೂ ಇದ್ದಿರಬಹುದೆಂದು ತೋರುತ್ತದೆ. ತಾನು ಕವಿತೆಯನ್ನು ತಿಳಿದವನಲ್ಲ, ತಿಳಿದವರು ತನ್ನ ಗ್ರಂಥವನ್ನು ತಿದ್ದಬೇಕು ಎಂದು "ಒಪ್ಪದಿ ತಿದ್ದಲುಬೇಕೆ । ನ್ನುಪ್ಪನ ಕಾಲದೊಳಮುಟ್ಟಿಯ ಕವಿತಾಕೃತಿಯಂ" ಎಂಬ ಪದ್ಯಭಾಗದಲ್ಲಿ ಹೇಳುತ್ತಾನೆ.

ಇವನ ಗ್ರಂಥಗಳಲ್ಲಿ

## 1 ಕನ್ನಡಲೀಲಾವತಿ

ಇದು ಕಂದ, ವಾರ್ಧಕಷಟ್ಪದಿ ಇವುಗಳಲ್ಲಿ ಬರೆದಿದೆ. ಇದರಲ್ಲಿ ಸಾಧಾರಣಗಣಿತ, ಕ್ಷೇತ್ರಗಣಿತ ಇವೆರಡೂ ನಿರೂಪಿಸಲ್ಪಟ್ಟಿವೆ. ಆರಂಭದಲ್ಲಿ ನಿಷ್ಕಪ್ರಮಾಣ, ಧರಹಪ್ರಮಾಣ, ಮಣಿಗಟ್ಟಲೆ, ಖಂಡುಗಸಂಜ್ಞೆ, ಯೋಜನಪ್ರಮಾಣ, ವರ್ಷಪ್ರಮಾಣ, ಗಳಿಗೆಪ್ರಮಾಣ, ಭಾರಸಂಖ್ಯೆ, ಅಳತೆಪ್ರಮಾಣ, ಟಂಕಸೂತ್ರ, ಸುಗ್ಗಿಸೂತ್ರ, ಮುತ್ತಿನ ಚವ್ವ ಮೊದಲಾದ ವಿಷಯಗಳನ್ನು ವಿವರಿಸಿದ್ದಾನೆ. ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳು ಕೆಳಗಣ ಪದ್ಯಭಾಗದಲ್ಲಿ ಹೇಳಿವೆ—

ಲೋಕದೊಳು ಗಣಿತತತ್ವಜ್ಞರೊಪ್ಪುವತೆಱದಿ ।
ಬೇಕಾದ ಕೀಲೆಸೆಕೆ ಸ್ವರ್ಣಕ್ಷೇತ್ರದ ಗಣಿತ ।
ಜೋಕೆಯೊಳ್ ಘನವರ್ಗಮೂಲಕ್ಕೈರಾಶಿಗಳನೇಕಕಲಿಲದ ಲೆಕ್ಕವ ॥
ನಾ ಕನ್ನಡದಿ ಪದ್ಯಗೊಳಿಸಿ ಪೇಳ್ದಿಸಿದನು.

ಗ್ರಂಥಾವತಾರದಲ್ಲಿ ಚೆನ್ನಕೇಶವ, ರಂಗಪುರದ ಗಣೇಶ, ಸರಸ್ವತಿ ಇವರುಗಳ ಸ್ತುತಿ ಇದೆ. ಇದರಿಂದ ಕೆಲವುಭಾಗಗಳನ್ನು ಉದ್ಧರಿಸಿ ಬರೆಯುತ್ತೇನೆ—

## ನಿಷ್ಕಪ್ರಮಾಣ

ಕವಡೆಗಳಿಪ್ಪತ್ತುಗಲು | ಪವಣಿಸಿ ಕಾಕಿಣಿಯು ನಾಲ್ಕು ಪಣ ಪದಿನಾರುಂ |
ಭುವನದಿ ದ್ರಮ್ಮಗಳನಿತುಂ | ಸವನಿಸೆ ಪದಿನಾರು ಕದುವ ನಿಷ್ಕಮೆನಿಕ್ಕುಂ[1] ||

ವಿನೋದದಲೆಕ್ಕಗಳು

ಇಬ್ಬರು ಇಕ್ಕೊಳದವಸವ | ಮುಬ್ಬಳ್ಳದ ಕೊಳಗವೈದುಸೊಲಗೆಯು ಮಾನದಿ |
ಇಬ್ಬಳಿಸಿದೆಂಟುಮಾನದಿ | ಮುಬ್ಬಳ್ಳದಿನೊಂದ ಕೂಡೆ ಪಾಲಿವರ್ಗಗಳಂ ||

ದವಸಹಂಚಿಕೊಟ್ಟುದು.

ಹರನಯನಶ್ಶೈಲದಶಕಂ | ನರೆಮಣುವಂ ತ್ರೈಲಕುಂಬಿ ಮೂರು ಚೊಳ್ಳರಲುಂ |
ಸರಿಪೋದುದೇಟುಮೂರು | ಕಿರಿಹಿರಿಯುಂಗುಳಿವ ತೈಲ ಪಾಲೆನಿಕ್ಕುಂ ||

ಎಣ್ಣೆಬುರುಡೆಲೆಕ್ಕ.

ಒಂಬದಿನಕ್ಕೆದುಗ್ರಂಥವ | ನುಂಟೆನಿಸುತ ಕಲಿತು ಮುಜೆವನ್ಯೆದಕೆ ಮೂರುಂ |
ಎಂಟು ಕೂಡದ ನೂರಕೆ | ಪಂಟಿಸಿ ನಾಲ್ವತ್ತ ಕೊಂದುದ್ವಾದಶವರ್ಷಂ ||
ದಸದಾಳಿಂಬದ ಫಲಮಿದು | ಕುಸುಮಾಸ್ತ್ರದ ಸಂಖ್ಯೆಲೆಕ್ಕದೆಸಳರೆ.... |
ಪೊಸದೆಸೆಯ ಲೆಕ್ಕಮುಂತಿದ | ವಸುಮತಿಗಜ್ಞವಂತೆ ಪೇಳು ಗಣಿತವಿಲಾಸಾ ||

ಎಸಳು × 72 = ಬೀಜಸಂಖ್ಯೆ.

ಅಷ್ಟವಸುವೆಂಬಲೆಕ್ಕದಿ | ಸೃಷ್ಟಿಸಿ ಕುಂಬಳದಕಾಯ ರೇಖೆಯುನಿಱುವುದು |
ದೃಷ್ಟವೆನೆ ಬೀಜಮಕ್ಕುಂ | ಸೃಷ್ಟಿಯುಜನವಜೆಯ ಪೇಟು ಗಣಿತವಿಲಾಸಾ ||

ರೇಖೆ × 88 = ಬೀಜಸಂಖ್ಯೆ.

## ಕ್ಷೇತ್ರಗಣಿತ

ಸಮಚತುರಶ್ರಮಚತುರಂ | ಸಮತ್ರಿಭುಜೆಯು ವಿಷಮತ್ರಿಭುಜೆ ವೃತ್ತಾಕಾರಂ |
ಕಮಲಫಣಿನಯನಶಂಖಂ | ಕ್ರಮಗೋಳಸುವೆ ಶೂರ್ಪಶೂಲವುದ್ಧಳಿಭಾವಂ ||
ಧನುಬಾಣಚಕ್ರಭ್ರಮರಂ | ಅನುನಯದಿಂದಷ್ಟಕೋಣನು ತರುಕರಿದಂತಂ |
ಎನಿತುಸ್ಪರಿಗೆಯು ಡಮರುಗ | ಅನಿತುಗುಣಾಪಾಶಪಕ್ಷಿ ಷಟ್ಕೋಣಲಿಂಗಂ ||
ಕೆರಗೆಯು ಚಾಮರಚೆಳುಂ | ಕಡೆಗೋಲಿನೆಮುದ್ದೆ ಪಂಚಕೋಣನುಂ ವಸನಂ |
ಗಡವಣಕೊಂಗನುರಿವೆರೆಯುಂ | ಸಡಗರದಿಂ ತಿಳಿದು ನೋಡು ಪೊಡವಿಯೊಳನಿತುಂ ||

1 ಈ ಪದ್ಯಗಳನ್ನು ಮಾತೃಕೆಯಲ್ಲಿರುವಂತೆಯೇ ಬರೆದಿದ್ದೇವೆ

ವಿಷಮದ ಚತುರದ ಭೂಮಿಯ | ಹಸಗೊಳಿಸುತ ನಾಲ್ಕುಭುಜದ ಕೂಡಲ್ ಮತ್ತಾ |
ಕುಶಲದಿ ಭಾಗಿಸಿ ನಾಲ್ಕಕೆ | ಪೊಸತೆನಿಸುತ ವರ್ಗಗೊಳ್ಳೆ ಕಂಭಂ ಬರ್ಕುಂ ||
ಕಮಲಾಕಾರದ ಭೂಮಿಯ | ಸಮನಿಪ ಹೊಱವಳಯವಳೆದು ನಾಳವ ಕೂಡಾ |
ಕ್ರಮದಿಂ ನಾಲ್ಕಕೆ ಭಾಗಿಸಿ | ಮಮತೆಯೊಳಂ ವರ್ಗಗಾಣು ಕಂಭವುದಕ್ಕುಂ ||
ಕೊಡನಾಕಾರದ ಭೂಮಿಗೆ | ನಡುವುಂ ಮುಖವಗಲಗೂಡಿಯರ್ಧಿಸು ಮತ್ತಾ |
ಕೊಡನೀಳದಿ ಗುಣಿಯಿಸಲುಂ | ಪೊಡವಿಯೊಳಂ ಕಂಭ ಬರ್ಕ್ಕು ಕೇಶವನಾತದಿಂ ||

## 2 ರತ್ನಶಾಸ್ತ್ರ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ, ಪದ್ಯ 98. ಅಗಸ್ತ್ಯಮುನಿಯ ಮತಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಇದರಲ್ಲಿ ಪ್ರತಿಪಾದಿತವಾದ ವಿಷಯಗಳು ಕೆಳಗಣ ಪದ್ಯದಲ್ಲಿ ಹೇಳಿವೆ—

ನವರತ್ನಗಳ ಪೆಸರು ಪುಟ್ಟುತಿಹ ದೇಶವನು |
ಭುವನದೊಳು ಗಣಿಗಳನು ವರ್ಣಜಾತಿಯು ದೋಷ |
ಸವನಿಸಿದ ಗುಣಗಳನು ಬೆಲೆಹಸ್ತಸಂಜ್ಞೆಯನು ವಂಶಲಿಯ ಕುಶಲತೆಯನು ||
ಯವೆಯ ಪರಿಮಾಣವನು ಕಣಚರತಿಮಂಜಾಡಿ |
ಚವುನೋಟಯುಗಭೇದ ಕೃತ್ರಿಮದ ರಚನಗಳು |
ತವಕವಗೆ ತಿಳಿವಂತೆ ಪೇಳ್ವನಿದ ಕನ್ನಡದಿ ಮುನಿಯಗಸ್ತ್ಯನ ಕೃಪೆಯೊಳು ||

ಗ್ರಂಥವು 6 ಕಲ್ಪಗಳಾಗಿ ಭಾಗಿಸಲ್ಪಟ್ಟಿದೆ. ಆರಂಭದಲ್ಲಿ ಚೆನ್ನಿಗರಾಯ, ತ್ರಿಮೂರ್ತಿಗಳು, ಗಣೇಶ ಇವರುಗಳ ಸ್ತುತಿ ಇದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ಅಲಿಸ್ಪೆ ಬಾಹಿರದಿ ಪ್ರಜ್ವಲಿಪ ಪ್ರಭೆಯಿರಲು |
ಲೀಲೆಯಿಂ ತಿಳಿಯದನು ಪಿಂಡ ರಂಗವದೆಂದು |
ಬಾಲಾರ್ಕನಿದಿರಿನೊಳ್ ಪಿಡಿಯೆ ರತ್ನದಮಧ್ಯೆ ಛಾಯೆ ತಾ ತೋಱುತಿರಲು ||
ಪಾಲಿಸದ ಛಾಯೆ ರಂಗವುದೆಂದು ಪೇಳ್ವುದದ |
ನಾಲಿಸ್ಪೆ ಮಾಣಿಕಕೆ ಕಾಂತಿ ರಂಗಗಳನ್ನು |
ಮೇಲೆ ಸಿರದೊಳು ನೋಡಿ ಕುಶಲದಿಂ ಕ್ರಯಮಾಡಿ ಶ್ರೀಶಸರ್ವಪಮಿತಿಯೊಳು ||
ನೀಲಮುಂ ಪರಿಕಿಪ್ಪನಾದಡಂಗೈತಳದಿ |
ಜಾಲ ಮಧ್ಯದೊಳಿರಿಸಲದು ನೀಲಿರಪದಂತೆ |

ನೀಲವರ್ಣವಾದಾಗಲಿಂದ್ರನೀಲಮುದೆನಿಪ್ಪುದದು ತೃಣವ ಗ್ರಹಿಸುವುದು ||
ಮೇಲು ಸಿಂಹಳದಲ್ಲಿ ಪುಟ್ಟಿದತು ಗುಣವಿರಲು |
ಪಾಲಿಸಲುಬೇಕದನು ಗುಣದೋಷಗಳ ನೋಡಿ |
ದೀಲಲಿತರತ್ನವಿರಲೆನೆಯುಪಮಾನಕ್ಕೆನೂರುಸಾಹಸ್ರವೆಂದು ||
ಕೃತ್ರಿಮದ ಮುತ್ತು ತಾನಿರಲು ಪರಿಕಿಸುವ ಪರಿ |
ಮುತ್ತದನು ಮಡಕೆಯೊಳು ಗೋಮೂತ್ರವನು ತುಂಬಿ |
ತತ್ತುಗೊಳ್ಳಿಸಿ ಲವಣವನು ಮಣೆಯ ನೆನೆಯಿಸಲುಬೇಕೊಂದುರಾತ್ರಿಯದನು ||
ಭತ್ತಗೋಧಿಯು ಹೊಟ್ಟನೊಳಗದನು ಉದ್ದಿಯೆತ |
ಮುತ್ತ ನೋಡಲು ವರ್ಣ ಪೋಗದಿರೆಯಾಮಣೆಯು |
ಉತ್ತಮೋತ್ತಮವೆಂದು ಪೇಳ್ದನಾಗಸ್ತ್ಯಮುನಿ ಚಿತ್ತರಿಸಿ ಮುನಿವರರ್ಗೆ ||
ಛಾಯೆಯಿಲ್ಲದ ಮಾಣಿಕಕ್ಕೆ ಮಾರಳರಸದಿ |
ಪ್ರೀಯುಗಂಡಲತಿಗೆಯ ರಸದಿ ಭಾವನೆಗೆಯ್ಯೆ |
ಲಾಯುತದಿ ಗಜಸಿಂಬೆಮೂಳಿಯೊಳೆಲ್ಲುಂವೇಳೆ ಭಾವನೆಯುಗೆಯ್ಯಲದನು ||
ಮಾಯುಕದ ರತ್ನಮಾಗಿರೆ ತೋಪ್ಪರ್ದಲ್ಲದೊಡೆ |
ಛಾಯೆ ವರ್ಧಿಪ್ಪುದರಿಕೆ ನೀಲಕತಿಪೇಳ್ವಪಸು |
ಪಾಯದಿಂ ನೀಲಿರಸಗಜಸಿಂಬೆಸಿಂಬೆರಸವೇಳುಭಾವನೆಗೈವುದು ||
ಪವಳವನು ನೀರನೊಳು ತೊಳೆದುಪ್ಪೊಪ್ಪವನಿಕ್ಕ |
ಲವನು ಚಿಕೆಯೊಳಗಿಟ್ಟು ಅಲತಿಗೆಯ ರಸದಲ್ಲಿ |
ಠವೆ ಮುತ್ತುಗದ ಪುಷ್ಪವನು ಅರೆದು ಎಳ್ಳೆಣ್ಣೆಯೊಳ್ ಕಲಸಿ ಲೇಪಿಸಲ್ಕೆ ||
ಕವಡೆತತ್ತಿಯುಬೀಜ ಗಜ್ಜುಗದ ತಿರುಳಿನಿಂ |
ದವನು ನೀರಲಿಯರೆದು ತೊಳೆಯಲ್ಕೆ ಛಾಯೆ ತಾ |
ಪವಳಕತಿತೋಪ್ಪರ್ವದನಜೆಗೆ ಮಂಡಲಿಮಾಳ್ಪನೆಂದಗಸ್ತ್ಯಂ ಪೇಳ್ದನು ||

—0 .

## ವೀರರಾಜ ಸು. 1720

ಈತನು ವೈದ್ಯಸಂಹಿತಾಸಾರಾರ್ಣವವನ್ನು ಬರೆದಿದ್ದಾನೆ. ಇವನು ಕಳಲೆರಾಜರಲ್ಲಿ ಇದ್ದನು. ಇವನ ಪಿತಾಮಹನು ಕಾಂತಯ್ಯ; ತಂದೆ

ಮೈಸೂರು ದೊರೆಯಾದ ಚಿಕ್ಕದೇವರಾಜನಲ್ಲಿ (1672--1704) ದಳವಾಯಿಯಾಗಿದ್ದ ದೊಡ್ಡೇಂದ್ರನು. ಈ ದೊಡ್ಡೇಂದ್ರನು

ಮರಾಟರೊಳ್ ಪ್ರಸಿದ್ಧರಾಗಿದ್ದ ಜೈಜೀಗಾಟಿ ಮುಂತಾದ ಮಹಾಶೂರರಂ ಕಡಿದು ಅವರಾನೆಕುದುರೆಬಿರುದುಮುಂತಾದುವಂ ಕೊಂಡು ಅನಂತರಾಯನ ಮೂಗಂ ಕೊಯಿಸಿ ಕರ್ಣಾಟಕದೇಶಮಂ ವಿಜಯಲಕ್ಷ್ಮೀನಿಟಕಪ್ರದೇಶವೆನಿಸಿ ಕರ್ಣಾಟಕ ಚಕ್ರವರ್ತಿ ಚಿಕ್ಕದೇವೇಂದ್ರಂಗೆ ದಕ್ಷಿಣಭುಜಾದಂಡವೆನಿಸಿ ಕೀರ್ತಿವಡೆದಂ

ಎಂದು ಕವಿ ಹೇಳುತ್ತಾನೆ. ಕಳಲೆಯಪುರವರಾಧೀಶ್ವರನುಂ ದಾನಕರ್ಣನುಂ ಸಂಗ್ರಾಮಾರ್ಜುನನುಂ ಷಟ್ಚಕ್ರವರ್ತಿಸಮನುಂ ದೊಡ್ಡೇಕನ್ಯಾವಳ್ಳರೊಳಗಣಿಕೆವೆತ್ತ ಸುಧರ್ಮಾದಿಸದ್ಗುಣಗಣಭೂಷಣಭೂಷಿತಾವಯವನುಮೆನಿಸಿ ಲೋಕಮಂ ತನ್ನ ಜಸದಿಂ ಬೆಳಗುವ ಶ್ರೀವೀರರಾಜಭೂಪಾಲಂ--ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1720 ಆಗಬಹುದು. ದಳವಾಯಿದೇವರಾಜನೂ ಕಳಲೆ ನಂಜರಾಜನೂ ಇವನ ಮಕ್ಕಳು.

ದೇವಚಂದ್ರನು ತನ್ನ ರಾಜಾವಳೀಕಥೆಯಲ್ಲಿ (1838) ಈತನ ವಿಷಯವಾಗಿ ಹೀಗೆ ಬರೆದಿದ್ದಾನೆ—

ಕಳಲೆವಂಶದ ವೀರರಾಜಂ ದೊಡ್ಡಕೃಷ್ಣರಾಯರ ದಿವಸದಲ್ಲಿ ಅನೇಕ ವೈದ್ಯಶಾಸ್ತ್ರಂಗಳೊಳಿರ್ಪ ರೋಗಹರಮಪ್ಪ ಚಿಕಿತ್ಸೆಗಳಂ ಕನ್ನಡವಾಕ್ಯದೊಳ್ ವೀರರಾಜೋಕ್ತಿವಿಲಾಸಮೆಂದು ಒರೆಯಿಸಿದಂ.

ಇವನ ಗ್ರಂಥ

ವೈದ್ಯಸಂಹಿತಾಸಾರಾರ್ಣವ

ಇದಕ್ಕೆ ವೀರರಾಜೋಕ್ತಿವಿಲಾಸನೆಂಬ ಹೆಸರೂ ಉಂಟು. ಇದರಲ್ಲಿ ಅನೇಕಸಂಹಿತೆಗಳೊಳಗೆ ಹೇಳಿರುವ ಪ್ರಯೋಗಗಳು ಗದ್ಯರೂಪವಾಗಿ ವಿವರಿಸಲ್ಪಟ್ಟಿವೆ; ಒಟ್ಟು ಪ್ರಯೋಗಗಳ ಸಂಖ್ಯೆ 169. ಈ ಗ್ರಂಥವು ಹುಟ್ಟುವುದಕ್ಕೆ ಕಾರಣವು ಹೀಗೆ ಹೇಳಿದೆ.—

ಎಳವೆಯೊಳ್ ಕಾವ್ಯನಾಟಕಾಲಂಕಾರವ್ಯಾಕರಣತರ್ಕಾಯುರ್ವೇದಧನುರ್ವೇದಾದಿಸಮಸ್ತವಿದ್ಯೆಗಳಂ ಕಲ್ತು ಶೌರ್ಯೌದಾರ್ಯಸ್ಥೈರ್ಯಗಾಂಭೀರ್ಯಮಾಧುರ್ಯಚಾತು

ದ್ಯವಿನಯಾದಿಗುಣಂಗಳಂ ಮೂರ್ತಿಗೊಂಡಂತೆ ಪಜ್ಜಳಿಸುತ್ತೆ ನೆಗೞ್ತೆವಡೆದು ಕಾಂ ಸಕಲಕಲಾಕೋವಿದನಪ್ಪುದಱಿಂ ವಿದ್ವತ್ಸಮಾಜದೊಳ್ ಕಾವ್ಯನಾಟಕಾಲಂಕಾರತರ್ಕ ಶಬ್ದವಿಚಾರಂಗೆಯ್ಯುತ್ತೆ ಒಂದುದಿನಮಾಯುರ್ವೇದಮುಮಂ ವಿಚಾರಿಸುತಿರ್ದು

ಧರೆಯೊಳ್ ಭೈಷಜ್ಯಶಾಸ್ತ್ರಂ ಸುಖಕರಮಖಿಳರ್ಗಾದೊಡಂ ವೈದ್ಯಬೋಧಂ |
ತರದಿಂ ತಳ್ಗುತ್ತೆ ಬಂದತ್ತವನಿಯೊಳಿಸುತಾವೈದ್ಯಶಾಸ್ತ್ರಕ್ಕೆ ಟೀಕಂ ||
ಬರೆದಂ ವೈದ್ಯಪ್ರವೀಣರ್ ಪೊಗೞುತಿರೆ ಮಹಾಸಂಹಿತಾದುಗ್ಧರತ್ನಾ |
ಕರದಿಂದೆತ್ತುತ್ತೆ ಸಾರಾಂಶಮನೊಡನೊಲವಿಂ ವೀರರಾಜಕ್ಷಿತೀಂದ್ರಂ ||

ಧನ್ವಂತರಿ ಮೊದಲಾದವರಿಂದೀಯಾಯುರ್ವೇದಂ ಪಲವುವಿಧವಾಗಿ ನೆಗೞ್ತೆವೆತ್ತಿರ್ಪುದು. ಆ ಸಮಸ್ತಗ್ರಂಥಂಗಳಂ ಕ್ರೋಡೀಕರಿಸಿ ಪರಿಶೋಧಿಸಿ ಲೋಕಹಿತಾರ್ಥವಾಗಿ ಸಾರಾಂಶಮಂ ಜತೆಗೆಯ್ದು ನವರತ್ನದೊಳಾಣಿದ ಸೋಪಾನಮಾಯ್ದಾಯ್ದು ಹಾರಮಂ ವಿಸ್ತರಿಸುವಂತೆ ಆ ವೈದ್ಯಸಂಹಿತಾಸಾರಾರ್ಣವ ಗ್ರಂಥಮಂ ಕನ್ನಡಭಾಷೆಯಿಂದೆ ವಿರಚಿಸಿದಂ.

ಗ್ರಂಥಾವತಾರದಲ್ಲಿ ಶಿವ, ಪಶ್ಚಿಮರಂಗನಾಥ, ರಾಮ ಇವರುಗಳ ಸ್ತುತಿಯಿದೆ. ಬಳಿಕ ಚಿಕ್ಕದೇವರಾಜ, ದೊಡ್ಡೇಂದ್ರ ಇವರುಗಳ ಸ್ತುತಿರೂಪವಾದ ಕೆಲವು ಪದ್ಯಗಳನ್ನು ಹೇಳಿ ಅನಂತರ ಕವಿ ಗ್ರಂಥವನ್ನು ಆರಂಭಿಸಿದ್ದಾನೆ. ಕೊನೆಯಲ್ಲಿ ಈ ಗದ್ಯವಿದೆ—

ಇತಿ ಶ್ರೀವಾಗೀಶಾದ್ಯಮರಪರಿವೃಢಸುರುಚಿರಮಣಿಮುಕುಟನೂತ್ನರತ್ನಪ್ರಭಾಕಿರ್ಮ್ಮೀರಿತಚಾರುಚರಣಾರವಿಂದದ್ವಂದ್ವ ಶ್ರೀಮದುಮಾಮಹೇಶ್ವರಕೃಪಾಕಟಾಕ್ಷಚಂದ್ರಿಕಾಚಕೋರಾಯಮಾನ ಕಳಲೆಪುರವರಾಧೀಶ್ವರ ಪರಾಕ್ರಮಪಾರ್ಥ ದೊಡ್ಡರಾಜೇಂದ್ರತನೂಭವ ಸಕಲಕಲಾಪ್ರವೀಣ ಶ್ರೀಮದ್ವೀರರಾಜೇಂದ್ರಪ್ರಣೀತಮಪ್ಪ ಸಕಲವೈದ್ಯಸಂಹಿತಾಸಾರಸಮುದ್ರದೊಳ್

ಈ ಗ್ರಂಥದಿಂದ ರಾಮಸ್ತುತಿರೂಪವಾದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ಶ್ರೀಯಂ ಪಾಲಿತದಿವಿಜನಿ | ಕಾಯಂ ನಿಯಮಿತಸಮಸ್ತಲೋಕಾಭ್ಯುದಯೋ ||
ಪಾಯಂ ಕುಡುಗೆಮಗಖಿಲವಿ | ಧೇಯಂ ಶ್ರೀರಾಮನಮಳಗುಣಗಣಧಾಮಂ ||

## ಚೆನ್ನಯ್ಯ ಸು. 1720

ಈತನು ಪದ್ಮಿನೀಪರಿಣಯವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ; ಹೊಯ್ಸಳವಂಶದವನು; ಗಾರ್ಗ್ಯಗೋತ್ರದವನು; 'ಸೇನಾಧೀಶಗೃಹಾಧ್ಯಕ್ಷನಾಗಿಯೆ ಸೇನಾನಿತ್ವನಾದವನು ಪಡೆದ' ಶಿವಪೂಜಾನಿರತನಾದ ಚೆನ್ನಯಾಮಾತ್ಯನ ಮಗನು. ತನ್ನ ಪೋಷಕನಾದ ಕಳಲೆವೀರರಾಜನ (ಸು. 1720) ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ಈ ವೀರರಾಜನ ವಿಷಯವಾಗಿ ಕವಿ ಹೀಗೆ ಬರೆದಿದ್ದಾನೆ.—

ಕರ್ಣಾಟಕದೇಶದ ಕಾವೇರಿಯ ತೀರದಲ್ಲಿರುವ ಶ್ರೀರಂಗಪಟ್ಟಣವನು ಮಹಿಶೂರ ಕೃಷ್ಣೇಂದ್ರನಾಳುತ್ತಿಹನು. ಅವನ ಕುಲಪರಂಪರೆಯಲ್ಲಿ ಸೌರಾಷ್ಟ್ರದೇಶಾಧೀಶರಾದ ಕಳಲೆವಂಶದವರು ಸೇನಾನಿಗಳಾಗಿದ್ದರು. ಈ ಸೇನಾನಿಗಳಲ್ಲಿ ಕಾಂತರಾಜನು ಪ್ರಸಿದ್ಧನು. ಅವನ ಮಗ ದೊಡ್ಡಯರಾಜ. ಅವನ ಮಗ ಬಹಳಧರ್ಮಿಷ್ಠನಾದ ವೀರರಾಜ. ಇವನ ಮಕ್ಕಳು ರಾಮಭಕ್ತನಾದ ದೇವರಾಜ, ದೊಡ್ಡಯರಾಜ, ಶಿವಭಕ್ತನಾದ ನಂಜರಾಜ.

ಕವಿ ಹೇಳುವ ದೊರೆ ದೊಡ್ಡಕೃಷ್ಣರಾಜ [1713-1731] ನಾಗಿರಬೇಕು. "ಭಾಗ್ಯಪುರವಾಸ ಜಯತು" ಎನ್ನುತ್ತಾನೆ. ಈ ಭಾಗ್ಯಪುರವಾವುದೋ ತಿಳಿಯದು. ಕವಿಯ ಕಾಲವು ಸುಮಾರು 1720 ಆಗಬಹುದು.

ಇವನ ಗ್ರಂಥ

### ಪದ್ಮಿನೀಪರಿಣಯ

ಇದು ಸಾಂಗತ್ಯದಲ್ಲಿ ಬರೆದಿದೆ, ಆಶ್ವಾಸ 7, ಸಂಧಿ 18, ಪದ್ಯ 2500. ಕವಿ ಕಳಲೆ ವೀರರಾಜನನ್ನು ಸಂಬೋಧಿಸಿ ಈ ಗ್ರಂಥವನ್ನು ಬರೆದಿದ್ದಾನೆ. ವೀರರಾಜನು ಕೇಳಿದುದರಿಂದ ಇದಕ್ಕೆ ಸೊಬಗುಂಟಾಯಿತೆಂದು

ಕಳಲೆಯ ವಂಶೋದ್ಧಾರಕ ಮಹಿಶೂ | ರಿಳೆಯಾಣ್ಮಗತಿಹಿತನೆನಿಪ |
ನಲೆ ರಾಜಿಪ ವೀರೇಂದ್ರ ಕೇಳಲು ನೀಂ | ಚೆಲುವೆತ್ತುದೀಕಾವ್ಯರಚನೆ ||

ಎಂಬ ಪದ್ಯದಲ್ಲಿ ಹೇಳುತ್ತಾನೆ. ಇದರಲ್ಲಿ ತಿರುಪತಿ ವೆಂಕಟರಮಣಸ್ವಾ

ವಿಗೂ ಪದ್ಮಾವತಿಗೂ ನಡೆದ ವಿವಾಹದ ಕಥೆ ಹೇಳಿದೆ. ಇದರ ಕಥಾಗರ್ಭವನ್ನು ಕವಿ ಈ ಪದ್ಯದಲ್ಲಿ ಸೂಚಿಸಿದ್ದಾನೆ —

ಸಿತಕರಾನ್ವಯಜಾತನಾಕಾಶರಾಜನ | ಸುತೆ ಪದ್ಮಿನಿಯಿಂದಿರೆಯ |
ಪತಿ ವೆಂಕಟೇಶನ ವರಿಸಿದ ಕಥೆಯ ಸಂ | ಗತಿವೆತ್ತು ವಿಸ್ತರಿಸುವೆನು ||

ಈ ಕಥೆ ವರಾಹಪುರಾಣೋಕ್ತವೆಂದು ಹೇಳುತ್ತಾನೆ. ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ—

ಇನಿಯಳ ತಂಗಾಳಿಯ ಭಾವನ್ನದ | ಸ್ವೈನ ಜೊನ್ನದ ಜಾತಿಯಲರ |
ಘನಸಾರದ ಸೋಂಕಿನ ಸುಖವೀವುದು | ಜನಪತಿಯಾಕೃತಿವಾಕ್ಯ ||
ಇದು ಶೃಂಗಾರಾಂಗನೆಯಲಂಕೃತಿ ಕೇಳ್ | ಇದು ಕನ್ನಡದೊಳ್ನುಡಿಯು |
ಸದನಕ್ಕಲ್ಲಿ ಬೀಡು ಶುಭದಾಯುಂಬೊಲು | ನಿದು ವೃತ್ತ್ಯಾದಗಣ್ಯಪಣ್ಯ ||

ಪ್ರತಿಸಂಧಿಯ ಆರಂಭದಲ್ಲಿಯೂ ಚೆನ್ನಕೇಶವದೇವರ ಅಂಕಿತವಿದೆ. ಗ್ರಂಥಾವತಾರದಲ್ಲಿ ಚೆನ್ನಕೇಶವ ಸ್ತುತಿ ಇದೆ. ಬಳಿಕ ಕವಿ ಶಿವ, ಬ್ರಹ್ಮ, ಗಣೇಶ, ಸರಸ್ವತಿ, ಸೂರ್ಯ, ಲಕ್ಷ್ಮಿ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ದೇಶ

ಹಾಳೆಂಬುದು ಸೋಮಮಂತ್ರದ ಕಡೆಯೊಳು | ಹೂಳೆಂಬುದು ಕೇಳ್ವ ಕಥೆಗೆ |
ಕಾಳೆಂಬುದು ಪರತತ್ವದೊಳಲ್ಲದೆ ಬೇ | ಱೂಹಿಸಲಾನಾಡೊಳಿಲ್ಲ ||

ರಾಜಸಭೆ

ಹಲವುಬುದ್ಧಿಯನುಳ್ಳ ಬಹುಲಿಪಿಗಳ ಬಲ್ಲ | ಶಿಲೆಯ ಶಾಸನದಕ್ಕರದ |
ಬಲುಹುಳ್ಳ ನೆನಹುಳ್ಳ ಕರಣಿಕರೆಸೆದರು | ನಲವಿನಿಂದಾಸಭೆಯೊಳಗೆ ||
ಎಸೆವ ಕೃಷಿಕಳಕವಾಚಕಸುಶಬ್ದಗಳುಳ್ಳ | ವಸುಧೇಶಗಸುಸಮನೆನಿಪ |
ದೆಸೆಯ ವಾರ್ತೆಗಳನೋದುವ ಕೇಳ್ವ ಲಿಖಿಸುವ | ಯಶದವರೆಸೆದರೊತ್ತಿನಲಿ |
ಜರೆಯುಡೆಗಳ ಮಾಣಿಕ ಮಾನವರ ನಿ | ರ್ಜರರ ಸಮಾನಂಗೊಳಿಪ |
ಕರಶುದ್ಧಿನಿರ್ಮಳಕರಣಗಳುಳ್ಳ ವೈ | ದ್ಯರ ತಂಡ ಸಭೆಯೊಳೊಪ್ಪಿದುದು ||

### ನಕ್ಷತ್ರ

ಜಳಜಭವಾಂಡಕರಂಡಕಿಕ್ಕಿದ ಮು | ಚ್ಚಳು ಶಿಥಿಲತೆಯುವ್ವುದೆಂದು |
ಜಳಜಜ ಬೆಟ್ಟದ ಬೆಳ್ಳಿಯ ಮೊಳೆಗಳಂ | ತೊಳವಟ್ಟುವು ತಾರೆಗಳು ||

### ಮಾವಿನಮರ

ನನೆಯೊಳದಳಿರ್ ಪಸುರೆಲೆ ಮುಗುಳಲರ್ ಮಿಡಿ | ಕೊನರ್ ದೋರೆಗಾಯ್ ತನಿವಣ್ಣು |
ಕೊನೆಪರಿಯಂತ ತೀವಿರೆ ಚೂತಮೆಸೆದುದು | ಮನಸಿಜಮಂಟಪದಂತೆ ||

### ವರ್ಷಾಕಾಲ

ತೊಳ್ತಿದಕ್ಕಿಚಂಚುಗಳ್ ನೆಗೆದು ನೀಡಿದ ಕಂಠ | ಮುಗಿಲ್ದ ತುಪ್ಪುಳ್ತಿಂಕೆಗಳು |
ಮೊಳ್ತಿಯ ಮುಂಬನಿಯ ತಂಬನಿಯ ಕದ್ರಂಕಿದು | ಎರದೆ ಚಾತಕಗಳು ನಲಿದು ||

### ಶರತ್ಕಾಲ

ಮುನ್ನೀರೊಳು ನೀರ್ಗಳನೆಲ್ಲ ಕಾರ್ಮುಗಿಲ್ | ಮುನ್ನವೆ ತಂದು ಸೂಸಿದೊಡೆ |
ಇನ್ನು ಬೆಳ್ಮುಗಿಲು ಮುತ್ತುಗಳನೆ ಕಳ್ತಿದಪು | ದೆನ್ನಲಾದುದು ಶರದ್ವರ್ಷ ||

---

## ರಾಮಾಯಣಂ ತಿರುಮಲೆಯಾಚಾರ್ಯ 1722

ಈತನು ಶ್ರೀರಂಗಪಟ್ಟಣದ 64 ನೆಯ ಮತ್ತು 100 ನೆಯ ಶಾಸನಗಳನ್ನು ಬರೆದಂತೆ ಆ ಶಾಸನಗಳ ಕೊನೆಯಲ್ಲಿರುವ ಈ ಶ್ಲೋಕಗಳಿಂದ ತಿಳಿಯುತ್ತದೆ—

ಕರ್ಣಾಟಾಂಧ್ರಸುಸಂಸ್ಕೃತಕವಿತಾಗಾಂಧರ್ವಕೇಷು ಯಃ ಕುಶಲಃ |
ತೇನೇದಂ ರಾಮಾಯಣತಿರುಮಲೆಯಾಚಾರ್ಯಸೂರಿಣಾ ಫಣಿತಾಃ |
ಗ್ರಂಥಾಃ ಸಂತೋಷಾಯ ಪ್ರಭವಂತ್ವಿಹ ತಾಮ್ರಶಾಸನೇ ಲಿಖಿತಾಃ ||
ಶ್ರೀರಾಮಾಯಣಭಾರತನಾರಾಯಣವಿಹಿತವೃತ್ತಿನಾ ಕೃತಿನಾ |
ಕವಿನಾ ತಿರುಮಲೆಯಾಚಾರ್ಯೇಣೇದಂ ತಾಮ್ರಶಾಸನಂ ಲಿಖಿತಂ ||

ಈತನು ಶ್ರೀವೈಷ್ಣವಕವಿ; ಕೌಂಡಿನ್ಯಗೋತ್ರದವನು. ಇವನಿಗೆ ಸಂಸ್ಕೃತ, ಕನ್ನಡ, ತೆಲುಗು ಈ ಮೂರು ಭಾಷೆಗಳಲ್ಲಿಯೂ ಕವಿತೆಯನ್ನು ಮಾಡುವ ಶಕ್ತಿಯೂ ಸಂಗೀತದಲ್ಲಿ ಪಾಂಡಿತ್ಯವೂ ಇದ್ದಂತೆಯೂ, ರಾಮಾಯಣಭಾರತಗಳನ್ನು ಓದುವುದು ಇವನಿಗೆ ವೃತ್ತಿಯಾಗಿದ್ದಂ

ತೆಯೂ ಮೋಗಣ ಶ್ಲೋಕಗಳಿಂದ ತಿಳಿಯುತ್ತದೆ. ಮೇಲೆ ಹೇಳಿದ ಶಾಸನಗಳಲ್ಲಿ 64 ನೆಯದು 1722 ರಲ್ಲಿಯೂ ಮತ್ತೊಂದು 1724 ರಲ್ಲಿಯೂ ಬರೆದುವು. ಒಂದನೆಯದರಲ್ಲಿ ಮೈಸೂರು ದೊರೆಯಾದ ದೊಡ್ಡಕೃಷ್ಣರಾಜನು (1713-1731) ತೊಣ್ಣೂರಿನಲ್ಲಿ ಎರಡು ಅಗ್ರಹಾರಗಳನ್ನು ಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆಯೂ ಎರಡನೆಯದರಲ್ಲಿ ಕಾಂಚಿಯ ವರದರಾಜದೇವರಿಗೆ ಕೆಲವು ಗ್ರಾಮಗಳನ್ನು ಕೊಟ್ಟಂತೆಯೂ ಹೇಳಿದೆ. ಈ ಎರಡು ಶಾಸನಗಳನ್ನೂ ರಾಜನ ಆಜ್ಞಾನುಸಾರವಾಗಿ ಕವಿ ಬರೆದಂತೆ ಹೇಳುತ್ತಾನೆ. 100 ನೆಯ ಶಾಸನವು ಸಂಸ್ಕೃತದಲ್ಲಿದೆ; 64 ನೆಯದರಲ್ಲಿ ಕವಿ ಮಧ್ಯೇ ಮಧ್ಯೇ ಕೆಲವು ಕನ್ನಡ ಪದ್ಯಗಳನ್ನು ಸೇರಿಸಿದ್ದಾನೆ. ಇವುಗಳಲ್ಲಿ ಕೆಲವು ತಿರುಮಲಾರ್ಯನ (1645-1706) ಅಪ್ರತಿಮವೀರಚರಿತೆಯಿಂದ ಅನುವಾದ ಮಾಡಲ್ಪಟ್ಟುವೆ. ಕೆಲವು ಇವನ ಸ್ವಂತಪದ್ಯಗಳಾಗಿರಬಹುದು. ಒಂದನ್ನು ಉದಾಹರಿಸುತ್ತೇವೆ—

ಕೃಷ್ಣರಾಜನ ಸ್ತುತಿ

ಪರಿವಗೀವುವು ಸುರತರು | ಸುರಮಣಿಸುರಪಶುಗಳಿರೆಯುಪೊಡನೊಲ್ದೀವಂ |
ತರಸುಂ ಮಣಿಯುಂ ಪಶುವುಂ | ದೊರೆಯೇ ಶ್ರೀಕೃಷ್ಣರಾಜಧರಣೀಶ್ವರನೊಳ್||

—o—

ಲಕ್ಷ್ಮೀಕವಿ. 1723

ಈತನು ಭಾರತವನ್ನೂ ರುಕ್ಮಾಂಗದಚರಿತ್ರೆಯನ್ನೂ ಬರೆದಿದ್ದಾನೆ. ಭಾರತದಲ್ಲಿ "ಕುಕವಿಗಳೆಂಬ ಪರ್ವತಂಗಳಿಗೆ ಪವಿ ಕವಿಲಕ್ಷ್ಮೀಶೆಟ್ಟಿ ಘನಸರ್ವಲಕ್ಷಣಮಾದ ಕರ್ಣಾಟಕದ ಚತುರ್ದಶಮಾದ ಸತ್ಕೃತಿತ್ವ" ಎಂಬುದರಿಂದ ಭಾರತವು ಇವನು ಬರೆದ ಕನ್ನಡ ಗ್ರಂಥಗಳಲ್ಲಿ 14 ನೆಯದು ಎಂದು ತಿಳಿಯುತ್ತದೆ. ಉಳಿದ ಗ್ರಂಥಗಳಾವುವೋ ತಿಳಿಯದು. ಕಂದರೂಪವಾದ ಒಂದುನೀತಿಗ್ರಂಥವೂ ಏತತ್ಕೃತವೆಂದು ತಿಳಿಯುತ್ತದೆ.

ಇವನು ಶ್ರೀವೈಷ್ಣವಕವಿ; ಕಾಶ್ಯಪಗೋತ್ರದವನು; ರಾಮಚಂದ್ರನ ಮಗನು; "ಶೇಷಖಗರಾಜನವತಾರ ರಾಮಾನುಜಾ | ಧೀಶನಗ್ರಜರಿವ್ವಬಿರುಡುವೃತ್ತಮಣಿಪ್ರ | ಕಾಶಷಡ್ದರ್ಶನಸ್ಥಾಪನಾಚಾರ್ಯ ಮಾಯಾವಾದಿಕೋ|

ಳಾಹಳ || ಶ್ರೀಕನೆಪ್ಪತ್ತನಾಲ್ಕುಸವ ಸಿಂಹಾಸನಾ | ಗ್ರೇಸರನೆ ಪೆಸರಾದ ಎಂ ಬಾರ ವರವಂಶ | ದೇಶಿಕೋತ್ತಮರ" ಶಿಷ್ಯನು. ಇವನ ಸ್ಥಳ ಬಗಪುರ; ಇದು ಆನೆಕಲ್ಲಿಗೆ ಸಮೀಪದಲ್ಲಿರುವ ಹಾರುಗದ್ದೆಯ ನಾಮಾಂತರವು. ಅಲ್ಲಿಯ ದೇವರಾದ ಚೆನ್ನಿಗರಾಯನ ಅಂಕಿತದಲ್ಲಿ ಈ ಗ್ರಂಥಗಳನ್ನು ಬರೆದಿದ್ದಾನೆ. ಪೂರ್ವ ಕವಿಗಳಲ್ಲಿ ಕುಮಾರವ್ಯಾಸನನ್ನು (ಸು. 1430) ಅನುಸರಿಸುವಂತೆ ಹೇಳುತ್ತಾನೆ ಮತ್ತೊಂದುಕಡೆ "ಸುರಪುರದ ಲಕ್ಷ್ಮೀಶಕವಿಯೊರ್ವನಲ್ಲದೆ ಮಿಕ್ಕ ಬರಡುಗವಿಗಳ ಲೆಕ್ಕಿಸದ ಬಿರುದು" ಎಂಬುದರಿಂದ ಜೈಮಿನಿಭಾರತವನ್ನು ಬರೆದ ಲಕ್ಷ್ಮೀಶನಿಗೆ (ಸು. 1700) ಈಚೆಯವನೆಂಬುದು ವ್ಯಕ್ತವಾಗುತ್ತದೆ. 7ನೆಯ ಪರ್ವದ ಕೊನೆಯಲ್ಲಿ ಕವಿಯು ಸ್ತುತಿರೂಪವಾದ ಒಂದು ಪದ್ಯವನ್ನು ಹೇಳಿ ಅನೇಲೆ ಶಕ 1642 ನೆಯ ಶೋಭಕೃದ್ವರ್ಷವು ಕೇಳಿದೆ ಇದು ಬಹುಶಃ ಗ್ರಂಥರಚನಾಕಾಲವಾಗಿರಬೇಕು. ಆದರೆ ಶೋಭಕೃದ್ವರ್ಷವು ಶಕ 1646 (ಕ್ರಿಸ್ತ 1723) ಆಗುತ್ತದೆ. ಈ ಕವಿಗೆ ಪ್ರಂಭಾವಭಾರತಿ ಅಥವಾ ಗಂಡುಕಾರದೆ, ಕನ್ನಡಕವೀಂದ್ರಾಭರಣ ಎಂಬ ಬಿರುದುಗಳಿದ್ದಂತೆ ತಿಳಿಯುತ್ತದೆ ಲಕ್ಷ್ಮಿಯ ಅನುಗ್ರಹದಿಂದ ಹುಟ್ಟಿದುದರಿಂದ ಲಕ್ಷ್ಮ ಎಂಬ ಹೆಸರು ಬಂದದಂತೆ ಕವಿ ಹೇಳುತ್ತಾನೆ.

ಪೂರ್ವಕವಿಗಳಲ್ಲಿ ಬಾಣ, ವರರುಚಿ, ವಾಲ್ಮೀಕಿ, ವ್ಯಾಸ, ದಂಡಿ ಭವಭೂತಿ, ಕಾಳಿದಾಸ, ಕುಮಾರವ್ಯಾಸ, ಲಕ್ಷ್ಮೀಪತಿ ಇವರುಗಳನ್ನು ಸ್ಮರಿಸಿದ್ದಾನೆ.

ತನ್ನ ಕವಿತಾಶಕ್ತಿ, ಪಾಂಡಿತ್ಯ ಮುಂತಾದ ವಿಷಯಗಳನ್ನು ಈ ಪದಗಳಲ್ಲಿ ಹೇಳಿದ್ದಾನೆ—

ವಿಗಡಕವಿವರ್ಗಘನನಿಕರಚಂಡಾನಿಲಂ |
ಸುಗುಣವಿದ್ವತ್ಕವಿಸಮೂಹಮಂದಾನಿಲಂ |
ಜಗದಿ ಶಾಬ್ದಿಕ್ಬ್ವಮಂ ರಚಿಸಿ ಕೋಟಲೆಗೊಳ್ವ ಜಡಕವಿಯುರವ್ಯಾನಿಲಂ |
ವಿಗೆ ಪೂರ್ವಕೃತಿಚೋರಕಲಿತಮಂಧಾಕರ ವರ |
ಬಗಪುರದ ರಾಮಚಂದ್ರನ ಲಕ್ಷ್ಮನೆಂದು ತಾಂ |
ಬಗೆಯಚೆವ ದಿನಕರಹುದೆನ್ನದಡೆಯೆನ್ನ ಸತ್ಕವಿಶೆ ವರ್ತಿಪುದೆ ಧರೆಗೆ ||

ಲೋಕತ್ರಯಂ ತನ್ನ ಶೇಷಮೆಂದನು ಬಾಣ |
ಸಾಕಲ್ಪದ ಕವಿಗಳನ್ನೆಸೆಸುವೆನ ಎಂದನಂ |
ದಾಕುಮಾರವ್ಯಾಸನವರ ಸುಧಿಯುಸ್ತುತಿಯು ಕೈಕೊಂಡು ಜಗವುರದೊಳು ||
ಶ್ರೀಕಮನಚೆನ್ನರಾಯನ ವರಂಬೆತ್ತು ತಾಂ |
ಬೇರಾದ ವರ್ಣವಸ್ತುಕಕಾವ್ಯಮಂ ಪೇಳ್ದು |
ವ್ಯಾಕರಣಪಾಂಡಿತ್ಯದಿಂದುಬ್ಬಿದ ಕುಕವಿಗಳು ತೃಣವೆಂದನಾಲಕ್ಷ್ಮನು ||
ಹರಿಯಿತ್ತ ವರ ಬರೆದುದೆಲ್ಲಂ ಕವಿತ್ವವಿ |
ಸ್ತರಪ್ರಬಂಧಕೆ ಚಕ್ರವರ್ತಿ ತತ್ತ್ವಾರ್ಥಕ್ಕೆ |
ನರಜನ್ಮಶೇಷ ಶಿಕ್ಷಣಾಯುಕ್ತಿಯೊಳಗೆ ಕನ್ನಡಕಾಳಿದಾಸನೆನಿಸಿ ||
ವರತಪಸ್ಸಿಂದ ಪುಂಭಾವಭಾರತಿಯೆನಿಪ |
ಧರುದುವೆಸರಾಂತ ಸತ್ಕವಿರಾಮಲಕ್ಷ್ಮನಿಗೆ |
ಸರಿಯೆಂಬ ಕನ್ನಡಕವಿಗಳು ಪಾಪಿಸಿ ಸೋಲ್ತರಂತಾಗಿ ಮುನ್ನಿನವರೊಲು ||

ಬರೆದವನೀತ ತೊಡಿಸಿದ ಕವಿಯಲ್ಲ ಪದಗಳನಿಟ್ಟು ಮರಳಿ ಯೋಚಿಸ ಕವಿಯಲ್ಲ.

ಇವನ ಗ್ರಂಥಗಳಲ್ಲಿ

1. ಭಾರತ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ. ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 7 ಪರ್ವಗಳೂ 8 ನೆಯ ಪರ್ವವಾದ ಕರ್ಣಪರ್ವದಲ್ಲಿ 4 ಸಂಧಿಗಳೂ ಇವೆ; ಒಟ್ಟು ಸಂಧಿ 99, ಪದ್ಯ 4187. "ಭಾರತವನಾನಾದಿಪವಿರದೊಡನೆ ಕೇಳ್ದ ವಿದ್ವತ್ಸಭೆಗಳಹುದೆನೆ", "ಭಾರತಕಥೆಯು ಕನ್ನಡದಿ ವಿಸ್ತರಿಪೆ" ಎಂಬುದರಿಂದ ಭಾರತಕಥೆಯನ್ನು ಪೂರ್ತಿಯಾಗಿ ಬರೆದಿರಬೇಕು. ಆದರೆ "ಕೃಷ್ಣಾರ್ಜುನರ ಬಾರಬೀಳ್ಕೊಂಡವ ಧಾರಿಣಿಯೊಳಭಿವರ್ಣಿಪೆಂ, ಕೃಷ್ಣಾರ್ಜುನರ ಸಂಗ್ರಾಮವಂ ವರ್ಣಿಪೆಂ, ಅಚ್ಯುತಾರ್ಜುನರ ಸಲ್ಲೀಲೆ" ಎಂಬುದರಿಂದ ಈ ಭಾಗಕ್ಕೆ ಕವಿ ವಿಶೇಷವಾಗಿ ಗಮನವನ್ನು ಕೊಟ್ಟಿರುವಂತೆ ತೋರುತ್ತದೆ. ಭಾರತಕಥೆಯನ್ನು ವರ್ಣಿಸುವುದು ಸದರವಲ್ಲ ಎಂಬ ಅಂಶವನ್ನು ಈ ಪದ್ಯದಲ್ಲಿ ಹೇಳಿದ್ದಾನೆ—

ನೆಟ್ಟಕ್ಕೆ ಕನಕಗಿರಿಯಾಗಿ ದೀವಾಳಿಗಂ |
ಕೊಟ್ಟಶದ ಸರ್ಪಸಾಗರವಾಗಿ ಸ್ಥಾವರದ |
ವೊಟ್ಟವೊಸಪರ್ಣಗಳ್ ತಾಂ ಯೋಲೆಯೆನಿಸೆ ಮುನಿಬಾಣಾಸುರರು ಕರಗಳ ||
ಮೆಟ್ಟಿ ಕೂಡೆ ಶೇಷನಿಟ್ಟಾಗಿರದ ಚಕ್ರಯುಂ |
ನಿಟ್ಟಳದೊಳೀಯೆ ಸುರಕುಜ ಕಂಠವಾಗೆ ಬರೆ |
ದುಷ್ಟೇನಿಲಸದಳದ ಭಾರತವ ಪೇಳ್ದನೀಗಂಡುಶಾರದೆ ಧರೆಯೊಳು ||

ಅಲ್ಲದೆ ಭಾರತಕಥೆಯ ವಿಷಯದಲ್ಲಿ—

ಸಕಲ ವೇದಶಾಸ್ತ್ರವೆಂಬ ಪುಣ್ಯನದಿಗಳಂ ರಾಸಿಗೈದು ಬ್ರಹ್ಮನು ಭಾರತವೆಂಬ ವಾರಾಶಿಯಂ ವ್ಯಾಸನೆಂಬ ಮಂದರದಿಂ ಕಡೆಯಲ್ಕೆ ದ್ರೌಪದಿಯೆಂಬ ಲಕ್ಷ್ಮಿಯೂ ಭೀಷ್ಮನೆಂಬ ಸುರಭೂಜವೂ ಯುಧಿಷ್ಠಿರನೆಂಬ ಚಂದ್ರನೂ ಭೀಮನೆಂಬ ಐರಾವತವೂ ಅರ್ಜುನನೆಂಬ ಉಚ್ಚೈಶ್ರವಸ್ಸೂ ಕೃಷ್ಣನೆಂಬ ಅಮೃತವೂ ಕೌರವನೆಂಬ ಹಾಲಾಹಲವೂ ವಿದುರನೆಂಬ ಕಾಮಧೇನುವೂ ದ್ರೋಣನೆಂಬ ಚಿಂತಾರತ್ನವೂ ಗಾಂಧಾರಿಯೆಂಬ ಜ್ಯೇಷ್ಠಾದೇವಿಯೂ ಹುಟ್ಟಿದರು—

ಎಂದು ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಬಗಪುರದ ಚೆನ್ನಿಗರಾಯನ ಸ್ತುತಿ ಇದೆ. ಬಳಿಕ ಕವಿ ಲಕ್ಷ್ಮಿ, ಶಿವ, ಗಣೇಶ, ಸರಸ್ವತಿ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇನೆ—

### ಸೂರ್ಯೋದಯ

ಕತ್ತಲೆಯೆಂಬ ಗಜವೂತ್ತಮಂ ರವಿಸಿಂಹ |
ನೆತ್ತಿಯನ್ನಿಡರಿಯುವುದೊತ್ತಿ ಪಲ್ಗಳನೆ ಮುಸ|
ಯುತ್ತ ಮಸ್ತಕಮಣಿಯ ಕಿತ್ತು ದೆಸೆದೆಸೆಗೆ ಚೆಲ್ಲುತ್ತಿಸೆವ ರೀತಿವೆತ್ತು ||
ಮುತ್ತರುಣನುದಯಮೆಯ್ದಿತ್ತು ಸತ್ಕಿರಣ ಪ |
ರ್ವೆತ್ತು ಚಾರರಿಗದೇ ವಿತ್ತು ಪದ್ಮಗಳ ಸಂ |
ಪತ್ತು ಕೈರವಕೆಯಾಪತ್ತನಲ್ಪಕರ್ ತೋಜ'ತ್ತು ಪರಿಶೋಭಿತದೊಳು ||

### ವರ್ಷಾಕಾಲ

ಕಲ್ಲನಾಗನದಿ ಕಾಳ್ಕೀಳ್ವುಗಳ್ ಸಱಸುಟ್ಟು |
ಱ
ತಿಱನೆ ತಿರುಗಿದುವಾರ್ದುಂದುಭಿಯನಿಲನ ವಶದಿ|
ಱ
ಸುಱನಂಬುಧಿಯ ಜಲಮಂ ಪೀರ್ದುಕಾಂ ಜಲಕ್ರೀಡೆಯಂ ಮಾಳ್ಪಕಱದಿ ||
ಱ
ಬಿಱನೆಱಗುವ ಸಿಡಿಲ್ಕಿಂಚಾಲಿಗಲ್ಗಳಿಂ |
ಱ
ತಱನೆ ಬಲ್ಲಿತ ಕುಲಗಳಿಗೆ ತಂಪುಗಾಣಿಸುತ |
ಱ
ಸೆಱ ನೆಱನೆ ಸರಿವಟ್ಟಿಗಳಿಲ್ಲಗ ಪೂಯುದ್ಧವಾದಿವರಾತ್ರಿಯನ್ನದಳಿಗೆ ||
ಱ　ಱ

### ಸ್ತ್ರೀವರ್ಣನೆ

ಹಾಱಿದುವು ಹಂಸೆಮಲ್ಲಟ್ಟಿಗಳಾನಡೆವುಂದಿಗೆ |
ಹಾಱಿದುವು ನಲ್ನುಡಿಗೆ ದನಿಗೆ ಗಿಳಿಪರವುಟ್ಟು |
ಬಾಱಿದುವು ಚಕ್ರಯುಗನವಿಲು ಜಾತಿಸ್ತ್ರೀಯುರುಗಳ ಕುಚಯುಗನಟನೆಗೆ ||
ಊಱಿ ನೀರೊಳಗೆ ತಲೆಕೆಳಗಾಗಿ ನೋಗಬಾಡಿ |
ತಾಱಿತಟ್ಟಾದುವಾವುತ್ಪಲ ಕುಮುದಾಳಿಗಳು |
ನೀಱೆಯರ ಕಣ್ಗಳ ವಿಲಾಸಕ್ಕೆ ನಾಣ್ಚಿ ಮರುಳಾಗದವರಾರಿಳೆಯೊಳು ||

### ಅರ್ಜುನ ಪರಿಹಾಸ

ಏನಿಪೆದ್ದಿರುವಾಧ್ವರಲ್ಲಿಗ್ಗೆದುವಿರಿಯಾ |
ಮಾನಿನಿಗೆ ಮನವೆಳಸಿತೇ ನಿಮಗೆ ನೋಡೆ ಸಂ |
ಧ್ಯಾನುಕ್ರಮನೆ ನಿತ್ಯಕರ್ಮವೇ ಜಪಹೋಮದೇವತಾರ್ಚನೆಯೆ ಬಟ್ಟೆ |
ಈನಿರುದ್ಧಕೆ ದೊರೆದೊರೆಗಳ ಭಂಗಿಪ ಧನುವ |
ನಾನಲಾಪಿರೆ ಎಂದು ಭೂಸುರಸ್ತೋಮ ನಗೆ |
ಸೋನೆಯಂ ಸುರಿದರಲ್ಲಲ್ಲಿಯಱಿಯದೆ ಪಾರ್ಥನೆಂಬ ನಿಶ್ಚಯದಿರವನು ||

## ಕೃಷ್ಣನಿಂದೆ.

ಚೆಲ್ಲಿಗೊಂಡನೆ ಕವರಿ ಬೆಣ್ಣೆವಾಲ್ಗಿನೆಗಳಂ |
ಗೊಲ್ಲಪಳ್ಳಿಯಲಿ ಕದ್ದುಂಡು ಪೂತನಿಯ ತನು |
ವಲ್ಲಿಪರ್ ಕೆನ್ನೀರ ಸುರಿದು ಗೋಪಾಂಗನೆಯರಲ್ಲಿ ಕಳವಿನಲಿ ಸಿಕ್ಕಿ ||
ಕೊಲ್ಲದ ಕೊಲೆಗೆ ಸೊಕ್ಕಿ ನೇಣಿಸಿಂದಂ ಕೊರಲಿ |
ನಲ್ಲಿ ಕಟ್ಟಿಸಿಕೊಂಡು ಕರಿಯುಹೀಲಿಯುನುಟ್ಟು |
ಸುಲ್ಲರೊಳ್ ಕಾದಿ ಮೈಗರೆದ ಮಾನವಗಗ್ರಪೂಜೆಯೇ ಭೂಪಾಲಕ ||

## ಅಭಿಮನ್ಯುಪರಾಕ್ರಮ.

ಎಚ್ಚ ಪರಬಾಣಗಳನೆಡೆಗೆಡೆಗೆ ಖಂಡಿಸುವ |
ಮುಚ್ಚಿ ಬಹ ನಾಯಕರ ಮುದಗೆಡಿಪ ಮೋಹರಿಪ |
ನುಚ್ಚುಗರ ಸುಗ್ಗಿಸುಗ್ಗಿವ ಸೂಟಿವಾಣಸೋಟಿ'ನಲಿ ನೆಲಕೆ ಬೊಬ್ಬಿಡುತ್ತ ||
ಕೊಚ್ಚುವಂ ಕೊರ್ಚಿದು ಧಟ್ಟುಖರ್ವಂ ಭೋ ಎಂದು |
ಸಿಡುರ್ವಸ್ತ್ರರಗಳನು ಬಿಡುರ್ತಂ ವರ್ಣಿಸು |
ಅಚ್ಚರಿ ಧನಂಜಯಾತ್ಮಜನತಿಚಮತ್ಕಾರವೆಂತುಟೋ ಸಂಗರದೊಳು ||

## 2 ರುಕ್ಮಾಂಗದ ಚರಿತ್ರೆ.

ಇದೂ ವಾರ್ಧಕಷಟ್ಪದಿಯಲ್ಲಿ ಬರದಿದೆ; ಸಂಧಿ 17, ಪದ್ಯ 953. ಇದರಲ್ಲಿ ನಾರದೀಯಪುರಾಣದೊಳಗೆ ವಸಿಷ್ಠನು ಮಾಂಧಾತನಿಗೆ ಹೇಳಿದ ಏಕಾದಶೀಮಾಹಾತ್ಮ್ಯವು ವರ್ಣಿತವಾಗಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಹೀಗೆ ಹೇಳಿದ್ದಾನೆ.—

ಸಲ್ಲಲಿತಮಾಗಿ ಸರಸೋಕ್ತಿಗೇಹಾಗಿ ಏಭ |
ಪ್ರೋಲ್ಲಾಸಕಂಪಾಗಿ ಲಲಿತಪಟ್ಟರಣಾಂಗ |
ಚೆಲ್ಲಿದೆಯೊಳೊಪ್ಪಿತರ್ಲವಾಗಿ ಕೇಳುವರ ಕರ್ಣಕಮೃತಾಸ್ವಾದವಾಗಿ |
ಸೊಲ್ಲು ಸೊಲ್ಲಿಂಗೆ ರಮ್ಯವಸೀಯುತಿದೆ.
ತೀಗೊಳದೊಳೊಲೆವ ಕೆಂದಾವರೆಗಳಂತೆ ಪೊಂ |
ಗಳಸಳುಹದಬಳೆಯರ ತನುಸೊಬಗಿನಂತೆ ಪ್ರ |

ಜ್ವಲಿಸಿ ಥಳಥಳಿಪ ಪೂರ್ಣೇಂದುಮಂಡಲದಂತೆ ಸಿರಿಯ ಮಾಂಗಲ್ಯದಂತೆ ||
ಪೊಳೆವಿಂದುಕಾಂತಭಿತ್ತಿಗಳವೋಲ್ ಪನ್ನೀರ |
ತಳೆದು ತೇದಿಟ್ಟ ಬಾವನ್ನದಿಂಪುಗಳಂತೆ |
ಥಳಥಳಿಸಿ ಸೊಗಸೆಸಿ ಕಾಂತಿಯಿಂ ಶಾಂತಿಯಿಂ ಕಾವ್ಯ ಕಡುಸೊಂಪೀವುದು ||

ಗ್ರಂಥಾವತಾರದಲ್ಲಿ ಬಗಪುರದ ಚೆನ್ನಕೇಶವಸ್ತುತಿ ಇದೆ. ಬಳಿಕ ಕವಿ ಶಿವ, ಗಣಪತಿ, ಸರಸ್ವತಿ, ಲಕ್ಷ್ಮಿ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಚಂದ್ರೋದಯ.

ಮಾರನಸ್ತ್ರಂಗಳಂ ಮಸೆವ ಪೊಸಸಾಣೆಯೋ |
ಧಾರಿಣಿಯ ವಿರಹಿಗಳನರಿವ ಪಾಱುಂಬಳೆಯೊ |
ಶ್ರೀರಮಣಿಯುಣುಗನಂಗನೆ ಪಿಡಿದ ಕೈಪಿಡಿಯೊ ಸುಮನಸರ್ ಬೆಳ್ಗಂಗಳ ||
ಓರಂತೆ ಧರೆಗೆ ಕುಮ್ಮರಿಸಿದರ್ ಭಾಂಡವೋ |
ಕಾರೊಡಲನುರದೊಳೊಪ್ಪುವ ಕೌಸ್ತುಭಾಕೃತಿಯೊ |
ಮೀಱುತಿಂದ್ರನದಿಶಾವನಿತೆ ಧರಿಸಿರ್ಪ ಸಿಂದೂರಬೊಟ್ಟೆನೆ ಶಶಾಂಕ ||

ಉದ್ಯಾನವನ.

ಮಲ್ಲಿಗೆಯ ಪುಷ್ಪರಸಮಂ ಸೋಂಕುತೀಂಟುತಂ |
ಮೊಲ್ಲೆಯ ಪರಾಗಮಂ ತೆಗೆದು ತೇಂಕಾಡುತಂ |
ದುಲ್ಲಾಸದೊಳ್ ಕೇತಕಿಯ ಮೇಲಣದ್ರ್ ಪಾಟಲದ ಸೌರಭವ ಪೀರ್ದು ||
ನಿಲ್ಲದಾ ವನದೊಳ್ ತಿರುಕನಿಕರದಂತೆ ತಳೆ |
ವಿಲ್ಲದರೆಗಱಿಗೆಯುಂ ನಿಲ್ಲದಾಕುಸುಮಂ |
ಸಲ್ಲ ಭೃಂಗಾಳಿಗಳ್ ಝೇಂಕಾರಮಂ ಗೈದುವಾನಂದಮಿಮ್ಮಡಿಸಲು ||

ಸ್ತ್ರೀಯರು.

ನುಡಿಗಳಿಂದಮೃತಮೊಸರ್ವಂತೆ ಮುಖರಸದೊಳಂ |
ಗಡಲ ತನಯನನೇಡಿಪಂತೆ ನಗೆಯಿಂದ ಮುಗು |

ಕಿರಿದ ಮಲ್ಲಿಗೆಯ ಸುರಿವಂತೆ ಕುಡಿನೋಟದಿಂ ಲೋಕಮಂ ಮೋಹಿಪಂತೆ |
ನಡೆಯಿಂದ ಹಂಸೆದಂತಿಗಳ ಸೋಲಿಸುವಂತೆ |
ಕಡುಚಾರ್ಕಗಾತಿಯರ್ ಕಂಜದಳನೇತ್ರೆಯರ್ |
ಬಡನಡುವಿನಬಲೆಯರ್ ಬಲುವಿಟರ ಧೈರ್ಯಾಪಹಾರಿಯರ್ ಸೊಗಯಿಸಿದರು ||

3 ನೀತಿಕಂದ.

ಇದರಲ್ಲಿ ಸುಮಾರು 250 ಪದ್ಯಗಳಿವೆ; ಪ್ರತಿಪದ್ಯವೂ "ಖಗಪುರಿಚೆನ್ನಾ" ಎಂದು ಮುಗಿಯುತ್ತದೆ. ಕೆಲವು ಪದ್ಯಗಳನ್ನು ಉದಾಹರಿಸುತ್ತೇವೆ—

ಗೂಡಿಗೆ ಸಿಲ್ಕಿದ ಹುಲಿಯುಂ | ನೋಡದೆ ತೆಗೆವನನ ಗಾದೆಯಾಗದೆ ಮಾಣದು |
ಕೇಡಾಳಿಗೆ ಮುನ್ನರಿಯದೆ | ಮಾಡಿದ ಹಿತವಹಿತವಹುದು ಖಗಪುರಿಚೆನ್ನಾ ||
ಛಲವಿಲ್ಲದಿಪ್ಪ ಕೋಪಂ | ಗೆಲವಿಲ್ಲದ ಬೂಟಿನಂತೆ ದೊರೆಯಾಗಿರ್ದಂ |
ಬಲವಿಲ್ಲದಿರ್ಪ ಧರೆಯೊಳ್ | ಫಲವಿಲ್ಲದ ವೃಕ್ಷದಂತೆ ಖಗಪುರಿಚೆನ್ನಾ ||

---

ಚೆಲುವಾಂಬೆ. ಸು. 1725.

ಈಕೆ ವರನಂದೀಕಲ್ಯಾಣ, ವೇಂಕಟಾಚಲಮಾಹಾತ್ಮ್ಯ ಲಾಲಿಪದ, ಅಲಮೇಲುಮಂಗೆಲಾಲಿಪದ, ತುಲಾಕಾವೇರೀ ಮಾಹಾತ್ಮ್ಯ ಟೀಕೆ ಇವುಗಳನ್ನು ಬರೆದಿದ್ದಾಳೆ. ಇವಳು ಮೈಸೂರು ದೊರೆಯಾದ ದೊಡ್ಡ ಕೃಷ್ಣರಾಜನ (1713-1731) ಮಹಿಷಿ; ದಳವಾಯಿ ಗೋಪ್ಯೇಂದ್ರನ ತನುಜ ಕಳಲೆಕಾಂತನೃಪನ ಮಗಳು. ಗಂಡನ ಅಜ್ಞಾನುಸಾರವಾಗಿ ವರನಂದೀಕಲ್ಯಾಣವನ್ನು ರಚಿಸಿದಂತೆ ಹೇಳುತ್ತಾಳೆ. ಈ ಗ್ರಂಥವು ತಿರುಪತಿ ವೇಂಕಟರಮಣಸ್ವಾಮಿಯ ಅಂಕಿತದಲ್ಲಿ ಬರೆದಿದೆ.

ಇವಳ ಗ್ರಂಥಗಳಲ್ಲಿ—

1. ವರನಂದೀಕಲ್ಯಾಣ.

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 7, ಪದ್ಯ 881. ಇದರಲ್ಲಿ ಡಿಳ್ಳಿ ಪಾದಶಾಹನ ಮಗಳಾದ ವರನಂದಿನಿಗೂ ಮೇಲುಗೋಟೆ ಚೆಲುವರಾಯಸ್ವಾ

ಮಿಗೂ ನೆಡೆದ ಮದುವೆ ವರ್ಣಿತವಾಗಿದೆ. ಸತ್ಯಭಾಮೆಯೇ ವರನಂದಿಯಾಗಿ ಹುಟ್ಟಿದಂತೆ ಹೇಳಿದೆ. ಗ್ರಂಥಾವತಾರದಲ್ಲಿ ವೇಂಕಟೇಶನ ಸ್ತುತಿ ಇದೆ. ಬಳಿಕ ಗುರು ಮೊದಲಾದ ಯತೀಂದ್ರಮಧ್ಯಮವಾದ ಶ್ರೀಧರ ಪರ್ಯಂತವಾದ ಗುರುಪರಂಪರೆಗೆ ಎರಗಿ, ವ್ಯಾಸವಾಲ್ಮೀಕಿಮೊದಲಾದ ಕವಿಗಳನ್ನು ವಂದಿಸಿ, ಪರಕಾಲಗುರುವಿನ ಅನುಜ್ಞೆಯೊಳು ವೇಂಕಟೇಶನಿಗೂ ಅಲಮೇಲುಮಂಗೆಗೂ ಪ್ರಪತ್ತಿಯನ್ನು ಮಾಡಿ "ಅಚ್ಚಗನ್ನಡದಿನಿವಾತ ಚೆನ್ನತೆಗೊಳಿಸಿ ವರ್ಣಕದಿ ಬನ್ನಣೆಗಳನಟ್ಟಿ ವರನಂದಿದೇವಿಯ ಚರಿತವ ಪೇಳ್ವೆ"-ಎಂದು ಗ್ರಂಥವನ್ನು ಆರಂಭಿಸಿದ್ದಾಳೆ.

ಇವಳ ಬಂಧವು ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

### ವರನಂದಿಯ ಸೌಂದರ್ಯ.

ನೋಡುವ ನೈದಿಲುಗಳೊ ಕಂಗಳೊ ಮಾ | ತಾಡುವ ಮುಕುರವೊ ಮೊಗವೋ |
ಪಾಡುತಿರುವ ಪೊಂಬಣ್ಣದ ಶಂಖವೊ | ಗಾಡಿಕಾತಿಯ ಸುಗ್ಗೊರಲೋ ||
ಸಡೆವೆಳಮಿಂಚೊ ಪೊಂಜಳಿಮುಡಿಯೊ ಬಿಡದುಸಿ|ರ್ದುವ ಸಂಪಗೆಯೊ ನಾಸಿಕವೋ |
ಕಡುಸವಿಯೇರಿದ ಮಿಡುಕುತಿಪ್ಪ ಪವಳವೊ | ಬೆಡಗಿಯ ಚೆಂಬಣ್ಣದುಟಿಯೋ ||
ಮೊಗದಾವರೆಗಂಪ ಕೊಳಲೆಂದು ಬಂದು ಸಂ | ಪಗೆಯಿಂದು ಬಗೆದು ನಾಸಿಕವ |
ಮುಗಿದು ಪೆಱಗೆ ನಿಂದ ತುಂಬಿವಿಂಡೆಂಬಂತೆ | ಬಗೆಗೆ ಬಂದುದು ಮುಡಿಯವಳ ||

### ವರನಂದಿಯ ವಿರಹ.

ಕುಸುಮಬಾಣಗಳೆಂದು ನಿನ್ನ ಶರಗಳಿಗೆ | ಪೆಸರನಿಟ್ಟವರಾರೊ ತಿಳಿಯೆ |
ಮಸೆದು ಕಿತ್ತಡಸಿ ನುಂಗುವ ಮಾರಿಯ ಬಾಯ|ಬಿಸದ ದಾಡೆವೊಲು ತೋಱುವುವು ||
ಕುಸುಮವೆಂದಳಿಗಳು ಮುಸುಕಲು ಗಱಿಸೇದು | ಮಸಿಯಂತೆ ಕಱಕುವಡೆದುವು |
ಬಿಸದ ಗುಳಿಗೆಗಿಂತೊಳುವೆಸರಿಟ್ಟು ಮಾ | ನಿಸರ ಕೊಲ್ಲುವನಂತಕನು ||
ಸಂಗರದೊಳು ಶೂರರು ಪುಲ್ಲ ಕರ್ಚೆ ಮು | ರಂಗಳ ಪತ್ತೆ ಕಾದಪರು |
ಅಂಗನೆಯರೊಳು ಕ್ಷಯತ್ರೀಮದನನು | ಹೆಂಗೊಲೆಗೆಂದೆ ಪುಟ್ಟಿದನು ||

ಪುಸಿನದುವೆನಿಸುವಾಗಸದೊಳಗೊಡರಿಸಿದ |
ಮಿಸುಪ ಸುಟಿಪ್ರೊಕುಟಿಸಿಸಿಸಿವ ತಣ್ಗೊಳದ |
ಮಿಸುಸಿಯಿಂದೆಸಗಿರುವ ಪಡಿಗಳನಲೊಗೆದ |
ಪೊಸತಿವಳ ರಾಜಿಪ್ಪುದು ಕಣ್ಗಳಿಗೆ ಜನದ || ೮೦೮ ||

4 ತುಲಾಕಾವೇರೀ ಮಾಹಾತ್ಮ್ಯ ಟೀಕೆ

ಇದು ಆಗ್ನೇಯಪುರಾಣೋಕ್ತವಾದ ತುಲಾಕಾವೇರೀ ಮಾಹಾತ್ಮ್ಯಕ್ಕೆ ಗದ್ಯರೂಪವಾದ ಕನ್ನಡ ವ್ಯಾಖ್ಯಾನ ; ಅಧ್ಯಾಯ 11. ಇದಕ್ಕೆ ಚೆಲುವಾಂಬಿಕಾವಾಣೀವಿಲಾಸವೆಂದು ಹೆಸರು. ಗ್ರಂಥಾಂತ್ಯದಲ್ಲಿರುವ ಒಂದುಶ್ಲೋಕ[1]ದಿಂದ ಚೆಲುವಾಂಬಿಕೆಯ ಅಂಕಿತದಲ್ಲಿ ಮೌದ್ಗಲ್ಯಗೋತ್ರದ ವೆಂಕಟಾರ್ಯನ ಮಗನಾದ ಶ್ರೀನಿವಾಸನು ಈ ಟೀಕೆಯನ್ನು ಬರೆದಂತೆ ತೋರುತ್ತದೆ.

— o —

ಪಟ್ಟಾಭಿರಾಮ ಸು 1725

ಈತನು ರತ್ನಶೇಖರಚರಿತ್ರೆಯನ್ನು ಬರೆದಿದ್ದಾನೆ. ಇವನು ಸ್ಮಾರ್ತ ಬ್ರಾಹ್ಮಣನೆಂದು ತೋರುತ್ತದೆ. ಇವನ ತಂದೆ ಕೋದಂಡರಾಮನ ಶಿವಶೇಖರ, ತಾಯಿ ಸೋಮಾಂಬೆ, ಸಹೋದರನು "ಧೀಮಣಿಸಕಲಕಲಾಭಿಜ್ಞ ಫಣಿಸಾರ್ವಭೌಮನಾಗ್ರಭವನೆನಿಪ" ರಾಮಕವೀಂದ್ರ. "ವಾನಿಲಿನಾಟಿ ರಾಘವಪಾದಪದ್ಮಾರಾಧಕನು" ಎಂದು ಹೇಳಿಕೊಂಡಿರುವುದರಿಂದ ಕವಿಯ ಸ್ಥಳವು ವಾನಿಲಿನಾಟಿಯಾಗಿರಬಹುದು. ಈ ಗ್ರಂಥರಚನೆಗೆ ಕಾರಣವನ್ನು ಹೀಗೆ ಹೇಳುತ್ತಾನೆ—

ಪಶ್ಚಿಮಸಮುದ್ರದ ತೀರದಲ್ಲಿ ತುಳುವದೇಶದೊಳಗೆ ಮಲೆನಾಡ ಪಾತುಸಾಹನ ನಾದ ಸೋಮಶೇಖರನೆಂಬ ದೊರೆಯಿದ್ದನು. ಪೂರ್ವ ವೇಣುಪುರದಲ್ಲಿ [ಮುಂದ

1. ಮೌದ್ಗಲ್ಯಾನ್ವಯದುಗ್ಧಸಿಂಧುರಜನೀಕಾಂತೇನ ಪುಣ್ಯಾತ್ಮನಾ
ಶ್ರೀನಿವಾಸಾಖ್ಯವಿಪಶ್ಚಿತಾ ಜನಿಜುಷಾ ಶ್ರೀವೇಂಕಟಾರ್ಯಾದ್ಭುವಿ |
ವ್ಯಾಖ್ಯಾನಂ ಚ ತುಲಾಕವೇರತನ್ಯಾಪುರಾಣಲೀಲಾಮಹಿಮ್ನಃ ಕೃತಂ
ಕರ್ಣಾಟೋಕ್ತಿಮಯಂ ಪರಂ ವಿಜಯತಾಮಾಸೇತುಶೀತಾಚಲಂ ||

ಬಿದಿರೆ) ಚೌಟಕುಲಶೇಖರನಾದ ಚಿಕ್ಕರಾಯನೆಂಬ ಚೌಟರಾಜನ ವಂಶದಲ್ಲಿ ಜನಿಸಿದ ಅಬ್ಬಕ್ಕದೇವಿಯೇ ಮುಂತಾದವರು ಆಳುತ್ತಿದ್ದರು. ಆ ಪಟ್ಟಣದ ಬೆಟ್ಟಕೇರಿಯಲ್ಲಿ ರುವ ವೀರನಾಥನ ಬಸದಿಯಲ್ಲಿ ಪ್ರಭಾಚಂದ್ರಮುನಿಯಿದ್ದನು. ಈತನ ಶಿಷ್ಯ ಗುಮ್ಮಣ್ಣಸೆಟ್ಟಿ; ಇವನ ಹೆಂಡತಿ ಗುಮ್ಮಕ್ಕ; ಇವರ ಮಕ್ಕಳು ಪದುಮ, ಶಾಂತ, ಅಕ್ಕಮ್ಮ. ಈ ಪದುಮನನ್ನು ಪ್ರಭಾಚಂದ್ರನು ಕರೆದು ಪುಷ್ಪಾಂಜಲಿಯನೋಂಪಿಯ ಕಥೆಯನ್ನು ಕನ್ನಡದಲ್ಲಿ ಬರೆಯಿಸ ಹೇಳಿದನು. ಪದುಮನು ತನ್ನ ಸ್ನೇಹಿತನಾದ "ಕವಿಕುಲತಿಲಕ ಚೂಡಾಮಣಿ" ಪಟ್ಟಾಭಿರಾಮನಿಂದ ಈ ಗ್ರಂಥವನ್ನು ಬರೆಯಿಸಿದನು.

ಚೌಟರಾಜರ ಪರಂಪರೆಯಲ್ಲಿ ಚಿಕ್ಕರಾಯ ನಿಂದೀಚೆಗೆ ಒಬ್ಬಳು ಅಬ್ಬಕ್ಕದೇವಿ ಸುಮಾರು 1720 ರಲ್ಲಿ ಆಳಿದಂತೆ ತಿಳಿಯುತ್ತದೆ. ಕವಿಯ ಕಾಲವು ಸ್ವಲ್ಪ ಹೆಚ್ಚು ಕಡಮೆ ಇದೇ ಆಗಿರಬಹುದು. ಕವಿ "ಭಾವಜ್ಞ ಪ್ರಕುರಭಂದೋವಿದ ಮೃದುಕವಿತಾವಿಶಾರದನು" ಎಂದೂ "ಸಕಲಸುಕವಿ ಜನಮನೋವನವಸಂತ ವಿವಿಧಭಾಷಾವಿಶೇಷಪ್ರಬಂಧಬಂಧುರವಾಚಾಮಾಧುರ್ಯಧುರೀಣನು" ಎಂದೂ ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ ಕವಿಪರಮೇಷ್ಠಿ, ಸುಜನಮನೋಜ, ಶ್ರೀವಿಜಯ, ಆದಿಪಂಪ, ಅಗ್ಗಳ, ನೇಮಿಚಂದ್ರ, ಗಜಾಂಕುಶ ಇವರುಗಳನ್ನು ಈ ಪದ್ಯಗಳಲ್ಲಿ ಸ್ತುತಿಸಿದ್ದಾನೆ—

ಮಂಗಳಕರಪುರಾಣಂಗಳ ಕಥನ | ಹಿಂಗದೆ ಧರೆಗೆ ಬಿತ್ತರಿಸಿ |
ಕಂಗೊಳಿಸುವ ಕವಿಪರಮೇಷ್ಠಿಮುಖ್ಯರ | ರಂಗ ಮುನಿಗಳಿಗೆ ಮಣಿವೆ ||
ತ್ರಿಜಗನ್ನುತಿವೆತ್ತ ಭುಜಗಾಧಿಪತಿಯಂತೆ | ನಿಜವಾಗ್ವಿಳಾಸಿಗಳಾದ |
ಸುಜನಮನೋಜನ ಗಜಗನ ಪ್ರಚುರಶ್ರೀ | ವಿಜಯನ ನಾ ಪೊಗಳುವೆನು ||
ಭೂತಲದೊಳಗಾದಿನಾಥನ ಚರಿತವ | ಖ್ಯಾತಿಯಿಂದಲಿ ವಿರಚಿಸಿದ |
ಚಾತುರ್ಯಶಾಲಿಯೆಂದೆನಿಸಿದ ಪಂಪನ | ರೀತಿಯ ಕೊಂಡಾಡುವೆನು ||
ಘನತರಚಂದ್ರನಾಥನ ಚರಿತ್ರವನು | ಘನವಾಗಿ ರಚಿಸಿದಗ್ಗಳನ |
ವಿನುತಕವಿತ್ವದ ಗೌರವದೇಳ್ಗೆಯ | ಮನಮೊಲಿದಾಂ ಪೊಗಳುವೆನು ||
ಶೃಂಗಾರತಕವಿರಾಜಪುಂಗವನೆನಿಸಿ ಬೆ | ಡಂಗಾಂತ ನೇಮಿಚಂದ್ರನನ |

ತುಂಗವಿಖ್ಯಾತಪ್ರಸಂಗಗಜಾಂಕುಶ | ರಂಗನಾಂ ಕೈವಾರಿಸುವೆ ||

ಈ ಕವಿ ಮತಾಂತರದವನಾದರೂ ಜೈನನಾದ ಸ್ನೇಹಿತನಿಗೋಸ್ಕರ ಜೈನಕವಿಗಳ ರೀತಿಯಲ್ಲಿಯೇ ಈ ಜೈನಗ್ರಂಥವನ್ನು ರಚಿಸಿರುವುದು ಗಮನಿಸತಕ್ಕ ವಿಷಯವಾಗಿದೆ.

ಇವನ ಗ್ರಂಥ

### ರತ್ನಶೇಖರಚರಿತ್ರ.

ಇದು ಸಾಂಗತ್ಯದಲ್ಲಿ ಬರೆದಿದೆ, ಆಶ್ವಾಸ 5, ಸಂಧಿ 15. ಇದರಲ್ಲಿ ರತ್ನಶೇಖರನೆಂಬ ರಾಜನು ಪುಷ್ಪಾಂಜಲಿಯ ನೋಂಪಿಯನ್ನು ಆಚರಿಸಿ ಮುಕ್ತಿಯನ್ನು ಪಡೆದ ಕಥೆ ಹೇಳಿದೆ. ಪ್ರಭಾಚಂದ್ರನ ಅನುಜ್ಞೆಯಿಂದ "ಸರಸಾಲಂಕಾರಭಾವಗಳಿಂ" ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳುತ್ತಾನೆ

ಗ್ರಂಥಾವತಾರದಲ್ಲಿ ವೀರಜಿನಸ್ತುತಿ ಇದೆ. ಬಳಿಕ ಕವಿ ಪಾರ್ಶ್ವನಾಥ, ಸಿದ್ಧಾದಿಗಳು, ಗಣಧರರು, ಕೊಂಡಕುಂದ, ಅಕಲಂಕ, ಪದ್ಮಾವತಿ ಇವರುಗಳನ್ನು ಸ್ತುತಿಸಿದ್ದಾನೆ. ಅನಂತರ ಪೂರ್ವಕವಿಗಳನ್ನು ಸ್ಮರಿಸಿ ಗ್ರಂಥರಚನೆಗೆ ಕಾರಣವನ್ನು ತಿಳಿಸಿ ಕಥೆಯನ್ನು ಆರಂಭಿಸುತ್ತಾನೆ. ಆಶ್ವಾಸಾಂತ್ಯದಲ್ಲಿ ಈ ಗದ್ಯವಿದೆ—

ಶ್ರೀಮಜ್ಜಿನೇಂದ್ರಪಾದಪದ್ಮಮತ್ತಮಧುಕರೋಪಮಾನಮಾನಸವಿರಾಜಿತ ಜಿನಸಮಯಾಬ್ಧಿಚಂದ್ರ ಜಿನಮುನಿಚರಣಾರವಿಂದಕಾರುಣ್ಯಕಟಾಕ್ಷಲಬ್ಧಸತ್ಪ್ರಜ್ಞ್ಯೈಕಸದ್ಮ ಪದ್ಮಾನುಗತವಿಂದೆ ಸಕಲಸುಕವಿಜನಮನೋಮನಸಸಂತ ವಿವಿಧಭಾಷಾವಿಶೇಷಪ್ರಬಂಧ ಬಂಧುರವಾಚಾಪ್ರೌಢಧುರ್ಯಧುರೀಣನಪ್ಪ ರಾಮಕವಿಸಹಜನ ಪಟ್ಟಾಭಿರಾಮವಿರಚಿತ ರತ್ನಶೇಖರೋಪಾಖ್ಯಾನಮಾಯಾಘ್ರಾಣಚರಿತದೊಳ್

—o—

### ರಾಮಕವಿ ಸು. 1725

ಈತನು ರತ್ನಶೇಖರಚರಿತ್ರೆಯನ್ನು ಬರೆದ ಪಟ್ಟಾಭಿರಾಮನ ಸಹೋದರನು. ಪಟ್ಟಾಭಿರಾಮನು ಈತನನ್ನು "ಧೀಮಣಿಸಕಲಕಲಾಭಿಜ್ಞ ಫಣಿಸಾ

ರ್ವಭೌಮವಾಗ್ವೈಭವನೆನಿಪ ರಾಮಕವೀಂದ್ರ" ಎಂದು ಸ್ತುತಿಸಿರುವುದರಿಂದ ಇವನು ದೊಡ್ಡ ಕವಿಯಾಗಿದ್ದಿರಬೇಕು. ಕನ್ನಡದಲ್ಲಿ ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು.

—o—

## ನಿರ್ವಾಣಮಂತ್ರಿ ಸು. 1725

ಈತನು ಶಿವಪೂಜಾವಿಧಾನವನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಕೆಳದಿಯ ರಾಜನಾದ ಸೋಮಶೇಖರನಾಯಕನಲ್ಲಿ (1714–1739) ಪ್ರಧಾನಿಯಾಗಿದ್ದನು. ಇವನ ಕಾಲವು ಸುಮಾರು 1725 ಆಗಬಹುದು.

ಇವನ ಗ್ರಂಥ

ಶಿವಪೂಜಾವಿಧಾನ.

ಇದು ಗದ್ಯರೂಪವಾಗಿದೆ, ಅಲ್ಲಲ್ಲಿ ಸಂಸ್ಕೃತಶ್ಲೋಕಗಳು ಉದಾಹೃತವಾಗಿವೆ. ಇದರಲ್ಲಿ ವೀರಶೈವಮತಾನುಸಾರವಾಗಿ ಶಿವಪೂಜಾಕ್ರಮವು ವಿವರಿಸಿದೆ.[1]

———

## ಕಾಡಸಿದ್ಧೇಶ ಸು. 1725

ಈತನು ಇಷ್ಟಲಿಂಗಶತಕವನ್ನು ಬರೆದಿದ್ದಾನೆ. ಇವನು ವೀರಶೈವಕವಿ. "ಪರ್ವತೇಶನ ಅಂಘ್ರಿಯೊಳೊಗೆದಾತ ಭಕ್ತರಣುಗ ಕಾಡಸಿದ್ಧೇಶ" ಎಂಬುದರಿಂದ ಇವನ ಗುರು ಪರ್ವತೇಶ ಎಂದು ತಿಳಿಯುತ್ತದೆ. ಈ ಪರ್ವತೇಶನು ಚತುರಾಚಾರ್ಯಪುರಾಣವನ್ನು 1698 ರಲ್ಲಿ ಬರೆದ ಪರ್ವತೇಶ್ವರನಾಗಿರಬಹುದೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ ಕವಿಯ ಕಾಲವು ಸುಮಾರು 1725 ಆಗಬಹುದು.

ಇವನ ಗ್ರಂಥ

---

1. ವೀರಶೈವಕ್ರಮಾಚಾರ ಪೂಜಾಪದ್ಧತಿರುಚ್ಯತೇ |
ನಿರ್ವಾಣಮಂತ್ರಿವರ್ಯೇಣ ವೇದಶಾಸ್ತ್ರಾನುಸಾರಿಣೇ ||

## ಇಷ್ಟಲಿಂಗಶತಕ.

ಇದರಲ್ಲಿ 111 ವೃತ್ತಗಳಿವೆ, ಪ್ರತಿವೃತ್ತವೂ ಶ್ರೀಯಿಷ್ಟಲಿಂಗೇಶ್ವರಾ ಎಂದು ಮುಗಿಯುತ್ತದೆ. ಶಿವಾಧಿಕ್ಯವನ್ನು ಬೋಧಿಸುವುದರಿಂದ ಗ್ರಂಥಕ್ಕೆ ಶಿವಾಧಿಕ್ಯ ಎಂಬ ಹೆಸರೂ ಉಂಟು. ಆರಂಭದಲ್ಲಿ ಶಿವಸ್ತುತಿ ಇದೆ. ಈ ಗ್ರಂಥದಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ.

ಜಗಮಂ ರಕ್ಷಿಪ ದೇವ ತಾನೆ ಗುರುವಿಂ ಹಸ್ತಾಬ್ಜದೊಳ್ ಪೊಕ್ಕಿರಲ್ |
ಬಗೆಯಿಂ ಪೂಜಿಸಿ ಮುಕ್ತರಾಗಿ ಭವಪಾರಾವಾರಮಂ ದಾಂಟದೇ ||
ನಗೆಗೀಡಾಗಿ ಕುಜಾತಿಗಳ್ಗೆ ಕುಣಿದಾಡೀಪಾಡಿ ಭೂತಂಗಳಂ |
ಮಿಗಿಲಾರಾಧಿಸಿ ಬೀಳ್ವರೇಕೆ ಭವದೊಳ್ ಶ್ರೀಯಿಷ್ಟಲಿಂಗೇಶ್ವರಾ ||

—o—

## ವಿಜಯರಾಯ ಸು. 1725

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ, ಬಳ್ಳಾರಿ ಜಿಲ್ಲಾ ಚೀಕಲಪರವಿಯಲ್ಲಿ ಹುಟ್ಟಿ ಸರಕಾರಿ ನೌಕರಿಯಲ್ಲಿದ್ದು ವಿರಕ್ತನಾಗಿ ಕಾಶಿಗೆ ಹೋಗಿ ಅಲ್ಲಿರುವಾಗ ಸ್ವಪ್ನದಲ್ಲಿ ಪುರಂದರದಾಸನಿಂದ ಉಪದೇಶವನ್ನು ಹೊಂದಿ ಅನೇಕ ಹಾಡುಗಳನ್ನೂ ಸುಳಾದಿಗಳನ್ನೂ ರಚಿಸಿದಂತೆ ತಿಳಿಯುತ್ತದೆ. ಈತನಿಗೆ ಗೋಪಾಲದಾಸ, ವೇಣುಗೋಪಾಲದಾಸ, ಮೋಹನದಾಸ, ಹಯವದನದಾಸ ಎಂಬ ನಾಲ್ವರು ಶಿಷ್ಯರಿದ್ದರು. ಈತನು ತನ್ನ ಶಿಷ್ಯ ಮೋಹನದಾಸನ ಸ್ಥಳವಾದ ಚಿಪ್ಪಗಿರಿಯಲ್ಲಿ ವಾಸವಾಗಿದ್ದಂತೆಯೂ ಅಲ್ಲಿ ಈತನು ಆಹ್ನಿಕ ಮುಂತಾದುದನ್ನು ಮಾಡುತ್ತಿದ್ದ ವಿಜಯರಾಯರ ಕಟ್ಟೆ ಎಂದು ಈಗಲೂ ಪ್ರಸಿದ್ಧವಾಗಿರುವ ಸ್ಥಳಕ್ಕೆ ಅನೇಕ ಭಕ್ತರು ಹೋಗಿ ಬರುವಂತೆಯೂ ಹೇಳುತ್ತಾರೆ. ಈತನ ಪ್ರಶಿಷ್ಯನಾದ ಜಗನ್ನಾಥದಾಸನು ಸುಮಾರು 1775 ರಲ್ಲಿ ಇದ್ದುದಾಗಿ ತಿಳಿವುದರಿಂದ ಇವನ ಕಾಲವು ಸುಮಾರು 1725 ಆಗಿರಬಹುದು. ಈತನಿಗೆ ವಿಜಯದಾಸ ಎಂಬ ಹೆಸರೂ ಉಂಟು. ಈತನ ಕೀರ್ತನೆಗಳಲ್ಲಿ ವಿಜಯವಿಠಲ ಎಂಬ ಅಂಕಿತವು ದೊರೆಯುತ್ತದೆ. ಒಂದನ್ನು ಉದಾಹರಿಸುತ್ತೇವೆ--

ರಾಗ—ಅನಂತಭೈರವಿ. ಚಾಪುತಾಳ.

|| ಪಲ್ಲವಿ || ಏನಾದರೇನು ಜ್ಞಾನವಿಲ್ಲದೆ ಮೋಕ್ಷವಿಲ್ಲ ||

ವೇದವನೋದಿದರೇನು | ಶಾಸ್ತ್ರನೋಡಿದರೇನು |
ಕಾದಿ ಕಾದಾಡಿ ಸತ್ತರೇನು | ಜ್ಞಾನವಿಲ್ಲದೆ ಮೋಕ್ಷವಿಲ್ಲ || 1 ||
ಕಾಶಿಗೆ ಹೋದರೇನು | ಕಾನನ ಸೇರಿದರೇನು |
ಕಾಶಿಪೀತಾಂಬರವುಟ್ಟರೇನು | ಜ್ಞಾನವಿಲ್ಲದೆ ಮೋಕ್ಷವಿಲ್ಲ || 2 ||
ಜಪತಪವ ಮಾಡಿದರೇನು | ಜಾಣತನವು ಅರಿದರೇನು |
ವಿಜಯವಿಠಲನ ಒಲಿಸಿದರೇನು | ಜ್ಞಾನವಿಲ್ಲದೆ ಮೋಕ್ಷವಿಲ್ಲ || 3 ||

---

## ಚೆಲುವ ಸು 1725

ಇವನು ಮಡಿವಾಳಯ್ಯನ ಚರಿತೆ, ವೀರಭದ್ರಚರಿತೆ ಇವುಗಳನ್ನು ಬರೆದಿದ್ದಾನೆ. ಈತನು ವೀರಶೈವಕವಿ. ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿಲ್ಲ. ಆದರೆ ಮೊದಲು ಗ್ರಂಥದ ಕೊನೆಯಲ್ಲಿರುವ

ಮಲೆತ ದೂಷಕರನೆ ಸುಜಿಸಿದ ಮಡಿವಾಳಯ್ಯ | ಬಲವುಳ್ಳ ರಾಯಬಿಜ್ಜಳಗೆ
ನೆಲೆಗಾಣಿಸಿ ಪಟ್ಟಕಟ್ಟಿದ ಕಥೆಯಿದು | ಚೆಲುವನ ಚರಿತ ಸಂಪೂರ್ಣ ||

ಎಂಬ ಪದ್ಯದಿಂದ ಕವಿಯ ಹೆಸರು ಚೆಲುವ ಎಂದಿರಬಹುದೋ ಎಂಬ ಊಹೆಗೆ ಸ್ವಲ್ಪ ಅವಕಾಶವಿದೆ. ಆದುದರಿಂದ ಈ ಹೆಸರನ್ನು ಸಂದೇಹವಾಗಿ ಮೇಲೆ ಕೊಟ್ಟಿದ್ದೇನೆ. ಈ ಗ್ರಂಥದ ಒಂದು ಪ್ರತಿ 1790 ರಲ್ಲಿ ಬರೆದಂತೆ ತಿಳಿವುದರಿಂದ ಗ್ರಂಥವು ಸುಮಾರು 1725 ರಲ್ಲಿ ಹುಟ್ಟಿರಬಹುದು ಎಂದು ತೋರುತ್ತದೆ.

ಇವನ ಗ್ರಂಥಗಳಲ್ಲಿ

### ಮಡಿವಾಳಯ್ಯನ ಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ, ಸಂಧಿ 4, ಪದ್ಯ 127. ಇದರಲ್ಲಿ ಬಸವನ ಸಮಕಾಲೀನನಾದ ಮಡಿವಾಳ ಮಾಚಯ್ಯನ ಕಥೆ ಹೇಳಿದೆ. ಕಥಾಗರ್ಭವನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ—

ಭವಿಬಿಚ್ಚಳನ ಕಪ್ಪಡವ ತೊಳೆಯಲೊಲ್ಲನೆ | ಯುವಗಡದಾನೆಯು ಮುಟ್ಟದ |
ಭುವನದೊಳಗೆ ಮಡಿವಳನ ಪ್ರತಾಪವ | ಶಿವಶರಣರು ಲಾಲಿದುವು ||

ಆದಿಯಲ್ಲಿ ಶಿವಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನುತೆಗೆದು ಬರೆಯುತ್ತೇವೆ

ಸೆಳಲು ಸರ್ಪನ ಕೂಡುವತೆಜನಂತೆ ಯಾ | ಕಡುಗಲಿ ಮಡಿವಾಳಯ್ಯ |
ಹಿಡಿದು ಆನೆಯು ಕೈವಾಡಲುರವನೊತ್ತಿ | ಹೊಡೆದನು ಕಿಬ್ಬದಿಗಳನು ||
ನೆಲಕೆ ಅಪ್ಪಳಿಸುತ ಮಲೆತ ದಾವೃತರನು | ತಲೆಯ ಪಾದದಲಿ ತುಳ್ದನು |
ಕೊಲಬುದಪ್ಪಿದರು ಒಲವೊಳು ಕಡ್ಡಿಯು ಕಚ್ಚಿ | ತಲೆಗಾಯಿ ಎಂದೂ ಅಳಿದರು |

ಇವನ ವೀರಭದ್ರಚರಿತೆ ನಮಗೆ ದೊರೆತಿಲ್ಲ

---

## ದೇವ ಸು 1725

ಈತನು ಬತ್ತೀಸಪುತ್ಥಳಿಕಥೆ, ಧೈರ್ಯಾವ್ರತ, ವಾಮಯೂರಕಥಾವಳಿ, ಶಕುನಪ್ರಪಂಚ, ದಕ್ಷಾಧ್ವರಧ್ವಂಸಚಾರಿತ್ರ, ಶ್ರೀಕಥೆ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿಯೆಂದು ತೋರುತ್ತದೆ, ಕನಕ ಪಾಂಡುರಂಗನಾಥನ ಮಗನು. ಇವನಿಗೆ ದೇವಣ, ದೇವಣಾರ್ಯ ಎಂಬ ಹೆಸರೂ ಕವಿಭಾಳಾಕ್ಷ ಎಂಬ ಬಿರುದೂ ಉಂಟು. ಇವನ ಬತ್ತೀಸಪುತ್ಥಳಿಕಥೆಯ ಒಂದು ಪ್ರತಿಯಲ್ಲಿ ಯಲಹಕ್ಕನಾಡ ಪ್ರಭು ಈ ಕಥೆಯನ್ನು ಕೇಳಿದಂತೆ ಹೇಳಿರುವುದರಿಂದ ಕವಿ ಆತನ ಆಶ್ರಿತನಾಗಿದ್ದಿರಬಹುದು. ಈ ಪ್ರತಿ 1817 ರಲ್ಲಿ ಬರೆದುದಾದುದರಿಂದ ಗ್ರಂಥವು ಆ ಕಾಲಕ್ಕೆ ಹಿಂದೆ ಹುಟ್ಟಿರಬೇಕು. ಕವಿಯ ಕಾಲವು ಸುಮಾರು 1725 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥಗಳಲ್ಲಿ

### ಬತ್ತೀಸಪುತ್ಥಳಿಕಥೆ

ಇದು ಚಂಪೂರೂಪವಾಗಿದೆ; ಪ್ರಕರಣ 12. ಕ್ಷೇಮೇಂದ್ರಕವಿಯ ಬೃಹತ್ಕಥಾಮಂಜರಿಯ 18 ನೆಯ ಲಂಬಕನ ಬತ್ತೀಸಪುತ್ಥಳಿಕಥಾ ಪ್ರಬಂ

ಧವನ್ನು ಕನ್ನಡಿಸಿದಂತೆ ಕವಿ ಹೇಳುತ್ತಾನೆ. 'ಜಗಕ್ಕೆ ನೆಗಳ್ತೆವೆತ್ತ ಸಾದನುಪಮವಿಕ್ರಮಾರ್ಕನ ಸುವೀರತೆಯಿಂ ಕಡುಭೋಗದೇಳ್ಗೆಯಿಂದನುಗತರಾದ ಪುತ್ತಳಿಯ ಸತ್ಕಥೆಯಂ ನೆಗಳ್ದೆಂ' ಎನ್ನುತ್ತಾನೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯದಲ್ಲಿ ಹೇಳಿದ್ದಾನೆ—

ಕುಳಿರ್ವೆಲರಂತೆ ನಂದನವನಾಲದ ತಣ್ಣೆಳಲಂತೆ ಪುಷ್ಪಮಂ |
ಗಳನವಗಂಧದಂತೆ ಪುದಿದಿಂಗದಿರಂತೆ ನಿಜಪ್ರಿಯಾಂಗನಾ ||
ಪ್ರವಳರತಿಯಂತೆ ಚಂದನದ ತಪ್ಪಿನ ಸೌರಭದಂತೆ ಚಾರುಪು |
ತ್ತಳಿಯ ಕಥಾರಸಂ ಸುಜನರಂ ತಲೆದೂಗಿಸದೇ ನಿರಂತರಂ ||

ಆರಂಭದಲ್ಲಿ ಸರಸ್ವತಿ, ಗಣೇಶ ಇವರುಗಳ ಸ್ತುತಿ ಇದೆ. ಪ್ರಕರಣಗಳ ಕೊನೆಯಲ್ಲಿ ಈ ಗದ್ಯವಿದೆ—

ಇಂತೀ ಕವಿಭಾಳನೇತ್ರ ಸರಸಕವೀಶ್ವರ ದೇವಣಾಚಾರ್ಯವಿರಚಿತಮಪ್ಪ ಬತ್ತೀಸಪುತ್ತಳಿಯ ಕಥೆಯ ಸುಧಾರಸಕಾವ್ಯದೊಳ್[1].

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ಬಡತನ

ಎಸರೆಂಬೀಪೊಲೆ ಪೂರ್ವದಂದು ಮನಸೊಳ್ ನಿರ್ನೇಹಮಕ್ಕುಂ ಬಲಂ |
ಕೆಡುಗುಂ ಸತ್ವಮದುಂ ಮಹಾಮತಿಯುಂ ಚಾತುರ್ಯಮುಂ ಶೌರ್ಯಮುಂ ||
ಕಡೆಸಾರ್ಗುಂ ಪುರುಷಾರ್ಥಮೋಗಳಿಸುಗುಂ ಕೂರ್ಪೋರ್ಗುಗುಂ ತನ್ನನಿಂ |
ದೆಸೆಯೊಳ್ ಸೀದರ್ಳಿವರ್ ವಿಧಾತೃವಶದಿಂ ದಾರಿದ್ರ್ಯಮೇಗೆಯ್ಯದೋ ||

ಸ್ತ್ರೀಗರ್ಹಣ

ಸತಿ ಗುಣವತಿ ದೊರೆಕೊಂಡೊಡೆ | ಪತಿಗಾಸ್ತ್ರೀ ರತ್ನಮೆಂಬ ಪೆಸರಂ ಪಡೆಗುಂ |
ಸತಿ ದುರ್ಗುಣೆ ದೊರೆಕೊಂಡೊಡೆ | ಪತಿಗಾಸ್ತ್ರೀ ವ್ಯಾಧಿಯೆಂಬ ಪೆಸರಂ ಪಡೆಗುಂ ||
ಹರನುರಿಗಣ್ಣಮೇಲೆ ನಲಿದಾಡುವರಂಗನೆಯರ್ಕಳಂಬುಜೋ |
ದರನ ಕರಾಗ್ರಚಕ್ರದೊಳೆ ಚಕ್ಕಣಮಿಕ್ಕುವರಬ್ಜಗರ್ಭನೊಳ್ ||
ಸರಸಮನಾಡಿ ಪಾಶದೊಳ ಕಟ್ಟುವರೆಂಗೊಡೆ ಮಿಕ್ಕಿನನ್ಯರಂ |

1 ಮತ್ತೊಂದು ಪ್ರತಿಯಲ್ಲಿ 'ಇಂತು ಕರ್ಣಾಟಕಭಾಷಾವಿರಚಿತಮಪ್ಪ ಬತ್ತೀಸಪುತ್ತಳಿಗಳ ಕಥೆಯಲ್ಲಿ' ಎಂದಿದೆ.

ಸ್ಮರಶರಪಂಜರಾಂತರದೊಳಿರ್ದರನಾಕೆಯುರೂಢಿಮುಕ್ಕರೇ ||

ವೇಶ್ಯೆಯರು

ನನೆಗಣೆಯೇಳೆ ಕಾಮ ಪೆಱಸಾರ್ ಮುಳಿಸೇಕೆ ಬಯಂತ ನಿನ್ನ ಮಂ |
ದನಪಾತೋಷಮುಂ ಬಿಡು ಕುಬೇರತನೂಭವ ಸಾಕು.... ||
ಮನದ ಮಱುಂಕವೇಕೆಲೆ ಭದ್ರಕ ಮೆಲ್ಲನೆ ಜಾಱು ಚತ್ರಕಾ |
ಮನದ ಪಿಡಂಬವೇಕೆನುತ ಸಾಱಿದರಾ ಪುರಚಾರನಾರಿಯರ್ ||

ಈ ಗ್ರಂಥವನ್ನು ಕವಿ ಗದ್ಯರೂಪವಾಗಿಯೂ ಬರೆದಿರುವಂತೆ ತಿಳಿಯುತ್ತದೆ. ಕಥೆಗಳ ಕೊನೆಯಲ್ಲಿ-ಇದು ಕವಿ ದೇವಣಾರ್ಯವಿರಚಿತಮಪ್ಪ ಬತ್ತೀಸಪುತ್ತಳಿಕಥೆಯೊಳ್'-ಎಂದಿದೆ.

ಈ ಕವಿಯ ಇತರ ಗ್ರಂಥಗಳು ನಮಗೆ ದೊರೆತಿಲ್ಲ

---

ಮಹಾದೇವ ಸು 1725

ಈತನು ಬ್ರಹ್ಮೋತ್ತರಖಂಡವನ್ನು ಬರೆದಿದ್ದಾನೆ. ಇವನು ವೀರಶೈವಕವಿ ತನ್ನ ಹೆಸರನ್ನು ವ್ಯಕ್ತವಾಗಿ ಹೇಳಿಕೊಂಡಿಲ್ಲ, ಆದರೂ 'ಕಥೆಗನಾಯಕನೀಶ್ವರನು ಸತ್ಕಥನ ಬ್ರಹ್ಮೋತ್ತರದಖಂಡ| ಸ್ಥಿತಿ ಮಹಾದೇವಾಖ್ಯ ಭಕ್ತವಿಲಾಸವಿಸ್ತಾರ' ಎಂಬ ಪದ್ಯಭಾಗದಿಂದ ಈತನ ಹೆಸರು ಮಹಾದೇವ ಎಂದು ತೋರುತ್ತದೆ. 'ಗುರುಶಾಂತೇಶಲಿಂಗವು ನುಡಿಸಿದವೊಲಾನುಸಿರೇನೀ ಕವಿತಾಪ್ರಬಂಧವನು' ಎಂದು ಹೇಳುತ್ತಾನೆ. ಲಕ್ಷ್ಮೀಶನ (ಸು. 1700) ಜೈಮಿನಿಭಾರತಕ್ಕೂ ಇವನ ಗ್ರಂಥಕ್ಕೂ ಹೋಲಿಕೆಗಳು ಕೆಲವುಕಡೆ ಕಂಡು ಬರುವುದರಿಂದ ಈ ಕವಿ ಲಕ್ಷ್ಮೀಶನಿಗೆ ಈಚೆ ಸುಮಾರು 1725 ರಲ್ಲಿ ಇದ್ದಿರಬಹುದೆಂದು ತೋರುತ್ತದೆ

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ—

ಲೇಸೆನಿಪ ವಾಲ್ಮೀಕಿ ವೇದ | ವ್ಯಾಸನುದ್ಭಟ ಬಾಣನಗ್ಗದ |
ಕೇಶಿರಾಜ ಮಯೂರ ಮಲುಹಣ ಕಾಳಿದಾಸಾಂಕ ||
ಭೂಸುರಾಗ್ರಣಿಯೆನಿಪ ಪಂಪಾ | ವಾಸಹರಿದೇವಾದಿಕವಿಗಳ |
ಭಾಸುರಾಂಘ್ರಿಸರೋಜವೀಗೆ ಸುಮತಿಗೆ ಮಂಗಳವ ||

ಇವನ ಗ್ರಂಥ

ಬ್ರಹ್ಮೋತ್ತರಖಂಡ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 32, ಪದ್ಯ 1898.[1] ಅಲ್ಲಲ್ಲಿ ರಗಳೆ, ವೃತ್ತ, ಗದ್ಯ ಇವೂ ಇವೆ. ಇದು ಅಷ್ಟಾದಶಪುರಾಣಾಗಳಿಗೆ ಮೊದಲೆನಿಸಿದ ಬ್ರಹ್ಮೋತ್ತರಪುರಾಣದ ಭಾಷಾಂತರವು. ಇದರಲ್ಲಿ ಷಡಕ್ಷರಮಹಿಮೆ, ವಿಭೂತಿಮಹಿಮೆ, ರುದ್ರಾಕ್ಷಮಹಿಮೆ, ಪುರಾಣಶ್ರವಣಮಹಿಮೆ, ಶಿವರಾತ್ರಿಯೇ ಮೊದಲಾದ ವ್ರತಗಳ ಮಹಿಮೆ, ಶಿವಶಿವಯೋಗಿಗಳ ಪೂಜೆ ಮೊದಲಾದ ಹಲವು ವಿಷಯಗಳು ಹೇಳಿವೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ—

ಯತಿಗಣಂಗಳ ನೇಮದನುಕೂಲ | ಲತೆಯಿನಾಸುಮನೋನುರಾಗ |
ಸ್ಥಿತಿಯ ಸದಲಂಕಾರದಿಂ ಕುಮುದಪ್ರಪೀಡತೆಯಿಂ ||
ವಿತತದೋಷವಿಧೂತಪರಿಸಿ | ಶ್ರಿತಪದಾರ್ಥಂದಿ ಮೆಱೆವುದೆನ್ನಯ |
ಕೃತಿ ಚಮತ್ಕೃತಿಯಾಗಿ ಸೂರ್ಯೋದಯದವೋಲ್ ಧರೆಗೆ ||
ಸರಸಮಧುರಧ್ವನಿಗಳಿಂ ಬಂ | ಧುರದ ಸುಮನೋರಾಗದೇಟ್ಟಿಯ |
ಸುರುಚಿರಾಯತವರ್ಣಗಳಲಂಕೃತಿಯ ಸೊಬಗಿಂದ ||
ಒರೆದ ಭಾಮಿನಿಷಟ್ಪದಿಗಳಿಂ | ದರದಿ ವಿದ್ವತ್ಸಭೆಯ ಹೃತ್ಸರ |
ಸಿರುಹಕೋರಕಗಳನಲರ್ಚಿಸಿ ನಲಿಯುದಿರ್ದಪುವೇ[2] ||

ಗ್ರಂಥಾವತಾರದಲ್ಲಿ ಶಾಂತೇಶ್ವರಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ವಿನಾಯಕ, ಷಣ್ಮುಖ, ವೀರಭದ್ರ, ಭೃಂಗಿ, ನಂದಿ, ಸರಸ್ವತಿ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಮಧುರಾನಗರ

ತ್ರಿದಶಜನಕಾವಾಸವಾದನು | ಮೊದಗೆದನಾಹಾರವಸಿಬರಿ |
ಗದಜ್ಜೀಸುಖಸಿದ್ಧಿಯೆಂಬುದ ಕಾಣೆವೆಂದೆಂದುಂ ||

1 ಮತ್ತೊಂದು ಪ್ರತಿಯಲ್ಲಿ ಸಂಧಿ 31, ಪದ್ಯ 1945 ಎಂದಿದೆ.

2. ಜೈಮಿನಿಭಾರತ, 1, 12 ನೆಯ ಪದ್ಯದೊಡನೆ ಹೋಲಿಸಿ.

ಮುದದೆ ಕೆಳೆನೆಕ್ಕೆಳಗಿರ್ಪ ಜನಸಂ | ಪದನ ಪೋಲ್ವನೆನುತ್ತಲಮರದ |
ಸದನವೆನಿಪಮರಾವತಿಯನಿಟ್ಟಿಸೆಯುದ್ದಾನಗರ ||

## ವಸಂತ

ಎತ್ತ ನೋಡಲು ತಳಿತ ಬನದಿಂ | ದೆತ್ತ ನೋಡಲು ಪೂತ ಲತೆಯಿಂ |
ದೆತ್ತ ನೋಡಲು ನಲಿವ ನವಿಲರಸಂಚೆಕೋಗಿಲೆಯಿಂ ||
ಎತ್ತ ನೋಡಲು ತಂಪುತಂಪನು | ಕೊತ್ತು ಮೆಲ್ಲನೆ ತೀಡುವೆಲರಿಂ |
ದೆತ್ತ ನೋಡಲು ಕಣ್ಗೆ ಮಂಗಳವಾಯ್ತು ಮಧುಮಾಸ ||

## ಗ್ರೀಷ್ಮ

ತಳದೊಳಗೆ ಮುನ್ನೀರಸಂಬರ | ತಳದೊಳಗೆ ಸುರನದಿಯು ಸುತ್ತಲು |
ಬಳಸಿದಂಬುಧಿಯೇಳು ನಡುವೆ ಮಹಾನದೀನದವ ||
ಬಲಿದು ಎಧಿ ಮುಂಬಪ್ಪ ಕಜ್ಜವ | ತಿಳಿದು ನಿರ್ಮಿಸೆಯುಟ್ಟಿದುನಲ್ಲದೊ |
ಪ ಟ್ಟವುದುಂಟೇ ಅವನಿ ತೀವ್ರನಿದಾಘತುರುಬೆಯಲಿ ||

## ಹೇಮಂತ

ಉದಧಿಯೊಳು ಕಾಷ್ಠದೊಳು ಜೀವರ | ಹೃದಯದೊಳು ಶಿಲೆಗಳೊಳು ಮೇಘದ |
ಕ್ಷುದಚ್ಛನೊಳು ಲೋಹದೊಳು ಪಿಸುಣವಹಪ್ರದೇಶಗೊಳು ||
ಪುದುಗಿಯುರಿ ಮಞ್ಜೊಳಲು ಶೀತಕೆ | ಕೆದಱಿಯುಷ್ಣಮರೀಚಿಯಗ್ನಿಯು |
ಸದಸದಾಸೆಗೆ ಪೋಪನೆನೆಯುಳುಕಿಸಿತು ಹಿಮಸಮಯ ||

## ನೀತಿ

ಕಾಲದಾವುದು ದೇಶವಾವುದು | ಮೇಲೆ ತನ್ನಯ ಶಕ್ತಿಯಾವುದು |
ಕೇಳನೋಳದರಾರು ಜಂಬಲವಾರು ಹಗೆಯಾರು ||
ಸೋಲವಾವುದು ಗೆಲವದಾವುದು | ಅಳುಗೆಲಸದರಾರೆನುತ ಸ |
ಲ್ಲೀಲೆಯಿಂ ನಿಶ್ಚೈಸಿ ಕಾರ್ಯವನೆಸಗು ನೀನೆಂದ ||
ಕನಕತುರಗಸುರತ್ನಗೋಧನ | ಮನಿತೆಯರ ಸೇವಕರ ಗುಣಗಳ |
ನಿಸಿಕು ನೋಡದೆ ಒಜ್ಜಿಯ ಸೌಮ್ಯಾಕೃತಿಯನೇ ಕಂಡು ||

ಮನವೆಳಸಿ ಕೈವಿಡಿದು ನಂಬುವ | ಜನರಿಗತಿಶಯದುಃಖವಲ್ಲದೆ |
ಜನಿಸಲರಿವುದೆ ಸೌಖ್ಯಮಯರಸವೆಂದನಾ ಸೂತ ||

ಪುಣ್ಯಾರಣ್ಯ

ಬೀಸದಾಬಿಜ್ಜಗಾಳಿ ಬಿಜ್ಜವಣಿ | ಸೂಸುವಷ್ಟದು ರವಿಕಿರಣ ಕ |
ಟ್ಟಾಸುರದಿ ಕಡುಗಾಯಲುರಿಯದು ಮಂಜು ಮುಱಿದೆನ್ನೆ |
ಬಾಸಣಿಸದಗಲದಲಿ ತಡುಕುತು | ಪೋಸರಿಸದಾವಾಗ ಸೌಖ್ಯನಿ |
ವಾಸವೆಂದೆನಿಸುವುದು ಪುಣ್ಯಾರಣ್ಯ ಋಷಿಗಳಿಗೆ ||

---

## ನಿಟ್ಟೂರು ನಂಜಯ್ಯ ಸು. 1725

ಈತನು ಶಬ್ದಮಣಿದರ್ಪಣಕ್ಕೆ ಟೀಕೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಸ್ಥಳ ನಿಟ್ಟೂರು. ಭಟ್ಟಾಕಳಂಕನ (1604) ಕರ್ಣಾಟಕ ಶಬ್ದಾನುಶಾಸನದ ಸೂತ್ರಗಳನ್ನು ಉದಾಹರಿಸುವುದರಿಂದ ಅವನ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗಿಯೇ ಇದೆ. ಸುಮಾರು 1725 ರಲ್ಲಿ ಇದ್ದಿರಬಹುದು ಇವನು ಸಂಸ್ಕೃತದಲ್ಲಿ ವೇದಾಂತಸಾರ ವೀರಶೈವಚಿಂತಾಮಣಿಯನ್ನು ಬರೆದಿದ್ದಾನೆ.

---

## ಬೊಂಬೆಯಾಟದ ಸಿದ್ದಯ್ಯ ಸು 1725

ಸಾಂಬಯ್ಯನು (ಸು. 1750)ತನ್ನ ಕರಿಯಬಂಟನ ಕಥೆಯಲ್ಲಿ ತನ್ನ ತಂದೆಯಾದ ಬೊಂಬೆಯಾಟದ ಸಿದ್ದಯ್ಯನು ಮೋಹನಕವಿ ಎಂಬ ಬಿರುದನ್ನು ಪಡೆದಿದ್ದಂತೆಯೂ ಸಂಗೀತ ಸಾಹಿತ್ಯಗಳಲ್ಲಿ ನಿಪುಣನಾಗಿದ್ದಂತೆಯೂ ಹೇಳುತ್ತಾನೆ. ಈತನು ಆವ ಗ್ರಂಥಗಳನ್ನು ಬರೆದಿದ್ದಾನೆಯೋ ತಿಳಿಯದು

---

## ಚಿದಾನಂದ ಸ 1725

ಇವನು ಚಿದಖಂಡಾನುಭವಸಾರ, ಹರಿಭಕ್ತಿರಸಾಯನ ಇವುಗಳನ್ನು ಬರೆದಿದ್ದಾನೆ ಈತನು ಬ್ರಾಹ್ಮಣಕವಿ; ಜ್ಞಾನಸಿಂಧುವನ್ನು ಬರೆದ

ಚಿದಾನಂದಾವಧೂತನ (ಸು. 1750) ಗುರುವೆಂದು ತೋರುತ್ತದೆ. ಹಾಗಿದ್ದ ಪಕ್ಷದಲ್ಲಿ ಇವನ ಕಾಲವು ಸುಮಾರು 1725 ಆಗಬಹುದು.

ಇವನ ಗ್ರಂಥಗಳಲ್ಲಿ

1 ಚಿದಖಂಡಾನುಭವಸಾರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 8, ಪದ್ಯ 537; ಅದ್ವೈತವೇದಾಂತವನ್ನು ಬೋಧಿಸುತ್ತದೆ.

2 ಹರಿಭಕ್ತಿರಸಾಯನ

ಇದೂ ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 5, ಪದ್ಯ 301.

---

## ದೇವ ಸು. 1725

ಈತನು ದೇವಾಂಗಪುರಾಣವನ್ನು ಬರೆದಿದ್ದಾನೆ. ಇವನು ದೇವಾಂಗದವನು; ಇವನ ಪಿತಾಮಹನು ಕಳಾಬ್ಧಿಯುಪುರದ ಹರಿಸೆಟ್ಟಿ, ತಂದೆ ತಮ್ಮಸೆಟ್ಟಿ, ತಾಯಿ ನಾಗಮ್ಮ. ಇವನು ಸುಮಾರು 1725 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

ದೇವಾಂಗಪುರಾಣ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 13, ಪದ್ಯ 1380. "ಬ್ರಹ್ಮಾಂಡಪುರಾಣದೊಳ್ ವಸ್ತ್ರವ ನಿರ್ಮಿಸೆ ಪಡೆದ ದೇವಾಂಗಚಾರಿತ್ರವ ಪೇಳ್ವೆನು" ಎಂದು ಕವಿ ಹೇಳುತ್ತಾನೆ.

---

## ರಂಗಯ್ಯ ಸು. 1730

ಇವನು ಕಾವೇರೀಮಾಹಾತ್ಮ್ಯವನ್ನು ಬರೆದಿದ್ದಾನೆ. "ಮೈಸೂರು ದಳವತಿ ದೇವರಾಜನೃಪವರೇಣ್ಯ ಪೇಳ್ದಿನೆ ಪೇಳ್ದೆಂ" ಎಂಬುದರಿಂದ ಈತನು ದಳವಾಯಿ ದೇವರಾಜನ ಆಶ್ರಿತನಾಗಿದ್ದಂತೆ ತಿಳಿಯುತ್ತದೆ. ಈ ದೇವರಾಜನು ಕಳಲೆ ವೀರರಾಜನ (ಸು. 1720) ಮಗನು; ಮೈಸೂರು ದೊರೆ

ಯಾದ ದೊಡ್ಡಕೃಷ್ಣರಾಜನಲ್ಲಿ (1713 1731) ಸೇನಾಪತಿಯಾಗಿದ್ದನು. ಆದುದರಿಂದ ಕವಿಯ ಕಾಲವು ಸುಮಾರು 1730 ಆಗಬಹುದು.

ಇವನ ಗ್ರಂಥ

ಕಾವೇರೀ ಮಾಹಾತ್ಮ್ಯ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ.

---

ಜಾಯೇಂದ್ರ 1734

ಈತನು ಕರ್ಣಾಟಕುವಲಯಾನಂದ, ರಸಮಂಜರಿ ಇವುಗಳನ್ನು ಬರೆದಿದ್ದಾನೆ. ಇವನ ರಾಜವಂಶಕ್ಕೆ ಸೇರಿದವನು, ತೊರಗಲ್ ಸೀಮೆಯ ಅರಸಾದ ಲಿಂಗರಾಜನ ಮಗನು. ಜೈಮಿನಿಭಾರತದಿಂದ ಅಲಂಕಾರಗಳಿಗೆ ಉದಾಹರಣಗಳನ್ನು ಕೊಟ್ಟಿದ್ದಾನೆ. ಕರ್ಣಾಟಕುವಲಯಾನಂದವನ್ನು "ವರುಷವಾನಂದವಾಘಮಾಸದಲ್ಲಿ ಭಾ| ಸುರಶುಕ್ಲಪಕ್ಷಪ್ರತಿಪದಿರವಿವಾಸರದಿ" ಮುಗಿಸಿದಂತೆ ಹೇಳುತ್ತಾನೆ. ಈ ಆನಂದವರ್ಷವು 1734 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥಗಳಲ್ಲಿ

1 ಕರ್ಣಾಟಕುವಲಯಾನಂದ

ಇದು ಷಟ್ಪದಿಯಲ್ಲಿ ಬರೆದಿದೆ; ಸಂಸ್ಕೃತ ಕುವಲಯಾನಂದದ ಸಂಗ್ರಹರೂಪವಾದ ಭಾಷಾಂತರ; ಅಲಂಕಾರಶಾಸ್ತ್ರ. ಇದರಲ್ಲಿ ಉದಾಹರಣಗಳೊಡನೆ 101 ಅಲಂಕಾರಗಳು ವಿವರಿಸಲ್ಪಟ್ಟಿವೆ. ಸೂತ್ರಗಳು ಶರಷಟ್ಪದಿಯಲ್ಲಿ ಅಥವಾ ಸಾಂಗತ್ಯದಲ್ಲಿ ಇವೆ. ಉದಾಹರಣಗಳು ಪ್ರಾಯಿಕವಾಗಿ ಸೌಂದರಪುರಾಣ, ಉದ್ಭಟಕಾವ್ಯ, ಚಾಯಣಭಾರತ, ಚಿತ್ರಭಾರತ, ಭಿಕ್ಷಾಟನಕಾವ್ಯ, ಚೇರಮಕಾವ್ಯ, ಭಾವಚಿಂತಾರತ್ನ, ಜೈಮಿನಿಭಾರತ ಇವೇ ಮೊದಲಾದ ಷಟ್ಪದೀಗ್ರಂಥಗಳಿಂದ ಅನುವಾದ ಮಾಡಲ್ಪಟ್ಟಿವೆ. ಒಂದೊಂದಲಂಕಾರಕ್ಕೂ ಮೂರು ಮೂರು ಉದಾಹರಣಗಳು ಕೊಟ್ಟಿವೆ. ಗ್ರಂಥದ ಕೊನೆಯಲ್ಲಿ ಈ ಗದ್ಯವಿದೆ—

ಇತಿ ಕುವಲಯಾನಂದಾಲಂಕಾರಶಾಸ್ತ್ರಕರ್ಣಾಟಭಾಷಾಯಾಂ ಜಾಯುಗೊಂಡ ದೇಶಾಯಿ ವಿರಚಿತಕವನಂ ಸಂಪೂರ್ಣಂ.

ಈ ಗ್ರಂಥದಿಂದ ಕವಿಗೆ ಸಂಬಂಧಿಸುವ ಸ್ವಲ್ಪಭಾಗವನ್ನು ತೆಗೆದು ಬರೆಯುತ್ತೇವೆ —

ತುಹಿನಗಿರಿಜಾತೆಯುಂಕದಲಿರುವ ಸಮಯದಲಿ |
ಗುಹ ಬರಲು ಪತಿಯು ಸಿಟ್ಟಿಸೆ ಭಾವವರಿತು ಸತಿ ||
ಸಹಿತೇಕಕಾಲದಲ್ಲಿಬ್ಬರೊಗವ ಜಾಂಪಸುತಲಮುದರ್ಪ್ಸಿ ಸಂತೈಸಿದ ||
ಅಹಿರಾಡ್ವಿಭೂಷಣಮುಹಾದೇವನವತರಿಸಿ |
ಮಹಿಯೊಳಗೆ ಕಾಡಸಿದ್ಧೇಶನಾಮದಿ ಬಂದು |
ಮಹಿಮೆಯುಂ ಮೆರೆಯುತ್ತ ಸಿದ್ಧಗಿರಿಯಿಂದಲ್ಲೈತಂದು ಕುಲದೈವನಾಗಿ ||
ಇರುವ ತೊರಗಲ್‌ಮೊಗರಸಾದ ಲಿಂಗಭೂ |
ವರನ ಸತ್ಪುತ್ರ ಜಾಯೇಂದ್ರನಿಂ ನಿರ್ಮಿಸಿದ |
ಸರಸತರಕಾವ್ಯವಿದನೊಲಿದು ಲಾಲಿಪುದು ಪಾಲಿಪುದು ಲೀಲೆಯಿಂದ ||

೨ ರಸಮಂಜರಿ

ಇದೂ ಷಟ್ಪದಿಯಲ್ಲಿ ಬರೆದಿದೆ; ಪದ್ಯ 100. ಇದಕ್ಕೆ ಶೃಂಗಾರತಿಲಕ ಎಂಬ ಹೆಸರೂ ಉಂಟು.



## ಮೋದಿಯರುದ್ರ 1737

ಈತನು ವಿರಕ್ತರಕಾವ್ಯ, ಪಂಚವರ್ಣೋದ್ಭವಕಾವ್ಯ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ ಕಾವನಾರಿಭಕ್ತರ ಚರಣಕಿಂಕರ, ಪಂಚಮಕುಲಜೋದ್ಭವನಿಜಹೃದಯ, ಸರಸಕವಿವರ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ವಿರಕ್ತರಕಾವ್ಯವನ್ನು ಶಕ 1658 ಪಿಂಗಳದಲ್ಲಿ, ಎಂದರೆ 1737 ರಲ್ಲಿ, ಬರೆದಂತೆ ಹೇಳುತ್ತಾನೆ.

ಪೂರ್ವಕವಿಗಳಲ್ಲಿ ಪಾಲ್ಕುರಿಕೆಸೋಮ, ಹರಿದೇವ, ಮಲಯರಾಜ,

ಪುಷ್ಪದಂತ, ಭೀಮಕವಿ, ರಾಘವ ಕೆರೆಯಪದ್ಮರಸ, ಹರದತ್ತಾಚಾರ್ಯ, ಪಂಡಿತಸ್ವಾಮಿ, ಉದ್ಭಟ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥಗಳಲ್ಲಿ

ವಿರಕ್ತರಕಾವ್ಯ

ಇದು ವಾರ್ಧಕ, ಪರಿವರ್ಧಿನಿ ಈ ಷಟ್ಪದಿಗಳಲ್ಲಿ ಬರೆದಿದೆ; ಸಂಧಿ 6, ಪದ್ಯ 742. ಇದರಲ್ಲಿ ಶಿವಭಕ್ತರಾದ 101 ವಿರಕ್ತರ ಚರಿತೆ ಹೇಳಿದೆ. ಈ ಗ್ರಂಥವು ಹುಟ್ಟುವುದಕ್ಕೆ ಕಾರಣವನ್ನು ಕವಿ ಹೀಗೆ ಹೇಳುತ್ತಾನೆ —

ಜಗದುದ ಗ್ರಂಥದರ್ಪಣವನು ನೋಡಿ ಪಂಚನೋದ್ಭವಕಾವ್ಯವನು ವಿರಚಿಸಲ್ಕೆ ಭಕ್ತಮಾಹೇಶ್ವರರು ಒರೆದೋರಿ ಚರಿಸುತಂ ಮಳೆಗೇರಿಬದರೂರಪಟ್ಟಣಕೆ ಬರಲು ಅಲ್ಲಿ ಪರ ಪ್ರಮುಖಶಿವಭಕ್ತಸನ್ಮೋಳಗ ಶಿವಶರಣರ ನೋಡಲು ಒಬ್ಬ ಷಟ್ಸ್ಥಲಜ್ಞಾನ ಕೋವಿದ ಮಳಯಸ್ವಾಮಿಯೆಂಬ ಕೋವಿದನು ಗ್ರಂಥವನು ಕೇಳಿ ಆನಂದಿಸಿ ಕವಿಯನು ಕರೆದು ಈ ಕಾವ್ಯವ ರಚಿಸಿದಂತೆ ನೂರೊಂದುವಿರಕ್ತಮಾಹೇಶ್ವರರ ಚರಿತ್ರವ ವಿರಚಿಸೆಂದು ನುಡಿಯಲ್ಕೆ ಅವರ ಬೆಸನಾಂತು ವಿರಚಿಸಿದೆನು

ಈ ಗ್ರಂಥದಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ

ಸಮುದ್ರ

ಇಂದ್ರಂಗೆಯ್ರಾವತವನಿತ್ತು ಗಗನನಾ | ನಂದದಿಂದಿತ್ತ ಚಂದ್ರನಿತ್ತ ಪರಶಿವಗೆ |
ನಂದಸೂನುಗೆ ರಮೆಯನಿತ್ತ ರತ್ನವ ಧರೆಗೆ ಮೌಕ್ತಿಕವ ಸಕಲಜಗಕೆ ||
ಅಂದದಿಂದಿತ್ತ ಭಿಕ್ಷವ ಬೇಡಿ ತಿರಿದುಂಬ | ಮಂದಿಗಳಿಗಿತ್ತ ಶಂಖವ ಜಗಕೆಯುಪಕಾರ |
ವೊಂದು ತಪ್ಪದೆ ಮಾಡಿದೆನು ನನಗೆ ಸರಿಯಾರೆಂದು ಘೋರ್ಗರೆಯುತಿರ್ಪುದು ||

ಇವನ ಪಂಚನೋದ್ಭವಕಾವ್ಯವು ನಮಗೆ ದೊರೆತಿಲ್ಲ.

---

ಕಳಲೆನಂಜರಾಜ ಸು. 1740

ಈತನು ಕಕುದ್ಗಿರಿಮಾಹಾತ್ಮ್ಯ, ಕಾಶೀಮಹಿಮಾರ್ಥದರ್ಪಣ, ಕಾಶೀಖಂಡ, ಗರಳಪುರೀಮಹಿಮಾದರ್ಶ, ಭಕ್ತವಿಲಾಸದರ್ಪಣ, ಭದ್ರಗಿರಿಮಾಹಾತ್ಮ್ಯ, ಭಾರತ, ಮಾರ್ಕಂಡೇಯಪುರಾಣ, ವಿಘ್ನೇಶ್ವರವ್ರತಕಲ್ಪ, ಶಿವಗೀತೆ, ಶಿವಧರ್ಮೋತ್ತರ, ಶಿವಭಕ್ತಿಮಾಹಾತ್ಮ್ಯ, ಶೈವಧರ್ಮ, ಸೇತು

ಮಹಿಮಾದರ್ಶ, ಹರದತ್ತಾಚಾರ್ಯಮಾಹಾತ್ಮ್ಯ, ಹರಿವಂಶ, ಹಾಲಾಸ್ಯಮಾಹಾತ್ಮ್ಯ ಇವುಗಳನ್ನು ಬರೆದಿದ್ದಾನೆ.

ಇವನು ಮೈಸೂರುರಾಜರ ಸೇನಾಪತಿಗಳ ವಂಶಕ್ಕೆ ಸೇರಿದವನು; ಭಾರದ್ವಾಜಗೋತ್ರದವನು, ಆಶ್ವಲಾಯನಸೂತ್ರದವನು; ಋುಗ್ವೇದಿ. ತನ್ನ ವಂಶಪರಂಪರೆಯನ್ನು ಹೀಗೆ ಹೇಳಿದ್ದಾನೆ—

ಚಂದ್ರವಂಶದ ರಾಜರಲ್ಲಿ ಭಾರದ್ವಾಜಗೋತ್ರದ ಋುಕ್ಶಾಖಾನುವರ್ತಿಯಾದ ತಿಮ್ಮನರೇಂದ್ರನು ಕಳಲೆ ಕುಲದಲ್ಲಿ ಪ್ರಸಿದ್ಧನಾಗಿದ್ದನು. ಇವನ ಮಗ ಕಾಂತರಾಜ. ಇವನ ಮಗ ಕಳಲೆ ದೊಡ್ಡರಾಜ. ಇವನು ಯುದ್ಧದಲ್ಲಿ ಶತ್ರುಗಳ ಸೊಕ್ಕನ್ನು ಮುರಿದು ಮರಾಟರಾಯರನೊಕ್ಕಲಿಕ್ಕಿ ಅನ್ಯರಿಗೆ ದಕ್ಕಲರಿಯದ ಕಪಿಪತಾಕೆಯನ್ನೂ ಸಿಂಹಲಲಾಟಪಲ್ಲಕ್ಕಿಯನ್ನೂ ಪಡೆದು ಅಸಮವೀರನೆನಿಸಿದನು; ಮರಾಟೆ ಬಾಯುಸಾಂಟೆ ಮೊದಲಾದವರನು ರಣಘಾಟಿಸಿದಂ ಅಷ್ಟಹಾಯನ್ನು ತಾನೇ ಖಡ್ಗದಲ್ಲಿ ಕಡಿದನು. ಇವನಮಗ ವೀರರಾಜ (ಸು 1721)[1]. ಇವನ ಮಕ್ಕಳು ದೇವರಾಜ ನಂಜರಾಜರು. ಈ ದೇವರಾಜನನ್ನು ಕೆಣಕಿ ಮಾಗಡಿಯ ಭೂಪರನು ನಿಜದುರ್ಗರಾಷ್ಟ್ರವನು ನೀಗಿಕೊಂಡನು[2]. ದೇವರಾಜನ ತಮ್ಮನಾದ ನಂಜರಾಜನೇ ಕವಿ.

ಈತನು ಗರಳಪುರಪತಿ ನೀಲಕಂಠನ ಭಕ್ತನು. ಶಿವಾಗಮಗಳ ಅರ್ಥವನರಿದು ಬುಧಜನದೊಡನೆ ಗೋಷ್ಠಿಯ ನೆಗಳಿದಂತೆಯೂ ಶೈವಪಂಚಾಕ್ಷರದ ನಿಜಗುರುಸೌಂದರೇಶ್ವರಭೂಸುರರಿಂದರಿದು ಭಸಿತಶಿವಾಕ್ಷಮಾಲೆಗಳ ಧರಿಸಿ ಲಿಂಗಾರ್ಚನೆಯನನುದಿನ ಮಾಡುತ ಪಾಶುಪತಶಾಸ್ತ್ರಾರ್ಥತತ್ವವನು ದೇಶಿಕೋತ್ತಮರಂಘ್ರಿಸೇವೆಯಿಂದ ತಿಳಿದಂತೆಯೂ ಹೇಳಿಕೊಂಡಿದ್ದಾನೆ. ಇವನಿಗೆ ಗರಳಪುರಾಧಿನಾಥಚರಣಾರವಿಂದಸೇವಾಸಮಾಸಾದಿತಗೀರ್ವಾಣಾಂಧ್ರಕರ್ಣಾಟಕಾದಿ ನಾನಾಭಾಷಾವಿಶೇಷಕಾವ್ಯರಚನಾಚಾತುರೀಧುರೀಣ, ದಾನಕ್ಷಾತ್ರಾಧೀಶ್ವರ, ಹನೂಮದ್ಧ್ವಜಬಿರುದಾಂಕಿತ ಎಂಬ ವಿಶೇಷಣಗಳು ಹೇಳಿವೆ. ಅಲ್ಲದೆ ಈತನು ಕವಿಗಳಿಗೆ ಪೋಷಕನಾಗಿ ನೂತನಭೋಜರಾಜ ಎಂಬ ಬಿರುದನ್ನು ಪಡೆದಿದ್ದಂತೆಯೂ ಸಂಗೀತಗಂಗಾಧರವೇ ಮೊದಲಾದ ಸಂಸ್ಕೃತಗ್ರಂಥಗಳನ್ನು

---

1. 9 ನೆಯ ಪುಟವನ್ನು ನೋಡಿ. 2. ಇದು 1728 ರಲ್ಲಿ ನಡೆದಂತೆ ತಿಳಿಯುತ್ತದೆ.

ಬರೆದಂತೆಯೂ ಇವನ ಆಶ್ರಿತನಾದ ನೃಸಿಂಹಕವಿಯು ಚಂದ್ರಕಲಾಪರಿಣಯವೆಂಬ ನಾಟಕದಿಂದ ತಿಳಿಯುತ್ತದೆ[1]. ಈ ನೃಸಿಂಹಕವಿ ಕಳಲೆನಂಜರಾಜನ ಸ್ತುತಿರೂಪವಾಗಿ ನಂಜರಾಜಯಶೋಭೂಷಣ ಎಂಬ ಒಂದು ಅಲಂಕಾರಗ್ರಂಥವನ್ನೂ ಬರೆದಿದ್ದಾನೆ.

ನಂಜರಾಜನು ಮೈಸೂರು ದೊರೆಯಾದ ಇಮ್ಮಡಿ ಕೃಷ್ಣರಾಜನ (1734-1766) ಸೇನಾಪತಿಯಾಗಿಯೂ ಮಂತ್ರಿಯಾಗಿಯೂ ಇದ್ದನು. ಇವನಿಗೆ ಕರಾಚೂರಿ ನಂಜರಾಜ ಎಂಬ ಹೆಸರೂ ಇದ್ದಂತೆ ತಿಳಿಯುತ್ತದೆ. ಇವನ ಕಾಲವು ಸುಮಾರು 1740 ಆಗಬಹುದು.

ದೇವಚಂದ್ರನು ತನ್ನ ರಾಜಾವಳೀಕಥೆಯಲ್ಲಿ (1838) ಈ ಕವಿಯ ವಿಷಯವಾಗಿ ಹೀಗೆ ಬರೆದಿದ್ದಾನೆ—

ವೀರರಾಜಕುಮಾರ ದೇವರಾಜನನುಜ ಕಳಲೆ ನಂಜರಾಜಂಗೆ ಕೇರಳದೇಶಕೊಂಗನಾಡತ್ತಣಿಂದಾಂಡಿಗಳ್ ಬಂದು ಸೇರಿ ವೀರಶೈವಪುರಾಣಮೆಂದು ಅನೇಕಕಲ್ಪನಾಕಥೆಗಳಂ ಪೇಳ್ದರ್. ಅವರೊಳೆ ಅತಿಭಕ್ತಿ ಪುಟ್ಟಿ ಕನ್ನಡವಾಕ್ಯಂಗಳಿಂ ನಂಜರಾಜಕೃತಮೆಂದು ಗ್ರಂಥಂಗಳಂ ವಿರಚಿಸಿದಂ.

ಇವನ ಗ್ರಂಥಗಳಲ್ಲಿ

### 1. ಹಾಲಾಸ್ಯಮಾಹಾತ್ಮ್ಯ

ಇದು ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿರುವ ಹಾಲಾಸ್ಯಮಾಹಾತ್ಮ್ಯದ ಗದ್ಯರೂಪವಾದ ಭಾಷಾಂತರವು; ಅಧ್ಯಾಯ 71. ಇದರಲ್ಲಿ

---

1. ಸೂತ್ರಧಾರಃ — ತತ್ಕವಿಸಮಕ್ಷಮೇವ ಕೃತಿನಾ ಕೃತಿನಾಯಕೇನ ಕಲುಲೇಕುಲಚಿರಂತಕೇನ ಸ್ವಕಪೋಲಕಲ್ಪಿತ ಸಂಗೀತಗಂಗಾಧರಾದ್ಯನೇಕ ಪ್ರಬಂಧಾಭಿನಯದರ್ಶನಜನಿತಕೌತುಕೇನ ಕರ್ಣಾಟಭಾಷಾವಿರಚಿತ ಹಾಲಾಸ್ಯಮಾಹಾತ್ಮ್ಯ ಶಿವಭಕ್ತವಿಲಾಸಾದಿ ಬಹುಪ್ರಬಂಧಸಮುದಯೇನ ಸಕಲವಿದ್ವಜ್ಜನಭಾಗಧೇಯೇನ ನೂತನಭೋಜರಾಜೇನ ನಂಜರಾಜೇನ ಸಬಹುಮಾನಮಾಹೂತಃ ಸಮಾದಿಷ್ಟೋಸ್ಮಿ.

ವಿರುದ್ಧಯೋಃ ಶ್ರೀಭಾರತ್ಯೋರೇಕತ್ರ ಘಟನಂ ಕುತಃ |
ವೈರಗ್ಗ್ಯಂ ತ್ಯಕ್ತ್ವಾ ತಸ್ಯೈವ ಕಲುಲೇನಂಜಭೂಪತೇಃ ||

ಮಧುರೆಯ ಸುಂದರೇಶ್ವರದೇವರ 64 ಲೀಲೆಗಳು ಹೇಳಿವೆ. ಇದಕ್ಕೆ ನಂಜ ರಾಜವಾಣೀವಿಲಾಸ ಎಂದು ಹೆಸರು. ಗ್ರಂಥಾವತಾರದಲ್ಲಿ ದೇವತಾಸ್ತುತಿ, ಕವಿವಂಶ ಮುಂತಾದ ವಿಷಯಗಳನ್ನು ಪ್ರತಿಪಾದಿಸುವ 15 ಭಾಮಿನೀಷಟ್ಪ

---

1 (1) ದೇವೇಂದ್ರಶಾಪಪರಿಹಾರ.
(2) ಐರಾವತಶಾಪವಿಮೋಚನೆ
(3) ಕದಂಬವನದಲ್ಲಿ ಮಧುರಾಪುರ ರಚನೆ
(4) ತಟಾಕಾದೇವಿಯ ಜನನ
(5) ಮೀನಾಕ್ಷಿ ಸೌಂದರೇಶರ ಕಲ್ಯಾಣ
(6) ಪರಮೇಶ್ವರನ ನಾಟ್ಯಪ್ರದರ್ಶನ
(7) ಕುಂಡೋದರನಿಗೆ ಅನ್ನಭಕ್ಷಣ ಸಾಮರ್ಥ್ಯದಾನ
(8) ಕುಂಡೋದರನಿಗೆ ಆಪಗಾಪ್ರದರ್ಶನ
(9) ಸಪ್ತಸಾಗರಾನಯನ
(10) ಮಲಯಧ್ವಜಭೂಪಾನಯನ
(11) ಉಗ್ರಪಾಂಡ್ಯನಿಗೆ ವಲಯಾಯುಧಪ್ರದಾನ
(12) ಸಮುದ್ರನ ಗರ್ವಭಂಗ
(13) ದೇವೇಂದ್ರಕಿರೀಟಭೇದನ
(14) ಮೇರುಕಾಂಚನಹರಣ
(15) ಮುನಿಗಳಿಗೆ ವೇದಾರ್ಥೋಪದೇಶ
(16) ರತ್ನವಿಕ್ರಯ
(17) ಮೇಘಗಳಿಂದ ಸಮುದ್ರಪಾನ
(18) ಅತಿವೃಷ್ಟಿನಿವಾರಣ
(19) ಸಿದ್ಧವೇಷಧಾರಣ
(20) ಶಿಲಾಗಜಕ್ಕೆ ಇಕ್ಷುಪ್ರದಾನ
(21) ನಗ್ನಹಸ್ತಿಹನನ
(22) ದ್ವಿಜಕನ್ಯಾನುಗ್ರಹ
(23) ವ್ಯತ್ಯಸ್ತನರ್ತನ
(24) ದ್ವಿಜಪತ್ನಿಯ ವಧನಿರೂಪಣ
(25) ಬ್ರಹ್ಮಘ್ನದೋಷಪರಿಹಾರ
(26) ಸಿದ್ಧನಂ ಬಂಟಿಕಾಳಗದಲ್ಲಿ ಗೆದ್ದುದು
(27) ನಗ್ನಸರ್ಪಹನನ
(28) ನಗ್ನಧೇನುಪಾತನ
(29) ಕುಲಭೂಷಣನಿಗೆ ಸೇನಾಪ್ರದರ್ಶನ
(30) ಕುಲಭೂಷಣನಿಗೆ ಸುವರ್ಣಮಯವಾಗ ಮುಡುಪನಿತ್ತುದು
(31) ವಲಯವಿಕ್ರಯ
(32) ಯಕ್ಷಸ್ತ್ರೀಯರಿಗೆ ಅಷ್ಟಸಿದ್ಧ್ಯುಪದೇಶ
(33) ಚೋಳರಾಜನಿಗೆ ಬಾಗಿಲಂತೆಗೆದುದು
(34) ಪಾಂಡ್ಯಭಟರಿಗೆ ಪಾನೀಯದಾನ
(35) ರಸವಾದ ಪ್ರದರ್ಶನ

ದಿಯ ಪದ್ಯಗಳಿವೆ; ಮುಂದಕ್ಕೆ ಎಲ್ಲಾ ಗದ್ಯವೇ ಇದೆ. ಇದೇ ರೀತಿಯಾಗಿ ಇನ್ನೂ ಕೆಲವು ಗ್ರಂಥಗಳಲ್ಲಿಯೂ ಇದೆ. ಗ್ರಂಥಾದಿಯಲ್ಲಿ ಈಶ್ವರಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಇತರ ಮತಗಳ ಭಂಗಿಸಿ ಶಿವವಿಶಿಷ್ಟಾದ್ವೈತಮತವೇ ವ್ಯಾಸಮುನಿಗಭಿಮತವೆಂದು ನಿರೂಪಿಸಿದ ಶ್ರೀಕಂಠದೇಶಿಕ, ಏಮತಸಭೆಯೊಳು ಶಿವನೇ ಪರಮಾತ್ಮನೆಂದು ಪಾಷಾಣವೃಷಭಂಗೆ ತೃಣವಂ

---

(36) ಚೋಳರಾಯನಂ ಜಯಿಸಿದುದು
(37) ಶೂದ್ರನಿಗೆ ತಂಡುಲದಾನ
(38) ವೈಶ್ಯನ ಮಗನಿಗೆ ಜಯವನಿತ್ತುದು
(39) ವರಗುಣಪಾಂಡ್ಯನ ಬ್ರಹ್ಮಹತ್ಯಾವಿಮೋಚನ
(40) ಕಾಷ್ಠಭಾರವಿಕ್ರಯ
(41) ಚೇರರಾಯನಿಗೆ ಪತ್ರಿಕಾಲೇಖನ
(42) ಭದ್ರನಿಗೆ ಪೀಠವನಿತ್ತುದು
(43) ಭದ್ರವನಿತೆಗೆ ಅಭಯಪ್ರದಾನ
(44) ಸೂಕರಶಿಶುಗಳಿಗೆ ಸ್ತನ್ಯಪ್ರದಾನ
(45) ಸೂಕರಶಿಶುಗಳಿಗೆ ಮಂತ್ರಿತ್ವವನಿತ್ತುದು
(46) ಭಾರದ್ವಾಜಪಕ್ಷಿಗೆ ಮೃತ್ಯುಂಜಯಮಂತ್ರೋಪದೇಶ
(47) ನೀರುಕಾಗೆಗೆ ಮುಕ್ತಿಯನಿತ್ತುದು
(48) ಪುರಸೀಮಾಪ್ರದರ್ಶನ
(49) ಚೋಳಸೇನಾಪ್ರಭಂಜನ
(50) ಸಂಘಕವಿಗಳಿಗೆ ಪೀಠವನಿತ್ತುದು
(51) ಬ್ರಾಹ್ಮಣಕುಮಾರನಿಗೆ ಆರ್ಯಾವೃತ್ತವ ಬರೆದುಕೊಟ್ಟುದು
(52) ಸತ್ಕೀರರಾನುಗ್ರಹಕರಣ
(53) ಆಸತ್ಕೀರಕವಿಗೆ ದ್ರಾವಿಡಸೂತ್ರೋಪದೇಶ
(54) ಪ್ರಬಂಧತಾರತಮ್ಯನಿರೂಪಣ
(55) ಉತ್ತರಹಾಲಾಸ್ಯಪ್ರಾದುರ್ಭಾವ
(56) ಕೈವರ್ತಕಕನ್ಯಾಪಾಣಿಗ್ರಹಣ
(57) ಪಾತಪುರೀಶ್ವರದೀಕ್ಷಾಪ್ರದಾನ
(58) ಮಾಯಾಶ್ವವಿಕ್ರಯ
(59) ನದ್ಯಾಕರ್ಷಣ
(60) ಪಿಟ್ಟಿಗಾಗಿ ಶಿವನು ಮಣ್ಣುಹೊತ್ತುದು
(61) ಕುಬ್ಜಪಾಂಡ್ಯಜ್ವರಶಮನ
(62) ಶೂಲಗಳಿಂದ ಆರ್ಹತರಂ ಸಂಹರಿಸಿದುದು
(63) ಶಂಭುಸ್ವರೂಪಶಿವಸಾಪ್ಯಕಾಷ್ಠಾನಯನ
(64) ವಸಿಷ್ಠಾದಿ ಮುನಿಗಳಿಗೆ ಕದಂಬವನಪ್ರವೇಶ

ಮೆಲಿಸಿ ತೋರಿಸಿದ ಹರದತ್ತಾಚಾರ್ಯ, ಇವರುಗಳನ್ನು ಸ್ತುತಿಸಿದ್ದಾನೆ. ಬಳಿಕ ತನ್ನ ವಂಶಾವಳಿಯನ್ನು ಹೇಳಿ "ವ್ಯಾಸಕೃತಪೌರಾಣಸೂಕ್ತಿಗ | ಳಾಶಯುವನರಿ'ದಚ್ಚಗನ್ನಡ | ಭಾಷೆಯಿಂದುಸಿರುವೆನು ಹಾಲಾಸ್ಯೇಶಲೀಲೆಗಳ" ಎಂದು ಟೀಕೆಯನ್ನು ಆರಂಭಿಸಿದ್ದಾನೆ.

ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಚಂದ್ರವಂಶೋದ್ಭವರಾದ ಭಾರದ್ವಾಜಸಗೋತ್ರದ ಆಶ್ವಲಾಯನಸೂತ್ರದ ಋಗ್ವೇದಿಗಳಾದ ಮಹಿಸೂರ ದಳವಾಯಿ ದೊಡ್ಡಯ್ಯನವರ ಪೌತ್ರರಾದ ಕಳಲೆ ವೀರರಾಜಯ್ಯನವರ ಪುತ್ರರಾದ ನಂಜರಾಜಯ್ಯನವರು ಸ್ಕಾಂದಪುರಾಣದೊಳ್ ಪೇಳ್ದ ಹಾಲಾಸ್ಯಪತಿಯಾದ ಸೌಂದರೇಶನ ಅರುವತ್ತುನಾಲ್ಕು ಲೀಲೆಗಳಂ ಕರ್ಣಾಟಕೋಕ್ತಿಯಿಂದವಿಳರಚಿಸಂತೆ ಪೇಳ್ದ ನಂಜರಾಜವಾಗ್ವಿಲಾಸವೆಂಬ ಟೀಕೆಯಲ್ಲಿ

ಈ ಗ್ರಂಥದಿಂದ ಪಾರ್ವತೀಸ್ತುತಿರೂಪವಾದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ಬೆಟ್ಟದರಸಿನ ಕುವರಿ ಗಿರಿಶನ | ಪಟ್ಟದರಸಿ ಚರಾಚರಂಗಳ |
ಸೃಷ್ಟಿಯಂ ನಿಜದೃಷ್ಟಿಲೀಲಾಮಾತ್ರದಿಂದೆಸಗಿ ||
ಕಷ್ಟಮಂ ಪರಿಹರಿಸಿ ಬೇಡಿದ | ಭೀಷ್ಟವರಗಳನೀವ ನಿಪುಣೆ ನು |
ದಿಷ್ಟಸಿದ್ಧಿಯನಿತ್ತು ಸಲಹು ಗಣೇಶಗುಹಜನನಿ ||

## 2 ಭದ್ರಗಿರಿಮಾಹಾತ್ಮ್ಯ

ಇದು ಸ್ಕಾಂದಪುರಾಣೋಕ್ತವಾದ ಭದ್ರಗಿರಿಮಾಹಾತ್ಮ್ಯದ ಟೀಕೆ ಈ ಭದ್ರಗಿರಿಯೆಂಬುದು ಪಿನಾಕಿನೀ ವಹ್ನಿನದಿಗಳ ಸಂಗಮದ ನೈರುತ್ಯದಲ್ಲಿರುವಂತೆ ತಿಳಿಯುತ್ತದೆ. ಗ್ರಂಥಾರಂಭದಲ್ಲಿ ಕವಿ ಶಿವವಿಶಿಷ್ಟಾದ್ವೈತಸ್ಥಾಪಕನಾದ "ಶ್ರೀಕಂಠದೇಶಿಕರಡಿಗೆ ಪೊಡಮಡುವೆನು'' ಎನ್ನುತ್ತಾನೆ ಬಳಿಕ ತನ್ನ ವಂಶಾವಳಿಯನ್ನು ಹೇಳಿ

ಪಾಶುಪತಶಾಸ್ತ್ರಾರ್ಥತತ್ವವ | ದೇಶಿಕೋತ್ತಮರಂಘ್ರಿಸೇವೆ ಯು |
ಲೇಸಿನಿಂದಲಿ ತಿಳಿದು ನಂಜನರೇಶವ್ರ ನಾಸೀಗ ||
ವ್ಯಾಸರಚಿತಪುರಾಣಸೂಕ್ತಿಗ | ಳಾಶಯವ ತಿಳಿದಚ್ಚಗನ್ನಡ |
ಭಾಷೆಯಿಂದುಸಿರುವೆನು ಭದ್ರಗಿರೀಶಮಹಿಮೆಯನು ||

ಎಂದು ಟೀಕೆಯನ್ನು ಆರಂಭಿಸಿದ್ದಾನೆ. ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 14 ಅಧ್ಯಾಯಗಳಿವೆ.

3 ಹರದತ್ತಾಚಾರ್ಯಮಾಹಾತ್ಮ್ಯ

ಇದು ಭವಿಷ್ಯೋತ್ತರಪುರಾಣೋಕ್ತವಾದ ಹರದತ್ತಾಚಾರ್ಯಚರಿತ್ರದ ಭಾಷಾಂತರವು; ಅಧ್ಯಾಯ 10. ಕಥಾಸಾರವನ್ನು ಕವಿ ಸಂಗ್ರಹವಾಗಿ ಈ ಪದ್ಯದಲ್ಲಿ ಸೂಚಿಸಿದ್ದಾನೆ–

ವಿಮತಸಭೆಯೊಳು ಶಿವನೆ ಕಮಲಾ | ರಮಣಮೊದಲಾದಮರವಂದ್ಯನು |
ಸಮರಧಿಕರವರಿಲ್ಲ ಸತ್ಯವಿದೆಂದು ತಿಳಿಪಂತೆ ॥
ಕುಮತಿಕೋಲಾಹಲವ ಖಂಡಿಸಿ | ಗಮಕದಿಂ ಪಾಷಾಣವೃಷಭಗೆ |
ಸುಮತಿ ತೃಣವನು ಮೆಲಿಸಿದಾಹರದತ್ತ ಸಲಹೆಮ್ಮ ॥

4 ಕಕುದ್ಗಿರಿಮಾಹಾತ್ಮ್ಯ

ಇದು ಶಿವಗಂಗೆಯ ಮಹಿಮೆಯನ್ನು ನಿರೂಪಿಸುತ್ತದೆ; ಅಧ್ಯಾಯ 20.

5 ಭಕ್ತವಿಲಾಸದರ್ಪಣ

ಇದು ಸ್ಕಾಂದಪುರಾಣದಲ್ಲಿಯ ಶಿವಭಕ್ತಮಾಹಾತ್ಮ್ಯದಲ್ಲಿ 90ನೆಯ ಅಧ್ಯಾಯದ ಭಾಷಾಂತರವು.

6. ಸೇತುಮಹಿಮಾದರ್ಶ

ಇದು ಸ್ಕಾಂದಪುರಾಣಾಂತರ್ಗತವಾದ ಸೇತುಮಾಹಾತ್ಮ್ಯದ ಟೀಕೆ; ಅಧ್ಯಾಯ 52.

7. ಗರಳಪುರೀಮಹಿಮಾದರ್ಶ

ಇದು ನಂಜನಗೂಡಿನ ಮಹಿಮೆಯನ್ನು ನಿರೂಪಿಸುತ್ತದೆ; ಅಧ್ಯಾಯ 12.

8 ಶಿವಗೀತೆ

ಇದು ಪದ್ಮಪುರಾಣಾಂತರ್ಗತವಾದ ಶಿವಗೀತೆಯ ಭಾಷಾಂತರವು; ಅಧ್ಯಾಯ 18

9 ಶಿವಧರ್ಮೋತ್ತರ

ಇದು ಸ್ಕಾಂದಪುರಾಣೋಕ್ತವಾದ ಶಿವಧರ್ಮೋತ್ತರದ ಟೀಕೆ; ಅಧ್ಯಾಯ 50.

10 ವಿಘ್ನೇಶ್ವರವ್ರತಕಲ್ಪ

ಇದು ಸ್ಕಾಂದಪುರಾಣೋಕ್ತವಾದ ವಿಘ್ನೇಶ್ವರವ್ರತಕಲ್ಪದ ಟೀಕೆ; ಅಧ್ಯಾಯ 3. ಇದಕ್ಕೆ ಸಂಕಟಹರಚತುರ್ಥೀವ್ರತಮಹಿಮೆ ಎಂಬ ಹೆಸರೂ ಇರುವಂತೆ ತಿಳಿಯುತ್ತದೆ.

ಉಳಿದ ಗ್ರಂಥಗಳು ಪ್ರಾಯಿಕವಾಗಿ ಆಯಾನಾಮಗಳುಳ್ಳ ಸಂಸ್ಕೃತ ಗ್ರಂಥಗಳ ಭಾಷಾಂತರಗಳಾಗಿವೆ.

---

ನೂರೊಂದ ಸು. 1740

ಈತನು ಸೌಂದರಕಾವ್ಯವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; ಆದರೂ ಅಲ್ಲಲ್ಲಿ ವಿಷ್ಣುಸ್ತುತಿಯನ್ನು ಮಾಡಿದ್ದಾನೆ. ಶ್ರೀರಂಗಪಟ್ಟಣದಲ್ಲಿ ಕೃಷ್ಣರಾಜನು ಆಳುತ್ತಿರುವನೆಂದೂ ಅತನ ಸೇನಾಪತಿಯಾದ ಕಳಲೆ ನಂಜರಾಜನು (ಸು. 1740) ತುರುಕರನ್ನು ಜಯಿಸಿದನೆಂದೂ ಹೇಳಿ ಈ ನಂಜರಾಜನನ್ನು ವಿಶೇಷವಾಗಿ ಸ್ತುತಿಸುವುದರಿಂದ ಕವಿ ಇವನ ಆಶ್ರಿತನಾಗಿದ್ದಂತೆ ತೋರುತ್ತದೆ. ಈ ಕೃಷ್ಣರಾಜನು ಮೈಸೂರು ದೊರೆಯಾದ ಇಮ್ಮಡಿ ಕೃಷ್ಣರಾಜ (1734-1766) ನಾಗಿರಬೇಕು. ಆದುದರಿಂದ ಕವಿಯ ಕಾಲವು ಸುಮಾರು 1740 ಆಗಬಹುದು. ಈ ಗ್ರಂಥವನ್ನು ಕಾರ್ತಿಕ ಶುದ್ಧ ದಶಮೀ ಶನಿವಾರ ಆರಂಭಿಸಿ ಆಶ್ವಯುಜ ಶುದ್ಧ ದಶಮಿಗೆ ಮುಗಿಸಿದಂತೆ ಹೇಳುತ್ತಾನೆ. ವರ್ಷದ ಹೆಸರನ್ನು ಹೇಳಿದ್ದರೆ ಕವಿಯ ಕಾಲವನ್ನು ನಿಸ್ಸಂದೇಹವಾಗಿ ನಿಶ್ಚಯಿಸಬಹುದಾಗಿದ್ದಿತು.

ಇವನ ಗ್ರಂಥ

ಸೌಂದರಕಾವ್ಯ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 13, ಪದ್ಯ 1395. ಈ ಗ್ರಂಥದಲ್ಲಿ ಪುರಾತನಕಥೆ ಯಾವುದೂ ಹೇಳಿಲ್ಲ[1]. ತನ್ನ ಸಮಕಾಲದವರಾದ ಕೃಷ್ಣ

---

1. ಒಂದು ಪ್ರತಿಯ ಕೊನೆಯಲ್ಲಿ 'ಹರಿಹರನೊರೆದ ಶ್ರೀಕರವೀರ ಸೌಂದರನ| ವರಚಾರುಕೀರ್ತಿಪೇಳ್ದೆನು' ಎಂದಿದೆ. ಆದರೆ ಮತ್ತೊಂದು ಪ್ರತಿಯಲ್ಲಿ ಸೌಂದರನ ಮಾತೇ ಇಲ್ಲ.

ರಾಜ, ಅವನ ದಳಪತಿಗಳಾದ ಕಳಲೆ ದೇವರಾಜ ನಂಜರಾಜರು ಇವರುಗಳ ವೈಭವ ಪರಾಕ್ರಮಾದಿಗಳನ್ನು ಕವಿ ವಿಶೇಷವಾಗಿ ವರ್ಣಿಸಿದ್ದಾನೆ.

ಮೊದಲು ಮೂರು ಸಂಧಿಗಳಲ್ಲಿ ಕೃಷ್ಣರಾಜನ ಆಸ್ಥಾನವರ್ಣನೆ ಇದೆ. ಆ ಆಸ್ಥಾನಕ್ಕೆ ಹಲವು ಪ್ರಭುಗಳು¹ ಬಂದಿದ್ದಂತೆ ಹೇಳಿದೆ

ಬಳಿಕ ಕವಿ ಕಳಲೆದೇವರಾಜನು ಮಾಗಡಿಯನ್ನು ವಶಮಾಡಿಕೊಂಡು ಅಲ್ಲಿಯ ಪ್ರಭುವನ್ನು ಸೆರೆಹಿಡಿದನೆಂದು ಹೇಳಿ ಕಳಲೆ ನಂಜರಾಜನು ಸೈನ್ಯದೊಡನೆ ತೆರಳಿ ಚನ್ನಪಟ್ಟಣದ ಸಮೀಪದಲ್ಲಿ ತುರುಕರೊಡನೆ ಯುದ್ಧಮಾಡಿ ಬಾರಮಲ್ಲ ಮುಂತಾದ ಹಲವರನ್ನು ಕೊಂದು ಜಯಶಾಲಿಯಾದನೆಂದು ಹೇಳುತ್ತಾನೆ. ಈ ಯುದ್ಧದಲ್ಲಿ ಸತ್ತ ತುರುಕಸರದಾರರ ಹೆಸರು ಈ ಪದ್ಯದಲ್ಲಿ ಹೇಳಿದೆ—

ಬಿದ್ದ ಸುಲ್ತಾನಮುರತ್ಖಾನ ರಣದೂಲ | ಬಿದ್ದ ದರಿಯ ಬಲನೊಳಗೆ |
ಬಿದ್ದನು ಚಂದೊಸಾಹೇಬನು ಕಾಸಿಂಖಾನ | ಬಿದ್ದಸಿಖೇಂದ್ರದಿವಾನ ||

1. ಜಾಂಬಳ್ಳಿ ದೊಡ್ಡಯ್ಯ; ನಗರವನಂತಗಿರಿಯನಾಳ್ವ ಚೆಲುವಯ್ಯ; ನಾಗ್ಗೆಹಳ್ಳಿಯ ದೊರೆ ವೀರರಾಜಯ್ಯ, ಕಡಲೂರ ಚಿಕ್ಕಯ್ಯ; ಶಿರಪುರದರಸು ವಿಚಾರಕರ್ತ ವೀರ, ಡೆಂಕಣಿಕೋಟೆ ದೊಡ್ಡಯ್ಯನ ಮಗ; ಕಡಬದ ನರಸರಾಜಯ್ಯ; ಹೆಬ್ಬೂರ ಚೆಲುವರಾಜಯ್ಯ; ಮದ್ದೂರ ಕೃಷ್ಣಯ್ಯ, ಮಾಗಡಿಯ ಅರಸ ಆಲಂಗದ ನರಸಯ್ಯ; ಚಿಕ್ಕನಾಯಕನಹಳ್ಳಿ ಮುದ್ದರಾಜಯ್ಯ; ನೂಲಗಿರಿಯ ದೇವರಾಜಯ್ಯ; ಬಳ್ಳಪುರದ ಬೈಚೆಗೌಡನ ಮರಿಮೊತ್ತದ ಬೆಳ್ಳೂರ ಕೆಂಪರಾಜಯ್ಯ; ಹರದನಹಳ್ಳಿ ಕಾಂತಯ್ಯ. ಇನ್ನು ಕೆಲವರು ನಾಮನಿರ್ದೇಶವಿಲ್ಲದೆ ಹೀಗೆ ಸೂಚಿಸಲ್ಪಟ್ಟಿದ್ದಾರೆ.— ಸಿಂಹಾಸನಪುರಪತಿ, ಫಣಿಪುರವನಾಳ್ವ ವಜೀರ; ಬೇಲೂರ ಗುರಿಕಾರ; ನರಸಿಂಹಪುರದರಸು; ಕಿಕ್ಕೇರಿ ಗುರಿಕಾರ; ಹಾರನಹಳ್ಳಿಯ ಗುರಿಕಾರ; ಅರಕಲಗೂಡನಾಳುವ ದೊರೆ; ದೋರಾಂಬುಧಿಯರಸು; ತುರುಕಬಲವ ಮುರಿಮೊತ್ತದ ತುರುಗೆರೆಯರಸು; ದೇವರಾಯದುರ್ಗದ ಪತಿ; ತುಮಕೂರರಸು; ಚನ್ನಪಟ್ಟಣದರಸು; ಕುಣಿಗಿಲ ದೊರೆ; ಮದ್ದಗಿರಿಯ ದೊರೆ; ಹೊಸವೂರ ಗುರಿಕಾರ; ಆಳಿಯಪಟದ ಯಳಂದೂರ ದೊರೆ; ಹುಲಿಯೂರದುರ್ಗಪತಿ; ಎಂಡಕಲ್ಲ ಗುರಿಕಾರ; ಖಾನಖಾನರ ಸೋಲಿಸಿದ ಸತ್ಯಮಂಗಲದ ದೊರೆ; ಕಂದಿಕೆರೆಯ ದೊರೆ; ಹೊನ್ನವಳ್ಳಿಯ ಗುರಿಕಾರ; ಧಾರಾಪುರದ ದೊರೆ; ಶಾಲ್ಯದರಸು; ನಾಮಕಲ್ಲುದೊರೆ; ಪಿರಿಯಪಟ್ಟಣದ ದೊರೆ; ಮುತ್ತೂರರಸು.

ಆಮೇಲೆ ಕವಿ ನಂಜರಾಜನನ್ನು ವಿಶೇಷವಾಗಿ ಸ್ತುತಿಸಿ ನವರಾತ್ರಿಯ ಉತ್ಸವವನ್ನು ವರ್ಣಿಸಿ ಗ್ರಂಥವನ್ನು ಮುಗಿಸುತ್ತಾನೆ.

ತನ್ನ ಗ್ರಂಥವನ್ನು ಹೀಗೆ ವರ್ಣಿಸುತ್ತಾನೆ—

ನೋಡಿದಡೆಯು ನವರಸದಲಂಕಾರ ರೂಪಂ | ಹಾಡೆ ರಾಗದ ರಂಜನೆಯು |
ಪಾಡಿ ಕೇಳ್ದಡೆ ಕರ್ಣಾಮೃತಪ್ರೌಢಿಯು | ರೂಢಿಯೊಳಿದೆ ಪುಣ್ಯಕಥೆಯು ||

ಗ್ರಂಥಾವತಾರದಲ್ಲಿ ಈಶ್ವರಸ್ತುತಿಯಿದೆ; ಬಳಿಕ ಕವಿ ಪಾರ್ವತೀ ಗಣೇಶ, ಷಣ್ಮುಖ, ಭೈರವ, ಸರಸ್ವತಿ, ಕಾವೇರಿ, ಗಂಗಾಧರಲಿಂಗ, ವೀರಭದ್ರ, ರಂಗನಾಥ ಇವರುಗಳನ್ನು ಹೊಗಳಿದ್ದಾನೆ. ಗ್ರಂಥಾಂತ್ಯದಲ್ಲಿ ಎಡೆಯೂರ ತೋಂಟದ ಸಿದ್ಧೇಶ್ವರನ ಸ್ತುತಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ನರ್ತನ

ಕಂಗಳೊ ಕಾಮತರಂಗಳೊ ನೀಲಾಳ | ಕಂಗಳೊ ಅಳಿಯ ಬಳಗವೋ |
ಹೆಂಗಳರಸಿ ಹೇಮಾಂಗಪ್ರತಿಮೆಯಂತೆ | ರಂಗದೊಳಾಡಿ ಮೆಱೆದಳು ||

ಜಟ್ಟಿಗಳು

ಮಲ್ಲಗಾಸೆಯುದಟ್ಟಿಚಲ್ಲಣಗಳನುಟ್ಟು | ಮಲ್ಲಿಗೆಮಾಲೆ ಕಂಠದೊಳು |
ಬಲ್ಲಿದ ಭೀಮಕರದ ವಜ್ರಮುಷ್ಟಿಯಿಂ | ದಲ್ಲಿ ಮೆಱೆದರು ಜಟ್ಟಿಗಳು ||
ಕೆಡಹಿದವನಮೇಲೆ ಅಡಿಸೇಱಿ ತೊಡೆಗಳಿಂ | ಮಡಮುಱಿದಿಕ್ಕಿಱಿದೊತ್ತಿ |
ಹೊಡೆಮಗ್ಗುಲಾಗದಂದದಿನಡೆದಡೆಮ ಜೊಂ | ಪಡಿವಡಿಗಪ್ಪಳಿಸಿದನು ||
ಉರತಗ್ಗಿ ಬಗ್ಗಿ ಕುಪ್ಪಳಿಸಿ ಮೈಸಿಯುಬ್ಬಿ | ಭರತಕೋವಿದರಂತೆ ಹೆಣಗಿ |
ಸರಬವರಿಯೊಳು ಪೈಸರಗೋಲ ತಿರುಗಿ ಶ್ರೀ | ಕರದ ಸಾದಕವ ತೋಱಿದರು ||

ರಾಜನೀತಿ

ಧರಿಸು ಸುಧರ್ಮದ ವಜ್ರಾಂಗಿಜೋಡ ಸ | ತ್ಕರಿಸು ಸದ್ವಿಜರ ಶಾಸ್ತ್ರಗಳ |
ಪರಮಭಕ್ತರ ನೋಯಿಸದೆ ಸದ್ಧರ್ಮದಿ | ಧರಣಿಯಾಳೆಂದ ಭೂಪಾಲ ||
ದೇವರು ಗುರುವು ಶಾಸ್ತ್ರವು ಶೀಲವುಪವಾಸ | ಈವ ಗುಣವು ಕಾವ ಗುಣವು
ಇವ ರಾಯನಿಗುಂಟು! ಆವ ಕ್ಷತ್ರಧರ್ಮಜ್ಞ | ದೇವರ ಸಮವೆಂದ ಮಂತ್ರಿ ||

### ದುರ್ಮಂತ್ರಿ

ಅರಸರ್ಗೆ ಕಿಲ್ಲದೆ ಧರಣಿಹಪ್ಪುಡೆಯುಗೆ | ಹೊರೆವರು ತಮ್ಮ ಬಂಧುಗಳ |
ದೊರೆಚಿತ್ತವಿದ್ದಂತೆ ಮುಚ್ಚಿಮಾಡಿ ಬಿನ್ನೈಸಿ | ಬರೆವರು ಲೆಕ್ಕಮಾರ್ಗಗಳ ||
ತಮ್ಮಿಂದ ಸತ್ಕಾರ್ಯಕ್ಕರನ್ನಿಲ್ಲವೆಂಬರು | ಬ್ರಹ್ಮಾಂಡವೆಲ್ಲ ಬಾಧಿಪರು |
ತಮ್ಮೊಳು ತಾವೆ ಪ್ರಭೇದಬೆರಸುವರು | ನಮ್ಮಲಾಗದು ಮಂತ್ರಿವಚನ ||

### ಗೂಢಾರ್ಥದ ದೇವತಾಸ್ತುತಿ.

ತರುಧರನ ತಂದೆತನುಜೆಮನೆಯ ಸಖ | ತರಳನಮ್ಮನ ವರನಣುಗನ |
ಅರಸಿಯಾತ್ಮಜನ ಮಾವನ ಮಗನುರುಪಿದ | ಗುರುವೆ ತ್ರಿಣೇಶ ಮಾಂಪಾಹಿ[1]||

— — —

### ವೆಂಕಟೇಶ ಸು 1740

ಈತನು ಹಾಲಾಸ್ಯಮಾಹಾತ್ಮ್ಯವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಪೌರುಕುತ್ಸ ಗೋತ್ರದವನು; ಆಪಸ್ತಂಬಸೂತ್ರದವನು; ಬೃಹಚ್ಚರಣ ಸಂಪ್ರದಾಯದವನು. ಇವನ ಸ್ಥಳ ಗುಮ್ಮಳಾಪುರ. ಈತನ ಪೂರ್ವಿಕರವಿಷಯವಾಗಿಯೂ ಈತನವಿಷಯವಾಗಿಯೂ ಇವನ ಗ್ರಂಥದಿಂದ ಈಯಂಶಗಳು ತಿಳಿಯುತ್ತವೆ—

ಇವನ ಪೂರ್ವಿಕರಾದ ಗಿರೀಶಾದಿ ವಿಪ್ರರು 500 ವರ್ಷಗಳಿಂದ ಗುಮ್ಮಳಾಪುರದಲ್ಲಿ ಗ್ರಾಮಭೂಸ್ವಾಸ್ಥ್ಯಗಳನ್ನು ಅನುಭವಿಸಿಕೊಂಡು ಮರ್ಯಾದೆಯಿಂದ ಇದ್ದರು. ಬಳಿಕ ಬೆಂಗಳೂರಲ್ಲಿರುತ್ತಿದ್ದ ಕೆಂಪಕೃಷ್ಣಮಾಧೀಶ್ವರ, ನಾಚಪ, ಗಿಡ್ಡಪ, ಕೆಂಪನಾಚಯ ನೃಪಾಲಾದಿಗಳು ಗ್ರಾಮಭೂಸ್ವಾಸ್ಥ್ಯಗಳನ್ನು ಕೊಟ್ಟು ಕಾವಾಡಿದರು. ಮತ್ತು ಏಕರಾಜನು (ಎಕ್ಕೋಜಿ) ಇವನ ಮುತ್ತಾತನಿಗೆ ಅಂದೋಳಿಕಾಶ್ವಾದಿ ಸನ್ಮಾನವನ್ನು ಮಾಡಿದನು. ಆಮೇಲೆ ಮಹಿಸೂರು ಸೇನಾನಿ ದೊಡ್ಡಕೃಷ್ಣಮಾಧೀಶ್ವರನು ಪ್ರೀತಿಮಾಡಿ

---

1. ತರುಧರ — ಚಂದ್ರ; ತಂದೆ — ಸಮುದ್ರ; ತನುಜೆ — ಲಕ್ಷ್ಮಿ; ಮನೆ — ಕಮಲ; ಸಖ — ಸೂರ್ಯ; ತರಳ — ಕರ್ಣ; ಅಮ್ಮ — ಕುಂತಿ; ವರ — ಪಾಂಡು; ಅಣುಗ — ಅರ್ಜುನ. ಅರಸಿ — ಸುಭದ್ರೆ; ಆತ್ಮಜ — ಅಭಿಮನ್ಯು; ಮಾವ — ಸೋದರಮಾವಕೃಷ್ಣ; ಮಗ — ಕಾಮ. ಅವನನ್ನು ದಹಿಸಿದವನು ಈಶ್ವರ.

ದನು. ಅನಂತರ ವೀರರಾಜೇಂದ್ರನು ಇಷ್ಟಾರ್ಥವನ್ನು ಕೊಟ್ಟನು. (ಮುಂದಕ್ಕೆ ಓಲೆ ಹೋಗಿದೆ). ಕವಿಯ ವಂಶಪರಂಪರೆಯಲ್ಲಿ—ಅರುಣಗಿರಿ ದೀಕ್ಷಿತನೆಂಬವನು ಪ್ರಸಿದ್ಧನಾಗಿದ್ದನು. ಇವನ ಮಗ ಗಿರೀಶ; ಇವನ ಮಗ ವೆಂಕಟಸೂರಿ; ಇವನ ಮಗ ಗಿರೀಶ; ಇವನ ಮಗ ತಿಮ್ಮಯಾರ್ಯ; ಇವನ ಮಗ ವೆಂಕಟೇಶ; ಇವನ ಮಗ ತಿಮ್ಮಾರ್ಯ, ಇವನ ಹೆಂಡತಿ ತಿಮ್ಮಾಂಬೆ, ಇವರ ಮಗ ಕವಿವೆಂಕಟೇಶ. ಗುರುಪರಂಪರೆಯಲ್ಲಿ—ದತ್ತಾತ್ರೇಯ ಯೋಗೀಶಚಂದ್ರ, ಶಿಷ್ಯ ಪರಮಹಂಸ, ಶಿಷ್ಯ ದತ್ತನಿರಂಜನ, ಶಿಷ್ಯ ತಾರಕಯೋಗಿ, ಶಿಷ್ಯ ಸ್ವಾತ್ಮಾಭಿರಾಮ, ಶಿಷ್ಯ ಕವಿಯ ಗುರುವಾದ ಯೋಗೀಶಚಂದ್ರ. ಈ ಗುರುವಿನ ಅನುಗ್ರಹದಿಂದ ಕವಿ ವೇದಾಗಮಶಾಸ್ತ್ರಕಾವ್ಯಪರಿಶೀಲನವನ್ನು ಮಾಡಿಕೊಂಡು ಪೂರ್ವಾಗತವಾದ ಗುಮ್ಮಟಾಪುರದಲ್ಲಿ ಇದ್ದನು. ಆಮೇಲೆ ಮಹಿಸೂರ ಸೇನಾನಿ ಕಳಲೆ ದೊಡ್ಡರಾಜನ ಪೌತ್ರನೂ ವೀರರಾಜನ ಪುತ್ರನೂ ಆದ ನಂಜರಾಜನ (ಸು. 1740) ಆಶ್ರಿತನಾಗಿ ಅವನ ಆಜ್ಞಾನುಸಾರ ಈ ಗ್ರಂಥವನ್ನು ಬರೆದನು. ಇವನ ಕಾಲವು ಸುಮಾರು 1740 ಆಗಬಹುದು.

ಈ ನಂಜರಾಜನು ಬಹಳ ಪರಾಕ್ರಮಶಾಲಿಯಾಗಿಯೂ ಸ್ವತಃ ಕವಿಯಾಗಿಯೂ ಇದ್ದನೆಂದೂ ಗರಳಪುರದ (ನಂಜನಗೂಡು) ಈಶ್ವರನ ಸೇವಾರ್ಥವಾಗಿ ಗೋಪುರ, ಕೋಟೆ, ಗುಡಿಗಳು ಇವುಗಳನ್ನು ಕಟ್ಟಿಸಿ ಅರುವತ್ತುಮೂವರಾದ ಶಿವಭಕ್ತರ ವಿಗ್ರಹಗಳನ್ನು ಪ್ರತಿಷ್ಠೆಮಾಡಿ ಅವರ ಚರಿತ್ರೆಗಳನ್ನು ಬರೆದನೆಂದೂ ಕವಿ ಹೇಳುತ್ತಾನೆ.

ಇವನ ಗ್ರಂಥ

## ಹಾಲಾಸ್ಯಮಾಹಾತ್ಮ್ಯ

ಇದು ಚಂಪೂರೂಪವಾಗಿದೆ. ನಮಗೆ ದೊರೆತ ಪ್ರತಿ ಅಸಮಗ್ರ. ಇದರಲ್ಲಿ ಶಿವನ ಲೀಲೆಗಳು ವರ್ಣಿತವಾಗಿವೆ. ಈ ಕಾವ್ಯದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ—

ಸತತಾನಂದಿತಸತ್ಕಲೋಕೆ ಸರಸಾಲಂಕಾರೆ ಸಲ್ಲಕ್ಷಣಾ |
ನ್ವಿತೆ ಸಂಪನ್ನಹಿತಾಕ್ಷರಾತ್ಮಕಿ ಮಹಾಕಾವ್ಯಾಖ್ಯವಿದ್ಯಾಧರಂ |
ನ್ನುತೆ ಸದ್ವೃತ್ತಪವಿತ್ರೆ ಚಾರುಚರಣಭ್ರಾಜಿಷ್ಣು ಮತ್ಕಾವ್ಯಭಾ |
ರತಿ ನಿಚ್ಚಂ ಚತುರಾಸ್ಯವಕ್ತ್ರವನಜಾತಾವಾಸದೊಳ್ ಕ್ರೀಡಿಸಳ್ ||
ಸ್ಫುರದುಕ್ತಿಪ್ರೋಜ್ವಲಾರ್ಥದ್ಯುತಿಜಿತಕುಜನೋದ್ಯದ್ವಿವಾಂಧಂ ವಿಪಶ್ಚಿ |

ತ್ರಿಪುರಾಪಹಾರ್ಯಘಸಂಘಂ ಗತನತಭವಬಂಧಂ ಲಸಚ್ಛಾರದಾಭಾಸ್ಯಾಂ ||
ಬುರುಹವಾತ್ಯುಹುರ್ದ್ಯಗಂಧಂ ಪರಮಶಿವಕಥಾನೇಕಸಂಬಂಧಮುದ್ರೀ |
ತಿರಸಾಲಂಕಾರಬಂಧಂ ಪ್ರಥಿತಪದನಿಬಂಧಂ ಮದೀಯಪ್ರಬಂಧಂ ||
ರಸಭಾವಂ ಸೊಗಸಾದುದಚ್ಚರಿ ಚಮತ್ಕಾರಂ ಕಳಾರೀತಿಯೇ |
ಪೊಸತುತ್ಪ್ರೇಕ್ಷೆ ಮನೋಜ್ಞಮುಜ್ವಲಮಲಂಕಾರಂ ನವೀನಾರ್ಥಗ||
ರ್ಭಸಮಾಸೋಚಿತಕಲ್ಪನಾರಚನೆ ಚೆಲ್ವಾಯ್ತೆಂದತಿಪ್ರೀತಿಯಿಂ |
ರಸಿಕರ್ ಮೆಚ್ಚೆ ನಿಮಿರ್ಚುವೆಂ ಸುಜನಕರ್ಣಾಕಾವ್ಯಮಂ ಕಾವ್ಯಮಂ ||

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ವಿಘ್ನ, ಬ್ರಹ್ಮ, ಸರಸ್ವತಿ, ಗಣೇಶ, ಶಂಕರಾಚಾರ್ಯ, ಯೋಗಿಚಂದ್ರಗುರು ಇವರುಗಳನ್ನು ಪರಿಪಿಡಿಯಿಂದ ಸ್ತುತಿಸಿದ್ದಾನೆ

ಇವನು ಆಧುನಿಕಕವಿಯಾಗಿದ್ದರೂ ಇವನ ಬಂಧವು ಪ್ರೌಢವಾಗಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ--

ಸಮುದ್ರ

ತಿಂಗಳಬಾಲನಂ ಪಡೆದ ತಣ್ಗೊಡಲಿಂದಿರೆಯಿರ್ಪ ತೌರು ರ |
ನ್ನಂಗಳನಿಟ್ಟು ಪೆಟ್ಟಿ ಮುಗಿಲ್ಗಳ್ ಅವಟ್ಟಿಗೆ ಕೂರ್ತು ಬಂದ ಬೆ ||
ಟ್ಟಂಗಳ ಬಿರ್ದನಾಗರಮಲರ್ವೊಡೆಯಂ ಮಲಗಿರ್ಪ ಸೆಜ್ಜೆ ಶಂ |
ಖಂಗಳ ಪೇಟೆ ಪೆರ್ಬವಳದಂಗಡಿಯೆಂದೆನಿಸಿರ್ದುದಾಕಡಲ್ ||

ಸರಸ್ಸು

ಅಂಭೋಜೋತ್ಪಲಸಂಭೃತ | ಬಂಭರಕಳಹಂಸಚಕ್ರಕಾರಂಡವಾ |
ರಂಭವಿಜೃಂಭಣಸಂಭ್ರಮ | ಗಂಭೀರಾಸಾರಪೂರಪೂತಾಕಾಸಾರಂ ||

ನೀರು

ಸುಮನೋವಾಹಿನಿಯಿಂ ಪರಿಸ್ಫುರಿಪ ರಂಭಾಮಂಜುಘೋಷಾದಿಸ |
ತ್ಪ್ರಮದಾಳಿವ್ರಜದಿಂ ಪೊದಟ್ಟಿ ಸುರಸಾಲಶ್ರೇಣಿಯಿಂದಾನಗಂ ||
ಸುಮನೋವಾಹಿನಿಯಿಂ ಪರಿಸ್ಫುರಿಪ ರಂಭಾಮಂಜುಘೋಷಾದಿಸ |
ತ್ಪ್ರಮದಾಳಿವ್ರಜದಿಂ ಪೊದಟ್ಟಿ ಸುರಸಾಲಶ್ರೇಣಿಯಿಂದೊಪ್ಪುಗುಂ ||

### ಉದ್ಯಾನ

ಬಿತ್ತರಂಬಡೆದಿರ್ಪ ಮಾವಿನೊಳೆತ್ತಲುಂ ಮೊಳೆದೋರ್ಪ ಕೆಂ |
ಪೊತ್ತದಂಕುರಮಂ ಕರ್ದುಂಕಿ ಸಮುತ್ತಚಾಕಲಿಕಾರವಂ ||
ಬಿತ್ತು ಚಿತ್ತಜವೀರಮಂ ಗೆಲ್ವುತ್ತುಮಿರ್ಪ ವಿವೇಚನಂ |
ಮತ್ತಕೋಕಿಲಗಳ್ ವಿರಾಜಿಸಿದತ್ತು ಪಂಚಮರಾವದಿಂ ||

### ನಕ್ಷತ್ರ

ಪ್ರರೂಢಸಂಧ್ಯಾನಟನೋರ್ಧ್ವಟಾಂಬಿಕಾ | ವರೋಲ್ಲಸಚ್ಛ್ರೀಸ್ಪರ್ಶಕಿರದ್ವಿಯಜ್ಝರೀ |
ಸ್ಫುರತ್ಪ್ರವತ್ಸಂತತಿಯೆಂಬಿನಂ ನಭೋಂ | ತರಸ್ಥತಾರಾಗಣನೆಪ್ಪಿತೋಳ್ಪಿನಂ ||

### ನಂಜರಾಜನ ಪರಾಕ್ರಮ

ಧರಣೀಶಾಗ್ರೇಸರಂ ತದ್ವಿಧು ಸುಹೃದಸುಹೃತ್ಸಂಘಮುಂ ಕಾಯೆ ತತ್ತ |
ತ್ಪುರಿಗಳ್ ಸದ್ವಂಶಯುಕ್ತದ್ವಿಜಗಣವಮುಖಪಾಹೌಘಮುಕ್ತಾತಪತ್ರೋ ||
ತ್ಕರದಿಂದೀಶಾನಭೂಪಾಂಚಿತಮೆನಿಸಿ ನಿಲಿಂಪೌಘಸಂಸೇವ್ಯಮಾಗಃ |
ತ್ತುಚ್ಚ ನಿಜ್ಜಂ ಕೌಶಿಕಶ್ರೀಗೆಡೆಯೆನಲಿಕುದಿಂತಿರ್ಪುದಾಶ್ಚರ್ಯಮಲ್ತೇ ||

---

## ಗೋಪಾಲರಾಜ ಸು 1740

ಇವನು ಕಮಲಾಚಲಮಾಹಾತ್ಮ್ಯವನ್ನು ಬರೆದಿದ್ದಾನೆ. ಈತನು ಮೈಸೂರು ಅರಸುಗಳ ಸಮುದಾಯಕ್ಕೆ ಸೇರಿದವನು. ಮೈಸೂರುದೊರೆಯಾದ ಇಮ್ಮಡಿಕೃಷ್ಣರಾಜನ (1734– 1766) ಶ್ವಶುರನಾದ ಕತ್ತಿಗೋಪಾಲರಾಜ ಅರಸು ಎಂಬವನೇ ಈತನೆಂದು ತೋರುತ್ತದೆ. ಇವನು ಬೆಟ್ಟದಕೋಟೆಯ ಅರಸುಗಳ ವಂಶಕ್ಕೆ ಸೇರಿದವನು. ಕೆಲವುಕಾಲ ಬೆಂಗಳೂರಲ್ಲಿ ಅಧಿಕಾರಿಯಾಗಿದ್ದನು.

### ಇವನ ಗ್ರಂಥ

#### ಕಮಲಾಚಲಮಾಹಾತ್ಮ್ಯ

ಇದು ಗದ್ಯರೂಪವಾಗಿದೆ; ಅಧ್ಯಾಯ 9; ಇದಕ್ಕೆ 'ಗೋಪಾಲಭೂಪಾಲೋಕ್ತಿವಿಲಾಸ' ಎಂಬ ಹೆಸರೂ ಉಂಟು. ಇದರಲ್ಲಿ ಕಮಲಾಚಲ

ಅಥವಾ ದಕ್ಷಿಣಗೋವರ್ಧನಾಚಲ ಎಂಬ ಹಿಮವದ್ಗೋಪಾಲಸ್ವಾಮಿ ಬೆಟ್ಟದ ಮಾಹಾತ್ಮ್ಯವು ಹೇಳಿದೆ. ಇದು ಭವಿಷ್ಯೋತ್ತರಪುರಾಣೋಕ್ತವಾದುದು. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇಂತು ಶ್ರೀಸಕಲವಿದ್ವಜ್ಜನಮನಃಪಾರಾವಾರ ಪೂರ್ಣಸುಧಾಕರ ಶ್ರೀಗೋಪಾಲಭೂಪಾಲೋಕ್ತಿವಿಲಾಸರೂಪಕರ್ಣಾಟಭಾಷಾಯಾಂ ಭವಿಷ್ಯೋತ್ತರಪುರಾಣೋಕ್ತ ಕಮಲಾಚಲಮಾಹಾತ್ಮ್ಯಕಥಾಪ್ರಸಂಗೇ.

———

## ನಂದಿನಾಥ 1745

ಇವನು ವಲ್ಲೀಕಂಠಾಭರಣವನ್ನು ಬರೆದಿದ್ದಾನೆ. ಈತನು ವೀರಶೈವಕವಿ; ತನ್ನ ಪರಂಪರೆಯನ್ನು ಹೀಗೆ ಹೇಳಿದ್ದಾನೆ—ನಂದಿಯಬೆಟ್ಟಕ್ಕೆ ಕಲಿಕಾಲಚೋಳನು ಬಂದು ದೇವಾಲಯವನ್ನು ಕಟ್ಟಿಸಿದನು; ಅಮೇಲೆ ಬೈಚಭೂಪೇಂದ್ರನ ವಂಶಿಕರು ಪೂಜೆಮಾಡಿ ಆ ಭೋಗನಂದೀಶನಿಂದ ಇಷ್ಟಾರ್ಥವನ್ನು ಪಡೆದರು. ಅಲ್ಲಿ ಪಿನಾಕಿನೀತೀರದಲ್ಲಿ ಪಂಡಿತಾರಾಧ್ಯಚಿತ್ರಾಂಗಕಂಥಾಖ್ಯವರ್ಗವಿರ್ಪುದು. ಆ ಸಿಂಹಾಸನದಲ್ಲಿ ಗುರುಸಿದ್ಧಮಲ್ಲೇಶಕರಜಾತ ಚಿಕ್ಕಣ್ಣಾಚಾರ್ಯಕರಜಾತ ಬಸವಲಿಂಗಕರಜಾತ ವೀರಭದ್ರೇಶನಿರ್ಪನು. ಅವನ ಹೆಂಡತಿ ಕಾಳಕಾಂಬೆ, ಮಗ ಮಲ್ಲಿಕಾರ್ಜುನಕರಜಾತ ನಂದಿನಾಥ ಇವನೇ ಕವಿ. ಇವನ ವಿದ್ಯಾಗುರು ಪುಟ್ಟವರ್ಯ. ಈ ಗ್ರಂಥವನ್ನು ಕ್ರೋಧನ ಸಂವತ್ಸರದಲ್ಲಿ ಮುಗಿಸಿದಂತೆ ಹೇಳುತ್ತಾನೆ. ಈ ಕ್ರೋಧನವು 1745 ಆಗಿರಬಹುದೆಂದು ತೋರುತ್ತದೆ.

ಪೂರ್ವಕವಿಗಳಲ್ಲಿ ಸೋಮಾರಾಧ್ಯ, ನಿಜಗುಣೇಂದ್ರ, ಷಡಕ್ಷರದೇವ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

### ವಲ್ಲೀಕಂಠಾಭರಣ

ಇದು ಯಕ್ಷಗಾನದಂತೆ ಕಾಣುತ್ತದೆ; ಸ್ಥಲ 9, ಕಂದವೃತ್ತಪದಗಳ ಗಣನೆ 1610. ಇದರಲ್ಲಿ ಮುಖ್ಯವಾಗಿ ಷಣ್ಮುಖನ ದಿಗ್ವಿಜಯ, ವಲ್ಲೀಪರಿಣಯ ಇವು ವರ್ಣಿತವಾಗಿವೆ. ಈ ಗ್ರಂಥದ ವಿಷಯವಾಗಿ ಕವಿ ಹೀಗೆ ಹೇಳುತ್ತಾನೆ—

ಪಶುಪಸೂನು ವರವಲ್ಲಿಯು ಮು | ನ್ನೊಸಗೆಯಿಂದ ಬೆರೆದಂದವನು |
ರಸೆಯೊಳೆಲ್ಲರಱ'ವಂದದೊಳಾಂ | ಕುಶಲನಾಗಿ ಪದಸಾಗಿಸುವೆಂ ||
ಇಹು ಗುಹಪದಮುಹಿನಾಮೃತ | ಎಂದು ಸದಮಲಭಕ್ತಿಜ್ಞಾನವಿರತಿಯು ಕಂದಂ||

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಸ್ವಗುರು ಚೆನ್ನಮಲ್ಲೇಶ್ವರೇನಾ ಮರುಳಾರ್ಧ್ಯ ಏಕೋರಾಮಿ ವಿಶ್ವನಾಥರು, ಸಿದ್ಧೇಶ್ವರ, ಗಣಪತಿ, ವೀರಭದ್ರ, ಷಣ್ಮುಖ, ಭೃಂಗಿ, ಕಾಲಭೈರವ, ಬಸವ, ಸರಸ್ವತಿ ಇವರುಗಳನ್ನು ಸ್ತುತಿಸಿದ್ದಾನೆ. ಈ ಕಥೆಯನ್ನು ಸೂತನು ಶೌನಕಾದಿಗಳಿಗೆ ಹೇಳಿದಂತೆ ಕವಿ ಹೇಳುತ್ತಾನೆ. ಕೊನೆಯಲ್ಲಿ ಈ ಗದ್ಯವಿದೆ--

ಇತಿ ಶ್ರೀಮದವಿರಳಾನಂದಪದಪ್ರದಾಯಕ ತೋಂಟದ ಸಿದ್ಧಲಿಂಗೇಶ್ವರವರ ಪ್ರಸಾದದಿಂದುಸಿದ ವಲ್ಲೀಕಂರಾಭರಣದೊಳ್.

ಇದರಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ತಿಳಿಯದೆ ಸರ್ವರ್ ಹುಡುಕುವ | ನೆಲಮುಱಿನಿಕ್ಷೇಪದಂತೆಯಿದೇನುಫಲಂ |
ಧರೆಯೊಲ್ಲರಱಿಯ ಹೊನ್ನಿನ | ಒಱತೆಯ ಮುಱಿಗಱಿವಱಮಾಟ್ಕೆ ಪ್ರಾಕೃತವಿದಱೊಳ್ ||

—o—

## ಪಾಯಣ್ಣ 1748

ಈತನು ಅಹಿಂಸಾಚರಿತೆಯನ್ನು ಬರೆದಿದ್ದಾನೆ. ಇವನು ಜೈನಕವಿ. ಇವನ ತಂದೆ ಗುಮ್ಮಟಸೆಟ್ಟಿ, ಗುರು ನಯಸೇನ, ಸ್ಥಳ ಸಂಗೀತಪುರದರಪ ಸಂಗಮರಾಯಪುತ್ರ....ದ್ರಭೂವನ ರಾಜ್ಯದಲ್ಲಿ ಒಪ್ಪುವ ಭಾರಂಗಿ. ಗ್ರಂಥರಚನಾಕಾಲವನ್ನು ತಿಳಿಸುವ ಒಂದು ಅಸಮಗ್ರವಾದ ಪದ್ಯದಲ್ಲಿ ಪ್ರಭವಸಂವತ್ಸರವು ಉಕ್ತವಾಗಿದೆ. ಈ ಪ್ರಭವವು ಶಕ 1670 (1748) ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ಅಹಿಂಸಾಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ; ಗ್ರಂಥಸಂಖ್ಯೆ 634. ಇದಕ್ಕೆ ಪರಿಬಾಣಾವ್ರತಚರಿತೆ ಎಂಬ ಹೆಸರೂ ಉಂಟು. "ಮುಕುರದಂತೆ ಬೆಳಗಲಿ ಎನ್ನಕುಲ" ಎಂದು ಕವಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾನೆ.

ಪಾಯಣ್ಣ ಎಂಬ ಕವಿಯಿಂದ ರಚಿತವಾದ ಭೇಕನಥಾಖ್ಯಾನ ಎಂಬ 16 ಸಂಧಿಗಳುಳ್ಳ ಒಂದು ಸಾಂಗತ್ಯಗ್ರಂಥವಿದೆ. ಇದೂ ಏತತ್ಕವಿಕೃತವಾಗಿರಬಹುದೋ ಏನೋ ತಿಳಿಯದು.

—o—

## ಬೊಮ್ಮಣ್ಣ 1749

ಈತನು ನಯಸೇನನ ಧರ್ಮಾಮೃತವನ್ನು ಶಕ 1671 ಶುಕ್ಲವರ್ಷದಲ್ಲಿ (1749) ಪ್ರತಿಮಾಡಿದ್ದಾನೆ. ಕೆಳಗಣ ಪದ್ಯದಲ್ಲಿ ತಾನು ಕವಿಯೆಂದೂ ನಾಗೇಂದ್ರನ ಮಗನೆಂದೂ ಹೇಳಿಕೊಂಡಿದ್ದಾನೆ—

ಇಂದ್ರಾನ್ವಯೋದ್ಭವಂ ನಾ | ಗೇಂದ್ರನ ತನುಜಾತನಾದ ಬೊಮ್ಮಣಕವಿ ದೇ |
ವೇಂದ್ರಸುಬೃಂದಾರ್ಚಿತಜಿನ | ಚಂದ್ರನ ಚೈತ್ಯಾಲಯದೊಳೆ ಬರೆದಂ ಮುದದಿಂ ||

—o—

## ಪದ್ಮನಾಭ 1750

ಈತನು ರಾಮಚಂದ್ರಚರಿತ್ರದ ಉತ್ತರಭಾಗವನ್ನು, ಎಂದರೆ 17ನೆಯ ಸಂಧಿಯಿಂದ ಮುಂದಕ್ಕೆ, ಬರೆದು ಗ್ರಂಥವನ್ನು ಪೂರ್ತಿಮಾಡಿದ್ದಾನೆ. ಇವನು ಜೈನಕವಿ. ಗ್ರಂಥಾಂತ್ಯದಿಂದ ಈ ಅಂಶಗಳು ತಿಳಿಯುತ್ತವೆ—

ಈಗ್ರಂಥದಲ್ಲಿ ಸ್ವಲ್ಪಭಾಗವನ್ನು ಚಂದ್ರಶೇಖರ ಅಥವಾ ಶಂಕರ ಎಂಬ ಕವಿ ಬರೆದು ಕಾಲವಾದನು. ಕೆಲವು ಕಾಲದಮೇಲೆ ತೌಳವದೇಶದೊಳಗಣ ಮೂಲಿಕೆಯ ರಾಜನಾದ ಚೆನ್ನರಾಯಸಾವಂತನ ಮತ್ತು ಆತನ ಸೋದರಮಾವನಾದ ಕುಂದ್ಯೆಯರಸನ ಆಜ್ಞಾನುಸಾರವಾಗಿ[1] ಪಾರ್ಶ್ವೇಣಿಪುರದ ಪದ್ಮಸೆಟ್ಟಿ ಪದ್ಮಾವತಿ ಇವರ ಮಗನಾದ ಪದ್ಮನಾಭನು[2] ಈಗ್ರಂಥವನ್ನು ಪೂರ್ತಿಮಾಡಿದನು. ಮೂಲಿಕೆಗೆ ಒಳಲಂಕೆ, ನೂತನಪುರ,

1 Vol. II, 5[illegible]6 2. ಪದ್ಮಾವತೀಚರಿತೆಯನ್ನು ಬರೆದ ಪದ್ಮನಾಭನು ಮೂಲಿಕೆಯನ್ನೂ ಅದರ ನಾಮಾಂತರಗಳನ್ನೂ ಹೇಳುತ್ತಾನೆ; ಆದರೆ ಬೇರೆ ದೊರೆಯನ್ನು ಹೇಳುವುದರಿಂದ ಏತದ್ಭಿನ್ನನೆಂದು ತೋರುತ್ತದೆ. ಅಲ್ಲದೆ ಅವನು ಪೊರೆಯ ಕೋಶಾಧ್ಯಕ್ಷನೆಂದು ಹೇಳಿಕೊಳ್ಳುತ್ತಾನೆ.

ಬಯಿಕಳ ಎಂಬ ಹೆಸರುಗಳೂ ಉಂಟು. ಅಲ್ಲಿಯ ಅನಂತಜಿನಚೈತ್ಯಾಲಯದಲ್ಲಿ ಪ್ರಭಾಚಂದ್ರಮುನಿ ಇರುವನು. ಈ ಚೈತ್ಯಾಲಯಕ್ಕೆ ಸುತ್ತಲೂ 4 ಬಸ್ತಿಗಳುಂಟು. ಆರವನೆಯಲ್ಲಿ ಚಂದ್ರಜಿನೇಂದ್ರನ ಬಸ್ತಿ ಇರುವುದು; ಅದರಲ್ಲಿ ಪದ್ಮಾವತೀದೇವಿಯ ವಿಗ್ರಹವೂ ಉಂಟು. ಚೆನ್ನರಾಯಸಾವಂತನು ಸಿದ್ಧವಣಾಂಬೆಯ ಮಗನು; ಇವನಿಗೆ ಬಳಲಂಕಾವಾಟಾಸ್ಫಾಟ ಎಂಬ ಬಿರುದೂ ಹನುಮಕೇತನವೂ ಉಂಟು. ಕವಿ ಪದ್ಮಾವತೀದೇವಿಯ ಚರಣಾಬ್ಜಮಧುಪನು; ಅವಳ ಕರುಣದಿಂದ ಗ್ರಂಥವನ್ನು ರಚಿಸಿದನು. ಇವನ ಗುರು ಪಂಡಿತಾರ್ಯ, ಶಿಕ್ಷಕಗುರು ಪ್ರಭಾಚಂದ್ರ, ರಕ್ಷಕ ಚೆನ್ನರಾಜೇಂದ್ರ, ಪ್ರೇಕ್ಷಕ ಕುಂದ್ಯೆಯರಸ. ಈ ಗ್ರಂಥವನ್ನು ಶಕ 1674 ಪ್ರಮೋದವರ್ಷದಲ್ಲಿ – ಎಂದರೆ 1750ರಲ್ಲಿ – ನೂತ್ನಪುರದ ಅನಂತಜಿನರ ಸನ್ನಿಧಿಯೊಳು ಪೂರೈಸಿದನು.

ಇವನ ಗ್ರಂಥ

## ರಾಮಚಂದ್ರಚರಿತ್ರ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 37, ಪದ್ಯ 5268. ಈ ಪದ್ಯಗಳಲ್ಲಿ ಮೊದಲು 2151 ಚಂದ್ರಶೇಖರಕವಿಕೃತ, ಉಳಿದುವು ಪದ್ಮನಾಭಕವಿಕೃತ. ಇದರಲ್ಲಿ ಜೈನಸಂಪ್ರದಾಯಕ್ಕನುಸಾರವಾಗಿ ರಾಮಾಯಣಕಥೆ ಹೇಳಿದೆ. ನಮಗೆ ದೊರೆತ ಪ್ರತಿ 29 ನೆಯ ಸಂಧಿಯಿಂದ ಆರಂಭವಾಗಿದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

### ಚೆನ್ನರಾಜ

ಜಿನಮತಗಗನಮಂಡಲದೊಳು ಸಮ್ಯಕ್ತ್ವ | ವೆನಿಪ ರಥವನೊಲಿದಡರಿ |
ಎನುತಬೋಧಾಂಶು ಪಜ್ವಳಿಸಲು ನಡೆವನಾ | ಮನುಜೇಂದ್ರ ದಿವಸೇಂದ್ರನೆನಲು||

### ಸುವ್ರತಸ್ತುತಿ

ಕೊರ್ವಿ ಪರ್ವಿದ ಸರ್ವಕರ್ಮಭಟರ ಗರ್ವ | ಪರ್ವತಗಳನುಗ್ಗುಗುಟ್ಟಿ |
ನಿರ್ವಾಣಸಾಮ್ರಾಜ್ಯಪಟ್ಟವನಾಳಿದ | ಸರ್ವಜ್ಞ ಸುವ್ರತ ಸಲಹು||

### ಸೀತೆಯ ಅಗ್ನಿಪ್ರವೇಶ

ಹುತಭುಕ್ಪ್ರಬಳದಾಹಕಶಕ್ತಿಯನು ಮಹಾ | ಸತಿಯ ವಿಶುದ್ಧಚಾರಿತ್ರ |

ಪ್ರತಿಬಂಧಿಸಿದುದಿಳೆಯೊಳು ಪತಿವ್ರತಗುಣ | ದತಿಶಯಮೇನು ಕೇಳವಳಮೇ ||

### ರಾವಣನ ತಲೆಗಳು

ವರಜಯಶ್ರೀಯೆಂಬ ಯೋಗಿನಿ ರಕ್ತತಾ | ವರೆಗಳಿಂದತಿಭಕ್ತಿಯಿಂದ |
ಭರದೊಳಾಕಾಶಲಿಂಗನನರ್ಚನಂಗೆಯ್ದು | ಪರಿಯೊಳ್ಪ್ರೀತಿದೋರಿದುವು ||

### ರಾವಣಸತಿಯರ ಪ್ರಲಾಪ

ಧಾರಿಣಿಪತಿ ನಿನ್ನ ಸತಿಯರ ಪಾದಪ್ರ | ಹಾರಂಗಳಿಂದಲಿ ನಿನ್ನ |
ಚಾರುನಂದನದಶೋಕಾನೋಕಹಂಗಳೊ | ಳಾರಿನ್ನು ತಳಿರನಾಗಿಪರು ||

### ವೈರಾಗ್ಯ

ತನುಧನಪುತ್ರಕಲತ್ರಮಿತ್ರಾಯುರ್ಯೌ | ವ್ವನರೂಪಸೌಭಾಗ್ಯದೊದವು |
ಘನದೊಡ್ಡು ಸುರಧನು ಮಿಂಚು ಸಂಧ್ಯಾಭ್ರ ಮಂ|ಜಿನ ಪುಂಜವೆಂತಂತಸ್ಥಿರವು ||
ಗಿರಿದುರ್ಗ ವನದುರ್ಗ ಜಲದುರ್ಗ ಕರಿರಥ | ತುರಗಪದಾತಿಯಿವೆಲ್ಲಾ |
ದುರುಳನಂತಕನೊಯ್ವ ಪಡದೊಳು ಕಾವುವೆ | ಇರದಿವ ನಂಬುವನೆಗ್ಗ ||

ಘಟಿಸಿದರ್ಥವನುಣಲುಡಲು ನಂಟರು ಬಂಧು | ಗಳು ಸ್ತ್ರೀಯರುಂಟದರಿಂದ |
ಘಟಿಸಿದ ಪಾಪದಿಂ ನಿರಯದೊಳ್ ಬಿದ್ದು ಕೋ | ಟಲೆವಡುವಂದೊರ್ವನಾತ್ಮ ||

ದಿನಚರಿಯುಡಿಸಿ ತೊಡಿಸಿ ಮಿಸಿಸಿದ ತನ್ನ | ತನುವೊಡವರದೆನಲುಂಟದ |
ವನಿತಾದಿಗಳುವೊಡಹರೆಯಾರ್ಜಿಸಿದ ವೃ | ಜಿನಪುಣ್ಯವೆರಡೊಡಬಹುವು ||

ಸಪ್ತಧಾತುಗಳ ಸಮೂಹದಿಂ ದುರ್ಗಂಧ | ವ್ಯಾಪ್ತವಾದೀತನುವೆತ್ತ |
ದೀಪ್ತಚಿನ್ಮಯನಾತ್ಮನಿದಪೊಕ್ಕು ವಿಷಯತೋ | ಲುಪ್ತನಾಗಿರುವಂದವೆತ್ತ ||

---

### ಗೋಪಾಲದಾಸ ಸು. 1750

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ವಿಜಯ ದಾಸನ (ಸು. 1725) ಶಿಷ್ಯನು. ಇವನಿಗೆ ಭಾಗಣದಾಸ ಎಂಬ ಹೆಸರೂ

ಉಂಟು. ಗುರುಗೋಪಾಲದಾಸ, ವರದಗೋಪಾಲದಾಸ ಎಂಬ ಇವನ ಇಬ್ಬರುತಮ್ಮಂದಿರೂ ಜಗನ್ನಾಥದಾಸನೂ ಈತನಲ್ಲಿ ಶಿಷ್ಯವೃತ್ತಿಯಲ್ಲಿದ್ದರು. ಇವನ ಸಳ ವೇಣೀಸೋಮಪುರ. ಇವನ ಕೀರ್ತನೆಗಳಲ್ಲಿ ಗೋಪಾಲವಿಠಲ ಎಂಬ ಅಂಕಿತವು ಉಪಯೋಗಿಸಿದೆ. ಒಂದು ಕೀರ್ತನೆಯನ್ನು ಉದಾಹರಿಸುತ್ತೇವೆ-

ರಾಗ ಕಾಂಬೋದಿ--ಝಂಪೆತಾಳ.

ಪಲ್ಲವಿ ॥ ಏನುಬೇಡಲೊ ನಿನ್ನ ಬಳಿಗೆ ಬಂದು ॥

ಅನುಪಲ್ಲವಿ ॥ ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ॥

ಜನನಿಯಂ ಕೊಡುಎಂದುಜಗದೀಶ ಬೇಡುವೆನೊ । ಜನನಿಯೇನಿತ್ಯಶಾಧ್ರುವರಾಯಗೆ ।
ಜನಕನಂ ಕೊಡು ಎಂದು ಬಯುವಂತ ಬೇಡುವೆನೋ। ಜನಕನೇನಿತ್ತನಾಪ್ರಹ್ಲಾದಗೆ॥1॥
ಬಂಧುಗಳ ಕೊಡು ಎಂದು ಚಂದದಲಿ ಬೇಡುವೆನೊ । ಬಂಧುಗಳೇನಿತ್ತರೋ ಗಜರಾಜಗೆ ।
ಅಂದಣವನೇರುವ ಭಾಗ್ಯವನೆ ಬೇಡುವೆನೊ । ಅಂದಣವನೇರಿ ಜ'ದಾನಕುಹನೇನಾದನೋ ॥2॥
ಬೇಡುವೆನೊ ಒಂದು ಬೇಡತಕ್ಕುದೊ ದೇವ । ನೀಡನೆಂಬುದು ನಿನ್ನ ಮನದೊಳಿತ್ತು ।
ಮೂಡಲದ್ರೀಶ ಗೋಪಾಲವಿಠಲ । ಬೇಡದಂತೆ ಪರರ ಮಾಡಸ್ವು ದೊರೆಯೇ ॥3॥

—0—

ವೇಣುಗೋಪಾಲದಾಸ ಸು 1750

ಈತನು ಕೀರ್ತನೆಗಳನ್ನು ಬರೆದಿದ್ದಾನೆ ಇವನು ಮಾಧ್ವಕವಿ; ವಿಜಯದಾಸನ (ಸು. 1725) ಶಿಷ್ಯನು. ಇವನಿಗೆ ರಂಗನಾಮದತಿಮ್ಮಣ್ಣ ಎಂಬ ಹೆಸರೂ ಉಂಟು. ಈತನು ಪೂರ್ವಜನ್ಮದಲ್ಲಿ ವೈಕುಂಠದಾಸನಾಗಿ ಹುಟ್ಟಿದ್ದನೆಂದು ಪ್ರತೀತಿ ಇದೆ. ಇವನು ಟಿಬ್ಬ ಸವಾಬನಲ್ಲಿ ಅಧಿಕಾರಿಯಾಗಿದ್ದು ಬೊಕ್ಕಸದ ಹಣವನ್ನು ದೇವಬ್ರಾಹ್ಮಣರಿಗೋಸ್ಕರ ಉಪಯೋಗಿಸಿದುದಕ್ಕಾಗಿ ಸೆರೆಯಲ್ಲಿಡಲ್ಪಟ್ಟು ಸಹಿಸಲಾರದ ಕಷ್ಟಕ್ಕೆ ಗುರಿಯಾಗಿದ್ದಾಗ ದೇವರು ಇವನ ಸಾಳವನ್ನು ತೀರಿಸಿ ಬಿಡುಗಡೆಮಾಡಿದಂತೆ ಹೇಳುತ್ತಾರೆ.

ಇವನ ಕೀರ್ತನೆಗಳಲ್ಲಿ ವೇಣುಗೋಪಾಲವಿಠಲ ಎಂಬ ಅಂಕಿತವಿದೆ. ಒಂದು ಕೀರ್ತನೆಯನ್ನು ತೆಗೆದು ಬರೆಯುತ್ತೇವೆ—

ರಾಗ ಭೈರವಿ—ತ್ರಿವುಟ ತಾಳ

ಪಲ್ಲವಿ|| ಇಂದು ಎನಗೆ ಗೋವಿಂದ ನಿನ್ನ ಪಾದಾರವಿಂದವ ತೋರೋ ಮುಕುಂದನೆ ||

ಅನುಪಲ್ಲವಿ|| ಸುಂದರವದನನೆ | ನಂದಗೋಪಿಯಕಂದ | ಮಂದರೋದ್ಧಾರ ಆನಂದ ಇಂದಿರಾರಮಣ ||

ನೊಂದೆನಯ್ಯ ಭವಬಂಧನದೊಳು ಸಿಲುಕಿ | ಮುಂದೆ ದಾರಿಗಾಣದೆ ಕುಂದಿದೆ ಜಗದೊಳು |

ಕಂದ ನಾನೆಂದೆನ್ನ ಕುಂದುಗಳೆಣಿಸದೆ | ತಂದೆ ಕಾಯೊ ಎನ್ನ ಕಂದರ್ಪಜನಕನೆ||1||

ಧಾರಿಣಿಯೊಳು ಭೂಭಾರಜೀವನನಾಗಿ | ಮೇರೆಯಿಲ್ಲದೆ ಪಾಪವಮಾಡಿದೆ ಜಗದೊಳು |

ಯಾರು ಕಾಯುವರಿಲ್ಲ ಸೇರಿದೆ ನಿನಗೈಯ | ಧೀರವೇಣುಗೋಪಾಲವಿಠಲ ತಾರ ಗಾಣಿಸೊ ಈಗ ||2||

———

ಮೋಹನದಾಸ ಸು. 1750

ಇವನು ಕೀರ್ತನೆಗಳನ್ನು ಬರೆದಿದ್ದಾನೆ. ಈತನು ಮಾಧ್ವಕವಿ; ವಿಜಯದಾಸನ (ಸು. 1725) ಶಿಷ್ಯನು. ಇವನ ಸ್ಥಳ ಚಿಪ್ಪಗಿರಿ. ಇವನ ಕೀರ್ತನೆಗಳಲ್ಲಿ ಮೋಹನವಿಠಲ ಎಂಬ ಅಂಕಿತವು ದೊರೆಯುತ್ತದೆ. ಒಂದು ಕೀರ್ತನೆಯನ್ನು ಉದ್ಧರಿಸಿ ಬರೆಯುತ್ತೇವೆ—

ರಾಗ ಮುಖಾರಿ—ಝಂಪೆ ತಾಳ

ಪಲ್ಲವಿ || ಏನುಮಾಡಿದರೇನು ಜ್ಞಾನವಿಲ್ಲದೆ ||

ಅನುಪಲ್ಲವಿ || ಆನೆಗೆ ಮಜ್ಜನವ ಮಾಡಿಸಿದಂತೆ ||

ವೇದವೋದಿದರೇನು ಶಾಸ್ತ್ರವೋದಿದರೇನು | ವಾದಿಸಿದರೇನು ತರ್ಕವನು ಮಾಡಿ |

ಪಾದದಲಿ ಗಂಗೆಯ ಪಡೆದ ನಾರಾಯಣ|ನಾದಿಯೊಂದು ಪಂಚಭೇದತಿಳಿಯದಲೆ||1||

ಹದ್ದಿನಂದದಲಿ ಬಹುಕಾಲ ಬಾಳಿದರೇನು| ಸದ್ಧರ್ಮವೃತ್ತಿಯನು ಜರಿದುನಿತ್ಯ|

ಮಧ್ವವಲ್ಲಭ ನಮ್ಮ ಮೋಹನವಿಠಲನ | ಸದ್ಭಕ್ತರಾ ಪಾದಪೊದ್ದಿಕೊಂಡಿರದೆ ||3||

———

## ಹಯವದನದಾಸ ಸು. 1750

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ವಿಜಯದಾಸನ (ಸು. 1725) ಶಿಷ್ಯನು. ಈತನ ಕೀರ್ತನೆಗಳಲ್ಲಿ ಹಯವದನವಿಠಲ ಎಂಬ ಅಂಕಿತವಿದೆ. ಒಂದು ಕೀರ್ತನೆಯನ್ನು ಉದಾಹರಿಸುತ್ತೇವೆ-

ರಾಗ ಮುಖಾರಿ — ಝಂಪೆತಾಳ

ಪಲ್ಲವಿ || ಸಕಲಸಾಧನವೆನಗೆ ಕೈಸೇರಿತು | ಮುಕುತಿಯ ಮಾರ್ಗಕೆ ಬಾರದಾಧನವು ||

ಸಂಸಾರದಲಿ ಜ್ಞಾನ ಸತಿಸುತರಲಿ ಭಕ್ತಿ | ಕಂಸಾರಿಪೂಜೆಯಲಿ ವೈರಾಗ್ಯವು |
ಸಂಶಯದ ಜನರಲ್ಲಿ ಸಖತನವ ಮಾಡುವೆನು | ಹಿಂಸೆಪಡಿಸುವೆನು ಜನಸಂಗಹರಿ
ರಂಗ ||1||

ಹೆಂಡತಿಯ ಕೊಂಡೆಯದ ಮಾತುಗಳೆ ಉಪದೇಶ | ಚಂಡಕೋಪವು ಎಂಬ ಅಗ್ನಿ
ಹೋತ್ರ |
ಪಂಡಿತನು ನಾನಾಗಿ ಅವಿಧೇಯರನುಸೇರಿ | ಕಂಡಕಡೆ ವಾದಿಸುವುದತಿತರ್ಕವಯ್ಯ ||2||

ಓದಿದೆ ಯಲ್ಲಣ್ಣ ಕಲ್ಲಣ್ಣ ಎನ್ನುತಲಿ | ವೇದವೆಂಬುದು ಎನಗೆ ಪಗಡೆಪಂಜಿ |
ಸಾಧಿಸಿ ಪರರ ಧನವನ್ನು ಕೂಡಹಾಕಿ | ಮೋದಿಹಯವದನವಿಠಲ ನಿಮ್ಮ
ಮರೆತು ||3||

—— ——

## ಸಂಗನಬಸವಪ್ಪ ಸು. 1750

ಇವನು ವೀರಶೈವಸುಧಾನಿಧಿಟೀಕೆಯನ್ನು ಬರೆದಿದ್ದಾನೆ. ಈತನು ವೀರಶೈವಕವಿ; ನಿರ್ವಾಣಾರ್ಯನ ಮಗನು,....ಮಂತ್ರಿವರ್ಯನ ಮೊಮ್ಮಗನು. ಈತನ ತಂದೆ ನಿರ್ವಾಣಮಂತ್ರಿ (ಸು. 1725) ಯಾಗಿದ್ದ ಪಕ್ಷದಲ್ಲಿ ಇವನ ಕಾಲವು ಸುಮಾರು 1750 ಆಗಬಹುದು. ಟೀಕೆಯ ಕೊನೆಯಲ್ಲಿ ಈ ಗದ್ಯವಿದೆ—

ಇದು ಶ್ರೀನಿಖಿಲನಿಗಮಾಗಮಸಾರಪಾರಾವಾರಮಂಥಮಂಥಾಯಮಾನಾಶೇಷ ವಿಶ್ರಾಂತಿತೋಷ ಕುಮುದಿನೀಷಿದರ್ಪಬಿಂಬಪ್ರತಿಬಿಂಬಿತ ಹೃದ್ಯಾನವದ್ಯಷಟ್ಸ್ಥಲವಿದ್ಯಾವೈ

ಭವವಿಖ್ಯಾತಗುರುಬಸವ.. .ದೇಶಿಕೇಂದ್ರವಿರಚಿತಸ್ಯ ವೀರಶೈವಸುಧಾನಿಧಿನಾಮಧೇಯಸ್ಯ ಪ್ರಬಂಧಸ್ಯ ಶ್ರೀಮದ್ವೀರಶೈವಮಾರ್ಗಪ್ರವರ್ತಕ ಲಿಂಗಾಂಗಸಾಮರಸ್ಯಯೋಗರಹಸ್ಯಾರ್ಥ....ಮಂತ್ರವರ್ಣ್ಯಗರ್ಭಾಬ್ಧಿಕೌಸ್ತುಭ ಶ್ರೀಮನ್ನಿರ್ವಾಣಾರ್ಥತನೂಭವ ಸಂಗನಬಸವಪ್ಪನಿರ್ಮಿತ ಕರ್ಣಾಟಭಾಷಾಟೀಕಾಯಾಂ.

—o—

## ಉದ್ಭಾವಸಿದ್ಧಲಿಂಗದೇವ ಸು. 1750

ಈತನು ವೀರಶೈವಚಿಂತಾಮಣಿಟೀಕೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ. ಮೂಲಗ್ರಂಥವು ನಿಟ್ಟೂರುನಂಜಯ್ಯನಿಂದ (ಸು. 1725) ರಚಿತವಾದುದರಿಂದ ಇವನ ಕಾಲವು ಸುಮಾರು 1750 ಆಗಿರಬಹುದು.

—o—

## ಬಬ್ಬೂರು ರಂಗ ಸು. 1750

ಈತನು ಅಂಬಿಕಾವಿಜಯವನ್ನೂ ಪರಶುರಾಮರಾಮಾಯಣವನ್ನೂ ಬರೆದಿದ್ದಾನೆ. ಇವನು ಸ್ಮಾರ್ತಬ್ರಾಹ್ಮಣನು; ಶೌನಕಗೋತ್ರದವನು. ತನ್ನ ಪರಂಪರೆಯನ್ನು ಹೀಗೆ ಹೇಳಿದ್ದಾನೆ—ಕಮ್ಮೆಯ ತಿಪ್ಪಣ್ಣ, ಮಗ ರಂಗ; ಮಗ ಮಾಮಗ; ಮಗ ಚಿಕ್ಕಯ್ಯ; ಮಗ ವೇದಾವತೀತೀರದಲ್ಲಿರುವ ಘನಪುರಿಯ (ಹಿರಿಯೂರು) ಕರಣಿಕಾಗ್ರಣಿ ರಂಗ; ಇವನ ಹೆಂಡತಿ ರುಕ್ಮಿಣಿ, ಮಗ ಕವಿ ಬಬ್ಬೂರುರಂಗ. ಇವನ ಸ್ಥಳ ಹಿರಿಯೂರಿಗೆ ಸಮೀಪದಲ್ಲಿರುವ ಬಬ್ಬೂರು. ಆ ಬಬ್ಬೂರು ರಂಗನಾಥನೇ ಈತನ ಕುಲದೈವವು. "ಸುಕವಿಗಳ ಕರಮುಕುರ, ಕುಕವಿಗಳೆದೆಗಿಚ್ಚು, ಸಜ್ಜನನಿಕರಮನದಾನಂದನಂದನಚೈತ್ರ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಪೂರ್ವಕವಿಗಳಲ್ಲಿ "ಇಳೆಯ ಕರ್ಣಾಟಕಮಹಾಕೃತಿಗಳಿಗೆ ಗುರುವೆಂದೆಂಬ ಬಿರುದನು ತಳೆದು ಭಾರತವನು ವಿವರಿಸಿದ" ಕುಮಾರವ್ಯಾಸ, "ಅವನ ಬಟ್ಟೆವಿಡಿದು ಶ್ರೀರಾಮಚರಿತವ ಬೆಳಗಿದ" ಕುಮಾರವಾಲ್ಮೀಕಿ ಇವರುಗಳನ್ನು ಸ್ಮರಿಸಿದ್ದಾನೆ. ಅಲ್ಲದೆ ಕುಮಾರವ್ಯಾಸ, ಲಕ್ಷ್ಮೀಶ, ಕುಮಾರವಾಲ್ಮೀಕಿ, ತಾನು

ಈ ನಾಲ್ವರೇ ಕನ್ನಡ ಕವಿಗಳಲ್ಲಿ “ಕೃತಿಸೃಜಿಸುವ ಅತಿದಿಗ್ಗಜರು, ತಮಗಿದಿರಾರು ಧರಣಿಯಲಿ” ಎಂದು ಹೇಳುತ್ತಾನೆ. ಪರರ ಮಾರ್ಗವನ್ನು ಅನುಸರಿಸದೆ ನಿರರ್ಗಳವಾಗಿ ಕವಿತೆಯನ್ನು ಮಾಡುವನೆಂಬ ಬಿರುದು ತನಗುಂಟೆಂದು

ಅಗ್ಗಳಿಕೆ ಪರರನುಸರಿಸದೊಂ | ದಗ್ಗಳಿಕೆ ಭಾಮಿನಿಯ ಷಟ್ಪದಿ |
ಮುಗ್ಗಿಸದೆ ಕರಪುಸ್ತಕದಿ ಪದಗಳನು ನಿರ್ಮಿಸುವ ||
ಉಗ್ಗಡಿಸದಗ್ಗಳಿಕೆ ತನ್ನದ | ನರ್ಘ್ಯವಾಕ್ಯದೊಳರ್ಥವಿಕಳತೆ |
ನುಗ್ಗಿ ನಿಲಿಸದ ಬಿರುದು ಬಬ್ಬೂರೀಶಸೇವಕಗೆ ||

ಎಂಬ ಪದ್ಯದಲ್ಲಿ ಹೇಳಿದ್ದಾನೆ. ಜೈಮಿನಿಭಾರತವನ್ನು ರಚಿಸಿದ ಲಕ್ಷ್ಮೀಶನನ್ನು (ಸು. 1700) ಸ್ತುತಿಸುವುದರಿಂದ ಈತನು ಸುಮಾರು 1750 ರಲ್ಲಿ ಇದ್ದಿರಬಹುದು.

ಇವನ ಗ್ರಂಥಗಳಲ್ಲಿ

1. ಅಂಬಿಕಾವಿಜಯ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 47, ಪದ್ಯ 3005[1]. ಇದರಲ್ಲಿ ಆದಿಶಕ್ತಿಯಾದ ದೇವಿ ರಕ್ತಬೀಜಾಸುರನನ್ನು ಸಂಹರಿಸಿದ ಕಥೆಯೂ ಮಾರ್ಕಂಡೇಯಚರಿತವೂ ಹೇಳಿವೆ. ಮೊದಲು ಅತ್ರಿಋಷಿ ನಳರಾಜನ ಶನಿಪೀಡಾನಿವಾರಣಾರ್ಥವಾಗಿ ಋತುಪರ್ಣರಾಯನಿಗೂ ಆಮೇಲೆ ಸೂತನು ಶೌನಕಾದಿಗಳಿಗೂ ಈ ದೇವೀಮಾಹಾತ್ಮ್ಯವನ್ನು ವಿವರಿಸಿದಂತೆ ತಿಳಿಯುತ್ತದೆ. ಗ್ರಂಥಾವತಾರದಲ್ಲಿ ಬಬ್ಬೂರುರಘುವರಸ್ತುತಿ ಇದೆ. ಬಳಿಕ ಕವಿ ಶಿವ, ಪಾರ್ವತಿ, ಸರಸ್ವತಿ, ಗಣೇಶ, ಸೂರ್ಯ, ಹನುಮಂತ, ಷಡ್ದರ್ಶನಕ್ಕೆ ಕರ್ತನಾದ ವಿದ್ಯಾಶಂಕರ, ಇವರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ವಿದ್ಯೆ

ಚೋರರಿಗೆ ವಶವಾಗದಾಳ್ದನು | ಮೀಱಿ ಕಾಮಿಸಿ ತೆಗೆಯಕೂಡದು |
ಬಾರದೊಡಹುಟ್ಟಿದ ವಿಭಾಗೆಗೆ ದೇಹಕದು ತನಗೆ |
ಭಾರ ಮುನ್ನಿಲ್ಲಮಮ ವಿದ್ಯಾ | ಚಾರುಧನಕೆಣೆಗಾಣೆನದಱಿಂ |

---

1. ಅಚ್ಚಾಗಿರುವ ಪ್ರತಿಯಲ್ಲಿ ಸಂಧಿ 48, ಪದ್ಯ 2946 ಎಂದಿದೆ.

ಧಾರಿಣಿಗೆ ವಿದ್ವಾಂಸರಗ್ಗಳರೆಂದನಾ ಮುನಿಪ ||

ಗಾಯಕ

ಕೊರಲುಬೆರಲಿನ ತಾಳ ತಪ್ಪದೆ | ಶಿರವನಲುಗದೆ ಮೈಯೊಳಾಯಸ |
ಧರಿಸಿಕೊಳ್ಳದೆ ಸೊಗಸಱಿತು ನಯಲಲ್ಲಿ ಭಾವದಲಿ ||
ಸರಿಗಮಗಳುಚ್ಚರಿಸುತಲುಗಿನೊ | ಳಿರವ ತಪ್ಪದೆ ರಾಗನಿರ್ಣಯ |
ದಿರವ ಬಲ್ಲವ ಗೀತಗಾಯಕನರಸ ಕೇಳೆಂದ ||

ನೀತಿ

ಅಱುವರ್ಗಕೆ ಸಿಲುಕಿ ನೆಟ್ಟನೆ | ಮೂಱುಗುಣಗಳಿಗೊಡನೆ ಹೊಂದಿ ಏ|
ಕಾರದಷ್ಟಮದಾಮುಱಂಗಳಿಗೊಲಿದು ನಃವನಲಿ ||
ಸಾರಿಪಂಚೇಂದ್ರಿಯಗಳಿಚ್ಛೆಗೆ | ತೋಱಿ ಸಪ್ತವ್ಯಸನಪಂಕ್ತಿಯ |
ಬೇಱುಬಿರಕೊಂಡಿಹ ದುರಾತ್ಮರಿಗುಂಟೆ ಪರಸೌಖ್ಯ ||
ಗುಣದಿ ಶರನಿಧಿಯೆನಿಸಿ ಶಾಂತದ | ಭಣಿತೆಯಲಿ ಶಶಿಯೆನಿಸಿ ಶುಭಕರ |
ದೆಣಿಕೆಯಲಿ ಶ್ರೀಗೌರಿಗೆಣೆಯೆಂದೆನಿಸಿ ನಿಜಪತಿಯ ||
ಮನದೊಳಗೆ ಪರದೈವವೆಂದೇ | ಗಣಿಸುತನವರತಶಕ್ತಿವಾವಗೆ |
ಜನನಿಯಂತಿರುವವಳೆ ಕುಲವಧು ಧರ್ಮರೂಪೆಂದ ||

ಆದಿಶಕ್ತಿ

ಅಂಬುಜವು ಮುಸುಳಿಸಿದುವಾಶಶಿ | ಬಿಂಬವದನೆಯ ವದನಕಾಂತಿಗೆ |
ತುಂಬಿಗಳು ಚೀಱಿದುವು ಭೃಂಗಾಳಕದ ಸುಂದರಕೆ ||
ಕಂಬುಕಂಠಿಯ ರದನಕುಱಿದಾ | ಳಿಂಬ ಬಾಯ್ಬಿಡುತಿಹುವು ತೊಡೆಗಳ |
ಸಂಭ್ರಮಕೆ ಶಿರವಾಗಿ ನಿಂದುವು ಬಾಳೆ ಬನದೊಳಗೆ ||

ವರ್ಷಾಕಾಲ

ಬಿದಱಿ ಹಾಯ್ದುವು ಹಂಸ ಮಾನಸ | ನಿಧಿಸರೋವರಕ್ಕೈದೆ ಕೇಕಿಯು |
ಕದಳಿದಾರುಗಳಿಗಳಲಿ ಕುಣಿದುವು ಮುಗಿಲನೀಕ್ಷಿಸುತ ||
ಉದಿರುತಿಹ ಮುಂಬನಿಯ ಗುಟುಕಿಸಿ | ಯೊದಱುತಿರ್ದುವು ಚಾತಕವ್ರಜ |
ಪುದುಗುತಿರ್ದುವು ಖಗಮೃಗಾವಳಿ ಕೋಣೆಕುತ್ತಱಲಿ ||

### ಜಲಕ್ರೀಡೆ

ಮುಳುಗಿದುವು ಮತ್ಸ್ಯಗಳು ಕಂಗಳ| ಹೊಳಹಕಾಣುತ ಮನದಿ ಲಜ್ಜಿಸಿ |
ಜಲಜ ಕಂಪಿಸುತಿರ್ದುವಾಸ್ಯಕೆ ಸೋಲ್ತು ಭೀತಿಯಲಿ ||
ತೆಳುವಸುಳಿ ತಿವಳಿಯ ನಿರೀಕ್ಷಿಸಿ | ತೊಲಗಿ ಹಿಮ್ಮೆಟ್ಟಿದುವು ಕಿಱುದೆರೆ |
ಕೊಳನೊಳಗೆ ಖಚರಿಯರು ಸಂದಣಿಸಲ್ಕೆ ನಿಮಿಷದಲಿ ||

## 2 ಪರಶುರಾಮರಾಮಾಯಣ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 43, ಪದ್ಯ 1543. ಕವಿ "ಅಂಬಿಕಾವಿಜಯಮಂ ಭಾಮಿನಿಯೊಳಱಿಪಿದೆಂ ಮಗುಳ್ದಂ ವಾರ್ಧಕದ ಷಟ್ಪದದೊಳುಸಿರುವೆಂ" ಎನ್ನುತ್ತಾನೆ. ಇದರಲ್ಲಿ ಪರಶುರಾಮನ ಚರಿತವು ಹೇಳಿದೆ. ಗ್ರಂಥಾವತಾರದಲ್ಲಿ ಬಬ್ಬೂರುವಾಸ ವಸಂತಮಾಧವನ ಸ್ತುತಿ ಇದೆ. ಬಳಿಕ ಕವಿ ಬ್ರಹ್ಮ, ಶಿವ, ಪಾರ್ವತಿ, ಗಣೇಶ, ಸರಸ್ವತಿ, ಕಾರ್ತವೀರ್ಯ, ಶೃಂಗೇರಿ ಶಂಕರಾಚಾರ್ಯ, ರೇಣುಕೆ, ಸೂರ್ಯ, ವ್ಯಾಸ, ಆಂಜನೇಯ ಇವರುಗಳನ್ನು ಕ್ರಮವಾಗಿ ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

### ಕಾರ್ತವೀರ್ಯನ ಬಾಲ್ಯ

ಕಪ್ಪಾದ ನೆಱಿಸುರುಳ್ಗುರುಳಿನಿಂ ಕೆಂಬವಳ |
ಕೊಪ್ಪಾದ ಚೆಂದುಟಿಯ ಚುಬುಕದಿಂ ಕಿಱುಜೊಲ್ಲು |
ಸುಪ್ಪಾಣಿಮುತ್ತಿನಂತಿರ್ಪ ಸಂಪತ್ತಿನಿಂ ಡಾಳಿಸುವ ನಿಡುಗಂಗಳ ||
ಹೆಪ್ಪಾದ ಗಂಭೀರನಾಭಿಯಿಂ ನಳನಳಿಸು |
ತಿರ್ಪಾಸುಕರಗಳಿಂ ಬಟ್ಟನುಣ್ದೊಡೆಜಂಘೆ |
ತತ್ಪಾದತಳಿರ್ವೆಜ್ಜೆ ಮೃದುವಿನಿಂದೊಪ್ಪಿದಂ ಬಾಲಕಂ ಕೃತವೀರ್ಯನ ||

### ಸ್ತ್ರೀವರ್ಣನೆ

ವಲ್ಲರಿಗಳಿಲ್ಲದುದಱೆ ಮಲ್ಲಿಗೆಗಳರಳಿಸುತೆ |
ಸಲ್ಲಲಿತಚಂದ್ರನಂ ಮುಖದೊಳಂ ಪೊಳಸುತ್ತೆ |
ಬಿಲ್ಲಱಿಯದಂಬುಗಳ ಬೀಱುತ್ತೆ ಚಿಗುರಿಸುತೆ ಸೌಗಂಧವೃಕ್ಷಂಗಳ ||

ನಲ್ಲೆಯರ್ ತಮತಮಗೆ ನಾಗಸಂ ನಡೆಬಡೆಗ |
ಚೆಲ್ಲಿಯುಂ ತೋಱುತ್ತೆ ಪಲಬಗೆಯ ಚಿತ್ರಂಗ |
ಳೆಲ್ಲಮಂ ನೊಸಲಿನೊಳ್ ಕಾಣ್ಬಡಿಸುತಿರುತಿರ್ದರಂಗಜನ ಮುಂಗುಡಿವ್ವೋಲು ||

## ಕೃತವೀರ್ಯನ ಕೀರ್ತಿ

ಹರಿ ಪಯೋಸಾಗರವನಱಸಿದಂ ಹಂಸೆಯಂ |
ಸರಸಿಜೋದ್ಭವನಱಿಯದಿರುತಿಹಂ ಸದ್ರಸ್ಯ |
ಗಿರಿಯನುಂ ಪುರಹರಂ ಬೆದಕಿದಂ ವಜ್ರಮಂ ವಜ್ರಿಯುಂ ಬಟ್ಟಕಱಿಯದೆ ||
ಬೆಱಗಿನಿಂ ನೋಡಿದಂ ತಾರೆಗಳ್ ಚಂದ್ರನಂ |
ಕೆಱುಪಿಡಿಯುಲಾಱಿಯುಱಿ ತೊಟಿಲುತಿರ್ದುವು ಮೇಲೆ |
ಧರೆಯೊಳಂ ಕೃತವೀರ್ಯನುರುಕೀರ್ತಿಧವಳಿಮಂ ದಿಕ್ತಟವನಂ ಪರ್ಚೆ ||

## ಭದ್ರನ ಕುಮಾರಿ

ಶಿವನಂತೆ ವನದಂತೆ ಸೋಮಕರಯುಕ್ತದಿಂ |
ಭುವಿಯಂತೆ ಮಸುದಂತೆ ಸದ್ದ್ವಿಜವಿಲಾಸದಿಂ |
ರವಿಯಂತೆ ತಳಿರಂತೆ ಶೋಭಿಸುವ ಛಾಯಾರುಣಾಂಕಿತಪ್ರಾಭಿಯಿಂದೆ ||
ಕವಿಯಂತೆ ವಧಿಯಂತೆ ವಾಣಿಪ್ರಕಾಶದಿಂ |
ಪವನನಂತಳಿಯಂತೆ ಸೌಗಂಧಮಿಳಿತದಿಂ |
ದವನಿಪನ ನಂದನೆಯು ಮುದ್ದುಸಿರಿ ಬಾಸ್ಸೆಱಿಯುತಿರ್ದಂತೆಸೆದಿರ್ದಳು ||

## ವಸಂತ

ಪರಪುಟ್ಟಗೆಳದಳಿರ ಗುಟುಕಿಕ್ಕುತಳಿಗಳ್ಗೆ |
ಬಿರಿಮುಗುಳ ಮಲ್ಲಿಗೆಯ ಮಕರಂದಮಂ ಸಲಿಸು |
ತರಸಂಚೆಗಂಬುಜದ ತಂಡುಲವನುಣಿಸುತ್ತ ಪ್ರೇಮದಿಂ ಮೃಗರಧಿಕನ ||
ಕರುಣದಿಂದಿದಿಗೋಳುತ ತುಹಿನಗಜಮಸ್ತಕ |
ಸ್ಫುರಿತಮುಕ್ತಾಫಲವನೆಬ್ಬಟ್ಟಿ ಶೊಲವಿನಿಂ |
ದೊರೆ ವಸಂತನುಮೆಂಬ ಭೋಗಿಜನಸಹಕಾರಿ ಲೋಕವಂ ಮೋಹಿಸಿದನು ||

## ಕೋನಯ್ಯ ಸು. 1750

ಈತನು ಕೃಷ್ಣಾರ್ಜುನರಸಂಗರವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಕಾಶ್ಯಪಗೋತ್ರದವನು; ಹೋತೂರ ಬೆಟ್ಟರಸನ ಮಗನು. ಇವನಿಗೆ ಸರಸಭಾರತಿ ಎಂಬ ಬಿರುದಿದ್ದಂತೆ ತೋರುತ್ತದೆ. ಪೂರ್ವಕವಿಗಳಲ್ಲಿ ವ್ಯಾಸವಾಲ್ಮೀಕಿಶುಕರನ್ನು ಸ್ತುತಿಸಿ ಬಳಿಕ ಕಾಳಿದಾಸಾದಿಗಳನ್ನು ಈ ಪದ್ಯದಲ್ಲಿ ಸ್ಮರಿಸುತ್ತಾನೆ—

ಕಾಳಿದಾಸ ಮಯೂರ ವರಕವಿ | ಮೌಳಿಮಣಿ ಬಾಣಾಂಕ ದಂಡಿ ಎ |
ಶಾಲಮತಿ ಮಲುಹಣ ಕುಮಾರವ್ಯಾಸ ಶುಕರೂಪ ||
ಲೀಲೆಗುಣಲಕ್ಷ್ಮೀಶಘನಕವಿ ! ಜಾಲಮೃದುಪದಪಲ್ಲವಗಳಿಗೆ |
ಫಾಲಮಂ ಚಾಚುತ್ತೆ ಪೇಳುವೆನೀಮಹಾಕೃತಿಯ ||

ಜೈಮಿನಿಭಾರತವನ್ನು ಬರೆದ ಲಕ್ಷ್ಮೀಶನನ್ನು (ಸು. 1700) ಸ್ತುತಿಸುವುದರಿಂದ ಕವಿ ಅವನ ಕಾಲಕ್ಕಿಂತ ಈಚೆಯವನೆಂಬುದು ವ್ಯಕ್ತವಾಗಿಯೇ ಇದೆ; ಸುಮಾರು 1750 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

### ಕೃಷ್ಣಾರ್ಜುನರ ಸಂಗರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 27, ಪದ್ಯ 1721. ಇದಕ್ಕೆ ಗಯಚರಿತ್ರೆ ಎಂಬ ಹೆಸರೂ ಉಂಟು. “ಗಯನೆಂಬ ಗಂಧರ್ವಶಿರೋಮಣಿ ಕೃಷ್ಣರಾಯಂಗೆ ದ್ರೋಹವನೆಸಗಿ ಫಲುಗುಣನ ಮರೆವೊಗಲು ಹರಿ ಕೊಡಹೇಳಲಾತನನು ಕೊಡೆನೆನೆ ಕಾದಿದರು ಹರಿನರರು ದ್ವೈತಕಾನನದಿ; ಪರಮೇಶನಿರ್ವರ ತಿಳುಹಿ ಸಾಮದಲೊಂದುಮಾಡಿದನು” ಎಂಬುದೇ ಇದರ ಕಥಾಗರ್ಭ. ಈ ಕಥೆ ಮಹಾಭಾರತದ ವನಪರ್ವದಲ್ಲಿದೆ ಎಂದೂ ಕೃತಿನಾಯಕನು ತಿರುಪತಿವೆಂಕಟರಮಣನೆಂದೂ ಕೃತಿಯನ್ನು ಆತನಿಗೆ ಅರ್ಪಿಸಿದೆನೆಂದೂ ಕವಿ ಹೇಳುತ್ತಾನೆ. ಗ್ರಂಥಾವತಾರದಲ್ಲಿ ತಿರುಪತಿ ವೆಂಕಟರಮಣದೇವರ ಸ್ತುತಿ ಇದೆ. ಬಳಿಕ ಕವಿ ಈಶ್ವರ, ಬ್ರಹ್ಮ, ಗಣೇಶ, ಲಕ್ಷ್ಮಿ, ಸರಸ್ವತಿ, ಗರುಡ, ಹನುಮಂತ, ಸೂರ್ಯ ಇವರುಗಳನ್ನು

ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

### ಚಂದ್ರೋದಯ

ಬಿರಿದುವಾಕ್ಷಣ ಕುಮುದಚಯ ಮಿಗೆ | ಹೊರೆದುವಮಲಚಕೋರ ಚಂದ್ರಿಕೆ |
ಹರೆದುದಖಿಳದಿಗಂತವನು ಕಂಗಿದುವು ಶಶಿಕಾಂತ ||
ಧರೆ ಗಿರಿವ್ರಜ ಗಗನದುರುಗ | ಹ್ವರ ಮಹಾಂಧತೆಯುಡುಗಿ ಬೆಳತುದು |
ವಿರಹಿಗಳ ಹೃಚ್ಛೂಲವೆನೆ ವಿಧು ನಭದಿ ರಾಜಿಸಿದ ||

### ಊಟ

ಅಚ್ಚಪಾಪಸವೆಯುರೆದು ವಾಗಿನ | ಪಚ್ಚಡಿಯ ಪರಳುಪ್ಪುಗಾಯ್ಗಳ |
ಚೆಚ್ಚರದೊಳಬಲೆಯರು ನೀಡುವ ಕಲಸಿದೋಗರವ ||
ಕಚ್ಚಡಿಯ ಸೀಕರಣೆಪಳಿದ್ಯವ | ನಚ್ಚರಿಯಲಿ ಯಶೋದೆ ಬಡಿಸಿದ |
ಳಚ್ಯುತಗೆ ಸವಿಗೊಳಿಸುತಖಿಳಮನೋನುರಾಗದಲಿ ||

### ಸುಭದ್ರೆ

ತಳಿರಡಿಯ ಪೊಂಬಾಳೆದೊಡೆಗಳ | ಎಳಲತೆಯ ವಿಗ್ರಹದ ಕಡುಕೋ |
ಮಳಶಿರೀಷದ ಕರಯುಗದ ಸರಸೀರುಹಾನನದ ||
ಲಲಿತಚಂಪಕನಾಸಿಕದ ನೈ | ದಿಲ ಸುನಯನದ್ವಯವಲಾಂ |
ಙ್ಗಳ ಶಿರೋಮಣಿ ವನವಧುವಿನಾಕೃತಿಯೊಳೈದಿದಳು ||

### ಪಾಂಡವರನ್ನು ಕುರಿತು ಕೃಷ್ಣನ ಉಕ್ತಿ

ಹೋದ ವಸಾರಿಯ ಕರೆಸಿ ಮನೆಯೊಳ | ಗಾಧರಿಸಿ ಕೆಡುವಂತೆ ಕಡೆವರಾ |
ಬೀದಿಕಲಹವ ಕೊಂಡುಕೊಂಬುವ ಮರುಳರಂದದಲಿ ||
ಹಾದಿಗೊಂಡೈದುವ ಗಯ ಜಾಯ್ನ | ನಾದರಿಸಿಯವಗಾಗಿ ನಿಜಸುತ |
ಸೋದರಾದಿಗಳಟ್ಟುವುದುಚಿತವೆ ಎನುತ ಹರಿಯುಟ್ಟ ||

### ಮನ್ಮಥನನ್ನು ಕುರಿತು ಕೃಷ್ಣನ ಪರಿಹಾಸೋಕ್ತಿ

ಏಕೆ ಮನೆವಾರ್ತೆ ಲಕ್ಷ್ಮಿ ಮಕ್ಕಳು | ನೇಕೆ ಕೊರಳಿನ ಮೊಲೆಗಳಂದದಿ |
ಸಾಕಿದರಿಗಪಯಶವ ತಹ ಸುತರಿದ್ದು ಫಲವೇನು ||

ಲೋಕ ಮೆಚ್ಚಲು ನಿನ್ನವೊಲು । ದ್ರೇಕಶೌರ‍್ಯದೊಳಿಬಲವ ಮುನಿ ।
ದೇಕನಿಮಿಷದಿ ಗೆಲುವ ಸಾಹಸನೊರ್ವ ನಾಕೆಂದ ||

---

ಹೆಳವನಕಟ್ಟೆಗಿರಿಯಮ್ಮ ಸು. 1750

ಈಕೆ ಚಂದ್ರಹಾಸನ ಕಥೆ, ಸೀತಾಕಲ್ಯಾಣ, ಉದ್ದಾಳಕನ ಕಥೆ, ಹಾಡುಗಳು ಇವುಗಳನ್ನು ಬರೆದಿದ್ದಾಳೆ. ಇವಳು ಬ್ರಾಹ್ಮಣಕವಿ; ಹೆಳವನಕಟ್ಟೆ ರಂಗನಾಥನ ಭಕ್ತಳು. ಚಂದ್ರಹಾಸನ ಕಥೆಯ ಒಂದು ಪ್ರತಿಯ ಅಂತ್ಯ ಗದ್ಯದಲ್ಲಿ ಶ್ರೀಮತ್ಪರಮಹಂಸಾರೂಢೆ, ನಿತ್ಯನಿರ್ಮಲಪರಮಾನಂದಹೃದಯೆ ಎಂಬ ವಿಶೇಷಣಗಳು ಈಕೆಗೆ ಕೊಟ್ಟಿವೆ. ಲಕ್ಷ್ಮೀಶನ (ಸು 1700) ಜೈಮಿನಿಭಾರತದಲ್ಲಿ ಹೇಳಿರುವ ಚಂದ್ರಹಾಸನ ಕಥೆಯನ್ನು ತಾನು ಸಾಂಗತ್ಯವಾಗಿ ಬರೆದಂತೆ ಹೇಳುವುದರಿಂದ ಆವನ ಕಾಲಕ್ಕಿಂತ ಈಚೆಯವಳು ಎಂಬುದು ವ್ಯಕ್ತವಾಗುತ್ತದೆ. ಇವಳ ಕಾಲವು ಸುಮಾರು 1750 ಆಗಬಹುದು ಇವಳ ಗ್ರಂಥಗಳಲ್ಲೆಲ್ಲಾ ಹೆಳವನಕಟ್ಟೆ ರಂಗನಾಥನ ಅಂಕಿತವಿದೆ. ಹರಿಹರದ ಸಮೀಪದಲ್ಲಿರುವ ಕೊಮಾರನಹಳ್ಳಿಯಲ್ಲಿ ಈಕೆ ಸುಮಾರು 200 ವರ್ಷಗಳಹಿಂದೆ ಇದ್ದಳೆಂದು ಪ್ರತೀತಿಯಿದೆ.

ಇವಳ ಗ್ರಂಥಗಳಲ್ಲಿ

1 ಚಂದ್ರಹಾಸನಕಥೆ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 5, ಪದ್ಯ 422[1]. ಗ್ರಂಥಾವತಾರದಲ್ಲಿ ಹೆಳವನಕಟ್ಟೆ ರಂಗನಾಥನ ಸ್ತುತಿ ಇದೆ. ಬಳಿಕ ಕವಿ ಗಣಪತಿ, ಶೃಂಗೇರಿಯ ಶಾರದೆ, ತನ್ನ ತವರುಮನೆಯ ದೇವರಾದ ಮೈಲಾರ ಇವರುಗಳನ್ನು ಸ್ತುತಿಸಿ ಪತಿಚರಣವನ್ನು ನೆನೆದು ಗ್ರಂಥವನ್ನು ಆರಂಭಿಸಿದ್ದಾಳೆ. ಒಂದು ಪ್ರತಿಯ ಕೊನೆಯಲ್ಲಿ—ಇಂತು ಶ್ರೀಮತ್ಪರಮಹಂಸಾರೂಢೆಗಳಾದ ನಿತ್ಯನಿರ್ಮಲಪರಮಾನಂದಹೃದಯೆಯುಮಾದ ಶ್ರೀ ಹೆಳವನಕಟ್ಟೆ ರಂಗನಾಥಸ್ವಾಮಿಯ ಕರುಣವುಳ್ಳವರಾದ ಹೆಳವನಕಟ್ಟೆ ಗಿರಿಯಮ್ಮನವರು ನಿರೂಪಿಸಿದ ಚಂದ್ರ

---

1. ಮತ್ತೊಂದು ಪ್ರತಿಯಲ್ಲಿ 431 ಎಂದಿದೆ.

ಹಾಸಕಥಾಮೃತಪ್ರಸಂಗಂ ಸಂಪೂರ್ಣಂ—ಎಂಬ ಗದ್ಯವಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಚಂದ್ರಹಾಸ

ತೊಂಗಲು ಕುರುಳು ತೋಳ್ಪತಲಿರೆ ಪೊಳೆವಲ್ಲು | ಕಂಗಳ ಕುಡಿನೋಟವೆಸೆಯೆ |
ಮಂಗಳಗಾತ್ರದ ಮುದ್ದುಬಾಲಕನೆಲ್ಲ | ರಂಗಳದೊಳಗಾಡುತಿಹನು ||

ಪೌರನಾರಿಯರು ಚಂದ್ರಹಾಸನನ್ನು ಪಾಲಿಸಿದುದು

ಮಾಗಾಯಿಮುರವಿಟ್ಟು ಮನ್ನಿಸಿ ಕೆನೆವೊಸ | ರೋಗರವನ್ನುಣಿಸುವರು |
ತೂಗುವರು ತೊಟ್ಟಿಲೊಳಗಿಟ್ಟು ತರಳನ | ರಾಗಗಾನದಲಿ ಪಾಡುವರು ||

ಚಂದ್ರಹಾಸನನ್ನು ನೋಡಿ ವಿಷಯೆಯ ಉಕ್ತಿ

ಇಂದ್ರನೆಂಬನೆ ಬಿಳಿಯಾನೆ ಕೆಲದಲ್ಲಿಲ್ಲ | ಚಂದ್ರನೆಂಬನೆ ಮೃಗವಿಲ್ಲ |
ಕುಂದದೆ ಲೋಕಲೋಕವ ತಿರುಗಿದ ರವಿ | ಬಂದಿಳಿದನೊ ಭೂತಳಕೆ ||

ಬೇಟೆ

ಗಬ್ಬಿನಾಯಿಗಳ ಸನ್ನೆಮಾಡಿ ಬಿಟ್ಟರು | ಅಬ್ಬರದಲಿ ಹೋಗಿ ತುಡುಕಿ |
ತಬ್ಬಿಬ್ಬುಗೊಳಿಸುತ ತವಕದಿ ಪಿಡಿದರು | ಹೆಬ್ಬುಲಿಕರಡಿಹಂದಿಗಳ ||

ಸೂರ್ಯೋದಯ

ಕತ್ತಲೆ ಹರಿದುವು ಕಮಲ ಬಾಯ್ದೆರೆದುವು | ಮಿತ್ರನ ಬರವ ಹಾರೈಸಿ |
ಚಿತ್ತೈಸಿದುವು ತಾರೆಗಳು ಭಾಸ್ಕರ ತಲೆ | ಯೆತ್ತಲು ಪ್ರಭೆ ರಂಜಿಸಿತು ||

2 ಸೀತಾಕಲ್ಯಾಣ

ಇದು ಹಾಡಿನ ಮಟ್ಟನಲ್ಲಿ ಬರೆದಿದೆ; 87 ಪದಗಳಿವೆ. ಪ್ರತಿಪದವೂ ಜಯಜಯಾ ಎಂದು ಮುಗಿಯುತ್ತದೆ. ಇದರಿಂದ ಒಂದೆರಡು ಪದಗಳನ್ನು ತೆಗೆದು ಬರೆಯುತ್ತೇವೆ—

ತಂಡತಂಡದ ರತ್ನವಡಸಿರ್ದ | ಮಂಡುಮುತ್ತಿನಮಣಿ ಬಿಗಿದಿರ್ದ |
ತೊಂಡಿಲ ಮುತ್ತೈದೆಯರಳವಡಿಸಿದರು ಕೋ | ದಂಡಪಾಣಿಸತಿಜಾನಕಿಗೆ ||
ಜಯಜಯಾ |

ಇಳೆಯ ಜಗಂಗಳನ್ನುದರದಲಿ | ಅಳವಡಿಸಿದ ಮಹಾತ್ಮಕನು |

ಇಳೆಯ ಮಗಳನು ಎತ್ತಲಾಜ್ಞದೆ ರಾವು | ಬಿಟಲಿದನೆಂದು ನಕ್ಕರು ಜನರು ||
ಜಯಜಯಾ ||

ಕಲ್ಲೊಳು ಕಾಂತೆಯ ಮಾಡಿದ ಪಾದ | ಬಲ್ಲಿದ ಬಲಿಯ ಒತ್ತಿದ ಪಾದ |
ಮಲ್ಲರ ಮರ್ದಿಸಿ ಮದನಾರಿಯ ಬಿಲ್ಲ | ನಲ್ಲಿ ಮುರಿದ ಪಾದ ತಾರೆಂದಳು ||
ಜಯಜಯಾ ||

## 3 ಉದ್ದಾಳಕನ ಕಥೆ

ಇದೂ ಸಾಂಗತ್ಯದಲ್ಲಿ ಬರೆದಿದೆ; ಪದ್ಯ 447. ಇದರಲ್ಲಿ ಋಷಿಕುಮಾರನಾದ ಉದ್ದಾಳಕನ ಕಥೆ ಹೇಳಿದೆ. ಆರಂಭದಲ್ಲಿ ಗಣಪತಿ, ಸರಸ್ವತಿ ನೀಲಾಚಲದ ಲಿಂಗ ಇವರುಗಳ ಸ್ತುತಿಯಿದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಚಂದ್ರಾವತಿ

ನಡೆಗೆ ನವಿಲು ನಾಚಿ ತಲೆಯ ತಗ್ಗಿಸಿದುವು | ನುಡಿಗರಗಿಣಿಯು ನಾಚಿದುವು |
ಮುಡಿಯ ಕಡೆಗಣ್ಣಿಗೆ ಮಿಂಚು ನಾಚಿಯೆ | ಅಡಗಿದುವಂಬರದಲ್ಲಿ ||

ಊಟ

ಹಪ್ಪಳಸಂಡಿಗೆ ಹಲವುಶಾಕಂಗಳ | ನೊಪ್ಪುವ ಪರಮಾನ್ನಘೃತವ |
ಒಪ್ಪದಿ ಸತಿಯರು ಹರಿವಾಣದಲಿ ತಂದು | ಚಪ್ಪರದಲಿ ಬಡಿಸಿದರು ||

## 4 ಹಾಡುಗಳು

ಇವಳ ಹಾಡುಗಳಲ್ಲಿ ಒಂದನ್ನು ತೆಗೆದು ಬರೆಯುತ್ತೇವೆ—

ರಾಗ ತೋಡಿ

ಮನವೆನ್ನ ಮಾತ ಕೇಳದು | ಮಂದಜ್ಞಾನದಿ | ತನುವಿನಾಶೆಯ ಬಿಡಲೊಲ್ಲದು |
ವನಜನಾಭನೆ ನಿಮ್ಮ | ನಾಮದ ಸ್ಮರಣೆಯ | ನೆನೆಯದೆ ಕಂಡಕಡೆಗೆ ಎಳೆಯುತಲಿದೆ |

ಸಾಧುಸಜ್ಜನರ ಸಂಗವ | ಮಾಡಿ ಪರಗತಿ | ಯಾಧಾರವನು ಮಾಡಲೊಲ್ಲದು |
ಕ್ರೋಧಿಕುಹಕದುಷ್ಟ | ರೊಡನಾಡಿ ಕಾಲನ | ಬಾಧೆಗೆ ಒಳಗಾಗುವಂತೆ ಮಾಡಿದರೆನ್ನ |

ಮದಗಜ ವೈರಿಯುಮುಱಿದು|ಮುಂದುಗಾಣದೆ|ಕುದುವಿನೊಳಗೆ ಬಿದ್ದಂತಾದೆನು |
ಹೃದಯಕಮಲದೊಳು | ನಿಂದು ರಕ್ಷಿಸು ಎನ್ನ | ಪದುಮಾಕ್ಷ ಹೆಳವನಕಟ್ಟೆ
ರಂಗಯ್ಯ ||

---

ಕೇಶವ ಸು. 1750

ಇವನು ತಿರುವೇಂಗಡಾಚಾರ್ಯಶತಕ ಎಂಬ ಶತಕಪಂಚಕವನ್ನು ಬರೆದಿದ್ದಾನೆ. ಈತನು ವಾಲ್ಮೀಕಿವಂಶೋತ್ಪನ್ನನು; ಇವನ ತಂದೆ ಗುರು, ಇವನ ಗುರು ತಿರುವೇಂಗಡಾಚಾರ್ಯ. "ಆದಿಕೇಶವಪಾದಪದ್ಮಮಧುಕರ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವನ್ನು ನಿರ್ಣಯಿಸುವುದಕ್ಕೆ ಅವ ಆಧಾರವೂ ಇಲ್ಲ. ಆದರೆ ಗ್ರಂಥದಲ್ಲಿಯ ಕೆಲವು ಉಕ್ತಿಗಳನ್ನು ನೋಡಿದರೆ ಜೈಮಿನಿಭಾರತವನ್ನು ಬರೆದ ಲಕ್ಷ್ಮೀಶನಿಗಿಂತ ಈಚೆಯವನು ಎಂದು ತೋರುತ್ತದೆ; ಸುಮಾರು 1750 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

ತಿರುವೇಂಗಡಾಚಾರ್ಯ ಶತಕ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಶತಕಗಳು 5; ಪದ್ಯ 597. ಇದರಲ್ಲಿ ಸದಾಚಾರ್ಯಮಹಿಮೆ, ಪೂರ್ವಾಚಾರ್ಯರ ಉದ್ಭವ, ತತ್ವತ್ರಯ, ಪಂಚಸಂಸ್ಕಾರ, ರಹಸ್ಯತ್ರಯ, ಅರ್ಥಪಂಚಕ, ಅರ್ಚಿರಾದಿ ಮಾರ್ಗ-- ಇವೇ ಮೊದಲಾದ ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಸಂಬಂಧಿಸಿದ ವಿಷಯಗಳು ನಿರೂಪಿಸಲ್ಪಟ್ಟಿವೆ. ಪ್ರತಿಪದ್ಯವೂ ತಿರುವೇಂಗಡಾಚಾರ್ಯಮಾನಿವರ್ಯ ಎಂದು ಮುಗಿಯುತ್ತದೆ. ಕವಿಯ ಗುರುವಾದ ತಿರುವೇಂಗಡಾಚಾರ್ಯನು ಮೇಲುಗೋಟೆಯವನೆಂದೂ ವೆಂಕಟಾಚಾರ್ಯ, ಸಿಂಗಮ್ಮ ಇವರುಗಳ ಪುತ್ರನೆಂದೂ ತಿಳಿಯುತ್ತದೆ ಪ್ರಥಮಶತಕವು ಈತನ ಸ್ತುತಿರೂಪವಾಗಿದೆ. ತನ್ನ ಗ್ರಂಥವು "ದೂಷಕರಿಗೆಡೆಕೊಳೆ, ಶ್ರೀವೈಷ್ಣವರಲೀಲೆ, ಪಾಷಂಡರಿಗೆ ಕಿಚ್ಚು, ಸೂರಿಗಳ ಮೆಚ್ಚು, ಸುಜ್ಞಾನಬುಧಚಿಂತಾಮಣಿ" ಎಂದು ಕವಿ ಹೇಳಿದ್ದಾನೆ

ಗ್ರಂಥಾವತಾರದಲ್ಲಿ ಆದಿಕೇಶವನ ಸ್ತುತಿ ಇದೆ. ಬಳಿಕ ಕವಿ ಅನಂತ, ಗರುಡ, ಪೊಯ್‌ಹೈಯಾರ್, ಪೂದತ್ತಾರ್, ಪೇಯಾಳ್ವಾರ್, ಭಕ್ತಿಸಾರ, ಶಠಕೋಪ, ಕುಲಶೇಖರ, ಪೆರಿಯಾಳ್ವಾರ್, ಭಕ್ತಾಂಘ್ರಿರೇಣು, ಪಾಣ, ಪರಕಾಲ, ಮಧುರಕವಿ, ಗೋದಾದೇವಿ, ರಾಮಾನುಜ, ನಂಬಿಳ್ಳೈ, ಕೂರೇಶ, ಎಂಬಾರ್, ತಿರುಕ್ಕಚ್ಚಿನಂಬಿ, ಕುರುಕೇಶ, ಅರುಳಾಳಪ್ಪೆರುಮಾಳ್, ವಡುಕನಂಬಿ, ಭಟ್ಟರ್, ನಂಜೀಯರ್, ಪೆರಿಯಜೀಯರ್, ಪಿಳ್ಳೈಲೋಕಾಚಾರ್ಯ, ಅಂಬುಜಾಕ್ಷ, ರಾಮಮಿಶ್ರ, ತಿರುಕ್ಕೋಟ್ಟಿಯೂರ್ ನಂಬಿ, ಯಾಮುನ, ನಾಥಮುನಿ, ಗೆರಿಯನಂಬಿ ಇವರುಗಳನ್ನೂ, ವ್ಯಾಸ, ನಾರದ, ಸನಂದನ, ಸನಕ ಶುಕಮುನಿ, ವಿಭೀಷಣ, ಪ್ರಹ್ಲಾದ, ಮಾರುತಿ, ಕುಚೇಲ, ಅಂಬರೀಷ, ರುಕ್ಮಾಂಗದ, ವಿದುರ, ಪಾರ್ಥ, ಧ್ರುವ, ಬಲಿ, ಪುಂಡರೀಕ, ಉದ್ಧವ, ವಾಲ್ಮೀಕಿ, ಶೌನಕ, ಪರಾಶರ, ಅಕ್ರೂರ, ಭೀಷ್ಮ ಇವರುಗಳನ್ನೂ ಸ್ತುತಿಸಿದ್ದಾನೆ.

ಶತಕಗಳ ಅಂತ್ಯದಲ್ಲಿ ಈ ಗದ್ಯವಿದೆ—

ಇತಿ ಸಮಸ್ತಕಮಲಭವಾಂಡಮಂಡಲಪುಂಡರೀಕಗರ್ಭ ಪ್ರತಿಬಿಂಬಿತಶ್ರೀಭೂಪತಿ ಪರಮಪದವಾಸ ಆದಿಕೇಶವಪಾದಪದ್ಮಮಕರಂದಮತ್ತಮಧುಕರರೋಹಮುಪಾಸನ ವಾಲ್ಮೀಕಿವಂಶೋದ್ಭವ ಗುರುಸುತ ಕೇಶವವಿರಚಿತತಿರುವೇಂಗಡಾಚಾರ್ಯಶತಕೇ

ಈ ಗ್ರಂಥವು ವಿಶಿಷ್ಟಾದ್ವೈತಮತವನ್ನು ಲಲಿತವಾಗಿ ಬೋಧಿಸುತ್ತದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಪರುಷವೊಂದು ಬಂದು ಮುಟ್ಟಿದಮೇಲೆ ಕೇಳುಮೋ |
ಲೆರಡುದಿನಿಸಹುದೆ ಲೋಹವು ಕಾಮಧೇನು ತಾಂ |
ದೊರೆಗಳಿಗೆ ಕ್ಷೀರ ಬಡವರಿಗೆ ಶೋಣಿತವನೇ ಕರೆವುದೇ ದಿವ್ಯಾಮೃತಂ ||
ಸಿರಿಯರಿಗೆ ರುಚಿಯು ಪಸುಳೆಗೆ ವಿಷಂತೋರುವುದೆ |
ಗುರುಮೂರ್ತಿ ನೀನೊಲಿದುಬಳಿಕ ಜ್ಞಾನಿಗಳು ಅಧ |
ಮರು ಎಂಬಿವೆರಡುಭೇದಗಳುಂಟೆ ತಿರುವೇಂಗಡಾಚಾರ್ಯಮೌನಿವರ್ಯಾ ||
ವಠಪಂಚಸಂಸ್ಕಾರಭೂಷಣವ ತೊಡಿಸಿ ತ |
ತ್ವಹಸ್ತದಂಬರವನುಡಿಸಿ ಕರದೊಳಗೆ ಕೈಂ |
ಕರಿಯಕಂಕಣವ ಕಟ್ಟಿಸಿ ಮಂತ್ರಮೆಂಬ ಮಂಗಳಸೂತ್ರಮಂ ಕಟ್ಟಿಸಿ ||
ಚಕ್ರಾಧರಹಸೆಯಮೇಲ್ ಕುಳ್ಳಿರಿಸಿ ಬಳಿಕಲಾ |

ಪರನೆಂಬ ಮದವಳಿಗನಿಗೆಯಾತ್ಮಸತಿಯನಾ |
ದರದಿ ಶೇಷತ್ವಧಾರೆಯನೆಱೆವ ತಿರುವೇಂಗಡಾರ್ಯಪಿತನಿರೆಭಯಮದೇಂ ||
ಶೃಂಗಾರವೇ ಸರ್ವರಸಕಾದಿ ಸಂಭಾರ|ಸಂಘಕ್ಕೆ ಮುಖ್ಯವೇ ಲವಣ ಬಳ್ಳಿತಾಂಬ|
ರಂಗಳೊಳ್ ಬೆಳ್ಪು ಮೊದಲಖಿಳಪ್ರಸ್ತುತಕೆ ನೋಡಲ್ ಮೂಲವೇ ತಂಡುಲಂ ||
ಕಂಗಳೇ ಸರ್ವತೇಜಕೆ ಗೊತ್ತು ಅನ್ನಪಾ|ನಂಗಳೇ ಶಕ್ತಿಗಾಧಾರವಾತ್ಮಂಗೆ ದಾ |
ಸ್ಯಂಗೈವುದೇ ಪ್ರಾಪ್ತಮಿದು ಸತ್ಯ ತಿರುವೇಂಗಡಾಚಾರ್ಯಮೌನಿವರ್ಯಾ ||

---

## ತಿಮ್ಮಾಮಾತ್ಯ ಸು 1750

ಈತನು ರಾಮಾಭ್ಯುದಯಕಥಾಕುಸುಮಮಂಜರಿಯನ್ನು ಬರೆದಿದ್ದಾನೆ. ಇವನು ಶ್ರೀವೈಷ್ಣವಕವಿ, ಹರಿತಸಗೋತ್ರದವನು; ಆಪಸ್ತಂಬಸೂತ್ರದವನು. ಇವನ ಪಿತಾಮಹ ಶೇಷಾರ್ಯ, ತಂದೆ ವೆಂಕಟಾಧಿಪ. ಇವನ ಸ್ಥಳ ಬೆಂಗಳೂರು ತಾಲ್ಲೂಕು ಅಗರವೆಂದು ಹೇಳುತ್ತಾರೆ. ತನ್ನ ಇಷ್ಟದೈವವಾದ ಆನೆಕಲ್ಲುತಾಲ್ಲೂಕು ಸಹದೇವಪುರದ ( ಸಾದನಹಳ್ಳಿ) ತಿರುಮಲದೇವರ (ತಿಮ್ಮರಾಯಸ್ವಾಮಿ) ಅಂಕಿತದಿಂದ ಈ ಕಾವ್ಯವನ್ನು ಬರೆದಿದ್ದಾನೆ. ಇವನ ವಂಶಸ್ಥರ ಹೇಳಿಕೆಯಮೇರೆಗೆ ಇವನ ಕಾಲವು ಸುಮಾರು 1750 ಆಗಬಹುದು.

ಇವನ ಗ್ರಂಥ

ರಾಮಾಭ್ಯುದಯಕಥಾಕುಸುಮಮಂಜರಿ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಕಾಂಡ 7, ಸಂಧಿ 78, ಪದ್ಯ 3446. ಇದಕ್ಕೆ ಆನಂದರಾಮಾಯಣ ಎಂಬ ನಾಮಾಂತರವೂ ಉಂಟು. "ಇದು ಇತರರಾಮಾಯಣಗಳಕಥಾಸಾರವನ್ನೆಲ್ಲಾ ಒಳಕೊಂಡಿರುವುದಲ್ಲದೆ ವರಾಹನೃಸಿಂಹಾವತಾರಗಳ ಮತ್ತು ರಾವಣದಿಗ್ವಿಜಯದ ಕಥೆಯನ್ನು ಸಹ ಬಾಲಕಾಂಡದಲ್ಲಿಯೇ ಸೇರಿಸಿ ಉತ್ತರಕಾಂಡದಲ್ಲಿ ಶ್ರೀರಾಮನ ರಾಜ್ಯಭಾರ ದಿಗ್ವಿಜಯ ಅಶ್ವಮೇಧ ಮೊದಲಾದ ಕಥೆಗಳನ್ನು ಸೇರಿಸಿ ರಚಿಸಲ್ಪಟ್ಟಿದೆ." ಗ್ರಂಥಾವತಾರದಲ್ಲಿ ವಿಷ್ಣುಸ್ತುತಿ ಇದೆ. ಬಳಿಕ ಕವಿ ಶಿವ, ಬ್ರಹ್ಮ, ಗಣ

ಪತಿ, ಸರಸ್ವತಿ, ವಾಲ್ಮೀಕಿ, ಆಂಜನೇಯ ಇವರುಗಳನ್ನು ಹೊಗಳಿದ್ದಾನೆ. ಕಾಂಡಗಳ ಅಂತ್ಯದಲ್ಲಿ ಈ ಗದ್ಯವಿದೆ —

ಇದು ಶ್ರೀಪರಮಕಲ್ಯಾಣಗುಣಗಣಾಭರಣ ಸುರಕುಲಧುರೀಣಮಕುಟಸಂಘಟಿತ ಪರಿಸ್ಫುಟಮಣಿಪ್ರಭಾಭಾಸಮಾನಚರಣಸರಸೀರುಹ ವೆಂಕಟರಮಣವರಪ್ರಸಾದಲಬ್ಧ ಕವಿತಾವಿಚಕ್ಷಣ ತಿಮ್ಮಯನಾಮಧೇಯಕವಿಪ್ರಗುಂಭಿತಮಪ್ಪ ರಾಮಾಭ್ಯುದಯಕಥಾ ಕುಸುಮಮಂಜರಿಯೊಳ್.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ವಸಂತ

ಅನಮಯಕಂಕುರಿಸಿದುದು ಮಧು | ಮಾಸ ವನದೇವತೆಯ ವದನವಿ |
ಕಾಸ ಸುಖಿಸುವ ಕಾಂತಕಾಂತಾಜನಮನೋಲ್ಲಾಸ ||
ಪೂಸರಳನಭ್ಯಾಸ ಶುಕಪಿಕ | ಭಾಸಮಾನಗ್ರಾಸ ಸುಮನೋ |
ವಾಸನಾಯುತವಾಸಗಳು ದೆಸೆದೆಸೆಯೊಳೆಸಗಿದುವು ||
ತಿಳಿಗೊಳಂಗಳ ಕುಕಿ ಕಮಲಾ | ವಳಿಯ ನಡುಗಿಸಿ ಭ್ರಮರಿಕಾಸಂ |
ಕುಳವ ಕೆದಱಿ ಮರಂದದೋಕುಳಿಯಾಡಿ ಸಮರಜವ ||
ಲಲಿತಕರದಿಂ ಚೆಲ್ಲಿ ತರುಗಳ | ತಳಿರ ತುಡುಕುತ ತೊಟ್ಟಿತೊಟ್ಟಿಲಿ ಸುಳಿ |
ಸುದುಟಿ ಚೈತ್ರನ ಕಲಭನೆನೆ ವಿಹರಿಸಿತು ತಂಬೆಲರು ||
ಸವಿವನೆಗೆ ಮಧುಪಾನಿಗಳ ಸಂ | ಚರಣೆಯಾದುದು ಸರಸಿಗಳನನು |
ಸರಿಸಿ ಕುಮುದಗಳೆಸಗಿದುವು ಜಾತಿಗಳು ಮುಸುಳಿದುವು ||
ಹರುಷದೊಡನೆ ವಿಜಾತಿಗಳಿಗ | ಚ್ಛಾಯ ಪೆಚ್ಚುಗೆಯಾಯ್ತು ಮಾಧವ |
ನರಸುತನ ಕಡುಚಿತ್ರವಾದುದು ಬನಬನಂಗಳಲಿ ||

ಚಂದ್ರ

ಹರಿಯವೊಲು ಕಮಲಾಂಕ ಗಂಗಾ | ಧರನವೊಲು ಶುಚಿವರ್ಣ ಭಾನಾ |
ಮರನವೊಲು ಪ್ರಜ್ವಲಿತಸಕಲಕಳಾಧುರಂಧರನು ||
ಪರಮಮೂರ್ತಿತ್ರಯನೆನಲು ಹಿಮ | ಕರನು ಸ್ಥಿತಿಲಯಜನ್ಮಗಳ ವಿ |
ಸ್ತರಿಸು ಶಿವನ ಚಕೋರಕಮಲವಿಯೋಗಿಮನಗಳಿಗೆ ||

### ರಾಕ್ಷಸಸಂಹಾರ

ಕೊಳುಗುಳದ ಕಳನೊಳಗೆ ರಕುತದ | ಕೊಳನೊಳುದಿಸಿದ ಶೋಣಪಂಕಜ |
ದಲರುಗಳು ಹರಿಬಾಣಕುಂಜರಪಾಣಿಪಾಟವದಿ ||
ಇಳೆಯುಲಿದು ತನ್ನುಟ್ಟಿದ ಪುತ್ರಿಗೆ | ತಿಳುಹಲೈದಿದುವೆಂದೆನಲು ಬಾಂ |
ದಳದೊಳಸುರರ ತಲೆಗಳಾಡಿದುವತಿವಿಚಿತ್ರದಲಿ ||

### ಲಂಕಾದಹನ

ಊರ ಮನೆಗೆ ಕಂಗೆಟ್ಟು ಗೃಹಸಂ | ಭರಿತಸೋಪಸ್ಕರಗಳೆಲ್ಲವ |
ಸರಕುಮಾಡದೆ ಬಿಸುಟು ನೆರೆಹೊರೆಯುವರ ಕೂಗಿಡದೆ ||
ತರುಣಿಯರ ಬಳಿಸೆಳೆದು ಕಂಕುಳ | ಲಿಱುಕಿ ಮಕ್ಕಳ ಹೊದೆದಹೊದಿಕೆಯ |
ಮಱೆದು ಗೋಳಿಟ್ಟೋಡಿದುದು ಮೊರೆಯಿಡುತ ಪೌರಜನ ||

---

## ಚಿದಾನಂದಾವಧೂತ ಸು. 1750

ಈತನು ಜ್ಞಾನಸಿಂಧು, ಕಾಮವಿಡಂಬನ, ದೇವೀಮಾಹಾತ್ಮ್ಯ, ಬಗಳಾಂಬಾಸ್ತೋತ್ರ, ಚಿದಾನಂದರವಚನ, ಪಂಚೀಕರಣ, ತತ್ವಚಿಂತಾಮಣಿ, ನವಚಕ್ರಕುಲರೇಖಾಲಕ್ಷಣ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ. ಇವನ ಗುರು "ಸಿದ್ಧಪರ್ವತವಾಸಿಯೆನಿಸುವ ಸಿದ್ಧಬಳ್ಳಾಮುಖಿಯು ತಾನಾಗಿರ್ದ ತುಂಗಾತೀರವಿಲಸದಯೋಧ್ಯೆಮಧ್ಯದಲಿ ಇರ್ದ" ಚಿದಾನಂದ[1]. ಕವಿ ಈ ಗುರುವಿನ ಅಂಕಿತದಲ್ಲಿ ಕೆಲವು ಗ್ರಂಥಗಳನ್ನು ಬರೆದಿದ್ದಾನೆ. ರಂಗನಾಥನ (ಸು. 1675) ಅನುಭವಾಮೃತವನ್ನು ಬಹಳಮಟ್ಟಿಗೆ ಅನುಸರಿಸಿ ಜ್ಞಾನಸಿಂಧುವನ್ನು ಬರೆದಿರುವುದರಿಂದ ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

---

1. ಇಲ್ಲಿ ಹೇಳಿರುವ ಅಯೋಧ್ಯೆ ಆವ ಊರಿಗೆ ಅನ್ವಯಿಸುತ್ತದೆಯೋ ತಿಳಿಯಲಿಲ್ಲ. ಶೃಂಗೇರಿ ಎಂದು ಕೆಲವರು ಊಹಿಸುತ್ತಾರೆ, ಆವ ಆಧಾರದಿಂದಲೋ ತಿಳಿಯದು. ಅಲ್ಲಿಯ ಗುರುಗಳಲ್ಲಿ ಕೆಲವರಿಗೆ ಸಚ್ಚಿದಾನಂದಭಾರತಿ ಎಂಬ ಹೆಸರುಂಟು; ಬರಿಯ ಚಿದಾನಂದ ಎಂಬ ಹೆಸರು ಕಾಣುವುದಿಲ್ಲ.

ಇವನ ಗ್ರಂಥಗಳಲ್ಲಿ

## 1 ಜ್ಞಾನಸಿಂಧು

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಅಧ್ಯಾಯ 49, ಪದ್ಯ 3621 ಇದರಲ್ಲಿ ಅದ್ವೈತವೇದಾಂತವು ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಶಿವನು ಷಣ್ಮುಖನಿಗೆ ಹೇಳಿದ ಅಧ್ಯಾತ್ಮಬೋಧೆಯನ್ನು ವಿವರಿಸುವುದಾಗಿ ಕವಿ ಹೇಳುತ್ತಾನೆ. ವ್ಯಾಕರಣಕ್ಕೆ ವಿಶೇಷವಾಗಿ ಗಮನವನ್ನು ಕೊಡದೆ ಪಾಮರರಿಗೆ ತಿಳಿವಹಾಗೆ ಬರೆಯುತ್ತೇನೆಂದು ಹೇಳುತ್ತಾನೆ. "ತಾನೆ ತನ್ನನು ತಿಳಿದು ತಾನೇ ತಾನೆಯಾಗಿಯೆ ತನ್ನಯನುಭವ ತುಂಬಿಕೊಂಡಿರಲು ಜ್ಞಾನಸಿಂಧುವು ಎಂಬ ಪೆಸರಾಯ್ತು" ಎಂದೂ ಇದರಲ್ಲಿ "ಸರ್ವಶಾಸ್ತ್ರಾರ್ಥವನು ಪೇಳ್ದೆ ಸರ್ವಗೀತೆಗಳರ್ಥಸಾರವನಿದಱೊಳಿರಿಸಿರ್ಪೆಂ" ಎಂದೂ ಕವಿ ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಚಿದಾನಂದಗುರುಸ್ತುತಿ ಇದೆ. ಅಧ್ಯಾಯಗಳ ಕೊನೆಯಲ್ಲಿ--ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯಶ್ರೀಚಿದಾನಂದ ಗುರುವರ್ಯಚರಣಪದ್ಮದ್ವಿರೇಫ ಶ್ರೀಚಿದಾನಂದಾವಧೂತವಿರಚಿತಜ್ಞಾನಸಿಂಧುಗ್ರಂಥದಲ್ಲಿ—ಎಂಬ ಗದ್ಯವಿದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಘಟಿಸುವನು ಸುಖದುಃಖವೆರಡನು | ತಳರುವನು ಸ್ವರ್ಗಕ್ಕೆ ನರಕಕೆ |
ಇಳೆಗೆ ತಿರುಗುವ ಸುಕೃತದುಷ್ಕೃತಫಲದ ಮುಖದಿಂದ ||
ಒಲ್ಲುವನು ಒಮಕಾಮ್ಯಬಳಸಿಯೆ | ಸುಟಿವ ನಾನಾಪದಗಳಲಿ ತಾ |
ನುಟಿವುಪಾಯವ ಕಾಣದಲೆ ಇಹ ಜೀವ ಕೇಳೆಂದ ||
ನುಡಿಯುದಾರನು ದುಷ್ಟವಚನವ | ಎಡಱುಕುತಲಿ ಹಿಂಸೆಗಳ ಕಂಡರೆ |
ಯುಡಗಿ ಮಾತಾಡುತ್ತ ಮೃದುವಾಕ್ಯಗಳ ನುಡಿಯುತ್ತ ||
ಕಡುನಿರಂತರತತ್ವಬೋಧೆಯು | ಪಡೆಗರ ಧನೆಲ್ಲರಿಗೆ ಹೇಳುತ |
ಪಡುತ ಸಂತಸವಿರಲು ವಾಙ್ಮಯತಪವದುವೆ ಎಂದ ||
ಅಚ್ಚಬೆಳುದಿಂಗಳಿನ ಪ್ರಭೆಗಳ | ಮುಚ್ಚಿಸಿಯೆ ಆನಂದಸುಖವನು |

ಹೆಚ್ಚಿಸಿಯೆ ಚಿಚ್ಚಿಂದುಕಳೆಗಳ ಕವಡಕೊಡಿಸಿಯೆ ಮೋಕ್ಷ ||
ಎಚ್ಚ ಜ್ಞನು ಮಱಸಿಯೆ ಅವಿದ್ಯೆಯ | ಕೊಚ್ಚಿಸಿಯೆ ಪರಿಪೂರ್ಣಪರವಶ |
ದಚ್ಚರಿಯ ಮಾಟಿಪ್ಪಾತನೇ ಸದ್ಗುರುವು ಕೇಳೆಂದ ||

## 2 ಪಂಚೀಕರಣ

ಇದರಲ್ಲಿ 15 ವಚನಗಳಿವೆ; ಪ್ರತಿವಚನವೂ ಚಿದಾನಂದಸದ್ಗುರ ಪ್ರಭುವೇ ಎಂದು ಮುಗಿಯುತ್ತದೆ. ಇದರಿಂದ ಒಂದುವಚನವನ್ನು ಉದಾಹರಿಸುತ್ತೇವೆ—

ಕೇಳಯ್ಯ ದೇಹ ಬೀಱಲು ಪೃಥ್ವಿ ಪೃಥ್ವಿಯ ಕೂಡಿತು; ಅಪ್ಪು ಅಪ್ಪ ಕೂಡಿತು; ತೇಜ ತೇಜವ ಕೂಡಿತು; ವಾಯು ವಾಯುವ ಕೂಡಿತು; ಆಕಾಶ ಆಕಾಶವ ಕೂಡಿತು; ಪಂಚಭೂತತತ್ವಂಗಳು ಆಯಾಭೂತತತ್ವಂಗಳಲ್ಲಿ ಕೂಡಿದುವು. ತತ್ವದ ಗುಣಂಗಳು ತತ್ವವ ಹೊಂದಿದುವು. ನೀನು ಅಂಗರಹಿತನು, ನೀನು ನಿರ್ವಿಕಾರನು, ನಿರ್ವಯಲಕ್ಷಣ ಚಿದಾನಂದಸದ್ಗುರುವೇ.

ಕೊನೆಯಲ್ಲಿ ಸ್ವಗುರುಸ್ತುತಿರೂಪವಾದ ಈ ಶ್ಲೋಕವಿದೆ—

ಶ್ರೀಮದದ್ವೈತವಾರಾಶಿ ಸಂಭೂತಾತ್ಮಸುಧಾಕರಂ |
ಚಿದಾನಂದಮಹಂ ವಂದೇ ಗುರುದೇವಮಹರ್ನಿಶಂ ||

## 3 ತತ್ವಚಿಂತಾಮಣಿ

ಇದು ಗದ್ಯರೂಪವಾಗಿದೆ; ಧ್ಯಾನಪರತತ್ವಚಂದ್ರೋದಯ, ವಿಶ್ವವಿರಾಟ್ಪುರುಷವಿವರ, ಜೀವೇಶ್ವರೈಕ್ಯವಿಚಾರ ಎಂಬ ವಿಭಾಗಗಳನ್ನು ಒಳಕೊಂಡಿದೆ. ಇದರಲ್ಲಿ ಪ್ರಣವನಾದಬಿಂದುಸ್ವರೂಪ, ಮಾಯಾಸ್ವರೂಪ, ಈಶ್ವರಸ್ವರೂಪ, ಆತ್ಮಸ್ವರೂಪ, ಪರಬ್ರಹ್ಮಸ್ವರೂಪ, ಮೋಕ್ಷಸ್ವರೂಪ ಮುಂತಾದ ವಿಷಯಗಳು ನಿರೂಪಿಸಲ್ಪಟ್ಟಿವೆ. ಪ್ರಕರಣಗಳ ಕೊನೆಯಲ್ಲಿ—ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀಚಿದಾನಂದಾವಧೂತವಿರಚಿತ ತತ್ವಚಿಂತಾಮಣಿಯೊಳ್-ಎಂಬಗದ್ಯವಿದೆ.

## 4 ನವಚಕ್ರಕುಲರೇಖಾಲಕ್ಷಣ

ಇದರಲ್ಲಿ ಶಿವಪಾರ್ವತೀಸಂವಾದರೂಪವಾದ ಶ್ಲೋಕಗಳನ್ನು ಉದಾ

ಹರಿಸಿ ಟೀಕೆಯನ್ನು ಬರೆದು ಗದ್ಯರೂಪವಾಗಿ ವೇದಾಂತವಿಷಯಗಳು ಹೇಳಿವೆ. ಗ್ರಂಥವು ಹೀಗೆ ಆರಂಭಿಸುತ್ತದೆ—

ಪರಮೇಶ್ವರನಂ ಕುರಿತು ಪಾರ್ವತಿ ಪರಬ್ರಹ್ಮೋಪಲಕ್ಷಣಸ್ವರೂಪವೆನಿಪ ತಾರಸಂಜ್ಞಾರ್ಥರಹಸ್ಯಂಗಳನು ಕೋಶಪ್ರತಿಕೋಶಮೆನಿಪ ಈ ಪರ್ಯಾಯನಾಮದಿಂ ಶ್ರುತಿಸಮ್ಮತಮಾಗಿ ಪೇಳಲುಚಿಕ್ಕುದೆಂದು ಪ್ರಶ್ನೆಗೆಯ್ಯುತ್ತಿರ್ದಾಳೆ.

## 5 ದೇವೀಮಾಹಾತ್ಮ್ಯ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 18, ಪದ್ಯ 796; ಸಂಸ್ಕೃತದೇವೀಮಾಹಾತ್ಮ್ಯದ ಭಾಷಾಂತರ. ತನ್ನ ಗುರು ಚಿದಾನಂದನ ಆಜ್ಞೆಯಿಂದ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಇದಕ್ಕೆ ಹಿಂದೆಯೇ ಜ್ಞಾನಸಿಂಧುವನ್ನು ರಚಿಸಿದಂತೆ ತಿಳಿಯುತ್ತದೆ. ಆರಂಭದಲ್ಲಿ ತುಂಗಭದ್ರಾತೀರದಲ್ಲಿರುವ ಅಯೋಧ್ಯೆಯನ್ನು ಪೊರೆವ ಚಿದಾನಂದಗುರುವಿನ ಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ದೇವಿಯಯುದ್ಧ

ಎಚ್ಚಿಸಿದಳ್ಳೆ ದೇವಿ ಧನುವನು | ಕಾಚ್ಚಿಸಿದಳಸುಗಳನು ದೈತ್ಯರ |
ತೂಟ್ದಳು ಕೂರ್ಗಣೆಯ ಗಚ್ಚಗಾಳಿಯುಲುಕೆಯದಂತೆ ||
ಹಾಚ್ದುವು ತಲೆ ಕುದುರೆಗಜಗಳ | ಸೋರಿಸುವ ರಕ್ತದಲಿ ದಿನಪನ |
ಚಾರುಕಿರಣಗಳಡಗಿದುವು ಕತ್ತಲೆಯು ಕವಿಯಿತ್ತು ||
ಎಲುವು ಚಾಸಿಂಗಗಳು ಕರುಳಿನ | ಒಲೆವ ಸೂಸಕ ತೊಂಡಲವು ಕೇಳ್ |
ಬಲುನೆಣವೆ ತೈಲಗಳು ತಿಳಿರಕುತಗಳೆ ಮಜ್ಜನವು ||
ಬಲಿದ ಮಿದುಳವು ಗಂಧಗಳು ತಾಂ | ಬಳಗಕೂಡಿಯೆ ಭೂತವ್ರಾತವು |
ಚೆಲುವನಿಂ ಮಾಡಿದುವು ಬಹುಮದುವೆಗಳ ಪೋರ್ಕಳದಿ ||

## 6 ಬಗಳಾಂಬಾಸ್ತೋತ್ರ

ಇದರಲ್ಲಿ 101 ಪದಗಳಿವೆ; ಗ್ರಂಥವು ಸಿದ್ಧಪರ್ವತವಾಸಿನಿಯಾದ

ಬಗಳಾಂಬೆಯ ಸ್ತುತಿರೂಪವಾಗಿದೆ. ಪ್ರತಿಪದದಲ್ಲಿಯೂ ಚಿದಾನಂದ ಎಂಬ ಅಂಕಿತವಿದೆ. ಇದರಿಂದ ಕೆಲವು ಪದಗಳನ್ನುತೆಗೆದು ಬರೆಯುತ್ತೇವೆ:

ಎಚ್ಚರಿಸುತ ಹಲಗೆ ಬಿದಿರಿಸುತಕರವಾಳ|ಚೀಚ್ಚಿ ಕೂಗಲು ನಡುಗೆ ದೈತ್ಯಜನಜಾಲ|
ತೂಚ್ಚದಳು ಸಿಡಿಲಂತೆ ಪರಬಲದೊಳಂಬ|ಧೀರೆಯು ಚಿದಾನಂದರಾಣಿಬಗಳಾಂಬ||
ಕರವಿಡಿಯೆ ಭಿಕ್ಷುಕನ ನೀನು ತತ್‌ಕ್ಷಣಕೆ | ದೊರೆಯೆನಿಸಿಕೊಂಡನವ ಸಕಲಭುವನಕ್ಕೆ |
ತಿರುಕತನವುಂಟೆ ಪರಬ್ರಹ್ಮಪರಶಿವಗೆ|ಗುರುಚಿದಾನಂದ ಬಗಳೆಯು ಒಲಿಯಲವಗೆ||

7 ಕಾಮವಿಡಂಬನ

ಇದರಲ್ಲಿ 110 ಪದಗಳಿವೆ. ಇವಕ್ಕೆ ಹೋಳಿಪದಗಳು ಎಂಬ ಹೆಸರೂ ಉಂಟು. ಆರಂಭದಲ್ಲಿ ಈ ಪಲ್ಲವಿ ಇದೆ---

ದುಮ್ಮಸಾಲು ಕಾಮನಿಂಗೆ | ದುಮ್ಮ ತಜ್ಜನಕನಿಂಗೆ |
ನೆಮ್ಮ ಭಜಿಸಿ ನಿಜವನರಿತು ಕಾಮಹರನನು ||

ಈ ಗ್ರಂಥದಿಂದ ಕೆಲವು ಪದಗಳನ್ನು ಉದ್ಧರಿಸಿ ಬರೆಯುತ್ತೇವೆ---

ಜೀವ ತೋರ್ಪ ಬ್ರಹ್ಮದೊಳಗೆ | ತಾವದೆಲ್ಲ ಭೇದಕಿಹುದು |
ಸಾವು ಪುಟ್ಟು ತೋರ್ಕೆ ಮಾಯೆಯಾತ್ಮಗಿಲ್ಲವು ||
ಆವನಾದಡೇನು ನರನು | ಭಾವಶುದ್ಧಿಯಿರಲು ಶ್ರೇಷ್ಠ |
ಭಾವಿಸುವಡೆ ಜಾತಿನೀತಿಕುಲಗಳಿಲ್ಲವು ||
ಬೇಡಿದವರಿಗೀಯಲಾಜ | ನೋಡಿನೋಡಿ ಹಿಗ್ಗುತಿರುವ |
ಮೋಡಿತನದಿ ಹೆಜ್ಜರು ಕೊಂಬರೆನುತಲಂಜುವ ||
ಮೂಢನಾಗಿ ದಿಟವ ಮರೆತು | ಗಾಢಧನದ ತೃಷ್ಣೆಯಿಂದ |
ಕೇಡು ಕಡೆಗೆ ಬಹುದ ತಿಳಿದುತಿಳಿದು ಕೆಡುವನ್ನೆ ||
ನಚ್ಚಿದವರ ಕೊರಳ ಕೊಯ್ದು | ಬೆಚ್ಚಿದವರ ಬೆಸುಗೆಬಿಡಿಸಿ |
ಮೆಚ್ಚಿದವರ ಮೋಸಗೊಳಿಸಿ ಧನವ ಗಳಿಸುತ ||
ಮಿಂಚಿ ಬರಲು ಸಟೆಯ ನುಡಿದು | ಹಂಚಿ ಬದುಕಲೆಳಸಿದವಗೆ |
ಪಂಚಕಾರಗೊಡದೆ ಬಿಡರು ಯಮನ ದೂತರು ||

## 8 ಚಿದಾನಂದರ ವಚನ

ವಚನ ಎಂಬ ಹೆಸರಿದ್ದರೂ ಇವು ಹಾಡುಗಳಾಗಿವೆ. ಒಂದನ್ನು ಉದಾಹರಿಸುತ್ತೇವೆ—

ರಾಗ ಕಾಂಬೋದಿ-ಆದಿತಾಳ

ಪಲ್ಲವಿ॥ ಸಾಧನವೇಕೆ ಸಾಧನವೇಕೆ । ಸುದ್ಗುರುನಾಥನ ಸನ್ನಿಧಿಯಿರಲಿಕೆ ॥
ಯಮನಿಯಮಾಸನವೆಂಬುವು ಏಕೆ । ಕಮಲಾಸನವನು ಬಲಿಯಲದೇಕೆ ।
ಶ್ರಮದಲಿ ವಾಯುವ ಬಿಗಿಯಲದೇಕೆ । ಭ್ರಮಿತದಿ ಬ್ರಹ್ಮವ ಕೂಡಲದೇಕೆ ॥1॥
ಮಿತಿಯಾಹಾರವ ಮಾಡಲದೇಕ । ಅತಿವೈರಾಗ್ಯವ ಪಡೆಯಲದೇಕೆ ।
ಸತತವು ಕಾಡನು ಸೇರುವುದೇಕೆ । ಮತಿ ತಿಳಿಯದೆ ಒಡಾಡುವುದೇಕೆ॥2॥
ಶರಧಿರೆ ಒಟ್ಟಿತಿಯ ತೋರುವುದೇಕೆ । ತರಣಿರ ದೀವಿಗೆಗೆಣ್ಣೆಯದೇಕೆ ।
ಗುರುಚಿದಾನಂದನಿರೆ ಯೋಗಗಳೇಕೆ । ಕರಹಕರಣದಿ ಗುರು ಬಂದಿರಲಿಕ್ಕೆ ॥3॥

---

## ಮಹಾಲಕ್ಷ್ಮಿ ಸು. 1750

ಈಕೆ ಶ್ರೀರಾಮಪಟ್ಟಾಭಿಷೇಕವನ್ನು ಬರೆದಿದ್ದಾಳೆ. ಇವಳು ಬ್ರಾಹ್ಮಣಕವಿ; ಚಾವಡಿರಂಗಭಟ್ಟನ ಮಗಳು. ಇವಳ ಸ್ಥಳ ಪಶ್ಚಿಮಸಮುದ್ರತೀರದಲ್ಲಿ "ಸ್ಥಿರಪಡೆಯಾಗಿ ಕನ್ನಡದ ನುಡಿವೆಣ್ಣಿಗೆ ಛತ್ರ್ಯವುಂದಿರವಾಗಿ ಸುಖಕೆ ಬೀಡಾಗಿ" ಮೆರೆವ ಉಡುಪಪುರ (ಉಡುಪಿ) ವೆಂಬ ಕ್ಷೇತ್ರವು. ಚಂಗಳದೇವಿಯ ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾಳೆ. ಪೂರ್ವಕವಿಗಳಲ್ಲಿ ವ್ಯಾಸ, ವಾಲ್ಮೀಕಿ, ಜೈಮಿನಿ ಪಿಂಗಳ, ಭವಭೂತಿ, ಶೂದ್ರಕ, ಕಾಳಿದಾಸ, ಬಾಣ ಈ ಸಂಸ್ಕೃತಕವಿಗಳನ್ನು ಚಂದ್ರಭಟ್ಟ, ಕೇಶವ, ನಂದಿ, ವಾಸುದೇವ, ಅಚ್ಯುತ, ಷಡಕ್ಷರಿ, ದಿಗಂಬರವಿಲಾಸ, ರುದ್ರ, ವೆಂಕಟಕೃಷ್ಣ ಈ ಕನ್ನಡ ಕವಿಗಳನ್ನೂ ಸ್ಮರಿಸಿದ್ದಾಳೆ. ಷಡಕ್ಷರಿಯನ್ನು (1655) ಸ್ಮರಿಸುವುದರಿಂದ ಆತನ ಕಾಲಕ್ಕಿಂತ ಈಚೆಯವಳು ಎಂಬುದು ಸ್ಪಷ್ಟವಾಗಿದೆ. ಸುಮಾರು 1750 ರಲ್ಲಿ ಇದ್ದಿರಬಹುದೆಂದು ತೋರುತ್ತದೆ[1].

---

1. ಕೆಲವರು ಈ ಗ್ರಂಥವನ್ನೂ ಇನ್ನೂ ಕೆಲವು ಗ್ರಂಥಗಳನ್ನೂ ದಕ್ಷಿಣ ಕನ್ನಡಜಿಲ್ಲೆಯಲ್ಲಿದ್ದ ಸುಮಾರು 16 ವರ್ಷಗಳ ಹಿಂದೆ ಗತಿಸಿದ ನಂದಳಿಗೆ ಲಕ್ಷ್ಮೀನಾರಣಪ್ಪನು ರಚಿಸಿ ನಾಮಾಂತರದಿಂದ ಪ್ರಕಟಿಸಿರುವುದಾಗಿ ಹೇಳುತ್ತಾರೆ.

ಇವಳ ಗ್ರಂಥ

### ಶ್ರೀರಾಮಪಟ್ಟಾಭಿಷೇಕ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 5, ಪದ್ಯ 247. ಶ್ರೀರಾಮನು ವಿಭೀಷಣನಿಗೆ ಲಂಕೆಯಲ್ಲಿ ರಾಜ್ಯಾಭಿಷೇಕವನ್ನು ಮಾಡಿ ಪುಷ್ಪಕದಲ್ಲಿ ಪರಿವಾರದೊಡನೆ ನಂದಿಗ್ರಾಮಕ್ಕೆ ಬಂದು ಭರತನಿಗೆ ದರ್ಶನವನ್ನು ಕೊಟ್ಟು ಅವನೊಡನೆ ಅಯೋಧ್ಯೆಗೆ ಹೋಗಿ ಪಟ್ಟಾಭಿಷಿಕ್ತನಾದನು—ಎಂಬುದೇ ಈ ಗ್ರಂಥದ ಕಥಾಸಾರ. ಈ ಕಥೆಯನ್ನು ಆದಿಶೇಷನು ವಾತ್ಸ್ಯಾಯನನಿಗೆ ಹೇಳಿದಂತೆ ಹೇಳುತ್ತಾಳೆ. ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣಪತಿ, ಸರಸ್ವತಿ, ವಿಷ್ಣು, ಆಂಜನೇಯ, ವಾಯು ಇವರುಗಳನ್ನು ಸ್ತುತಿಸಿದ್ದಾಳೆ. ಗ್ರಂಥವು ತಕ್ಕಮಟ್ಟಿಗೆ ಪ್ರೌಢವಾಗಿದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಸಮುದ್ರ

ಏನಿದಚ್ಚರಿ ಬೇಡಿದರ್ಗೆ ಕರಿತುರಗಭೂ | ಧೇನುನವರತ್ನಕನ್ಯಾಕಲ್ಪಭೂರುಹನ |
ವೀನಪೀಯೂಷವಸ್ತ್ರಾಭರಣಗೇಹನಿಜದೇಹಂಗಳಂ ಮಾಣದೆ ||
ದಾನವಿತ್ತಾದುದೇನಿಪ್ಪುದೆಮಗೀಯಲೆಂ | ದಾನೀರದಂಗಳಬ್ಧಿಯನಳ್ಕಿ ಬೇಡಿದೊಡೆ |
ತಾನಂಜಿದನೆ ಜೀವನಂಗೊಟ್ಟನೆನೆ ಚಿತ್ರಮಲ್ತೆ ಧಾರ್ಮಿಕರ ಚರಿತಂ ||

ಅಡಿಗಡಿಗೆ ಬರ್ಪ ಬಲ್ತೆರೆಗಳೇ ರೋಗಂಗ |
ಳೊಡನೆಟ್ಟಿ ಕಲ್ಲೋಲವಾಲೆಯೆ ಬೆದರ್ಕೆ ಸಂ |
ಗಡಿಸಿರ್ಪ ಸುಳಿಗಳೇ ರಾಗಂಗಳೀಜಲಧಿಯ ಪಿರಿತನಂ ಬಡತನ ವಲಂ ||
ಬಡಬಾನಲಂ ಚಿಂತೆ ದುಃಖಮೆ ಪೊನಲ್ ಬಾಳ್ಕೆ |
ಗಡ ಗುಳ್ಳೆ ಬೆಳ್ನೊರೆಯೆ ಸಂತಸಂ ಸುಖಮೆ ಮೇಲ್ |
ಸಿಡಿವ ಸೀರ್ಪನಿಯೆನಲ್ ಶರಧಿ ಭವಶರಧಿಯುಂ ಪೋಲ್ತೆಸೆದುದಚ್ಚರಿಯೆನೆ ||

ಶ್ರೀರಾಮ

ವಸುಧೆಯಂ ಪೊರೆದು ದುಷ್ಕರನಿಕ್ಕಿ ಪೊತ್ತ ಬೆ |
ಳ್ಳಸದೆಸಕಮಲ್ಲದೆ ಕಿರೀಟದೀಧಿತಿಯಲ್ಲ |

ಮೊಸೆದ ಜಯುರನೆಯು ಮೇಖಲೆಯು ಪೊಳೆಪಲ್ಲದಿದು ಕೇಯೂರಕಾಂತಿಯಲ್ಲ ||
ನಿಸದಂ ಪ್ರತಾಪದತಿಶಯಮಲ್ಲದಿದು ಮೇಲೆ |
ಮಿಸುಪ ಮಾಣಿಕದ ಪದಕದ ಶೋಭೆಯಲ್ಲಮೆನೆ |
ಪಸದನಂ ಪೊಸತೊಂದುಮಾಟಿಕ್ಕಿಯಿಂದೆನೆಯೆ ಪಟ್ಟಾಭಿರಾಮಂ ಬಂದನು ||

## ಋಷಿಕೃತರಾಮಸ್ತುತಿ.

ಉಟ್ಟ ಪೀತಾಂಬರದ ನಿಱಿಯು ನುಣ್ಪಿಡಿದ ಪಣೆ |
ಗಿಟ್ಟ ಪುಂಡ್ರತ್ರಯದ ತುಳಸಿಮಾಲಿಕೆಯೊಡನೆ |
ತೊಟ್ಟ ನೀವೀತಾಗ್ರದೆಸೆವ ಕೃಷ್ಣಾಜಿನದ ಮೇಲ್ವಾಯ್ತು ಚೆಲ್ವಿನಿಂದ ||
ಪುಟ್ಟವಾಮನನಾಗಿ ಬೇಡಿ ಭೂಮಿಯನೆರಡು |
ದಟ್ಟಡಿಯೊಳೊಳಕೊಂಡು ಬಲಿಯಂ ರಸಾತಳಕೆ |
ಮೆಟ್ಟಿ ಪಾಲಿಸಿದೈ ಸುರರ್ಕಳಂ ದನುಜಭೀತರ್ಕಳುಮನಕ್ಕಱಿಂದ ||
ವಿಷಯದುರ್ವಿಷಯಂಗಳೊಳ್ ಬೆರೆಯದೇಕಾಗ್ರ |
ದೆಸಕಮಂ ತಳೆದು ರಿಪುವರ್ಗರಿಪುವರ್ಗಮಂ |
ದೆಸೆಗೆಡಿಸಿ ಸಂಗತಸುಹೃತ್ಸುಹೃದರಿಂ ಪರಮಜೀವಸಮಭಾವದಿಂದ ||
ಪೊಸರಾಜಯೋಗಘನಯೋಗರಾಜ್ಯಮನೆ ಸಾ |
ಧಿಸವೇಳ್ಪುದವಿಳಸಾಧುಗಳೆಂದು ಶಾಯ್ಗೆ ಬೋ |
ಧಿಸುವ ನೆವದಿಂದಱಿಪಿದೈ ಸಾಂಖ್ಯತತ್ವಮಂ ಮಹಿಯೊಳ್ ಮುನೀಂದ್ರನಾಗಿ ||
ನೊಂದೆವಳುಕಿದೆವಗಿದೆವಱಿದೆವುಱಿದೆವು ಬೆದೆಯೊ |
ಳೊಂದಿದೆವು ಕಂದಿದೆವು ಕುಂದಿದೆವು ಬಗೆಗೆಟ್ಟು |
ಬೆಂದೆವು ಬಿಗುರ್ತೆವಡಿಗಡಿಗೆ ಬಾಯ್ವೊಯ್ದು ಬಿಸುಸುಯ್ದು ಬೈದೆವು ಬಿದಿಯನು ||
ಬಂದಣಾದೆ ಬಾಱಿದ್ದಿನ್ನೆಗಮಕಟ ದಾನವನ |
ದಾಂಧನುಪಹತಿ ಸಾಕುಸಾಕು ಕಾದೈಯೆಮ್ಮ |
ತಂದೆ ದಯೆಗೆಯ್ದುಱಿಪಿದೈ ನಿಜಾಶ್ರಿತರನಿಂದಿಗೆ ಕೃತಾರ್ಥರೆವೆಂದರು ||

———

## ಮುದ್ದಣ್ಣ ಸು 1750

ಈತನು ರಾಮಾಶ್ವಮೇಧವನ್ನು ಬರೆದಿದ್ದಾನೆ. “ ಬೈಗುಂಬೊೞ್ತಿನೊಳೆಂದಿನಂತಿರೋಲಗಂ ಪರಿಯೆ ಕಬ್ಬಿಗರಬಲ್ಲಹಂ ಮುದ್ದಣನರಮನೆಯಿಂ ಪೊರಮಟ್ಟು ” ಎಂಬುದರಿಂದ ಇವನು ಒಬ್ಬ ರಾಜನಲ್ಲಿ ಆಸ್ಥಾನ ಕವಿಯಾಗಿದ್ದಂತೆ ತೋರುತ್ತದೆ. ಈ ಕಥೆಯನ್ನು ತನ್ನ ಹೆಂಡತಿಯಾದ ಮನೋರಮೆಗೆ ಹೇಳಿದಂತೆ ತಿಳಿಯುತ್ತದೆ. ಒಂದು ಕಡೆ ಭೋಜಪ್ರಬಂಧ, ವಿಕ್ರಮವಿಜಯ, ಮಹಾವೀರಚರಿತ ಈ ಪೂರ್ವಗ್ರಂಥಗಳ ಹೆಸರು ಪ್ರಸ್ತಾವತ್ವೇನ ಉಕ್ತವಾಗಿದೆ. ಕವಿಯ ಕಾಲವು ಇಂಥದೆಂದು ನಿರ್ಧರಿಸಲು ಆಧಾರವಿಲ್ಲ. ಸುಮಾರು 1750 ರಲ್ಲಿ ಇದ್ದಿರಬಹುದೋ ಏನೋ ತಿಳಿಯದು.[1]

### ಇವನ ಗ್ರಂಥ

#### ರಾಮಾಶ್ವಮೇಧ

ಇದು ಗದ್ಯಗ್ರಂಥ; ಹಳಗನ್ನಡದಲ್ಲಿ ಬರೆದಿದೆ; 16 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ. ಇದಕ್ಕೆ ಶೇಷರಾಮಾಯಣ ಎಂಬ ಹೆಸರೂ ಉಂಟು. ಇದರಲ್ಲಿ ಪಾದ್ಮಪುರಾಣೋಕ್ತವಾದ ರಾಮಾಶ್ವಮೇಧಕಥೆ ಹೇಳಿದೆ. ಈ ಕಥೆಯನ್ನು ಆದಿಶೇಷನು ವಾತ್ಸ್ಯಾಯನನಿಗೆ ಹೇಳಿದಂತೆ ಆ ಪುರಾಣದಿಂದ ತಿಳಿಯುತ್ತದೆ ಈ ಗ್ರಂಥವನ್ನು ಅಲ್ಲಲ್ಲಿ ಸಂಸ್ಕೃತಪದಗಳನ್ನು ಸೇರಿಸಿ ತಿರುಳ್ಗನ್ನಡದಲ್ಲಿ ಬರೆವುದಾಗಿ “ಕರ್ಮಣಿಸರದೊಳ್ ಚೆಂಬವಳಮುಂ ಕೋದಂತಿರೆ ರಸವೊಸರೆ ಲಕ್ಕಣಂ ಮಿಕ್ಕಿರೆ ಎಡೆಯೆಡೆಯೊಳ್ ಸಕ್ಕದದ ನಲ್ನುಡಿ

---

1. ಈ ಗ್ರಂಥವನ್ನೂ ನಂದಳಿಗೆ ಲಕ್ಷ್ಮೀನಾರಣಪ್ಪನು ರಚಿಸಿ ನಾಮಾಂತರದಿಂದ ಪ್ರಕಟಿಸಿರುವುದಾಗಿ ಕೆಲವರು ಹೇಳುತ್ತಾರೆ 81 ನೆಯ ಪುಟವನ್ನು ನೋಡಿ. ಆದರೆ ಈ ಗ್ರಂಥವನ್ನು ಮುದ್ರಿಸಿದ ಕಾ.ವ.ಕಲಾನಿಧಿಸಂಪಾದಕರು ಕೆಲವು ಕಾರಣಗಳನ್ನು ಕೊಟ್ಟು ಹೀಗಿರಲಾರದೆಂದು ಬರೆದಿದ್ದಾರೆ

ಮೆಚ್ಚಿಯ ತಿರುಳ್ಗನ್ನಡದೊಳ್ ಕತೆಯನುಸಿರ್ವೆಂ" ಎಂಬ ಭಾಗದಲ್ಲಿ ಕವಿ ಹೇಳುತ್ತಾನೆ

ಹಳಗನ್ನಡದ ಗದ್ಯಗ್ರಂಥಗಳು ವಿರಳವಾಗಿವೆ ರಾಮಾಶ್ವಮೇಧವು ಪ್ರೌಢಗ್ರಂಥವಲ್ಲದಿದ್ದರೂ ಭಾಷಾಜ್ಞಾನಕ್ಕೆ ಬಹಳ ಸಹಕಾರಿಯಾಗಿದೆ ಇದರಿಂದ ಸ್ವಲ್ಪಭಾಗವನ್ನು ತೆಗೆದು ಬರೆಯುತ್ತೇವೆ —

### ವಸಂತ

ಮಾಮರನೆಳದಳಿರ ರಸಮಂ ಪಿಟ್ಟಿದು ಕಳಕಂಠನ ಕಂಠನಾಳಕ್ಕೆ ಅಡರುಬ್ಬಸಮಂ ಕಳೆದು ಕಲನಾದಮಂ ಸೆರ್ಚಿಸಿಯುಂ, ಅರನೇಱಿ ಉದ್ದೋರೆವಣ್ಣಂ ತೇದು ನಕ್ಕ ಸುತರಗಿಳಿಯ ನಾಲಗೆಯುಂ ತೆಳ್ಪನಾಗಿಸಿ ತೊದಳ್ನುಡಿಯಂ ತಿದ್ದಿಯುಂ, ಪುಷ್ಪಧೂಳಿಯುಂ ತೆಪ್ಪಂಬಟ್ಟೆದದಿಮ್ಮೇಱೆತ್ತಿಯ ಸುರಯಿಯ ಪೊಸಬಂಡನೊಡಲ್ಗಿತ್ತು ಮಱ ದುಂಬಿಗಳ್ಗೆ ಸಂಪಗೆಯುತ್ತಣಿಸೊದವಿದ ಶಿರೋಭ್ರಮಣಮನಱಿಯಿಸಿಯುಂ, ಬಸಂತಂ ಬೆಜ್ಜನೆನೆ ಮ್ಮೆದೋಱಲೊಡಂ; ಅಂದು ಕೋಡುಕೋಡಿಂದೋಡಿ ಮಲಯಮಂ ಮುಟ್ಟಿಗೊಂಡ ಪವನನೀಗಳತ್ತಣಿಂ ಪೊಱಮಟ್ಟು ಮೆಲ್ಲಮೆಲ್ಲನೆಡೆಯೆಡೆಯ; ಬನಬನಮಂ ಪುಗುತಂದು ಸೊಂಚಿ ಮುಂಚಿ ಕೆಳೆಯಂಗೆ ನೆರವಾದನೆನೆ ದಕ್ಷಿಣಾನಿಲಂ ಮಂದಂ ಮಂದಂ ವಱಸುತ್ತಿರ್ಕೆ; ಫಲವೃಕ್ಷಂಗಳೆಲ್ಲಂ ಕಾಯ್ ಕಸುಗಾಯ್ ಪಣ್ ದೋರೆವಣ್ ತನಿವಣ್ಗಳಿಂದೆಸೆಯೆಯುಂ, ಗಿಡುಗಳೆಲ್ಲಂ ತಳಿರ್ ಚೆಂದಳಿರೆಳದಳಿರೆಲೆಬೆಳ್ಳೆಲೆಪಸುರೆಲೆಪಣ್ಣೆಲೆಗಳಿಂ ರಂಜಿಸೆಯುಂ, ಪೂವಳ್ಳಿಗಳ್ ನನೆಕೊನೆಮುಗುಳರೆಮುಗುಳ್ ಬಿರಿಮುಗುಳಲರ್ವೊಸಮಲರ್ಗಳಿಂದೆ ಸೊಗಯಿಸೆಯುಂ ಮನೋಹರಮಾಯ್ತು ಪೊಸಸುಗ್ಗಿ.

---

## ಚೆನ್ನಪ್ಪ ಸು 1750

ಈತನು ಶಿವಶರಣಲೀಲಾಮೃತವನ್ನು ಬರೆದಿದ್ದಾನೆ ಇವನು ವೀರಶೈವಕವಿ; ಇವನ ಸ್ಥಳ ಹೆಂಚೆಗೆ ದಕ್ಷಿಣದಲ್ಲಿರುವ ನಿಡುಗಲ್ಲು; ಈ ಊರ ಪೇಟೆಯ ಬಸವನಗುಡಿಯಲ್ಲಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾನೆ ಇವನ ಗುರು ಪಂಚವಣ್ಣಿಗೆ ಚೆನ್ನಮಲ್ಲಿಕಾರ್ಜುನ. ಪೂರ್ವಕವಿಗಳಲ್ಲಿ ಗುಬ್ಬಿಯಮಲ್ಲಣಾರ್ಯನನ್ನು (1530) ಸ್ಮರಿಸುವುದರಿಂದ ಇವನ ಕಾಲಕ್ಕೆ

ಈಚೆಯವನು ಎಂಬುದು ಸ್ಪಷ್ಟವಾಗಿದೆ. ಸುಮಾರು 200 ವರ್ಷಗಳಿಗ ಹಿಂದೆ ಇದ್ದನೆಂದು ಹೇಳುತ್ತಾರೆ. ಇವನ ಕಾಲವು ಸುಮಾರು 1750 ಆಗಬಹುದು. ಸುಮಾರು 1825 ರಲ್ಲಿ ಮುಮ್ಮಡಿಕೃಷ್ಣರಾಜನ ಆಳಿಕೆಯಲ್ಲಿ ಹುಟ್ಟಿದ ಸಿರಿಯಾಳಚರಿತ್ರೆ ಎಂಬ ಯಕ್ಷಗಾನವು ಶಿವಶರಣಲೀಲಾಮೃತದ ಆಧಾರದಿಂದ ರಚಿತವಾಯಿತೆಂದು ಆ ಗ್ರಂಥದಲ್ಲಿ ಹೇಳಿದೆ.

ಪೂರ್ವಕವಿಗಳಲ್ಲಿ ಹರೀಶ್ವರ, ರಾಘವಾಂಕ, ಸೋಮನಾಥ, ಪದರಸ, ಭೀಮಕವಿ, ಚಾಮರಸ, ನಿಜಗುಣಶಿವಯೋಗಿ, ಗುಬ್ಬಿಮಲ್ಲಣಾರ್ಯ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

ಶಿವಶರಣಲೀಲಾಮೃತ

ಇದು ಯಕ್ಷಗಾನದಲ್ಲಿ ಬರೆದಿದೆ; ಸಂಧಿ 11. ಇದರಲ್ಲಿ ಬಸವನ ಮತ್ತು ಅವನ ಕಾಲದಲ್ಲಿದ್ದ ಪುರಾತನರ ಚರಿತವು ಹೇಳಿದೆ. ಗ್ರಂಥದಲ್ಲಿ ಉಕ್ತವಾದ ವಿಷಯವನ್ನು ಕವಿ ಹೀಗೆ ಸೂಚಿಸಿದ್ದಾನೆ—

ಹಿಂದೆ ಕಾಳಗದಲ್ಲಿ ಹೆಚ್ಚು ಕಡಿದಾಡಿ | ಸಂದುಹೋದವರ ಕಥೆ ಸಾಟಿಯಿದಕಲ್ಲ |
ಹಾದರವು ಹುಸಿ ಕಳವು ಅನ್ಯಾಯದಿಂದ|ಕಾದಿ ಸತ್ತವರ ಕಥೆ ಕಾವ್ಯವು ಇದಲ್ಲ |
ಸಂಗನಾ ಶರಣರು ಭಕ್ತಜನರು | ಮಂಗಳಾತ್ಮಕಶಿವನ ಮಹಿಮೆಯಾಂ ಮೆರೆದು |
ಮುಂದೆ ಮುಕ್ತಿಯ ಪಡೆವ ಮುದದಿಂದಶಿವನ | ಹೊಂದಿ ಪುಷ್ಪಕವೇರಿ ಹೋದ ಮಹಿಮೆಯನು |
ಅಂದಚಂದವು ಪುಟ್ಟಿ ಅತಿಯೊಪ್ಪವಿಟ್ಟು | ಚಂದವಿಂ ಪೇಳ್ವೆ ಶಾಶ್ವತವಾಗಿರೆ ||

---

ಬ್ರಹ್ಮ ಸು 1750

ಈತನು ವೈದ್ಯಕಂದವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಬಡಗನಾಡಿನವನು; ಋಗ್ವೇದಿ; ಭಾರದ್ವಾಜಗೋತ್ರದವನು. ಇವನ ಪಿತಾಮಹನು ಹಂಪೆಯ ಕ್ಷೇತ್ರಕ್ಕೆ ಪಶ್ಚಿಮದಲ್ಲಿರುವ ಕೊಟ್ಟೂರುಸೀಮೆಯೊಳಗಣ ಇಟ್ಟಿಗೆಯ ಕುಲಕರ್ಣಿ ಸೂರ್ಯರಾಯ, ತಂದೆ ಹನುಮಪ್ಪದಾಸ,

ತಾಯಿ ಭಾಗಾಂಬೆ, ಇಷ್ಟದೈವ ಭಂಡೆಯರಂಗ, ಚರಕ, ಸುಶ್ರುತ, ಬಾಹಟ, ಶಾರ್ಙ್ಗಧರ ಮುಂತಾದವರ ಗ್ರಂಥಗಳಲ್ಲಿರುವ ಅಂಶಗಳನ್ನು ಸಂಗ್ರಹಿಸಿ ಬರೆದಂತೆ ಕವಿ ಹೇಳುತ್ತಾನೆ. ಇವನ ಕಾಲವು ಸುಮಾರು 1750 ಆಗಿರಬಹುದು.

ಇವನ ಗ್ರಂಥ

### ವೈದ್ಯಕಂದ

ಇದರಲ್ಲಿ 616 ಪದ್ಯಗಳಿವೆ. ವೈದ್ಯಶಾಸ್ತ್ರವು ಋಗ್ವೇದಕ್ಕೆ ಉಪವೇದವಾದ ಆಯುರ್ವೇದವೆಂದೂ ಅದನ್ನು ಚೆನ್ನಾಗಿ ಕಲಿತು ಚಿಕಿತ್ಸೆಮಾಡಿದರೆ ದೋಷವಿಲ್ಲವೆಂದೂ ಕವಿ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಭಂಡೆಯರಂಗನ ಸ್ತುತಿ ಇದೆ. ಕೊನೆಯಲ್ಲಿ—ಇತಿ ಶ್ರೀಸೂರ್ಯರಾಯವಂಶೋತ್ತಂಸೇನ ಶ್ರೀಮದ್ಭಂಡೆರಂಗಪದಪಂಕರಣಧುರೀಣಮೂಮ್ಮಯಾಮಾತ್ಯೇನ ವಿರಚಿತಮಪ್ಪ ವೈದ್ಯಕಂದಪದ—ಎಂದಿದೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ತೊಲೆಹಿಪ್ಪಲಿಯನು ಹುರವುದು | ತಿಲತೈಲದಿ ಕಲ್ಲುಸಕ್ಕರೆಯ ಕೂಡಿಸುತಂ |
ಬಲುಹುರುಳಿಯ ಕಟ್ಟಿನೊಳಂ| ಕಲಸುತ ಕೊಡಲೊಸನೆ ಕೆಡುವುದಸಬದಖಾಸಂ||
ಧೂಪವಕೊಡುವ್ರದಜಿ'ಂದಂ | ಲೇಪನವಭ್ಯಂಗರಕ್ತಮೋಕ್ಷಣದಿಂದಂ |
ವ್ಯಾಪಿಸಿದ ಮೂಲರೋಗಂ | ತಾ ಪರಿಹರವಹುದು ಸಿದ್ಧಬಾಹಟಮತದಿಂ ||

---

## ವಿರಕ್ತಷಡಕ್ಷರಯ್ಯ ಸು 1750

ಈತನು ವಚನಗಳು, ಶಿವಪೂಜಾಷ್ಟಕ, ಶಿವಯೋಗಾಷ್ಟಕ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನಿಗೆ ಯರಗಂಬಳಿ ಸಿದ್ಧಲಿಂಗ ಎಂಬ ಹೆಸರೂ ಇದ್ದಂತೆ ತೋರುತ್ತದೆ. ತನ್ನ ಇಷ್ಟದೇವತೆಯನ್ನು ಉಕ್ಕಪುರವಾಸ ಎಂದು ಸಂಬೋಧಿಸುತ್ತಾನೆ. ಗ್ರಂಥಾಂತ್ಯದಲ್ಲಿ ಧಾರವಾಡದ ಮಠದ ಚೆನ್ನವೃಷಭನನ್ನು ಸ್ಮರಿಸಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥಗಳಲ್ಲಿ

1 ವಚನಗಳು

ವಚನಗಳು ಎಂಬ ಹೆಸರಿದ್ದರೂ ಈ ಗ್ರಂಥವು ಹಾಡುಗಳಂತಿರುವ ನಾನಾವಿಧ ಷಟ್ಪದಿಗಳಲ್ಲಿ ಬರೆದಿದೆ; ಶಿವಸ್ತುತಿರೂಪವಾಗಿಯೂ ವೇದಾಂತ ಬೋಧಕವಾಗಿಯೂ ಇದೆ ಷಡಕ್ಷರಯ್ಯ ಎಂಬ ಅಂಕಿತವು ಅಲ್ಲಲ್ಲಿ ದೊರೆಯುತ್ತದೆ. ಈ ಗ್ರಂಥಕ್ಕೆ ಕೈವಲ್ಯಪದ್ಧತಿ ಎಂಬ ಹೆಸರೂ ಇರುವಂತೆ ತೋರುತ್ತದೆ. ಇವನ ಉಕ್ತಿಗಳು ಬಹಳಲಲಿತವಾಗಿಯೂ ಭಕ್ತಿಭರಿತವಾಗಿಯೂ ಇವೆ ಕೆಲವು ಪದ್ಯಗಳನ್ನು ಉದಾಹರಿಸುತ್ತೇವೆ—

ಎನ್ನ ಕಾಲುಗಳೆರಡು | ಮುನ್ನತ್ತಿದ ಕಂಭವೈ | ಎನ್ನ ಒಡಲೇ ನಿನಗೆ ದೇವಾಲಯ |
ಎನ್ನ ತೋಳುಗಳೆರಡು | ಮುನ್ನತ್ತಿದ ಮದನಕೈ | ಎನ್ನ ಶಿರ ಸೌವರ್ಣಕಳಶವಯ್ಯಾ ||
ಹಸಿವ ತೃಷೆಗಳಡಗಿ ತನುವು | ಹೂಸಿದು ಹುಸಿಯು ಮಾಡುತಿರಲು |
ಬಿಸಿಲುಕಾಲ ಪತ್ತಿ ಬೆಂಕೆ ನೆತ್ತಿಯುಡರಲು ||
ಕುಸಿದು ಕುಗ್ಗಿ ಧರೆಗೆ ಬದ್ದು | ಮಸುವನಟ್ಟ ಸಮಯದಲ್ಲಿ |
ಸಸಿನೆ ಬಿಡದೆ ಶಿವನ ನೆನೆವುದೆಂದಿಗಪ್ಪುದೋ ||
ಕೆಱೆ ತೊಱೆ ಮಡು ದೊಣೆ ಪರಿವಾ ನಿರ್ಝರ | ಗಿರಿ ಗುಹೆ ವನಲತೆ ಪರ್ಬರ ಕಾನನ |
ಸರರುಹಕೊಳದೊಳು ದುಮುಕುವ ನದಿತಟದೊಳು ಶಶಿಶಿಲೆಯೊಳಗೆ ||
ಅಱೆಯೊಳು ಪುಳಿನಸ್ಥಳದೊಳು ನಿರ್ಮಳ | ಪರಮಸುಖಸ್ಥಳದೊಳು ಘನಲಿಂಗಕೆ |
ಹಗುಹದಿ ಪೂಜೆಯ ಮಾಡುವ ಶಿವಸುಖವೆಂದಿಗೆ ದೊರಕುವುದೋ ||

2 ಶಿವಪೂಜಾಷ್ಟಕ

ಇದರಲ್ಲಿ 9 ಕಂದಗಳಿವೆ. ಒಂದೆರಡನ್ನು ತೆಗೆದು ಬರೆಯುತ್ತೇವೆ—

ಭೃಂಗಂ ಬಳಸದ ತಂಪಿನ | ಶೃಂಗಾರದ ವನಗಳಲ್ಲಿ ವರಕುಸುಮಗಳಿಂ |
ಸಾಂಗಮುವಾಗಿ ಷಡಕ್ಷರ | ಲಿಂಗವನನವರತ ಬಿಡದೆ ಪೂಜಿಪೆನೊಲವಿಂ ||
ಶಶಿಕಾಂತದ ಪಾಸಱೆಯಿಂ | ಹೂಸನಜ್ರದ ಗುಂಡುಬಂಡೆ ತುಱುಗಿದ ಗಿರಿಯಿಂ |
ದೊಸರುವ ನಿರ್ಝರಜಲದಿಂ | ಶಶಿಕಳೆಯಂ ಧರಿಸಿದಂಗೆ ಮಜ್ಜನಗೈವೆಂ ||

3 ಶಿವಯೋಗಾಷ್ಟಕ

ಇದರಲ್ಲಿಯೂ 9 ಕಂದಗಳಿವೆ. ಒಂದನ್ನು ಉದಾಹರಿಸುತ್ತೇವೆ—

ತಿಂಗಳ ಗಂಗೆಯ ಸೂಡಿದ | ಮಂಗಳಮಯಭಸಿತಲಸಿತದೇಹಪ್ರತತಿ ಮೆಱೆವಾ |
ಅಂಗದ ಚೆಲುವ ಷಡಕ್ಷರಿ | ಲಿಂಗವ ನೆಱೆಯಪ್ಪಿಯಗಲದಾನಂದಕನೋ ||

---

ಸುಬ್ರಹ್ಮಣ್ಯ ಸು. 1750

ಈತನು ಹನುಮದ್ರಾಮಾಯಣವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಇವನ ತಂದೆ ವೆಂಕಾರ್ಯ, ಸ್ಥಳ ಅಡುವಳ್ಳಿ, ಕುಲದೇವತೆ ಮೂಕಾಂಬೆ. "ಮೂಕಾಂಬಾಪಾಂಗಪ್ರಸಾದಸಾಧಿತಸರಸಸಾಹಿತ್ಯಸಾಮ್ರಾಜ್ಯಪ್ರತಿಷ್ಠಿತ ವಿದ್ವಜ್ಜನೋಪಲಾಲನೀಯ ಭೂವಿಬುಧ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ

ಹನುಮದ್ರಾಮಾಯಣ

ಇದು ಕಂದಗಳಲ್ಲಿ ಬರೆದಿದೆ, ಆಶ್ವಾಸಗಳ ಆದಿಯಲ್ಲಿಮಾತ್ರ ಒಂದೊಂದು ವೃತ್ತವಿದೆ. ಆಶ್ವಾಸಗಳು 15. ಈ ಗ್ರಂಥಕ್ಕೆ ಹನುಮದ್ರಾಮವಿಜಯ ಎಂಬ ಹೆಸರೂ ಇರುವಂತೆ ತೋರುತ್ತದೆ. ಇದರಲ್ಲಿ ರಾಮಾಯಣ ಕಥೆಯೊಡನೆ ಹನುಮಂತನ ಜನನ, ಪರಾಕ್ರಮ ಮುಂತಾದ ವಿಷಯಗಳು ಹೇಳಿವೆ. ಇದನ್ನು ಸೂತನು ಶೌನಕಾದಿಗಳಿಗೆ ಹೇಳಿದಂತೆ ತಿಳಿಯುತ್ತದೆ. ಗ್ರಂಥಾವತಾರದಲ್ಲಿ ಹನುಮಂತ, ಸುಬ್ರಹ್ಮಣ್ಯ, ಸರಸ್ವತಿ ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಸಮುದ್ರ

ಒಗ್ಗಿಕೊಳ್ವ ಪೆರ್ದೆರೆಗಳಿಂ | ವಳಯಿಂದಂ ಸುಳಿಗಳಿಂದೆ ಬೆಳ್ನೊರೆಯಿಂ ಜ |
ಜ್ಜಳಿಸುವ ಮಣಿಗಣದಿಂ ಮಂ | ಜುಳಶರನಿಘೋಷದಿಂ ೯ ವಾರ್ಧಿಯಮೆಸೆಗುಂ||

ಕೈಕಸೆಯ ಸೌಂದರ್ಯ

ಕಂದದ ಶಿರೀಷಮಾಲೆಯೊ| ಕುಂದದ ಕೋಮಲಿತ ಕನಲನಾಳವೊ ನೋಳ್ಪಲ್ |
ಬಂಧುರಕನಕಲತೆಯೊ ಎಂ | ಬಂದದ ನಳಿತೋಳ್ಗಳೆಸೆಗುಮಾಭಾಮಿನಿಯಾ ||
ದಿವರಂತೆ ತಾರಕಾನ್ವಿತ | ಮವಿರತವಿಹಗಾಳಿಯುಂತೆ ಪಕ್ಷಯುತಂ ಮಾ |
ಧವನಂತೆ ಸಪದ್ಮೋದರ | ಮವಳಕ್ಷಿದ್ವಿತಯಮೊಪ್ಪುಗುಂ ರಮಣೀಯಂ ||

ವೈರಾಗ್ಯ

ಪಧಿಕರ್ ತಣ್ಣೆಳಲಿಹ ಸು | ಕ್ಷಿತಿಯೊಳ್ ವಿಶ್ರಮಿಸಿಯೊಡನೆ ಪೋಪಂದದೊಳ್ |
ಸತಿಪತಿಸುತಪಿತಮಿತ್ರರ್ | ಕತಿಪಯದಿವಿಮಿರ್ದು ಪೋಪರವರವರಾರೋ ||

---

ಗೋಪಾಲಾರ್ಯಶಿಷ್ಯ ಸು. 1750

ಈತನು ಜೀವೇಶ್ವರಸಾಂಗತ್ಯ, ತತ್ವದ ಸೊಬಗಿನ ಸೋನೆ, ತತ್ವದ ಪದಗಳು ಇವುಗಳನ್ನು ಬರೆದಿದ್ದಾನೆ. ಇವನು ಬ್ರಾಹ್ಮಣನು. ತನ್ನ ಗುರುವಾದ ಗೋಪಾಲಾರ್ಯಯತಿಯ ಹೆಸರನ್ನು ತನ್ನ ಗ್ರಂಥಗಳಲ್ಲಿ ಹಲವುಕಡೆ ಹೇಳಿದಾನೆ; ತನ್ನ ಹೆಸರನ್ನು ಮಾತ್ರ ಹೇಳಿಕೊಂಡಿಲ್ಲ. ತತ್ವದ ಸೊಬಗಿನ ಸೋನೆಯಲ್ಲಿರುವ

ಪರಮಹಂಸನ ಗುರುವರ್ಯನ ಕಾಣುತ | ವರಸುಮತಿಯೆಂಬ ಶಿಷ್ಯನು |
ಚರಣಕೆಱಗಿ ಬಿನ್ನವಿಸಿದನು ತನ್ನಯ | ವರಮತವನು ಭಕ್ತಿಭಾವದಿ ||

ಎಂಬ ಪದ್ಯದಿಂದ ಈತನ ಹೆಸರು ಸುಮತಿ ಎಂದಿರಬಹುದು ಎಂಬ ಭಾವನೆಗೆ ಅವಕಾಶವಿದೆ, ಆದರೆ ಖಂಡಿತವಾಗಿ ಹೇಳುವುದಕ್ಕಾಗುವುದಿಲ್ಲ. ಇವನ ಕಾಲವು ಸುಮಾರು 1750 ಆಗಿರಬಹುದು.

ಇವನ ಗ್ರಂಥಗಳೆಲ್ಲಾ ಗುರುಶಿಷ್ಯಸಂವಾದರೂಪವಾಗಿ ಅದ್ವೈತ ವೇದಾಂತವನ್ನು ಬೋಧಿಸುತ್ತವೆ. ಇವುಗಳಲ್ಲಿ

1 ಜೀವೇಶ್ವರಸಾಂಗತ್ಯ

ಪದ್ಯಗಳು 100. ಗ್ರಂಥದ ಆದ್ಯಂತಗಳಲ್ಲಿ ಗೋಪಾಲಾರ್ಯಗುರುವಿನ ಸ್ತುತಿ ಇದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಪರಪೀಡೆ ಪರಸೇವೆ ಪರವಂಚನೆಗೈದು | ಪರಹಿಂಸೆಗಳನೆಸಗುತ್ತ |
ಪರಧನಕಳುಪಿ ಪಾಮರರಾಗುತಲಿಹ | ಪರಕೆ ಬಾಹಿರರಾಗುವರು ||
ಹರಿಭಕ್ತಸಂಗದಿಂ ಹರಿಕಥೆಗಳ ಕೇಳಿ ! ನಿರುತ ನಿಷ್ಕಾಮಕರ್ಮಗಳ |
ಹರಿಗರ್ಪಿತವಾಗಿ ಮಾಡುತ್ತ ಮನುಜರು | ದುರಿತಗಳನು ದಾಂಟುವರು ||
ಕೆಲರು ಯೋಗಿಗಳು ತಾವೆನ್ನುತ ಭೋಗವ | ನಲವಿನಿಂ ಬಯಸುತಲಿಹರು |
ಕೆಲರು ಶಿಷ್ಯರ ಧನವನು ಕೊಂಡು ಶಾಸ್ತ್ರದ | ನೆಲೆಯು ಕಾಣದೆ ಕೆಡುತಿಹರು ||

2 ತತ್ವದ ಸೊಬಗಿನ ಸೋನೆ

ಇದೂ ಸಾಂಗತ್ಯದಲ್ಲಿ ಬರೆದಿದೆ; ಪದ್ಯ 67. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—.

ತನ್ನ ಗತಿಗೆ ವಿರೋಧವ ಮಾಳ್ಪ ಕರ್ಮವ | ನನ್ಯಾರ್ಥವೆಂದು ಮಾಡುವರನು |
ಇನ್ನೇನೆನ್ನಬಹುದು ಕುರುಡನು ಬಾರಿ | ಯನ್ನು ತೋರಿಸುವೆನೆಂಬಂತಾಯ್ತು ||
ವಂಧ್ಯಾತನುಜನ ಮದುವೆಗೆ ಸಿಕತದೊ | ಳಿಂದು ತೈಲವ ತೆಗೆಸುವೆನೆಂಬ |
ಮಂದಮತಿಯಂತೊಲು ಇಲ್ಲದ ಕರ್ಮವ | ನೆಂದು ಮಾಡುವರನಿನ್ನೇನೆಂಬೆ ||

3 ತತ್ವದಪದಗಳು

ಇವು ಹಾಡುಗಳ ರೂಪವಾಗಿವೆ; ಅಲ್ಲಲ್ಲಿ ಕೆಲವು ಕಂದಗಳೂ ಇವೆ.

———

ವೆಂಕಟಕವಿ ಸು. 1750

ಇವನು ಕರ್ಣಾಟಕಾಷ್ಟಪದಿಯನ್ನು ಬರೆದಿದ್ದಾನೆ. ಈತನು ಬ್ರಾಹ್ಮಣಕವಿಯೆಂದು ತೋರುತ್ತದೆ "ಹೇಮಾದ್ರಿವಾಸನ ಪದಪಯೋಜ ದಾಸ" ಎಂದು ಹೇಳಿಕೊಂಡಿದ್ದಾನೆ. "ಸುರಪುರದಲ್ಲಿ ಮೂಜಗದೊಡೆಯ ಗೋಪಾಲಗೊಪ್ಪಿಸಿದನು" ಎಂಬುದರಿಂದ ಇವನ ಸ್ಥಳವು ಸುರಪುರವಾಗಿದ್ದರೂ ಇರಬಹುದು ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

## ಕರ್ಣಾಟಕಾಷ್ಟಪದಿ

ಇದು ಜಯದೇವನ ಗೀತಗೋವಿಂದದ ಭಾಷಾಂತರವು. ಮೂಲದ ವೃತ್ತಗಳು ಷಟ್ಪದಿಗಳಾಗಿಯೂ ಪದಗಳು ಹಾಡುಗಳಾಗಿಯೂ ಪರಿವರ್ತಿಸಲ್ಪಟ್ಟಿವೆ. ಈ ಗ್ರಂಥದಿಂದ ಸ್ವಲ್ಪಭಾಗವನ್ನು ಉದಾಹರಿಸುತ್ತೇವೆ—

ಗಗನದಿ ಮೇಘವು ಮುಸುಕಿರೆ[1] ಭಾಸ್ಕರ | ತೆಗೆದನು ತನ್ನ ಕಿರಣವನು ಕತ್ತಲೆ |
ಯೊಗೆದುದು ವನದಲಿ ವೃಂದಾವನದಿಂ ಕೃಷ್ಣನ ಗೋಕುಲಕೆ ||
ತೆಗೆದೊಯ್ಯೆಂದಾನಂದ ನಿರೂಪಿಸೆ | ನೊಗಸಿಂದಡವಿಗೆ ನಡೆದಳು ರಾಧೆಯು |
ಮುಗುವನು ಕೌಂಕುಳೊಳೆತ್ತಿಕೊಳುತ ಮದನನ ಕ್ರೀಡಾರ್ಥದಲಿ ||

ಉರದಲಿಪ್ಪುದು ಹಾರವುರಗನಲ್ಲವು ಕೊರಲೊ |
ಳಿರುವ ನೈದಿಲಮಾಲೆ ವಿಷವಲ್ಲ ಚಂದನದ |
ವರಲೇಪನವು ಭಸ್ಮವಲ್ಲ ಮನ್ಮಥನೆ ನೀ ಹರನೆಂಬ ಭ್ರಾಂತಿಯಿಂದ ||
ಅರಲಬಾಣಗಳಿಂದ ಹರಣವನು ಕೊಳಬೇಡ |
ಶರಣೆಯನಗಲ್ದು ಬಲು ವಿರಹದಿಂದಿರ್ದವನ |
ಬಳಿದೆ ಬಾಧಿಸೆ ನಿನಗೆ ಬರುವುದೇನುಂಟು ನಿಷ್ಕರುಣೆಯೆನಿಸುವುದು ಚೀವೆ[2] ||

ಪಲ್ಲವಿ|| ರಾಧೆಯು ಕೃಷ್ಣರಾಧೆಯು | ಮಾಧವಾ ನಿನ್ನ ವಿರಹವೇದನೆಯು ||
ಸ್ತನದಮೇಲೊಪ್ಪುವ ಮಣಿಹಾರಗಳು | ತನುವಿನಿಂದತಿಭಾರ ತೆಗೆಯೆನ್ನುವಳು ||1||
ಸರಸಕರ್ಪೂರಚಂದನಗಳ ನೋಡಿ | ಉರಿವ ಗರಳವಿದೆಂತೆಂಬಳೀಡಾಡಿ ||2||
ಅಂಗೈಯೊಳಗೆ ಮೊಗವಿರಿಸಿ ಕುಳ್ಳಿರಲು| ಅಂಗನೆ ಬಾಲಚಂದಿರನ ಪೋಲುವಳು||3||
ದೆಸೆದೆಸೆಯೊಳಗೆ ಕಂಬನಿಯ ಚೆಲ್ಲುವಳು| ಬಿಸಜನಾಳವ ಕಿತ್ತಿರ್ದಂತೆ ಕಣ್ಣುಗಳು||4||
ಶ್ವಾಸದಿಂದುದಿಸುವುದತಿಶಯಗಾಳಿ | ಪೂಸರನುರಿಯಂತಿಹುದು ಮಹಾಜ್ವಾಲೆ||5||
ಕಣ್ಣಿಗೆ ಚೆಲುವಾದ ತಳಿರಹಾಸಿನೊಳು | ಚೆನ್ನಾದುದಿಂಗಳಸಾಮ್ಯವೆನ್ನುವಳು ||6||
ಹರಿಹರಿ ಎನುತಲಿ ಜಪಸುವ ಮಾಸುಗಳು | ಪರಿಕಿಸಕಿಸುವೆ ಸಾಧನವೆನ್ನುವಳು ||7||
ಕವಿಗಳರಸ ಜಯದೇವನ ಕೃತಿಯ| ವಿವರಿಸೆನುತ ಹೇಮಾದ್ರಿಪನಿತ್ತ ಮತಿಯು[3] ||8||

---

1. ಮೇಘೈರ್ಮೇದುರಮಂಬರಂ ಇತ್ಯಾದಿ. 2. ಹೃದಿ ಬಿಸಲತಾಹಾರೋ ಇತ್ಯಾದಿ. 3. ರಾಧಿಕಾ ಇತ್ಯಾದಿ.

## ಚಿನ್ನರಾಜಪ್ಪ ಸು. 1750

ಈತನು ವೆಂಕಟೇಶ್ವರಶತಕವನ್ನು ಬರೆದಿದ್ದಾನೆ. ಇವನು ಮೈಸೂರು ಅರಸರ ಸಮುದಾಯಕ್ಕೆ ಸೇರಿದವನೆಂದು ತೋರುತ್ತದೆ. ನಮಗೆ ದೊರೆತ ಗ್ರಂಥದ ಒಂದು ಪ್ರತಿಯ ಕೊನೆಯಲ್ಲಿ "ಮೈಸೂರು ಆನೆಗೊಂದಿ ಅರಸಿನವರು ಚಿನ್ನರಾಜಪ್ಪನವರಿಂದ ವಿರಚಿಸಲ್ಪಟ್ಟ ವೆಂಕಟೇಶ್ವರಶತಕ ಸಂಪೂರ್ಣ" ಎಂದಿದೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ

### ವೆಂಕಟೇಶ್ವರಶತಕ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 103. ಪ್ರತಿಪದ್ಯವೂ ಪ್ರಾಯಿಕವಾಗಿ "ವೆಂಕಟ ಸಲಹೊ ಎನ್ನನು ನಿತ್ಯಶುಭವಿತ್ತು" ಎಂದು ಮುಗಿಯುತ್ತದೆ. ಭಕ್ತಿನೀತಿವೈರಾಗ್ಯಗಳನ್ನು ಬೋಧಿಸುವ ಗ್ರಂಥ. ಆರಂಭದಲ್ಲಿ ವಿಷ್ಣುಸ್ತುತಿಯೂ ಅನಂತರ ಲಕ್ಷ್ಮೀ ಗರುಡ ಪಂಚಾಯುಧಗಳ ಸ್ತುತಿಯೂ ಇವೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಹುತ್ತದಲಿ ವಿಷವಿಹುದೊ ಸರ್ಪನ | ವಕ್ತ್ರದಲಿ ವಿಷವಿಹುದೊ ಹೊಱಗಾ |
ಪುತ್ರಮಿತ್ರಕಳತ್ರಬಾಂಧವವರ್ಗದೊಳಗಿಹುದೇ ||
ಎತ್ತಣಾದು ಭವಬಂಧವೆನ್ನಯ | ಚಿತ್ತದೊಳಗಿಹುದದನು ತೊಲಗಿಸಿ |
ಮತ್ತೆ ವೆಂಕಟ ಸಲಹೊ ಎನ್ನನು ನಿತ್ಯಶುಭವಿತ್ತು ||
ಭಜಿಪೆ ಕುಬ್ಜೆಯ ಸಲಹಿದಂಘ್ರಿಯ | ಭಜಿಪೆ ಶಿಲೆಸಸ್ತ್ರೀಗೈದಂಘ್ರಿಯ |
ಭಜಿಪೆ ಬಲಿಮಕುಟಾಗ್ರಭೂಷಣವಾದ ಅಂಘ್ರಿಯನು ||
ತ್ರಿಜಗಪಾವನೆ ಪುಟ್ಟಿದಂಘ್ರಿಯ | ಭುಜಗಫಣೆಯಲಿ ನಟಿಸಿದಂಘ್ರಿಯ |
ಭಜಿಪೆ ವೆಂಕಟ ನಿಮ್ಮಯಂಘ್ರಿಯ ಸಲಹೊ ಶುಭವಿತ್ತು ||
ಮುಗುಳುನಗೆಗಳು ಮುದ್ದುನುಡಿಗಳು | ಚಿಗುರುಚೆಂದುಟಿ ಸೋಗೆಗಂಗಳು |
ಬಿಗುಹುದೋಱದ ಬಟ್ಟಬಲ್ಮೊಲೆಪೊಗರು ಜವ್ವನದ ||

ನೊಗಸುದೇಹದ ಚಂದ್ರಮುಖಿಯರ | ತಗಲಿ ಕೆಟ್ಟೆನು ನಿಮ್ಮ ಭಜಿಸದೆ |
ನಿಗಮಸನ್ನುತ ಸಲಹೊ ಎನ್ನನು ನಿತ್ಯಶುಭವಿತ್ತು ||

---

## ರಾಮಸೂರಿ ಸು. 1750

ಇಂದ್ರಕೀಲಚೌಪದ ಎಂಬ ಗ್ರಂಥದ ಕೊನೆಯಲ್ಲಿರುವ

ಚಂಚುಪುಟ್ಟದ ರಾಮಸೂರಿಗೊಲಿದವನು | ಚಿಂತಿಸುವರಭಿಮತವನಿತ್ತು ಸಲಹುವನು |
ಸಂಚರಿಸಿ ಗುಣಮೂಢಜರೊಳಗೆ ಮೆಱೆಯುವನು | ಚಿಂತೆಯಿಲ್ಲದತೆಱದಿ ಜನರ ಸಲಹುವನು ||

ಎಂಬ ಪದ್ಯದಿಂದ ಈ ಗ್ರಂಥವನ್ನು ಬರೆದವನು ರಾಮಸೂರಿ ಎಂದು ತೋರುತ್ತದೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ಇಂದ್ರಕೀಲಚೌಪದ

ಪದ್ಯ 80. "ಭಾರತಕಥೆಯೊಳು ಹರ ನರಗೆ ವರವನಿತ್ತಾಚರಿತೆಯು ವಿರಚಿಪೆಂ" ಎಂದು ಕವಿ ಹೇಳುತ್ತಾನೆ. ಆರಂಭದಲ್ಲಿ ಶಿವ, ಗಣೇಶ, ವಿಷ್ಣು, ಪಾರ್ವತಿ, ಸರಸ್ವತಿ ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಸೂಕರನ ದಂಡಿಪುದು ಲೇಸೆಂದು ನಿಂದು| ತಾ ಕರದಿ ಬಿಲ್ಲ ಜೇವಡೆದಂಬ ಪಿಡಿದು|
ತಾಕುವಂತೆಸೆಯೆ ಹಾ ಎನುತ ಹರಿತಂದು | ಆ ಕಿರೀಟಿಯುಮುಂದೆ ಹರಣವನು ಕಳೆದು ||

ಬಿದ್ದಿರುವ ಬೇಟೆಯೆಡೆ ಶಿವನು ನಡೆತಂದು| ಬಿದ್ದುದೆಮ್ಮಂಬಿನಲಿ ತೆಗೆಯಿರೆನಲಂದು|
ಬಿದ್ದುದೆನ್ನಿಂದ ನೀನಾರು ಸಾರೆಂದು | ಉದ್ದುರುಟನಿಂದ ಜಱೆದನು ವಿಜಯನಂದು ||

---

ಜಕ್ಕಣಾಮಾತ್ಯ ಸು. 1750

ಈತನು ಶಂಕರಾಚಾರ್ಯಕೃತಸೌಂದರ್ಯಲಹರಿಗೆ ಕನ್ನಡಟೀಕೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ ಎಂದು ತೋರುತ್ತದೆ. ಇವನ ತಂದೆ ವಿಟ್ಠಲ. "ಶ್ರೀಚಕ್ರಾಂಬುಜಭೃಂಗ, ರಾಜವಿದ್ಯಾಸರೋವೀಚೀಖೇಲನಹಂಸ, ಕನ್ನಡಕವಿ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದು. ಇವನು ಬರೆದ ಟೀಕೆಗೆ ಷಟ್ಚಕ್ರದೀಪಿಕೆ ಎಂದು ಹೆಸರು.

---

ಚಂದ್ರಭೀಮಕವಿ ಸು. 1750

ಈತನು ಮದಕೇರಿರಾಜೇಂದ್ರದಂಡಕವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ. ಈ ಗ್ರಂಥವು ಕಾಮಗೇತಿವಂಶದವನಾದ ಮದಕೇರಿನಾಯಕ ಎಂಬ ಚಿತ್ರದುರ್ಗದ ಪಾಳೆಯಗಾರನ ಸ್ತುತಿರೂಪವಾಗಿದೆ. ಕೆಳಗೆ ಉದಾಹರಿಸಿರುವ ಭಾಗದಿಂದ ಮದಕೇರಿನಾಯಕನು ಕಸ್ತೂರಿರಂಗಪ್ಪನಾಯಕನ ಮಗನೆಂದು ತಿಳಿಯುತ್ತದೆ. ಚಿತ್ರದುರ್ಗದ ಪಾಳೆಯಗಾರರ ಚರಿತದಿಂದ ಈತನು ಶಕ 1697 ಯುವದಲ್ಲಿ, ಎಂದರೆ 1755 ರಲ್ಲಿ, ಪಟ್ಟಕ್ಕೆ ಬಂದಂತೆ ತಿಳಿವುದರಿಂದ ಕವಿಯ ಕಾಲವು ಸುಮಾರು 1750 ಆಗಬಹುದು.

ಇವನ ಗ್ರಂಥ

ಮದಕೇರಿ ರಾಜೇಂದ್ರ ದಂಡಕ

ಇದರಿಂದ ಸ್ವಲ್ಪಭಾಗವನ್ನು ತೆಗೆದು ಬರೆಯುತ್ತೇವೆ—

ಕಾಮಗೇತ್ಯನ್ವಯಾಂಭೋಧಿರಾಕಾಸುಧಾಧಾಮಕಸ್ತೂರಿರಂಗೇಂದ್ರರಾಜನ್ಸುತ್ರಾಮಪುತ್ರಾ...ಸದಾಶ್ರೀಮಹಾವೀರ ಮದಕೇರಿರಾಜೇಂದ್ರಚಂದ್ರಾ ||

---

ಚೆನ್ನಬಸವಶಿವಯೋಗಿ ಸು. 1750

ಈತನು ಆಚರಣೆಯತ್ರಿಪದಿಯನ್ನು ಬರೆದಿದ್ದಾನೆ. ಇವನು ವೀರ

ಶೈವಕವಿ; ಸುಮಾರು 1750 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

ಅಚ್ಚರಣೆಯ ತ್ರಿಪದಿ

ಪದ್ಯ 58. ಪ್ರತಿಪದ್ಯವೂ ಶಿವಯೋಗ ಎಂದು ಮುಗಿಯುತ್ತದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಜಡೆಮುಡಿಗಳ ತಾಳ್ದು । ಮಡದಿಯರ ಕಾಲಡಿಯೊಳ್ ।
ಬುಡುಬುಡಿಕೆ ಕೊರಳ ಕಪಿಯಾಟವಾಡುವ ।
ಜಡರಿಗೆಲ್ಲಿಯದೊ ಶಿವಯೋಗ ॥
ಮುಂದೆ ಶರಣನು ಮಾಡಿ । ಹಿಂದೆ ನಿಂದಿಸುತೆ ಮನ।
ಬಂದ್ಯುತೆ ನಡೆದು ಶಾಸ್ತ್ರವನು ವಿಚಾರಿಸುವ ।
ಹಂದಿಗೆಲ್ಲಿಯದೊ ಶಿವಯೋಗ ॥
ಆಡುವುದೆಲ್ಲವಸತ್ಯ । ಮಾಡುವುದೆಲ್ಲವು ಕುಟಿಲ ।
ನೋಡುವುದೆಲ್ಲ ದುರ್ನೋಟವೆಂತಪ್ಪ ।
ಮೂಢಗೆಲ್ಲಿಯದೊ ಶಿವಯೋಗ ॥

———

## ಅಪ್ರಮೇಯಶಾಸ್ತ್ರಿ, ಸು. 1750

ಈತನು ಜಯದೇವನಗೀತಗೋವಿಂದಕೆ ಶೃಂಗಾರಪ್ರಕಾಶಿಕೆ ಎಂಬ ಕನ್ನಡಟೀಕೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ, ಅಪ್ಪಾಜಿಭಟ್ಟಾರಕನ ಮಗನು, ಮಳೂರು ಅಪ್ರಮೇಯದೇವರ ಭಕ್ತನು. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ. ಟೀಕೆಯ ಕೊನೆಯಲ್ಲಿ ಈ ಗದ್ಯವಿದೆ—

ಇತಿ ಶ್ರೀಮದ್ಭಕ್ತಿವರ್ಧನವಿಮಾನಸ್ಥಿತಾರವಿಂದವಲ್ಲಿಕಾಪತೇರಪ್ರಮೇಯಸ್ವಾಮಿನಃ ಪಾದಾರವಿಂದಾರ್ಚಕೇನ ಅಪ್ಪಾಜಿಭಟ್ಟಾರಕಪುತ್ರೇಣ ಅಪ್ರಮೇಯಶಾಸ್ತ್ರಿಣಾ ವಿರಚಿತಗೀತಗೋವಿಂದಟೀಕಾಯಾಂ ಶೃಂಗಾರಪ್ರಕಾಶಿಕಾಯಾಂ.

ತರಳಚರವತಿ ಸು 1750

ಇವನು ಗಂಗಾಗೌರೀಸಂವಾದವನ್ನು ಬರೆದಿದ್ದಾನೆ. ಈತನು ವೀರಶೈವಕವಿ; ಶಿವಗಂಗೆಯ ಸಿರಿಯಸಿಂಹಾಸನದ ಸಂಗಮೇಶ್ವರನ ಕರಕಮಲಸಂಜಾತನು ಎಂದು ಹೇಳಿಕೊಂಡಿದ್ದಾನೆ ಇವನು ಸುಮಾರು 1750 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

ಗಂಗಾಗೌರೀಸಂವಾದ

ಇದು ಸಾಂಗತ್ಯದಲ್ಲಿ ಬರೆದಿದೆ; ಅಧ್ಯಾಯ 11, ಪದ್ಯ 1321.

---

ಅವಧೂತಶಿವಯೋಗಿ ಸು. 1750

ಈತನು ಕೈವಲ್ಯಾನ್ವಯಸಾರವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ

ಕೈವಲ್ಯಾನ್ವಯಸಾರ

ಇದು ಗದ್ಯರೂಪವಾಗಿದೆ; ಪ್ರಕರಣ 20; ಅದ್ವೈತವೇದಾಂತವನ್ನು ಬೋಧಿಸುತ್ತದೆ. ಇದಕ್ಕೆ ಆನಂದಕಲ್ಲೋಲ ಎಂಬ ಹೆಸರೂ ಉಂಟು. ಪ್ರಕರಣಗಳ ಕೊನೆಯಲ್ಲಿ—ಇತಿ ಶ್ರೀ ಕೈವಲ್ಯಾನ್ವಯಪ್ರವರ್ತಕಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಪರಶಿವಪಾದಯುಗಳಕಮಲಿನೀರಾಜಹಂಸಾವಧೂತಶಿವಯೋಗೀಂದ್ರವಿರಚಿತೇ—ಎಂದಿದೆ.

---

ಬೇಟೆರಾಯ ಸು. 1750

ಈತನು ಮಾರ್ಕಂಡೇಯಪುರಾಣವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ. ಇವನ ತಂದೆ ದಾಸದೇವ, ಸ್ಥಳ ತುರುಗೆರೆ (ತುರುವೇಕೆರೆ) ತುರುಗೆರೆಯ ಬೇಟೆರಾಯನ ಅಂಕಿತದಲ್ಲಿ

ತನ್ನ ಗ್ರಂಥವನ್ನು ಬರೆದಿದ್ದಾನೆ. ಇವನ ಕಾಲವು ಸುಮಾರು 1750 ಆಗಿ ರಬಹುದು.

ಇವನ ಗ್ರಂಥ

## ಮಾರ್ಕಂಡೇಯಪುರಾಣ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 26, ಪದ್ಯ 1081; ಜ್ಯೋತಿಷಗ್ರಂಥ. ಇದರಲ್ಲಿ ಮೃಕಂಡುಮುನಿ ಮಾರ್ಕಂಡೇಯಮುನಿಗೆ ಬೋಧಿಸಿದ ಜ್ಯೋತಿಶ್ಶಾಸ್ತ್ರವು ನಿರೂಪಿಸಿದೆ. ಇದನ್ನು ಕವಿ ತನ್ನ ಮಗನಿಗೆ ಹೇಳುತ್ತಾನೆ. ಇದರಲ್ಲಿ ಗ್ರಹಭಾವಲಕ್ಷಣ, ಜಾತಕನಿರ್ಣಯ, ಆಯುರ್ಯೋಗ, ಲಗ್ನಭಾವಫಲವೇ ಮುಂತಾದ 12 ಭಾವಫಲಗಳು, ಗ್ರಹದಶಾಫಲ ಮೊದಲಾದ ವಿಷಯಗಳು ಹೇಳಿವೆ. ಗ್ರಂಥಾವತಾರದಲ್ಲಿ ಗಣೇಶಸ್ತುತಿ ಇದೆ. ಬಳಿಕ ಕವಿ ಈಶ್ವರ, ಪಾರ್ವತಿ, ವಿಷ್ಣು, ಲಕ್ಷ್ಮಿ, ಬ್ರಹ್ಮ, ಸರಸ್ವತಿ, ಸೂರ್ಯ, ಷಣ್ಮುಖ, ವೀರೇಶ, ನಂದಿ, ದಿಕ್ಪಾಲರು, ಹರಕವಿಗಳು, ಹರಿಕವಿಗಳು ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ಕಂದ ಕೇಳಾದಿತ್ಯಚಂದ್ರಮ | ರಂದದಿಂದಿರುತಿರುವ ರಾಶಿಗೆ |
ಬಂದರಾದರೆ ರಾಹುಕೇತುಗಳೊಂದುಪಾವಕ್ಕೆ ||
ಸಂದಿಸಲು ತಾ ಪರ್ವಕಾಲವು | ಕುಂದನೆ ಮೋಕ್ಷ ಗ್ರಹಣವೆನಿಸುವು
ದೆಂದು ಪೇಳಿದನಾಮೃಕಂಡುಮುನೀಶನೊಲವಿನಲಿ ||
ಸೋಮನಂದನನಮಲವಶಿಯೊಳು | ಭೀಮಬಲರಾಹುವಿನ ಭುಕ್ತಿಗೆ |
ನೇಮವೆನಿಸಿದ ಮಾಸತ್ರಿಂಶದ್ದಿವಸ ಹದಿನೆಂಟು ||
ರಾಮಣೀಯಕಕೇಂದ್ರಕೋಣಸು | ನಾಮವಿಡಿದಿರೆ ಷಷ್ಠಸ್ವೋಚ್ಚದೊ |
ಳಾಮಹಾಶುಭಯೋಗಕಾರಕರೊಡನೆ ಕೂಡಿರಲು ||
ಭೂಮಿಪನ ಸನ್ಮಾನಸಂಪದ | ಕಾಮಿತಾರ್ಥದ ಸಿದ್ಧಿ ಧರ್ಮವು |
ರಾಮಣೀಯಕಕೀರ್ತಿ ದೇವಾದಿಗಳ ದರ್ಶನವು ||
ನೇಮನಿಷ್ಠೆಗಳವಗೆ ಪುಣ್ಯಾಸು | ನಾಮತೀರ್ಥಸ್ನಾನ ಹಯಗಜ |

ಕೋಮಲದ ಯಾನಾದಿಸಂಪದ ವಿವಿಧವಿಭವಗಳು ||

---

ಚಂದ್ರಗುಪ್ತಕವಿ ಸು. 1750

ಈತನು ಬೇತಾಳಪಂಚವಿಂಶತಿಯನ್ನು ಬರೆದಿದ್ದಾನೆ. ಇವನ ವಿಷಯವಾಗಿ ಗ್ರಂಥದಿಂದ ಏನೂ ತಿಳಿವುದಿಲ್ಲ. ಇವನು ಸುಮಾರು 1750ರಲ್ಲಿ ಇದ್ದಿರಬಹುದು.

ಇವನ ಗ್ರಂಥ

ಬೇತಾಳಪಂಚವಿಂಶತಿ

ಇದು ಕಂದವಚನಗಳಲ್ಲಿದೆ ಎಂಬಂಶವು

ಕಂದವಚನಂಗಳಿಂದಂ | ಕುಂದದೆಯೊಂದೊಂದು ಶ್ಲೋಕವಂ ಕಡೆಯೊಳಗಂ |
ಸಂಧಿಸಿ ನಿರ್ಮಳವೆನಿಸಿಯೆ | ಸೌಂದರದಿಂ ಪೇಳ್ದ ಚಂದ್ರಗುಪ್ತಕವೀಂದ್ರಂ ||

ಎಂಬ ಪದ್ಯದಿಂದ ವ್ಯಕ್ತವಾಗುತ್ತದೆ.

ಗ್ರಂಥಾಂತ್ಯದಲ್ಲಿ ಈ ವಾಕ್ಯವಿದೆ—

ಇತಿ ಶ್ರೀಉಮಾಮಹೇಶ್ವರಸಂವಾದೇ ಚಂದ್ರಗುಪ್ತವಿರಚಿತಮಪ್ಪ ವಚನ ಶ್ಲೋಕಛಂದಸ್ಸುಲಕ್ಷಣಮಪ್ಪ ಬೇತಾಳಪಂಚವಿಂಶತಿಕಥಾ ಸಮಾಪ್ತಾ

---

ರಾಮ ಸು 1750

ಈತನು ಪದ್ಮಾವತಿಯ ಯಕ್ಷಗಾನವನ್ನು ಬರೆದಿದ್ದಾನೆ. ಇವನು ಜೈನಕವಿ. ಮೂಲಿಕೆಯ ಪುರವನಾಳ್ವ ದೊರೆಯ ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಹೇಳುತ್ತಾನೆ. ಇವನ ಕಾಲವು ಸುಮಾರು 1750 ಆಗಿರಬಹುದು ಎಂದು ತೋರುತ್ತದೆ.

ಇವನ ಗ್ರಂಥದಲ್ಲಿ ಜಿನದತ್ತರಾಯನು ಪದ್ಮಾವತೀದೇವಿಯನ್ನು ತಂದ ಕಥೆ ಹೇಳಿದೆ. ಆರಂಭದಲ್ಲಿ ಜಿನಸ್ತುತಿಯೂ ಸರಸ್ವತೀಸ್ತುತಿಯೂ ಇವೆ.

---

ತಿಪ್ಪಯಾರ್ಯ ಸು. 1750

ಈತನು ಹನುಮದ್ವಿಲಾಸವೆಂಬ ಯಕ್ಷಗಾನವನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿ; ವಿಶ್ವಾಮಿತ್ರಗೋತ್ರದವನು; ಯಜುಶ್ಶಾಖಾಧ್ಯಾಯಿ; ಉಲ್ಲುಚುಕವಂಶದವನು. ಇವನ ಪಿತಾಮಹನು ಕಂಠೀರವಾರ್ಯ, ತಂದೆ ರಂಗ, ತಾಯಿ ಗಿರಿಯಂಬಿಕೆ, ಗುರು ಚಂದ್ರರಸ, ಸ್ಥಳ ನೂತನಾವರಣ (ಹೊಸಕೋಟೆ). ತನ್ನ ಗ್ರಂಥವನ್ನು ನವಸಾಲಪುರೀ (ಹೊಸಕೋಟೆ) ಖಾದ್ರಿ ನರಸಿಂಹದೇವರಿಗೆ ಅಂಕಿತಮಾಡಿ ಬರೆದಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದು. ಈ ಯಕ್ಷಗಾನದಲ್ಲಿ ಆಂಜನೇಯನ ಮಹಿಮೆ ವರ್ಣಿತವಾಗಿದೆ.

---

ಪದ್ಮರಾಜ ಸು. 1750

ಈತನು ವಿಜಯಕುಮಾರನಕಥೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ತಂದೆ ಮೈಸೂರೊಳ್ ಶಾಂತಿಗುಣದಿಂ ಕೀರ್ತಿಯಾಂತ ದಾತೃತ್ವಯುತ ಶಾಂತಪಂಡಿತನು; ಗುರು ವಾದವಾದೀಶ್ವರ ವಾದಿಪಿತಾಮಹ ಅಕಲಂಕಮುನಿ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ. ಗ್ರಂಥಾವತಾರದಲ್ಲಿ ಶಾಂತಿಜಿನಸುತಿಯೂ ಸರಸ್ವತೀಸ್ತುತಿಯೂ ಇವೆ.

---

ನಂಜಯ್ಯ ಸು. 1750

ಇವನು ಕಪೋತವಾಕ್ಯವೆಂಬ ಯಕ್ಷಗಾನವನ್ನು ಬರೆದಿದ್ದಾನೆ. ಈತನು ರಾಜವಂಶಕ್ಕೆ ಸೇರಿದವನಂತೆ ಕಾಣುತ್ತಾನೆ. ಇವನ ಪರಂಪರೆ ಹೀಗೆ ಹೇಳಿದೆ—ಬಾಗಿಳಿಕೆಂಪಭೂಪಾಲ, ಮಗ ವೀರಭೂಪತಿ, ಮಗ ಅಹವವಿಜಯ ಲಿಂಗರಾಜೇಂದ್ರ, ಮಗ ಕವಿನಂಜಯ್ಯ. ಇವನು ಸುಮಾ

ರು 1750 ರಲ್ಲಿ ಇದ್ದಿರಬಹುದು. ಇವನ ಯಕ್ಷಗಾನದಲ್ಲಿ ರಾಮನು ಸುಗ್ರೀವನಿಗೆ ಹೇಳಿದ ಕಪೋತದ ಕಥೆ ವಿವರಿಸಿದೆ.

---

ಗಂಗ ಸು. 1750

ಈತನು ಗಿರಿಜಾಕಲ್ಯಾಣವೆಂಬ ಯಕ್ಷಗಾನವನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ; ಶಾಂಡಿಲ್ಯಗೋತ್ರದವನು ಕಾತ್ಯಾಯನಸೂತ್ರದವನು. ಇವನ ತಂದೆ ಗೋಪಯ, ತಾಯಿ ಪಾರ್ವತಮ್ಮ, ಸ್ಥಳ ಕಕುದದ್ರಿಪುರ (ಶಿವಗಂಗೆ). ತನ್ನ ಗ್ರಂಥವನ್ನು ಗಂಗೇಶನಿಗೆ (ಗಂಗಾಧರೇಶ್ವರ) ಒಪ್ಪಿಸಿದಂತೆ ಹೇಳುತ್ತಾನೆ. ಇವನ ಕಾಲವು ಸುಮಾರು 1750 ಆಗಿರಬಹುದು. ಸೂತನು ಪರೀಕ್ಷಿತನಿಗೆ ಹೇಳಿದ ಗಿರಿಜಾಕಲ್ಯಾಣದ ಕಥೆಯನ್ನು ತಾನು ಯಕ್ಷಗಾನವಾಗಿ ರಚಿಸಿದಂತೆ ಹೇಳುತ್ತಾನೆ.

---

ಸ್ವಾಮಿಕವಿ ಸು. 1750

ಈತನು ಬಿಳಿಯಕಲ್ಲ ರಂಗಸ್ವಾಮಿಯ ಪಾರಿಜಾತಪ್ರಸಂಗವನ್ನು ಬರೆದಿದ್ದಾನೆ. ಇವನು ದೇವನೂರು ವಾಮನಾಚಾರ್ಯನ ಶಿಷ್ಯನು. ಈ ಗ್ರಂಥವನ್ನು ಮಾಧವನಹಳ್ಳಿ ವೆಂಕಟಯ್ಯನ ಮಗ ರಾಜಪಯ್ಯನಿಗಾಗಿ ರಚಿಸಿದಂತೆ ಹೇಳುತ್ತಾನೆ. ಇವನು ಸುಮಾರು 1750 ರಲ್ಲಿ ಇದ್ದಿರಬಹುದೆಂದು ತೋರುತ್ತದೆ. ಇವನ ಗ್ರಂಥವು ಯಕ್ಷಗಾನರೂಪವಾಗಿದೆ.

---

ಸಾಂಬಯ್ಯ ಸು. 1750

ಇವನು ಕರಿಯಭಂಟನಕಥೆ, ಸಾರಂಗಧರನಕಥೆ ಎಂಬ ಯಕ್ಷಗಾನಗಳನ್ನು ಬರೆದಿದ್ದಾನೆ ಈತನು ವೀರಶೈವಕವಿಯೆಂದು ತೋರುತ್ತದೆ. ಇವನ ತಂದೆ ಬೊಂಬೆಯಾಟದ ಸಿದ್ದಯ್ಯ (ಸು 1725), ತಾಯಿ ಯಲ್ಲಮ್ಮ, ಅಣ್ಣ ಮೋಹನಕವಿ ಎಂಬ ಬಿರುದಾಂಕಿತ ಸಾಂಬಯ್ಯ. ಈತನ ಕಾಲವು ಸುಮಾರು 1750 ಆಗಿರಬಹುದು ಸಾರಂಗಧರನ ಕಥೆ

ಯ ವಿಷಯದಲ್ಲಿ "ಶಂಭುಲಿಂಗನಿಗೆ ಅಂಕಿತವಾಗಿ ರತ್ನಾಂಗಿಯ ಕುವರ ಶಂಕರವರವುಳ್ಳ ಸಾರಂಗಧರನ ಕಥೆಯನು ಯಕ್ಷಗಾನವಂ ಮಾಡಿ ಪೇಳ್ವೆಂ" ಎನ್ನುತ್ತಾನೆ.

---

## ತಿಮ್ಮರಾಜಗೌಡ ಸು. 1750

ಇವನು ಸ್ತ್ರೀವೈದ್ಯವನ್ನು ಬರೆದಿದ್ದಾನೆ; ಸುಮಾರು 1750 ರಲ್ಲಿ ಇದ್ದಿರಬಹುದು ಇವನ ಗ್ರಂಥವು ಸಣ್ಣದು (5 ಓಲೆಗಳವೆ); ವಾಕ್ಯರೂಪವಾಗಿದೆ

---

## ಕಾಶೀರಾಮ ಸು. 1750

ಈತನು ಮಲ್ಲಿಕಾರ್ಜುನಚರಿತೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ; ಭಾರದ್ವಾಜ ಗೋತ್ರದವನು; ನಂದರಾಮನ ಪೌತ್ರನು; ಲಕ್ಷ್ಮಣದಾಸ ಕಮಲಾಂಬೆಯರ ಪುತ್ರನು; ವಿಮಲಾರ್ಯನ ಶಿಷ್ಯನು. ಮೋಹನಕವಿ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದು. ಇವನ ಗ್ರಂಥದಲ್ಲಿ ಕುರುಗಲ್ಲುವಾಸ ಮಲ್ಲೇಶ್ವರದೇವರ ಅಂಕಿತವಿದೆ. ಪೂರ್ವಕವಿಗಳಲ್ಲಿ ಬಾಣ, ಮಯೂರ, ಭೀಮ, ಕಾಳಿದಾಸ, ಕೆರೆಯ ಪದ್ಮರಸ, ಶಂಕರಾಚಾರ್ಯ ಇವರುಗಳನ್ನು ಸ್ಮರಿಸಿದ್ದಾನೆ.

---

## ಎಚ್ಚರಿಕೆಮುಕ್ಕಣ್ಣ ಸು. 1750

ಈತನು ವಚನಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಸುಮಾರು 1750 ರಲ್ಲಿ ಇದ್ದಿರಬಹುದು. ಇವನ ವಚನಗಳಲ್ಲಿ ಕುರಂಗೇಶ್ವರ ಎಂಬ ಅಂಕಿತವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ-

ನಾಲ್ಕು ಜಾವಕ್ಕೆ ಒಂದುಜಾವ ವ್ಯಾಪಾರಕೃಷಿಗೆ ಸಂದಿತ್ತು; ಮತ್ತೊಂದು ಜಾವ ನಿದ್ರೆ ಸ್ವಪ್ನ ಕಳವಳ ನಾನಾ ಅವಸ್ಥೆಯಲ್ಲಿ ಹೋಯಿತ್ತು; ಮತ್ತೊಂದುಜಾವ ಅಂಗನೆಯರ ಸರಸಸಲ್ಲಾಪ ತಕ್ಕೈ ಚುಂಬನ ಮೊದಲಾದ ಸಂಭೋಗಸುಖಂಗಳಲ್ಲಿ ಹೋಯಿತ್ತು; ಇನ್ನೊಂದುಜಾವವಿದೆ. ನೀವು ನೀವು ಬಂದ ಬಟ್ಟೆಯು ತಿಳಿದು ಮುಂದಣ ಆಗುಹೋಗನರಿದು ನಿತ್ಯನೇಮದ ವಿಸ್ತರಿಸಿಕೊಂಡು ನಿಮ್ಮ ಶಿವಾರ್ಚನೆಯು ಕ್ರಿಯೆ ಪ್ರಣವದ ಪಥವನರಿತು ಭಾವದ ಬಲಿಕೆ ವಿರಕ್ತಿಯು ಬಿಡುಗಡೆ ಸದ್ಭಕ್ತಿಯುಮುಕ್ತಿ ಇಂತೀಕೃತ್ಯದ ಕಟ್ಟು ತಪ್ಪದಿರಿ. ಅರುಣೋದಯಕ್ಕೆ ಒಡಲಾಗದ ಮುನ್ನವೆ ಖಗಪಶುಮೃಗನರಕುಲದುಲುಹಿಂಗೆ ಮುನ್ನವೆ ಧ್ಯಾನಾರೂಢರಾಗಿ ಶುದ್ಧಸಿದ್ಧಪ್ರಸಿದ್ಧಪ್ರಸನ್ನ ಕುರಂಗೇಶ್ವರಲಿಂಗವ ಕೂಡಬಲ್ಲಿರೆ.

---

## ಹರಿದಾಸ ಸು. 1750

ಇವನು ಮೂಲಬಲರಾಮಾಯಣ, ಸಂಕ್ಷೇಪಭಾಗವತ ಈ ಗ್ರಂಥಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ರಥೀತರಗೋತ್ರದವನು; ಅಶ್ವಲಾಯನ ಸೂತ್ರದವನು ಇವನ ಪಿತಾಮಹನು "ಧಾರಿಣಿಗ ಪಶ್ಚಿಮಚಿತಂಬರ | ಚಾರುಉತ್ತಮನಾಮಪೀರೂರ್ | ತೀರವಾಸದೊಳಪ್ಪ ಸದ್ವಿಪ್ರ" ಚೆನ್ನಪ್ಪ; ತಂದೆ ನಂಜಪ್ಪಾರ್ಯ; ತಾಯಿ ವೆಂಕಮ್ಮ; ಅಣ್ಣ "ಧರೆಯೊಳುತ್ತಮಕೋಯಮುತ್ತೂ | ರಿರುಪೆಸುಂಕದಶಾನುಭಾಗನು" ಹಿರಿಯ ಚೆನ್ನಪ್ಪಯ್ಯ; ಮನೆತನ ಕೋಲಾಲ. ವ್ಯಾಸಕೃಷ್ಣರ ಪಾದಪದ್ಮಭೃಂಗ, ವ್ಯಾಸರಾಯಮಠದ ಶಿಷ್ಯ ಎಂದು ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದು.

ಇವನ ಗ್ರಂಥಗಳಲ್ಲಿ

### 1 ಮೂಲಬಲರಾಮಾಯಣ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 13, ಪದ್ಯ 726. ಇದರಲ್ಲಿ ರಾವಣಕುಂಭಕರ್ಣರ ಮೂಲಬಲವನ್ನು ಶ್ರೀರಾಮನು ಸಂಹರಿಸಿದ ಕಥೆ ಹೇಳಿದೆ. ಸಂಧಿಗಳ ಅಂತ್ಯದಲ್ಲಿ ನರಸಿಂಹನ ಅಂಕಿತವಿದೆ.

ಗ್ರಂಥಾವತಾರದಲ್ಲಿ ರಾಮಸ್ತುತಿ ಇದೆ; ಅನಂತರ ಕವಿ ಗಣಪತಿ, ಸರಸ್ವತಿ, ಶ್ರೀರಂಗಪಟ್ಟಣದ ನಂಜುಂಡೇಶ್ವರ, ಭೀಮ, ಮಧ್ವಾಚಾರ್ಯ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ರಾವಣನ ರಣಾವಲೋಕನ

ಗಂಡುಗಲಿಯಸುರೇಂದ್ರ ಬಂದನು | ಹಿಂಡಿನಮರರ ಗಂಡ ಬಂದನು |
ಚಂಡವಿಕ್ರಮ ಬಂದನೆಂದೆಮನೆ ಹೊಗಳುವ ಕಹಳೆಗಳು ||
ಕಂಪರಾಗಭ್ರದಲಿ ನಿರ್ಜರ | ತಂಡ ಕಂಗೆಡುತೋಡಿದುವು ಸನು |
ದಂಡಿಯಲಿ ರಥದೊಳಗೆ ಕುಳಿತವ ರಣವ ನೋಡಿದನು ||

ರಾವಣನನ್ನು ಕುರಿತು ಮಂಡೋದರಿಯ ಉಕ್ತಿ

ಕರುಣವಾರಿಧಿರಾಮನಾತನ | ಚರಣವೇ ಗತಿಯೆಂದು ಪೋಗಿಯ |
ಶರಣುಹೊಕ್ಕಾ ಜನಕಸುತೆ ಯನು ಕೊಟ್ಟು ವಿನಯದಲಿ ||
ಇರುತಿರಲು ಮನ್ನಿಸುವ ನಾಕಾ | ತ್ವರಮಪುರುಷನು ವಿಷ್ಣುವಾತನ |
ಮಹಿಯ ಹೊಗು ಮಹಿಯ ಹೊಗು ಕೃಪೆಯೊಳು ಸಲಹುವನು ರಾಮ ||

2 ಸಂಕ್ಷೇಪ ಭಾಗವತ

ಇದೂ ಭಾಮಿನೀ ಷಟ್ಪದಿಯಲ್ಲಿ ಬರೆದಿದೆ; ಪದ್ಯ 53, "ಅತ್ಮಾರಾಮನು ಬರೆದಿರುವ ಕನ್ನಡ ಷಟ್ಪದಿಯ ಸಂಕ್ಷೇಪವನು ನಾನು ಹೇಳುವೆನು" ಎಂದು ಕವಿ ಹೇಳುತ್ತಾನೆ. ಆರಂಭದಲ್ಲಿ ವಿಷ್ಣುಸ್ತುತಿ ಇದೆ; ಬಳಿಕ ಕವಿ ಗಣೇಶ, ಸರಸ್ವತಿ, ಈಶ್ವರ, ಮಧ್ವಾಚಾರ್ಯ ಇವರುಗಳನ್ನು ಹೊಗಳಿದ್ದಾನೆ ಈ ಗ್ರಂಥದಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ—

ದಿವ್ಯಮಂಗಳವಿಗ್ರಹನ ಶುಭ | ಭವ್ಯಚರಿತನ ಭಾಗವತಜನ |
ಸೇವ್ಯಚರಣಸರೋಜಮಹಿಮನ ಜಗವ ಸಲಹುವನ ||
ಅವ್ಯಯನನವತಾರಮಾಯಾ | ನವ್ಯಸತಿಪತಿ ನಾರಸಿಂಹನ |
ಕಾವ್ಯವಿದು ರಂಜಿಪುದು ಸಂಕ್ಷೇಪಾಖ್ಯಭಾಗವತ ||

## ಗುರುಸಿದ್ದಪ್ಪ ಸು. 1750

ಈತನು ಮಾದೇಶ್ವರ ಸಾಂಗತ್ಯವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; ಇವನ ತಂದೆ ಹಲಗೂರು ಅಕ್ಕಸಾಲೆ ದೇವಣ್ಣ, ಗುರು ವಾಟಾಳಮಠದ ಯತಿ ಬಸವಲಿಂಗ, ಸ್ಥಳ "ಸತ್ಯಮಂಗಲದ ಭೂಪತಿಯ ಸಿಂಹಾಸನ ಗುತ್ತಾಲತ್ತೂರ ಬತ್ತಿನಲಿ ಎಸೆವ ವಿಣ್ಣ". ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ. ಪೂರ್ವಕವಿಗಳಲ್ಲಿ ಬಾಣ, ಉದ್ಭಟ, ಮಯೂರ, ಕಾಳಿದಾಸ, ರಾಘವಾಂಕ, ಹರೀಶ್ವರ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

ಮಾದೇಶ್ವರಸಾಂಗತ್ಯ.

ಸಂಧಿ 3, ಪದ್ಯ 363. ಇದರಲ್ಲಿ ಕನ್ನಡದೇಶದ ಕಾವೇರೀತೀರದಲ್ಲಿಯ ಕ್ರೊನ್ನಾಚೆ ಬೆಟ್ಟದ ಬಳಿ ಇರುವ ನಡುಮಲೆಯ ಮಾದೇಶ್ವರದೇವರ ವೈಭವವು ವರ್ಣಿತವಾಗಿದೆ. ತನ್ನ ಗಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ—

ನಾನುಸಿರಿದ ನುಡಿ ಹಾಲು ಮಾವಿನಹಣ್ಣು | ಜೇನುಸಕ್ಕರೆ ಸವಿದಂತೆ |
ಮಾನಿನಿಯರ ಕುಡಿನೋಟದಂತೆಸೆವುದು | ಭಾನುಪ್ರಕಾಶದಂತಿಹುದು ||
ಕಸ್ತೂರಿ ಪುನುಗು ಜವಾಜಿಯುಗಿಲುಗಂಧ | ವಿಸ್ತರಿಸುವ ಪರಿಯಂತೆ |
ಉತ್ತಮ ಸವಿನುಡಿಯಂತೆ ಈ ಕಥೆಯನು | ಬಿತ್ತರಿಸುವೆನತಿಶಯದಿ ||

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ; ಬಳಿಕ ಕವಿ ಪಾರ್ವತಿ, ಗಂಗೆ, ಗಣೇಶ, ವೀರಭದ್ರ, ಸರಸ್ವತಿ, ಬಸವ, ಚೆನ್ನಬಸವ, ಶೂಲದ ಬ್ರಹ್ಮಯ್ಯನೇ ಮೊದಲಾದ ಪುರಾತನರು, ಸ್ವಗುರು ಬಸವಲಿಂಗ ಇವರುಗಳನ್ನು ಹೊಗಳಿದ್ದಾನೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ--

ಗೊಲ್ಲರು

ಕಂಬಳಿ ಕೊಡಲಿ ಕಾಲಿಗೆ ಎಕ್ಕಡವ ಮೆಟ್ಟಿ | ಸಂಭ್ರಮದಲಿ ಕೋಲುವಿಡಿದು |
ನಂಬಳ ಮೊಜು ಹೊನ್ನಿನ ಬೀಕಾಜರು | ಇಂಬಿನೊಳ್ ತುರುವ ಕಾದಿಹರು ||

### ತುರುಮಂದೆ

ಬಟ್ಟಗಡಸು ಕೆಂದ ಹುರಿಗ ಕಾರಿಯು ಬೆಳ್ಳ | ನೆಟ್ಟಕೊಂಬಿನ ಕಪಿಲೆ ಚಾಲೆ |
ದಿಟ್ಟಿಸಿ ನೋಡುವ ಪಸುಗಳು ಎಸೆದುವು | ಪಟ್ಟೆಯ ಸೀರೆಯಂದದಲಿ ||

### ಸ್ತ್ರೀಯರು

ತಳಿರಡಿ ಸುಣ್ಣೊಡ್ಡಿಡೆ ಸೆಳೆನಡು ನಳಿತೋಳು | ಕಳಸಕುಚದ ಬಾಲೆಯರು |
ಬಟ್ಟಲುಮುಡಿಯ ಬಟ್ಟಮೊಗ ತೆಳುಗಲ್ಲದ | ನಳಿನಾಕ್ಷಿಯರು ನಡೆದರು ||

### ಊಟ

ಗುಳ್ಳದಹಣ್ಣು ಮಾವಿನಕಾಯಿ ನಿಂಬೆಯು | ಅಲ್ಲಿ ಹೇರಳೆಯ ಹಣ್ಣುಗಳು |
ಕಲ್ಪಿಡೆ ಮಾಗಳಿ ಕಟುಕಿಲೆಯುಪ್ಪಿನಕಾಯಿ | ವಿಲ್ಲದೆಯೆಡೆಮಾಡಿದರು ||

---

## ಯೋಗಾನಂದ ಸು. 1750

ಈತನು ವಿರೂಪಾಕ್ಷ ಶತಕ, ಬಸವ ಶತಕ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿಯೆಂದು ತೋರುತ್ತದೆ ಇವನ ತಂದೆ ತರಿಮೇಲಪುರಾಧಿಪತಿ ಚೆನ್ನರಾಜ, ಅಣ್ಣ ಬಸವರಾಜ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ

ಇವನ ಗ್ರಂಥಗಳಲ್ಲಿ[1]

### 1 ವಿರೂಪಾಕ್ಷ ಶತಕ

ಇದರಲ್ಲಿ 103 ಕಂದಗಳವೆ; ಪ್ರತಿ ಕಂದವೂ 'ವಿರುಪಾಕ್ಷಲಿಂಗ ಕರುಣಾಪಾಂಗಾ'' ಎಂದು ಮುಗಿಯುತ್ತದೆ. ಗ್ರಂಥವು ವೇದಾಂತಬೋಧಕವಾಗಿದೆ. ಆರಂಭದಲ್ಲಿ ವಿರೂಪಾಕ್ಷಲಿಂಗಸ್ತುತಿ ಇದೆ; ಅಂತ್ಯದಲ್ಲಿ ಈ ಗದ್ಯವಿದೆ —

ಇದು ವಿಶ್ವಸೃಷ್ಟಿಸಹಸ್ರಕೋಟ್ಯಖಿಲಸುಮನಶ್ಶ್ರೀವಾರ್ಲಂಕಾರಮುಕುಟಮಣಿಘೃಣಿನಿಕರರಂಜಿತಚಾರುಚರಣಾಂಭೋರುಹ ಶ್ರೀಹೇಮಕೂಟಭೂಧರಪರಿವೃಢವಿರೂಪಾಕ್ಷಘೃಣಾಲಬ್ಧಾತ್ಮವಿದ್ಯಾಪ್ರವೀಣ ಮಾನಸಾಬ್ಜವಂಶೋದ್ಭವ ತರಿಮೇಲಪುರಾ

---

1 ಇವನು ತೆಲುಗಿನಲ್ಲಿ ಮಾನಸಶತಕ ಎಂಬ ಗ್ರಂಥವನ್ನೂ ಬರೆದಿದ್ದಾನೆ.

ಧಿಪತಿ ಚಿನ್ನರಾಜಗಭೋ೯ದಿತ ಬಸವರಾಜಾವರಜ ಯೋಗಾನಂದಾತ್ಮಯರಚಿತ ವಿರೂಪಾಕ್ಷಶತಕಂ

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ--

ಸಿರಿಯೆಂಬ ಸನ್ನಿಪಾತಕ | ಸಿರಕೇರಿದ ತೆರದಿ ಬೆಟ್ಟಿತು ಶಿವಶಿವ ಎನದೇ |
ಇರುತಿರುವನಾವನವನೇ | ಖರನೈ ವಿರುಪಾಕ್ಷಲಿಂಗ ಕರುಣಾಪಾಂಗಾ ||
ವನಧಿಯ ಜಲದಲಿ ನದಿಜೇ | ವನವದು ಕಲೆತಿನ್ನು ಭೇದವಡೆಯದಯಿಹನ್ತೋಲ |
ಮನವಿದು ನಿನ್ನಲಿ ಬೆರೆಯಲಿ | ಘನನೇ ವಿರುಪಾಕ್ಷಲಿಂಗ ಕರುಣಾಪಾಂಗಾ ||
ಭುವಿಯೊಳು ಸದ್ಗುರುಕೃಪೆಯಿಂ | ಭವವನು ಪರಿಹರಿಪ ಮಾರ್ಗ ಪಡೆಯದ ಮನುಜರ್ |
ಶವಕಿಂದಲು ಕಡೆ ನೋಡಲು | ಕವಿನುತ ವಿರುಪಾಕ್ಷಲಿಂಗ ಕರುಣಾಪಾಂಗಾ ||

2 ಬಸವ ಶತಕ

ಇದರಲ್ಲಿ 110 ಪದಗಳಿವೆ; ಪ್ರತಿಪದವೂ "ಪರಮಗುರುವೆ ಸಲಹು ಬಸವ ಪ್ರಭುವೇ" ಎಂದು ಮುಗಿಯುತದೆ. ಗ್ರಂಥವು ಗುರುಶಿಷ್ಯ ಸಂವಾದರೂಪವಾಗಿ ವೇದಾಂತವನ್ನು ಬೋಧಿಸುತ್ತದೆ. ಆರಂಭದಲ್ಲಿ ಶಿವನ ಆಜ್ಞೆಯಿಂದ ಭೂಮಿಯಲ್ಲಿ ಅವತರಿಸಿದ ಬಸವನ ಸ್ತುತಿ ಇದೆ ಇದರಿಂದ ಒಂದೆರಡು ಪದಗಳನ್ನು ಉದಾಹರಿಸುತ್ತೇವೆ—

ಉರ್ವಿಯಲ್ಲಿ ಜನಿಸಿ ಉತ್ತಮರನು ಸೇರಿ | ಸತ್ಕಥೆಗಳ ಕೇಳಿ ಸಾಧುಗಳಲಿ |
ಭಕ್ತಿಯಿಲ್ಲದೆ ನಿಮ್ಮಪದಕೆ ಬಾಹಿರನಾದೆ|ಪರಮಗುರುವೆ ಸಲಹು ಬಸವಪ್ರಭುವೇ||
ಬಲವು ಇದ್ದು ತನಗೆ ಪರರು ಮಾಡುವ ಕ್ರೋಧ | ಗಳನು ಸ್ಮರಿಸುವುದೇ ಕಂದ ಇದನು |
ವರತಿತಿಕ್ಷೆಯೆಂದು ಒರೆನರಾರ್ಯರು ಎಂಬ|ಪರಮಗುರುವೆ ಸಲಹು ಬಸವಪ್ರಭುವೇ||

---

## ನಿಶ್ಚಿಂತಾತ್ಮ ಸು. 1750

ಇವನು ವೀರಭದ್ರಲೀಲಾವಿಜಯುವನ್ನು ಬರೆದಿದ್ದಾನೆ. ಈತನು ವೀರಶೈವಕವಿ. "ವೀರಶೈವದ ತಿರುಳ ಗುಣದ ಸಂಪನ್ನ, ಮಹಾಯತೀ

ಕ್ವರ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ವೀರಭದ್ರಲೀಲಾವಿಜಯ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಅಧ್ಯಾಯ 9, ಪದ್ಯ 900. ದಧೀಚಿಮುನಿ ಸೂತನಿಗೆ ಲಕ್ಷಗ್ರಂಥವಾಗಿ ಹೇಳಿದುದನ್ನು ಸಂಗ್ರಹಿಸಿ ಕವಿ ಕನ್ನಡದಲ್ಲಿ ಬರೆದಂತೆ ಹೇಳುತ್ತಾನೆ. ಆರಂಭದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ವೀರಭದ್ರ, ಪಾರ್ವತಿ ಇವರುಗಳನ್ನು ಹೊಗಳಿದ್ದಾನೆ. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಶ್ರೀ ಸೋಮೇಶ್ವರಪಾದಾರವಿಂದಮಧುಮತ್ತಮಧುಕರಾಯಮಾಣ ಮಹಾಯತೀಶ್ವರ ನಿಶ್ಶಂಕಾತ್ಮವಿರಚಿತ ವೀರಭದ್ರವಿಜಯಂ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

#### ವೀರಭದ್ರ

ವೀರತೆಯ ಪೊಗಟುವಡೆ ರುದ್ರನ | ಸಾರಿಯಾಗಿಯೆ ಪೇಳ್ವೆನಲ್ಲದೆ |
ವೀರಭದ್ರನ ಸಕಲಭೀಷಣರೌದ್ರದುನ್ನತಿಗೆ ||
ಆರ ಪ್ರತಿಯಿಡಬಹುದು ಜಗದೊಳು | ವೀರನಪ್ರತಿವೀರಭದ್ರಗೆ |
ವೀರಭದ್ರನೆ ಸರಿಯದಲ್ಲದೆ ಬೇಱೆ ಕಾಣೆಂದ ||

#### ವೀರಭದ್ರನ ಖಡ್ಗ

ಸಿಡಿಲ ಕಿಚ್ಚಿಯ ಕೊಟ್ಟು ಕಡೆಯಲಿ | ಮಿಡಿದು ಕಾಳಾಹಿಯ ಕುಡಿಯ ಮೇ |
ಲಿಡಿದು ಯಮದಂಡದಲಿ ಘಟ್ಟಿಸಿ ವಿಷದ ನೀರೂಡಿ ||
ಪಿಡಿದು ರವಿಮಂಡಲದ ಸಾಣೆಯ | ಸೃಜನು ಈ ಕಾಲಾಗ್ನಿರುದ್ರಗೆ |
ಪಿಡಿಯ ಕೊಟ್ಟನೊ ಎಂಬವೊಲು ಮೆಱೆವುದು ಮಹಾಖಡ್ಗ ||

— — —

## ನಿರಂಜನಾರ್ಯ ಸು. 1750

ಇವನು ನಂಜುಂಡಶತಕ, ನಿಷ್ಕಾಮವಚನ ಇವುಗಳನ್ನು ಬರೆದಿದ್ದಾನೆ. ಗಗನಾರ್ಯರ ತತ್ವಗಳು ಎಂಬ ಹಾಡುಗಳನ್ನೂ ಇವನೇ ಬರೆದಿರಬಹುದು. ಈತನು ಬ್ರಾಹ್ಮಣ ಕವಿಯೆಂದು ತೋರುತ್ತದೆ. ಇವನ ಗುರು ಗಗನಾನಂದ. ಕವಿಯ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥಗಳಲ್ಲಿ

### 1 ನಂಜುಂಡಶತಕ

ಇದು ಕಂದದಲ್ಲಿ ಬರೆದಿದೆ. ಪ್ರತಿ ಕಂದವೂ "ಗುರುನಂಜುಂಡಾ" ಎಂದು ಮುಗಿಯುತ್ತದೆ. ಇದಕ್ಕೆ ನೀತಿಶಾಸ್ತ್ರ ಎಂಬ ಹೆಸರೂ ಉಂಟು. ಅಂತ್ಯದಲ್ಲಿ ಈ ಗದ್ಯವಿದೆ—

ಇತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯ ಗಗನಾನಂದಗುರುವರ್ಯಚರಣಾರವಿಂದಮಕರಂದಲುಬ್ಧ ಭೃಂಗಾಯಮಾನ ನಿರಂಜನವಿರಚಿತಮಪ್ಪ ನೀತಿಶಾಸ್ತ್ರವೆಂಬ ನಂಜುಂಡಶತಕಂ.

ಈ ಗ್ರಂಥದಿಂದ ಒಂದೆರಡುಪದ್ಯಗಳನ್ನು ತೆಗೆದು ಬರೆಯುತ್ತೇವೆ:

ಪಶ್ಚಿಮದಿ ರವಿಯು ಮೂಡಲಿ | ಕಿಚ್ಚಿನ ಉರಿಯೊಳಗೆ ಕಮಲವರಳಲಿ ಮತ್ತಂ |
ಸಚ್ಚರಿತ ತಪ್ಪಿ ನುಡಿಯನು | ನಿಚ್ಚಲುಮಿದು ಸತ್ಯ ಕಂಡ್ಯ ಗುರುನಂಜುಂಡಾ ||
ಎರಿಯೆ ನೀರನು ಕುಡಿಯಲು | ಮಾರಿಯು ಮನೆ ಮನೆಯು ಮುಚ್ಚಿಯೆ ಕಾಡಿನ ಅನಲಂ ||
ಭೋರೆಂದು ಸುತ್ತಿ ಬೇಯಲು | ವಾರಿಪರಾರಿಲ್ಲ ಕಂಡ್ಯ ಗುರುನಂಜುಂಡಾ ||

### 2 ನಿಷ್ಕಾಮವಚನ

ಇದರಲ್ಲಿ 129 ಹಾಡುಗಳವೆ

### 3 ಗಗನಾರ್ಯರ ತತ್ವಗಳು.

ಇದರಲ್ಲಿ ವೇದಾಂತಬೋಧಕವಾದ ಹಾಡುಗಳವೆ. ಒಂದೊಂದರಲ್ಲಿಯೂ ಗಗನಾರ್ಯ ಎಂಬ ಅಂಕಿತವು ಬರುತ್ತದೆ. ಕೆಲವು ಹಾಡು

ಗಳು ಗಗನಾರ್ಯನ ಸ್ತುತಿರೂಪವಾಗಿರುವುದರಿಂದ ಈತನ ಶಿಷ್ಯನಾದ ನಿರಂಜನಾರ್ಯನೇ ಈ ಹಾಡುಗಳನ್ನು ಬರೆದಿರಬೇಕೆಂದು ತೋರುತ್ತದೆ. ಒಂದು ಹಾಡನ್ನು ಉದಾಹರಿಸುತ್ತೇವೆ—

ಪಲ್ಲವಿ|| ಬಹುಕಷ್ಟಪಟ್ಟೆ ನಾ ಭವದಿ | ಸಾಕಿನ್ನು ಹಚ ನಾನೈಕ್ಯವಾಗುವೆ ನಿಮ್ಮ ಪದದಿ||

ಹಲವು ಜನ್ಮಗಳಲ್ಲಿ ತಂದು ಹಿಂದೆ | ಹಲವು ದುಷ್ಕರ್ಮಫಲದಿಂದೆ ನಾನೊಂದು|
ಫಲಕಾಮುಕ್ತಿಷ್ಟೆಯಿಂ ಬೆಂದು | ಹಲವು ಕೆಲಕಾಲ ಸ್ವರ್ಗಮರ್ತ್ಯದೊಳಿಟ್ಟು
ದಂದು ||1||

ಕ್ಲೇಶಪಂಚಕದಿ ಬೆಳ್ಬಾಗಿ | ಆಷ್ಟಪಾಶದ ಲತೆಯ ಬಂಧನಕೊಳಗಾಗಿ |
ಈಷಣತ್ರಯದಾಸೆಗಾಗಿ | ಮೂಜ್ಜುವಾಸನೆಗಳಲಿ ತೊಡಕಿದೆನಾಗಿ ||2||

ಒಲ್ಲೆನಾನಿನ್ನು ಜನ್ಮಗಳ | ಒಲ್ಲೆನೊಲ್ಲೆನಾಸಿಹಪರಭೋಗಸೌಖ್ಯಗಳ |
ಒಲ್ಲೆನಾ ನಾನಾವಿಷಯಗಳ ಎನ್ನ | ಸೊಲ್ಲನಾಲಿಸೊ ಗಗನಾರ್ಯ ಸುಶೀಲ ||3||

---

? ನೃರಕ್ಷರಸುಕುಕ್ಷಿ ಸು. 1750

ಇವನು ಭಗವದ್ಗೀತೆಯನ್ನು ಬರೆದಿದ್ದಾನೆ. ಈತನು ಮಾಧ್ವ ಕವಿ. ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿಲ್ಲ. ಪ್ರತಿ ಸಂಧಿಯ ಕೊನೆಯಲ್ಲಿಯೂ ಬರುವ—

ಈಮಹೀಮಂಡಲದಿ ದಿವಿಜೋ | ದ್ದಾಮ ಯಾದವಕೃಷ್ಣಪಾರ್ಥರ |
ಪ್ರೇಮಸಂವಾದಾಖ್ಯಗೀತಾಶಾಸನಾರ್ಥವನು ||
ಭೀಮ ತನ್ನರಮನೆಯ ಬಾಣಸಿ | ನಾಮ ನೃರಕ್ಷರಸುಕುಕ್ಷಿಗೆ |
ನೇಮದಿಂದೊರೆದಿದ್ದ ಗುರು ಶ್ರೀವಾಸವಿಟ್ಠಲನಾ ||

ಎಂಬ ಪದ್ಯದಿಂದ ಕವಿಯ ಹೆಸರು ಮೇಲೆ ಕೊಟ್ಟಿರುವಂತೆ ಇರಬಹುದೋ ಎಂಬ ಊಹೆಗೆ ಅವಕಾಶವಿದೆ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ

## ಭಗವದ್ಗೀತೆ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 17, ಪದ್ಯ 629. ಭಗವದ್ಗೀತೆಯ ಪ್ರತಿ ಶ್ಲೋಕವನ್ನೂ ಬರೆದು ಅದರಡಿಯಲ್ಲಿ ಶ್ಲೋಕಕ್ಕೆ ಒಂದರಂತೆಯೂ, ಕೆಲವ್ರುಕಡೆ ಎರಡು, ಮೂರು, ನಾಲ್ಕು ಈರೀತಿಯಾಗಿಯೂ ಕನ್ನಡಷಟ್ಪದಿಗಳನ್ನು ಬರೆದಿದ್ದಾನೆ "ಭೀಮುಹನುಮನೆ ಮಧ್ವನಾಮದ । ಲೀಮುಹಿಯೊಳವತರಿಸಿ ಸುಜನ। ಪ್ರೇಮಿ ಗೀತಾಭಾಷ್ಯ ತಾತ್ಪರ್ಯವನು ವಿರಚಿಸಿದ ॥ "ಎಂಬುದರಿಂದ ಮಧ್ವಭಾಷ್ಯವನ್ನನುಸರಿಸಿ ಕವಿ ಗೀತಾರ್ಥವನ್ನು ವಿವರಿಸಿರುವಂತೆ ತಿಳಿಯುತ್ತದೆ ಗ್ರಂಥಾವತಾರದಲ್ಲಿ ವಿಷ್ಣುಸ್ತುತಿಯಿದೆ.

ಈ ಗ್ರಂಥದಿಂದ ಒಂದು ಪದ್ಯವನ್ನ ತೆಗೆದು ಬರೆಯುತ್ತೇವೆ—

ಕೊಡಲಬೇಕುದು ದೇಶಕಾಲಗ । ಳೆಡೆಯುಚಿತ ಸತ್ಪಾತ್ರರುಗಳಲಿ ।
ತಡವ ಮಾಡದೆ ದಾನಗಳ । ನೆಂದಾವವಸ್ತುವನು ॥
ಧುಡಿತೆಯುಲಿಯುಪಕಾರವೆಣಿಸದೆ । ಸಡಗರದಲಿತರರಿಗೆ ನೀಡಲು ।
ಪೊಡವಿಯೊಳು ತದ್ದಾನ ಸಾತ್ವಿಕವೆನಿಸಿಕೊಂಬುದೆಲ್ಲೈ ॥[1]

— —

## ? ವಿಟ್ಠಲ 1751

ಈತನು ವರದವಿಟ್ಠಲರಾಮಾಯಣವನ್ನು ಬರೆದಿದ್ದಾನೆ. ಗ್ರಂಥದಲ್ಲಿ ಕವಿಯ ಹೆಸರು ಹೇಳಿಲ್ಲ. ಆದರೂ ಕೆಲವು ಸಂದರ್ಭಗಳಿಂದ ಅವನ ಹೆಸರು ವರದವಿಟ್ಠಲ ಅಥವಾ ವಿಟ್ಠಲ ಎಂದಿರಬಹುದೆಂದು ತೋರುತ್ತದೆ. ಇವನು ಬ್ರಾಹ್ಮಣಕವಿ. "ವಾಲಗಳ್ಳಿಯ ವರದವಿಟ್ಠಲ ಪಾಲಿಸುಗೆ ಮತಿಯ" ಎಂದು ವಾಲಗಳ್ಳಿಯ ದೇವರನ್ನು ಸ್ತುತಿಸುವುದರಿಂದ

---

1 ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।
ದೇಶೇ ಕಾಲೇ ಚ ಪಾತ್ರೇ ಚ । ತದ್ದಾನಂ ಸಾತ್ವಿಕಂ ಸ್ಮೃತಂ ॥

ಕವಿ ಆವೂರಿನವನಾಗಿರಬಹುದು. ಈ ಗ್ರಂಥವನ್ನು ಶಕ 1674ನೆಯ ಭಾವ ವರ್ಷದಲ್ಲಿ-ಎಂದರೆ 1751 ರಲ್ಲಿ, ಬರೆದಂತೆ ಹೇಳುತ್ತಾನೆ.

ಇವನ ಗ್ರಂಥ

ವರದವಿಟ್ಠಲ ರಾಮಾಯಣ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 56, ಪದ್ಯ 3382. ಇದರಲ್ಲಿ ರಾಮಾಯಣಕಥೆ ಒಂದು ವಿಧವಾಗಿ ಹೇಳಿದೆ.

ಕಥಾಸಾರ—ಕೋಸಲದೇಶದ ಕುಶಲನೃಪನ ಮಗಳನ್ನು ದಶರಥನಿಗೆ ನಿಶ್ಚಯಿಸಿರಲು, ರಾವಣನು ಅವಳನ್ನು ಅಪಹರಿಸಿ ಸಮುದ್ರದಲ್ಲಿ ಇಟ್ಟಿದ್ದನು. ಆದರೂ ದೈವಯೋಗದಿಂದ ದಶರಥನಿಗೂ ಅವಳಿಗೂ ಸಮಾಗಮವಾಗಿ ಮದುವೆಯಾಯಿತು. ರಾವಣನ ಮಗನಾದ ಮೂಲಕಾಸುರನು ನಾರದನಿಂದ ಚೋದಿತನಾಗಿ ವಿಭೀಷಣನನ್ನು ಜಯಿಸಿ ಅಯೋಧ್ಯೆಗೆ ಹೋಗಿ ರಾಮಲಕ್ಷ್ಮಣರನ್ನು ಜಯಿಸಿ ರಾಮಪುತ್ರನಾದ ಕುಶನಿಂದ ಸಂಹರಿಸಲ್ಪಟ್ಟನು.

ಗ್ರಂಥಾವತಾರದಲ್ಲಿ ವರದವಿಟ್ಠಲಸ್ತುತಿ ಇದೆ. ಬಳಿಕ ಕವಿ ಮಧುಕೇಶ್ವರ, ದುರ್ಗಿ, ಸರಸ್ವತಿ ಇವರುಗಳನ್ನು ಸ್ತುತಿಸಿದ್ದಾನೆ. ಇವನ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಸೀತಾವಿಯೋಗ

ಅಱಿವು ತಲೆಕೆಳಗಾಯ್ತು ಧೈರ್ಯದ | ಹೊಱಗೆ ತಪ್ಪಿತು ಕರಣ ಕದಡಿತು |
ತೊಱೆದ ಮತಿ ಗತವಾಯ್ತು ಮಾಯಾಪಾಶ ಬಿಗುಹೇಱೆ ||
ಮಱುಗಿದನು ಮಿಗೆ ತನ್ನ ಮಱೆತನು | ಹೊಱಗೆ ಬಲಿದುದು ಮೂರ್ಛೆ ಯೋಗದ
ಉಱೆಯದಿದ್ದನು ರಾಮ ಮಾನವರಳವೆ ವಿಧಿವಿಹಿತ ||

ಅಶೋಕವನಭಂಗ

ಹಿರಿಯರನು ಕರೆವಂತೆ ಬನ್ನಿಯ | ನರೆಯ ಹೊತ್ತನರಂತೆ ಮುತ್ತವ |
ಹರನ ವಾಹನದಂತೆ ನಂದಿಯ ಮರನ ಕಪಿ ಕಿತ್ತ ||
ತರುಣಿಯರ ಕಿವಿಯಂತೆ ಹಾಲೆಯ | ಹರಿಯ ಹಣೆಯಂತೆಸೆವ ತಿಲಕದ |
ಕರ ಬಡವನೆನಿಸಿರ್ಪ ತಾಱೆಯ ಮರನ ಕಪಿ ಕಿತ್ತ ||

### ರಾಮಯುದ್ಧ

ನಡುಗಿ ಹಿಮದಲಿ ಮಿಂದು ಪಾವಕ | ನೊಡಲ ತುಂಬಿಸಿ ಜಪತಪಂಗಳ |
ಝುಡಿತೆಯಲಿ ದೇಸತ್ತು ಸ್ವರ್ಗದ ಸತಿಯರಂ? ಸರವಾ ||
ಹಡೆಯಲರಿಯರು ಜಪತಪಂಗಳ | ತೊಡರು ಹೊದ್ದದ ಪಾಪಿದೈತ್ಯರು |
ಮಡಿದು ಸ್ವರ್ಗವ ಸೂಱೆಗೊಂಡರು ರಾಮಬಾಣದಲಿ ||

### ಊಟ

ಶಾತವೇಂಮವಿನತ ಧವಳದ | ನೀರುಸೇಕದ ತನಿಯ ಮೊಸರನು |
ವಾರಿಜಾಕ್ಷಿಯರೆಯ್ದೆ ಬಡಿಸಿತು ಕಣ್ಣು ಕೋರೈಸೆ ||
ಚಾರುಮೋಣಸಿನಕಣೆಯ ಸತಿಯರು | ಕಾತಫಲಗಳ ಮಾದಲಂಗಳ |
ಶಾರವಲ್ಲಿಯ ನೆಲ್ಲಿಕೇರಳೆಗಳ ಬಡಿಸಿದರು ||

### ವಿಷ್ಣುಸ್ತುತಿ

ಹರಿಯ ನೇದರ. ಹುಯ್ಯೊಳಿದರ್ನ | ಹರಿಯ ಚರಣದಿ ಮೆಟ್ಟಿ ಬಿಟ್ಟನ |
ಹರಿಯ ಕೊಂದನ ಹರಿಯ ಕಾಯ್ದನ ಹರಿಯ ಕಟ್ಟಿದನ ||
ಹರಿಯ ಮಗಳನು ಕೂಡಿದಾತನ | ಹರಿಯಮೇಲೊಱಗಿರ್ಪ ದೇವನ |
ಚರಣಕೆಱಗುವೆ ವರದವಿಟ್ಠಲ ಸಲಹುಗನವರತ ||
ಮೃಗವ ಧರಿಸಿಹ ಹಗೆಯ ವೈರಿಯ | ಪೆಗಲನೇಱಿ ಸಂಚರಿಸುತಿರ್ಪನ |
ಮಗಗೆ ಮುನಿದನ ಪುರವ ನೆಗಹಿದನನುಜನ ಮೊಯ್ವೊಗಲು ||
ಬಗೆಯದವನನು ಕೊಲಲು ಬಿಡಿಸಿದ | ನೊಗುಮಿಗೆಯ ಪದವಿಗಳನಿತ್ತಿಹ |
ನಗಲಪೆನ್ನನು ವರದವಿಟ್ಠಲ ಸಲಹುಗನವರತ ||

---

### ಶಾಂತಿಕೀರ್ತಿ. 1755

ಇವನು ದೇವಸೇನನ ಆರಾಧನಾಸಾರಕ್ಕೆ ಟೀಕೆಯನ್ನು ಬರದಿದ್ದಾನೆ. ಈತನು ಜೈನಕವಿ. ತನ್ನ ಟೀಕೆಯನ್ನು ಶಕ 1677ರಲ್ಲಿ, ಎಂದರೆ 1755 ರಲ್ಲಿ ಬರೆದಂತೆ ಹೇಳುತ್ತಾನೆ.

---

## ವರಾಹತಿಮ್ಮಪ್ಪ. 1759

ಈ ಅಂಕಿತವುಳ್ಳ ಅನೇಕ ಕೀರ್ತನೆಗಳು ದೊರೆಯುತ್ತವೆ. ಇದೇ ಕವಿಯ ಹೆಸರಾಗಿರಬಹುದು. ಈತನು ಮಾಧ್ವಕವಿ. ಇವನ ಒಂದು ಕೀರ್ತನೆಯಲ್ಲಿ—ದೇಶವು ನವಾಬದೇವನ ಸ್ವಾಧೀನವಾಯಿತು. ಶಿವಭಕ್ತರು ವೇಣುಪುರದಿಂದ ಓಡಿದರು— ಎಂದು ಹೇಳಿ ಪ್ರಮಾಥಿವರ್ಷವನ್ನು ಹೇಳುವುದರಿಂದ ಈ ನವಾಬನು ಹೈದರನಾಗಿರಬೇಕು, ಪ್ರಮಾಥಿವರ್ಷವು ಕ್ರಿಸ್ತಶಕ 1759 ಆಗಬೇಕು ಎಂದು ಮಿ॥ ಕಿಟ್ಟೆಲ್[1] ಬರೆದಿದ್ದಾರೆ। ವೇಣುಪುರದ (ಬಿದನೂರು) ಅರಸರ ರಾಜ್ಯವು 1763ರಲ್ಲಿ ಕೊನೆಗಂಡಿತು. ಆದರೆ ಈ ಕೀರ್ತನೆಯಲ್ಲಿ ಒಬ್ಬ ವಿಬುಧೇಂದ್ರಯತಿಯ ಹೆಸರೂ ಹೇಳಿದೆ. ಈ ಹೆಸರಿನ ಒಬ್ಬ ಗುರು ಸುಮಾರು 1500 ರಲ್ಲಿ ನಂಜನಗೂಡು ರಾಘವೇಂದ್ರ ಸ್ವಾಮಿ ಮಠವನ್ನು ಸ್ಥಾಪಿಸಿದಂತೆ ತಿಳಿಯುತ್ತದೆ. ಕವಿ ಹೇಳುವ ಗುರು ಈತನಲ್ಲವೆಂದು ತೋರುತ್ತದೆ. ಈ ಕವಿಯ ಒಂದು ಕೀರ್ತನೆಯನ್ನು ತೆಗೆದು ಬರೆಯುತ್ತೇವೆ—

ರಾಗ ತೋಡಿ—ಝಂಪೆತಾಳ

ಪಲ್ಲವಿ॥ ಒಲ್ಲೆನೊಲ್ಲೆ ಸಲ್ಲದೈ ಖುಲ್ಲ ಮಾತುಗಳು |
ಸಲ್ಲದಾಯುಷ್ಕೀರ್ತಿಯೆಲ್ಲನೊಲ್ಲೆ ಕೇಳಿ ||

ಆಸು ಸದ್ಭಾವನೆಂಬ ಪರಸಪಾದಲು ಸಲ್ಲ | ಕಾಸಿ ಕೇಳದ ಮಾತನಾಡಸಲ್ಲ |
ಪರಸತಿಯ ಮನೆಯೊಳಗೆ ಇರಿಸಿಕೊಂಡಿರಸಲ್ಲ | ಬೆಸಸಿ ಬಹ ಪಾತಕವನರಿಸು ವರೆಸಲ್ಲ ||1||

ಹಗಲುಗಳ್ಳನ ಕೈಯ ಜಗಳವಾಡಲು ಸಲ್ಲ|ಹಗೆಯೊಡನೆ ಸ್ನೇಹವನು ಮಾಡಸಲ್ಲ|
ಜಗಳಗಂಟಿಕ್ಕುವನ ಮೊಗಸಾಲೆಗೆ ನಗೆಯಿಲ್ಲ | ಅಗಲಿಪೋಗುವೆನೆಂಬ ಮಗನ ಸೊಗಸಿಲ್ಲ ||2||

---

1. *Nagavarma's Prosody*, Introduction, 71.

ಹರಿಯು ಮುನಿದರೆ ಮುಂಜುನ್ಯೋಳಿರಿಸಿಕೊಂಬವರಿಲ್ಲ | ಹರಿಯೊಲಿದ ನರನೊಳಗೆ ಗೆಲುವ ಪರಿಯಿಲ್ಲ
ಸಿರಿಯರಸ ವರಹತಿಮ್ಮಪ್ಪವಿರವನು ಬಲ್ಲ | ನರನು ಹರಿದೂಷಕರ ಸರಿಯೊಳಗೆ | ನಿಲ್ಲ ||3||

———

## ವಿಠಲದಾಸ. ಸು. 1760

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಅಭಿನವಪುರಂದರದಾಸ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1760 ಆಗಿರಬಹುದು.

———

## ಸುರಾಲ 1761

ಈತನು ಪದ್ಮಾವತೀಚರಿತೆಯನ್ನು ಬರೆದಿದ್ದಾನೆ. ಇವನು ಜೈನಕವಿ ಈ ಗ್ರಂಥವನ್ನು ಪುತ್ತಿಕಾಪುರದ ಚಂದ್ರಶೇಖರ ಚಿಕ್ಕರಾಯಚಾಟನ ರಾಣಿವಾಸದ ಚೆನ್ನಮ್ಮದೇವಿಯ ಇಷ್ಟಾನುಸಾರವಾಗಿ 1761 ರಲ್ಲಿ ಬರೆದಂತೆ ಹೇಳುತ್ತಾನೆ ಎಂದು ಮೆ|| ರೈಸ್' ಬರೆದಿದ್ದಾರೆ.

ಇವನ ಗ್ರಂಥ

### ಪದ್ಮಾವತೀಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 12, ಪದ್ಯ 1671. ಇದರಲ್ಲಿ ಪದಾವತಿಯೆಂಬ ಯಕ್ಷಿಯ ಕಥೆ ಹೇಳಿದೆ.

———

## ಶಂಕರಕವಿ 1763

ಈತನು ಚೋರಬಸವಚರಿತ್ರೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ. ಕೋಳೂರರಾಮೇಶ್ವರನ ಅನುಗ್ರಹದಿಂದ ಈ ಗ್ರಂಥವನ್ನು ಬರೆದಂತೆ ಹೇಳುವುದರಿಂದ ಇವನ ಸ್ಥಳವು ಕೋಳೂರಾಗಿರಬಹುದು ಎಂದು ತೋರುತ್ತದೆ ಈ ಗ್ರಂಥವನ್ನು ಶಕ 1685 ನೆಯ

ಸ್ವಭಾನುವಿನಲ್ಲಿ--ಎಂದರೆ 1763ರಲ್ಲಿ-ರಚಿಸಿದಂತೆ ಹೇಳುತ್ತಾನೆ. ಪ್ರಭು ಲಿಂಗಲೀಲೆಯನ್ನು ಬರೆದ ಚಾಮರಸನ ವಿಷಯವಾಗಿಯೂ ಭಾರತ ವನ್ನು ಬರೆದ ಕುಮಾರವ್ಯಾಸನ ವಿಷಯವಾಗಿಯೂ ಕವಿ ಕೆಲವು ಹೊಸ ಅಂಶಗಳನ್ನು ಹೇಳಿದ್ದಾನೆ ಇವುಗಳನ್ನು ಇವನ ಗ್ರಂಥವಿಮರ್ಶನಾವ ಸರದಲ್ಲಿ ವಿವರಿಸುತ್ತೇವೆ.

ಪೂರ್ವಕವಿಗಳಲ್ಲಿ ಕಾಳಿದಾಸ, ಬಾಣ, ಮಯೂರ, ಭೋಜ, ಪಾಲ್ಕುರಿಕೆಸೋಮ, ಹರಿಹರ, ಚಾಮರಸ, ರಾಘವ, ಕೆರೆಯಪದ್ಮ ರಸ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

## ಚೋರಬಸವಚರಿತ್ರೆ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 13, ಪದ್ಯ 755. ಇದರಲ್ಲಿ ವರಾಂತಪುರದ ದೊರೆಯಾದ ಮಹಾದೇವನು ಕಾವಲಲ್ಲಿ ಇಟ್ಟಿದ್ದ 6000 ಜಂಗಮರನ್ನು ಬಸವನು ವೈಶ್ಯವೇಷದಿಂದ ಹೋಗಿ ಕದ್ದು ಹಸುಬೆಯಲ್ಲಿ ತುಂಬಿಕೊಂಡು ಬಂದ ಕಥೆ ಹೇಳಿದೆ. ಈ ಕಥೆ ಯನ್ನು ಮೊದಲು ಹಂಪೆಯ ಹರಿಹರಶಿವಾಚಾರ್ಯನು ಚಾಮರಸನಿಗೆ ಹೇಳಿದುದಾಗಿ ಕವಿ ತಿಳಿಸುತ್ತಾನೆ ಚಾಮರಸನ ಕಥೆಗೂ ಸ್ವಲ್ಪವು ಟ್ಟಿಗೆ ಈ ಗ್ರಂಥದಲ್ಲಿ ಉಕ್ತವಾಗಿದೆ.

ಚಾಮರಸನು ಹರಿಹರನನ್ನು ಕುರಿತು—ನಾನು ಹುಟ್ಟಿದ ಊರು ಗದಗು; ನನ್ನ ತಂಗಿಯನ್ನು ಕುಮಾರವ್ಯಾಸನಿಗೆ ಕೊಟ್ಟಿದೆ. ಸಮ್ಮಿಬ್ಬರನ್ನೂ ದೇವರಾಯನು ಕರೆಸಿ ಭಾರತವನ್ನು ಕನ್ನಡಿಸಿ ಎನಲು ನಾನು ಪೂರ್ವಾರ್ಧವನ್ನೂ ಅವನು ಉತ್ತರಾರ್ಧವನ್ನೂ ಮಾಡಿದೆವು. ವಿದ್ವಾಂಸರು ಪರೀಕ್ಷಿಸುತ್ತಿರಲು ನನ್ನ ಪುಸ್ತಕವನ್ನು ಹಿಸುಕಿದೆನು. ರುಧಿರ ಕರೆಯಿತು ; ಈ ಭಾಗವನ್ನು ಮೆಚ್ಚಿ ಕುಮಾರವ್ಯಾಸನ ಭಾಗವನ್ನು ವಿಪ್ರರಗ್ರೈದರು ಅವನು ಖತಿಗೊಂಡು ತನಗೆ ದೊರೆಯಿಂದ ಮನ್ನಣೆಯಾಗುವುದಿಲ್ಲ ಕಾಶಿಗೆ ಹೊರಟು ಹೋಗುವೆನು ಎಂದು ಸೊಂತಿಗೆ ಹೇಳಲು ಅವಳು ಹೆದರಿ ಅಣ್ಣನಮನೆಗೆ ಹೋಗಿ ಪೂರ್ವಭಾಗದ ಪುಸ್ತಕನನ್ನು ಒಯ್ದು ದಹಿಸಿ ಗಂಡನನ್ನು ಸಮಾಧಾನಪಡಿಸಿದಳು.

ಈ ದುಃಖಕ್ಕಾಗಿ ನಾನು ಎಲ್ಲವನ್ನೂ ತ್ಯಜಿಸಿ ಯತಿಯಾಗಿ ಕ್ಷೇತ್ರಯಾತ್ರೆಮಾಡಿಕೊಂಡು ಇಲ್ಲಿಗೆ ಬಂದೆನು; ಉಪದೇಶವನ್ನು ಕೊಟ್ಟು ಕಾಪಾಡು–ಎಂದನು. ಹರಿಹರನು ನರಸ್ತುತಿಮಾಡಿದೆ, ಇದು ದೋಷ; ಶಿವಶರಣರ ಸ್ತುತಿಸು ಎನಲು, ನನಗೆ ಅವರ ಮಹಿಮೆ ತಿಳಿಯದು ಎನಲು, ಚೋಳಬಸವನ ಮಹಿಮೆಯನ್ನು ರಾಘವಭೀಮಲಕ್ಕಣಾಮಾತ್ಯರುಗಳ ಇದಿರಿಗೆ ಹೇಳುತ್ತಾನೆ. ಚಾಮರಸನು ಪ್ರಭುಲಿಂಗಲೀಲೆಯನ್ನು ಬರೆದು ದೇವರಾಯನ ಸಭೆಯಲ್ಲಿ ಓದಲು ವಿದ್ವಾಂಸರೆಲ್ಲಾ ಮೆಚ್ಚಿದರು; ದೊರೆ ಆನೆಯಮೇಲೆ ಮೆರೆವಣಿಗೆ ಮಾಡಿಸಿದನು. ಭಾರತವನ್ನು ಸಂಪೂರ್ಣಮಾಡಿದ ಕುಮಾರವ್ಯಾಸನಿಗೆ ಹೊನ್ನಿನಭಿಷೇಕಮಾಡುವುದಾಗಿ ದೊರೆ ನಿಶ್ಚಯಿಸಿದ್ದನು. ಚಾಮರಸನು ಅದು ಸತ್ತ ಪ್ರಬಂಧ ಅದಕೇಕೆ ಮಾಡಬೇಕು ಎಂದು ತನ್ನ ಗ್ರಂಥವನ್ನು ಪ್ರಶಂಸಿಸಿ ಇದು ಸತ್ತವರ ಕಥೆಯಲ್ಲ, ಸಾಯದ ಪುಣ್ಯಪುರುಷರ ಚರಿತೆ ಎನ್ನಲು ದೊರೆ ನಿಜವೆಂದು ತಿಳಿದು ಭಾರತವನ್ನು ನಿಸ್ಸಾರಗೈದು ಕನಕಸ್ನಾನವಂ ಪರಿಹರಿಸಿ ಚಾಮರಸನಿಂದ ವೀರಶೈವ ದೀಕ್ಷೆಯನ್ನು ಪಡೆದನು.

ಇಲ್ಲಿ ಹೇಳಿರುವ ದೇವರಾಯನು 1419 ರಿಂದ 1446 ರವರೆಗೆ ಆಳಿದ ವಿಜಯನಗರದ ದೊರೆ. ಕುಮಾರವ್ಯಾಸನೂ ಚಾಮರಸನೂ ಸಮಕಾಲದವರು ಎಂಬ ಕಥೆ ಗುರುರಾಜಚಾರಿತ್ರದಲ್ಲಿಯೂ [ಸು. 1650] ಹೇಳಿರುವ ಸಂಗತಿಯನ್ನು ಚಾಮರಸನ ಚರಿತ್ರದಲ್ಲಿ ತಿಳಿಸಿದ್ದೇವೆ. ಪರಂತು ಈ ಕವಿ ಹರೀಶ್ವರನನ್ನೂ [ಸು. 1165] ಚಾಮರಸನನ್ನೂ [ಸು. 1430] ಸಮಕಾಲದವರನ್ನಾಗಿ ಮಾಡಿರುವುದು ಭ್ರಾಂತಿಯೇ ಸರಿ.

ಗ್ರಂಥಾವತಾರದಲ್ಲಿ ಕೊಳ್ಳೂರ ರಾಮೇಶ್ವರಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ನಂದಿ, ಭೃಂಗಿ, ಷಣ್ಮುಖ ಇವರನ್ನು ಸ್ತುತಿಸಿ ಆಮೇಲೆ ಬಸವನೇ ಮೊದಲಾದ ಪುರಾತನರನ್ನು[1] ಸ್ಮರಿಸಿದ್ದಾನೆ. ಪ್ರಭುಲಿಂಗಲೀಲೆಯ ಕಥಾಗರ್ಭವನ್ನು ಹೀಗೆ ತಿಳಿಸಿದ್ದಾನೆ—

---

1. ಬಸವ, ಚೆನ್ನಬಸವ, ಮಡಿವಾಳ, ಅಪ್ಪಣ್ಣ, ಕಿನ್ನರ, ಹೊನ್ನತಂದೆ, ಬಾಚರಸ, ಕಲಕೇತ, ಕಕ್ಕಯ್ಯ ಚಿಕ್ಕಯ್ಯ ನಾಗಾಂಬೆ, ನೀಲಾಂಬಿಕೆ, ಪ್ರಭುದೇವ,

ಕರವೂರ ನಿರಹಂಕಾರಸುಜ್ಞಾನಿಗಳಿಗೆ ನಿರ್ಮಾಯನೆಂಬ ಗಣನಾಥನು ಪ್ರಭು ನಾಮದಿಂದ ಮಗನಾಗಿ ಹುಟ್ಟಿ ಪದ್ಮಿನಿಯೆಂಬ ಹೆಂಡತಿಯೊಡನೆ ರಾಜ್ಯವಾಳುತ್ತಿದ್ದನು. ಗುರುಗುಹೇಶನ ಉಪದೇಶದಿಂದ ವಿರಕ್ತನಾಗಿರಲು ಪಾರ್ವತಿ ಇವನನ್ನು ಅನುರಕ್ತನನ್ನಾಗಿ ಮಾಡಬೇಕೆಂದು ತಾಮಸದಕಳೆಯನ್ನು ಕಳುಹೆ ಅದು ಬನವಾಸಿಯ ಮಮಕಾರಮೋಹಿನಿಗಳಿಗೆ ಮಾಯೆ ಎಂಬ ಮಗಳಾಗಿ ಹುಟ್ಟಿತು. ಮಧುಕನಾಥನ ಆಲಯದಲ್ಲಿ ಮದ್ದಳೆಯನ್ನು ಬಾರಿಸುತ್ತಿದ್ದ ಇವನನ್ನು ನೋಡಿ ಮಾಯೆ ಮನಸೋತಳು. ಇವನು ವಶವಾಗದೆ ದೇಶಸಂಚಾರಮಾಡಿ ಗೊಗ್ಗಯ್ಯನಿಂದ ಸಮಾಧಿಯತೆಗೆಯಿಸಿ ಅನಿಮಿಷನ ಲಿಂಗವ ತಳೆದು ಅವನಿಗೆ ಮುಕ್ತಿಯಿತ್ತು ಮುಕ್ತಾಯಕ್ಕನ ದುಃಖವನ್ನು ಬಿಡಿಸಿ ಸೊನ್ನಲಾಪುರದ ಸಿದ್ಧರಾಮನಿಗೆ ಉಪದೇಶಮಾಡಿ ಕಲ್ಯಾಣಕ್ಕೆ ಹೋಗಿ ಮರುಳಶಂಕರನಿಗೆ ಐಕ್ಯವನಿತ್ತು ಬಸವನ ಇಷ್ಟವ ಸಲಿಸಿ ಮಹಾದೇವಿಯ ಮುಕ್ತಳಂ ಮಾಡಿ ಗೋರಕ್ಷನಿಗೆ ಜ್ಞಾನವನರುಹಿದನು.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಶಿವನು ಉಣ್ಣದಿರಲು ಕರಿಕಾಲಚೋಳನ ಉಕ್ತಿ

ಉಪ್ಪು ಸಾಲದೊ ಕಾರ ಬಹಳವೋ ಒಗ್ಗರಣೆ |
ತಪ್ಪಿದುವೊ ಕಾಯಿಗಳು ಬೇಯಲಿಲ್ಲವೊ ಸಾರು |
ಸಪ್ಪಗಾದುದೊ ಹುಳಿಯು ಪಾಯಸವು ಪಾಕವಿಲ್ಲವೊ ಭಕ್ಷ್ಯಕರಿಯಾದುವೋ ||
ಒಪ್ಪದಿಂ ಬಲಿಸರೋ ಪರಮಾನ್ನದಕ್ಕಿಯನು |
ತುಪ್ಪ ಕಡುಗಾದುದೋ ಕ್ಷೀರ ನೀರ್ವರಿದುವೋ |
ಕಪ್ಪುಗೊರಳನು ಉಣದೆ ಮುಳಿದಕಾರಣವೇನು ನುಡಿಯದಿರಲಾನುಣುವೆನೇ ||

ಯುದ್ಧ

ನಿಬ್ಬರದ ನಿಸ್ಸಾಳವಬ್ಬರದ ಕಹಳೆಗಳು |
ಬೊಬ್ಬಿಡುವ ಪಟುಭಟರು ಅಭ್ರಕ್ಕೆ ನೆಗೆವಶ್ವ |
ಉಬ್ಬಿ ತೇರ್ಗಡಣದಿಂ ಮೊಬ್ಬಿಡುವ ಕರಿಯ ಪ್ರೋತ್ತೊತ್ತೆ ಕಾಲಾಳ್ಗಳಿಧಾಳಿ ||
ಹಬ್ಬಿ ಧ್ರುವಮಂಡಲವ ಮುಸುಕಿತ್ತು ಸಂಗ್ರಾಮ |
ದಬ್ಬರಕೆ ಧರಣಿ ತಲ್ಲಣಿಸಿತ್ತು ದಿಗ್ದಂತಿ |

ಕಬ್ಬಿಬ್ಬುಗೊಂಡಾದಿಶೇಷಶಿರ ಕುಸಿರು ಕೂರ್ಮನ ಬೆನ್ನುಬಿರಿದುದಾಗ ||

---

## ಶಿವರಾಮ ಸು. 1765

ಈತನು ಶಿವಭಕ್ತಿಸಾರವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಶ್ರೀವತ್ಸಗೋತ್ರದವನು; ಶಿವಗಂಗಾಮಠದ ಅಭಿನವಗಂಗಾಧರ ಭಾರತಿಯ ಶಿಷ್ಯನು 'ಧರೆಯೊಳಧಿಕ ನಿಷ್ಪ ನರ್ತನ | ಪುರದೊಡೆಯ ಸೋಮೇಶಲಿಂಗನ | ಸಿರಿಪದದ್ವಯಸೇವಕರಸೇವಕ' ಎಂದು ಹೇಳಿಕೊಂಡಿರುವುದರಿಂದ ನರ್ತನಪುರವು ಇವನ ಊರಾಗಿರಬಹುದು. ಶಿವಗಂಗಾಮಠದ ಪಟ್ಟಕ್ಕೆ ಅಭಿನವಗಂಗಾಧರಭಾರತಿ 1765 ರಲ್ಲಿ ಬಂದುದಾಗಿ ತಿಳವುದರಿಂದ ಕವಿಯ ಕಾಲವೂ ಸುಮಾರು ಅದೇ ಆಗಿರಬಹುದು.

ಇವನ ಗ್ರಂಥ

### ಶಿವಭಕ್ತಿಸಾರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 108. ಪ್ರತಿಪದ್ಯವೂ 'ರಕ್ಷಿಸು ನಮ್ಮನನವರತ' ಎಂದು ಮುಗಿಯುತ್ತದೆ. ಇದು ಶಿವಸ್ತುತಿರೂಪವಾದ ಗ್ರಂಥ; ಭಕ್ತಿರಸಪ್ರಧಾನವಾಗಿದೆ. ಆರಂಭದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣೇಶ, ಸರಸ್ವತಿ, ಕಾಲಭೈರವ, ನಂದಿ, ವೀರಭದ್ರ, ಷಣ್ಮುಖ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಸುಧೆಯ ರುಚಿಯನು ಸುರರು ಚಂದ್ರಮ | ನುದಿಸುವುದನು ಚಕೋರಸಂತತಿ |
ಪದುಮವನವನು ಹಂಸೆಗಳು ಪುರುಷನನು ಕುಲವನಿತೆ ||
ನಿಧಿಯನಾರ್ತನು ಒಯಸುವಂದದಿ | ಹೃದಯದೊಳು ನಾ ನಿಮ್ಮ ನೆನೆವೆನು |
ಮದನರಿಪು ಮೈದೋಱಿ ರಕ್ಷಿಸು ನಮ್ಮನನವರತ ||

ಘೋರತರಸಂಸಾರಪಾರಾ | ವಾರದೊಳು ಬಿದ್ದೀಜುತಾಜುತ |
ಕ್ರೂರಕಾಮಕ್ರೋಧಜಲಚರದುಪಟಲಕೆ ಸಿಲುಕಿ ||

ಪಾರಗಾಣದೆ ತೊಳಲಿ ಬಳಲುವೆ | ಮಾರಹರ ಮಂದಾಕಿನೀಧರ |
ಆರು ಗತಿಯೆಲೈ ಶಿವನೆ ರಕ್ಷಿಸು ನಮ್ಮನನವರತ ||

---

## ನಾರಸಿಂಹ 1768

ಈತನು ಅನುಭವಶಿಖಾಮಣಿಯನ್ನು ಬರೆದಿದ್ದಾನೆ. ಇವನು ವೀರಶೈವಕವಿ ಎಂದು ತೋರುತ್ತದೆ ಇವನ ತಂದೆ ಕ್ರತುಪುರದ (ಗದಗು) ಪರಗಣೆಗೆ ಸೇರಿದ ಕುರುತುಕೋಟೆಯ ಕರಣಿಕ ಲಕ್ಷ್ಮೀಶ; ಗುರು ಗೌತಮಗೋತ್ರದ ಬೋಧಾಯನ ಸೂತ್ರದ ಯಜುಶ್ಶಾಖೆಯ ಪೆದ್ದರಸ, ಪುರೋಹಿತ ಜಾಡರಹೆಬ್ಬಳ್ಳಿಯ ಜೊಮ್ಮಭಟ್ಟ ವಿದ್ಯಾಗುರು ಮಯೂರಪುರದ ಗೋವಿಂದಸ್ವಾಮಿ—ಇವನು ಕವಿಯ ಸೋದರದಮಾವನೆಂದು ತೋರುತ್ತದೆ. ಇವನೇ ಕವಿಗೆ ಕವಿತ್ವದ ಹಾದಿಯನ್ನು ತೋರಿಸಿದವನು ಎಂದು ಹೇಳಿದೆ. ತನ್ನ ಗ್ರಂಥವನ್ನು ಸರ್ವಧಾರಿಸಂವತ್ಸರದ ಶ್ರಾವಣಶುದ್ಧ ಪಾಡ್ಯದಲ್ಲಿ ಆರಂಭಿಸಿ ಭಾದ್ರಪದ ಬಹುಳ ಪಂಚಮಿಯ ದಿನ ಮುಗಿಸಿದಂತೆ ಹೇಳುತ್ತಾನೆ ಈ ಸರ್ವಧಾರಿವರ್ಷವು 1768 ಆಗಿರಬಹುದೆಂದು ತೋರುತ್ತದೆ. ತನ್ನ ಗ್ರಂಥವನ್ನು ಹಂಪೆಯ ವಿರೂಪಾಕ್ಷನ ಅಂಕಿತದಲ್ಲಿ ಬರೆದಿದ್ದಾನೆ

ಇವನ ಹೆಸರು ರಾಮಚಂದ್ರ ಎಂದು ಮೆ|| ಕಿಟ್ಟೆಲ್, ಮೆ|| ರೈಸ್ ಇವರಿಬ್ಬರೂ ಭ್ರಮಿಸಿದ್ದಾರೆ ಗ್ರಂಥದ ಆದಿಭಾಗದಲ್ಲಿ ಲಕ್ಷ್ಮಿಯನ್ನು ಸ್ತುತಿಸುವಾಗ ಕವಿ "ಮೂಜುಯೋಜನ ಬಂದು...ಕುರುತುಕೋಟೆಯಪುರದ ಕಾರಣಿಕ ಲಕ್ಷ್ಮೀಶನಾತ್ಮಜನಾರಸಿಂಹನ ಗೃಹದಿ ನಿಂತ ಕುಕ್ಕನೂರ ಲಕ್ಷ್ಮಿ" ಎಂಬ ಪದ್ಯಭಾಗದಲ್ಲಿ ತನ್ನ ಹೆಸರನ್ನು ಹೇಳಿರುವುದಲ್ಲದೆ

ಪರಗಣೆಕ್ರತುಪುರದ ಪಳ್ಳಿಯ | ಕುರುತುಕೋಟೆಯ ಕಾರಣೀಕರು |
ಹರಿಯ ಹತ್ತವತಾರದೊಳು ಎಳನುಜನಾಮಂಗೆ ||
ಪರಮಮೋಹದ ಪುತ್ರನೆನಿಸುವ | ಹರಿಯ ವೇದವತಾರನಾಮನ |
ಗಿರಲು ಧರೆಯೊಳು ರಚಿಸಿದೆನು ಅನುಭವಶಿಖಾಮಣಿಯ ||

ಎಂಬ ಪದ್ಯದಲ್ಲಿ ತನ್ನ ತಂದೆಯ ಹೆಸರು ವಿಷ್ಣುವಿನ ಏಳನೆಯ ಅವತಾರವಾದ ರಾಮನ ತಮ್ಮನಾದ ಲಕ್ಷ್ಮಣನದು ಎಂದೂ ತನ್ನ ಹೆಸರು ವಿಷ್ಣುವಿನ ನಾಲ್ಕನೆಯ ಅವತಾರವಾದ ನಾರಸಿಂಹನದು ಎಂದೂ ಗೂಢವಾಗಿ ತಿಳಿಸಿದ್ದಾನೆ

ಇವನ ಗ್ರಂಥ

## ಅನುಭವ ಶಿಖಾಮಣಿ

ಇದು ಭಾಮಿನಿ, ವಾರ್ಧಕ, ಶರ ಈ ಷಟ್ಪದಿಗಳಲ್ಲಿ ಬರೆದಿದೆ, ಸಂಧಿ 24, ಪದ್ಯ 1029. ಇದರಲ್ಲಿ ಕಾಂತಾವತೀಪುರದ ಉತ್ತಮೋತ್ತಮರಾಯನಿಗೆ ಸತ್ಯಶಿವಯೋಗೀಂದ್ರನು ಹೇಳಿದ ಕಾಶ್ಮೀರದೇಶದ ರತ್ನಗಿರಿ ಪಟ್ಟಣದ ಅರಸು ಗಂಭೀರರಾಯನ ಕಥೆ ಹೇಳಿದೆ. ಈ ಗಂಭೀರರಾಯನು ತನ್ನ ದೀಕ್ಷಾಗುರು ಗೌತಮನ ಉಪದೇಶದಿಂದ ಹರಪೂಜೆಯ ಮಾಡಿ ತನ್ನ ಪುರಸಹಿತ ಕೈಲಾಸಕ್ಕೆ ಹೋದಂತೆ ಹೇಳಿದೆ. ಅಲ್ಲಲ್ಲಿ ಶಿವಶರಣರ ಕಥೆಗಳೂ ಹೇಳಿವೆ. ಮೊದಲು ಈ ಕಾವ್ಯವನ್ನು ಹಂಪೆಯ ಹರಿಹರಾತ್ಮಜ ರಾಘವಾಂಕನು ಶರಷಟ್ಪದಿಯಲ್ಲಿ ಬರೆದಿದ್ದಂತೆಯೂ ಅದನ್ನು ನೋಡಿ ಕವಿ ಅದರರ್ಥವನರಿತು ಭಾಮಿನಿ, ವಾರ್ಧಕ, ಶರ ಈ ಮೂರು ಷಟ್ಪದಿಗಳಲ್ಲಿ ಬರೆದಂತೆಯೂ ಹೇಳುತ್ತಾನೆ. ಈ ಗ್ರಂಥಕ್ಕೆ ಈ ಹೆಸರು ಬರುವುದಕ್ಕೆ ಕಾರಣವನ್ನು ಹೀಗೆ ಹೇಳಿದ್ದಾನೆ—

> ಸಕಲಶಾಸ್ತ್ರಪುರಾಣದೊಳಗಿಹ | ಸಕಲಸಾರವು ಇದರ ಕಾರಣ |
> ಸಕಲ ಅನುಭವಕೆಲ್ಲ ಇದು ಶಿಖಾಮಣಿಯು ಎನಿಸಿತುದು ||

ಗ್ರಂಥಾವತಾರದಲ್ಲಿ ಮೂರುತಲೆಯುಳ್ಳದೇವತೆಯ ಸ್ತುತಿಯಿದೆ; ಬಳಿಕ ಸರಸ್ವತಿ, ಬ್ರಹ್ಮ, ವಿಷ್ಣು, ಕುಕ್ಕನೂರು ಲಕ್ಷ್ಮಿ, ರೇಣುಕ, ಹಂಪೆಯ ವಿರೂಪಾಕ್ಷ, ಪಾರ್ವತಿ, ಮಲ್ಲಿಕಾರ್ಜುನಪಂಡಿತಾರಾಧ್ಯ, ಓಂನಮಾಚಾರ್ಯ ಬಸವ, ಶೃಂಗೇರಿ ಶಂಕರಾಚಾರ್ಯ ಇವರುಗಳ ಸ್ತುತಿಯಿದೆ. ಈ ಗ್ರಂಥದಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ಉರಿಯ ಕರ್ಪೂರ ಮುಟ್ಟೆ ತೇಜವು । ಪರುಷ ಲೋಹವ ಮುಟ್ಟೆ ತೇಜವು ।
ಅರಸು ಆಳಿಗೆ ಒಲಿಯೆ ತೇಜವು ಹರನೆ ನೀನೊಲಿಯೆ ॥
ಸುರಗಣವು ನೆರೆದಲಾಗಿ ಋಷಿಗಳು । ಕರುಣದಲಿ ಪಿಡಿದೆತ್ತಿಕೊಳ್ಳರೆ ।
ಗುರು ನಿನಗೆ ಸರಿಯಾದ ದೈವವಿಲ್ಲೆಂದ ಭೂಪಾಲ ॥

---

## ಶಾಲ್ಯದ ಕೃಷ್ಣರಾಜ 1748

ಈತನು ಅಕ್ಷರಾದಿ ನಿಘಂಟು, ಅಧ್ಯಾತ್ಮರಾಮಾಯಣದ ಉತ್ತರಕಾಂಡ, ಅನುಭವರಸಾಯನ, ಅಪ್ರಸ್ತುತಪ್ರಶಂಸಾಶತಕ ಅಥವಾ ಪ್ರಾಣೇಶ್ವರಶತಕ, ಜ್ಞಾನಮಾರ್ಗಸರೋವರ, ಟೀಕಿನ ಕೀರ್ತನೆ, ಧರ್ಮಗುಪ್ತಚರಿತೆ, ನಳನಾಟಕ, ನಿಜದೀಪಿಕಾರತ್ನ, ನಿರ್ಣಯಶಿಖಾಮಣಿ, ಬಾಹಟದ ಟೀಕೆ, ಭಕ್ತಿಮಾರ್ಗಸರೋವರ, ಮೋಕ್ಷಲಕ್ಷ್ಮೀಮಂದಿರ, ಯಯಾತಿಕಾವ್ಯ, ವಿವೇಕಾಭರಣ, ವ್ರತಚರ್ಯೆ, ಷಟ್ಪ್ರತ್ಯಯ, ಸದಾಶಿವಶತಕ ಈ ಗ್ರಂಥಗಳನ್ನು ಬರೆದಿದ್ದಾನೆ

ಇವನು ಮೈಸೂರು ಅರಸುಗಳ ಸಮುದಾಯಕ್ಕೆ ಸೇರಿದವನು. ಇವನಿಗೆ ಶಾಲ್ಯದ ಅರಸು ಎಂಬ ಸಂಗ್ರಹವಾದ ನಾಮವೂ ಉಂಟು. ಈತನು ಆಂಧ್ರ, ಕನ್ನಡ, ಸಂಸ್ಕೃತ ಈ ಮೂರು ಭಾಷೆಗಳಲ್ಲಿಯೂ ಗ್ರಂಥಗಳನ್ನು ಬರೆದಿದ್ದಾನೆ. ಮೇಲೆ ಹೇಳಿರುವ ಗ್ರಂಥಗಳಲ್ಲಿ ಕೆಲವು ಸಂಸ್ಕೃತವಾಗಿರಬಹುದು. ಧರ್ಮಗುಪ್ತಚರಿತೆಯನ್ನು 1748 ರಲ್ಲಿ ರಚಿಸಿದಂತೆ ತಿಳಿಯುತ್ತದೆ ಈತನ ಪ್ರಾಣೇಶ್ವರಶತಕದ ಅಂತ್ಯದಲ್ಲಿ ಆ ಗ್ರಂಥವು ಕಲಿ 4870ರಲ್ಲಿ-ಎಂದರೆ 1769 ರಲ್ಲಿ-ಹುಟ್ಟಿದಂತೆ ಹೇಳಿದೆ. ನಿಜದೀಪಿಕಾರತ್ನವನ್ನು ಕಲಿ4871ಕ್ಕೆ ಸರಿಯಾದ ವಿರೋಧಿಯಲ್ಲಿ (1769) ಆರಂಭಿಸಿ ವಿಕೃತಿಯಲ್ಲಿ (1770) ಮುಗಿಸಿದಂತೆ ಆ ಗ್ರಂಥದಿಂದ ತಿಳಿಯುತ್ತದೆ ವಿವೇಕಾಭರಣವನ್ನು ಕಲಿ 4875 ಧಾತುವಿನಲ್ಲಿ (1774)[1] ರಚಿಸಿದಂತೆ ಕವಿ ಹೇಳುತ್ತಾನೆ ಅಲ್ಲದೆ ಈತನು ಕವಿ ವಿಟ್ಠಲನ

---

1. ಕಲಿ 4875 ಧಾತುವಾಗುವುದಿಲ್ಲ, ವಿಜಯಸಂವತ್ಸರವಾಗುತ್ತದೆ

(ಸು. 1600) ಅಮರಕೋಶ ಟೀಕೆಯನ್ನು ಮನ್ಮಥಸಂವತ್ಸರದಲ್ಲಿ ಪ್ರತಿ ಮಾಡಿದಂತೆ ಆ ಗ್ರಂಥದ ಒಂದು ಪ್ರತಿಯ ಕೊನೆಯಲ್ಲಿರುವ

ವಿಟ್ಠಲವಿದ್ವನ್ನಿರ್ಮಿತಟೀಕಾ ಲಿಖಿತಾಮರಾಖ್ಯಕೋಶಸ್ಯ |
ಕೃಷ್ಣಕ್ಷಿತಿಪತಿನೇಯಂ ಮನ್ಮಥಸಂವತ್ಸರೇ ಶಿವಂ ನಭಸಿ ||

ಎಂಬ ಪದ್ಯದಿಂದ ತಿಳಿಯುತ್ತದೆ ಈ ಮನ್ಮಥವರ್ಷವು 1775 ಆಗಿರಬೇಕು.

ಇವನ ಗ್ರಂಥಗಳಲ್ಲಿ

1 ವಿವೇಕಾಭರಣ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 18, ಪದ್ಯ 999. ಶ್ರೀರಂಗಪಟ್ಟಣದಲ್ಲಿದ್ದ ತ್ರಿಯಂಬಕಗುರುವಿನ ಬಳಿಗೆ ಹೋಗಿ ನರಸಾರ್ಯನು ತತ್ವದ ಸಾರಾಸಾರಗಳನ್ನು ಕೇಳಲು, ಅವನು ನರಸಾರ್ಯನಿಗೆ ನಿಗಮಾರ್ಥಗಳನ್ನು ಉಪದೇಶಿಸಿದನು. ನರಸಾರ್ಯನು ಆ ಉಪದೇಶದ ಸಾರವನ್ನು ಜ್ಞಾನಸರ್ವಸ್ವ ಎಂಬ ಹೆಸರಿಟ್ಟು ಒಂದು ಸಂಸ್ಕೃತಗ್ರಂಥವಾಗಿ ರಚಿಸಿ ಅದನ್ನು ಕನ್ನಡಿಸುವಂತೆ ಕವಿಗೆ ಹೇಳಲು ಆತನು ಈ ಗ್ರಂಥರೂಪವಾಗಿ ಕನ್ನಡಿಸಿದನು ಇದರ ಪ್ರಯೋಜನವನ್ನು ಕವಿ ಈ ಪದ್ಯದಲ್ಲಿ ಸೂಚಿಸಿದ್ದಾನೆ—

ತಿಳಿವು ನೆಲೆಗೊಳುವಂತೆ ಶಾಸ್ತ್ರದ| ಬಳಕೆ ತಲೆದೋರ್ಪಂತೆ ಸಂದೆಗ |
ದಳಿವ ಪಸರಿಸದಂತೆ ವಿಶ್ವಾಸಂ ಘಟಿಸುವಂತೆ ||
ಲಲಿತಪದಗೌರವದ ದರ್ಪಣ | ಫಲಕವಿದ ನಾಶಿಸೆನು ಮೇಣಿದ |
ರೊಳಗೆ ತನ್ನಂ ನೋಳ್ಪರಿಗೆ ಕಾಣ್ಪುದು ನಿಜಭಾವಂ ||

ಗ್ರಂಥಾವತಾರದಲ್ಲಿ ಸದಾಶಿವಸ್ತುತಿ ಇದೆ. ಬಳಿಕ ಕವಿ ವಾಸುದೇವ, ಬ್ರಹ್ಮ, ಚಂದ್ರ, ವಾತೂಲದೇವ, ಸೂರ್ಯ, ಅಗ್ನಿ, ಇಂದ್ರ ಮುಂತಾದವರನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇನೆ—

### ಸಾತ್ವಿಕತೆ

ಕಡಿದೊಡಗಲುವುದುಂಟೆ ತೋಯ | ಲ್ಕಡಗುವುದೆ ದಾವಾನಲಂ ಬಿಂ |
ದಡನಲೋಡುವುದೇ ಸುಗಂಧಂ ನೋಣದಕೆ ಸಹಜಂ ||
ಎಡರಿನಲಿ ಹಿಂಗುವುದೆ ವಾಸನೆ | ಯುಡಸಲಿನೊಂದಾಗುವುದೆ ಬೆಂ |
ಬಿಡದ ದುಸ್ಸಂಗದಲಿ ಮಾಜುವುದುಂಟೆ ಸಾತ್ವಿಕತೆ ||

### ಇಂದ್ರಿಯಜಯ

ಹುಲಿಯನಿಱುವವರುಂಟು ಕಗ್ಗ | ತ್ತಲೆಯೊಳಗೆ ಸಂಚರಿಸಿದವರುಂ |
ಟುಲಿವ ಮದದಾನೆಯನು ಹೊಡೆವವರುಂಟು ಮನದೊಳಗೆ ||
ನಳಿನನಾಭನ ಮಗನ ಬಾಣಾ | ವಳಿಗೆಯೆದೆಯಂ ಚಾಚಿ ಪಟ್ಟಿಂ |
ಗಳುಕದವರಂ ಕಾಣೆ ದೇವಾಸುರರ ಕಟಕದಲಿ ||

### ಹೆಂಡತಿಯರ ಕೋಟಲೆ

ಬೆಲ್ಲದಚ್ಚುಗಳಿಲ್ಲ ತುಪ್ಪದ | ಕಲ್ಲವಡಕೆಗಳಿಲ್ಲ ತೀರಿತು |
ನೆಲ್ಲು ಬಿಡದುಟ್ಟಿರುವ ಸೀರೆಗೆ ಹಱಕು ಕಾಣಿಸಿತು ||
ಅಲ್ಲಿಗಲ್ಲಿಗೆ ಕಾಸು ನಡೆಯದೆ | ನಿಲ್ಲುವುದೆ ವೆಚ್ಚಂಗಕ್ಕಿದ |
ರೊಳ್ಳೆಯವರೀ ನೆರೆಹೊರೆಗೆ ಒಱಕಿಕ್ಕದಿರಲಲ್ಲ ||
ನೆರೆಯುಸರಿಯರ ನೋಡಿ ಬಣ್ಣದ | ಕೊಱತೆಯೇ ಚಿನ್ನದಲಿ ಕುಂದೇ |
ಹೊಱಗೆ ಕಾಸಿಟ್ಟಾಡುವೊಡನೊಳಗುಂಟ ಭೋಜನದಿ ||
ಕರಗಕರಗದ ಬಸ್ವೆ ಹಿಲಿವಾ | ಉರೆಗಡೆದ ನೊಸರಷ್ಟಬಿಳಿಸ |
ಕ್ಕರೆ ಬಳಿಯು ಸಣ್ಣಕ್ಕಿ ಸಾಣಂಗಿಯು ನೆರೆದ ಚೀಳೆ ||
ಬದುಕಿದೊಡೆ ಮೇಣವರಕಿಱುಪಂ | ಒದುಕಬೇಕಲ್ಲರಿರೆ ಕೈಲಾ |
ಗದ ಪುರುಷನಂ ಕೂಡಿಕೊಂಡೀವನೆನೊಳಿಪ್ಪುದಕೆ ||
ಬಿವಿರುವೊಳೆಯುಳ್ಳಿರುವ ದೇವಾಂ | ಗದ ಮಿಗಂಗಳ ಬಾಱುವ ಲೇಸಂ |
ದಿದರ ಗರತಿಯರಲ್ಲಿ ಹೆಂಡತಿ ಪೇಱುವಳು ಕೂಡೆ ||

### 2. ಷಟ್ಪ್ರತ್ಯಯ

ಇದು ಛಂದಶ್ಶಾಸ್ತ್ರಕ್ಕೆ ಸೇರಿದ ಒಂದು ಭಾಗ. ಇದರ ಅಂತದಲ್ಲಿ ಈ ಪದ್ಯವಿದೆ—

ಚಪ್ರಕ್ಷಯರಿಶ್ರಿಯನಣ | ಲೇಪ್ರಮುಖಂ ಕೃಷ್ಣನಾಮಕಂ ಪೇಳ್ದಂ ನೀ |
ಎಪ್ರಮರರಾದ್ಯರೊಪ್ಪಲ್ | ಎಪ್ರಭುವಂತಿರ್ಪರೊಲಿದು ಬೆಳುಗನ್ನಡದಿಂ ||

### 3. ಸದಾಶಿವಶತಕ

ಇದರಲ್ಲಿ 101 ವೃತ್ತಗಳಿವೆ; ಪ್ರತಿವೃತ್ತವೂ "ಸದಾಶಿವ" ಎಂದು ಮುಗಿಯುತ್ತದೆ. ಈ ಪದ್ಯಗಳು ಪ್ರಾಯಿಕವಾಗಿ ವೇದಾಂತವನ್ನು ಬೋಧಿಸುತ್ತವೆ. ಗ್ರಂಥಾಂತ್ಯದಲ್ಲಿರುವ ಒಂದು ಕಂದ ಪದ್ಯದಲ್ಲಿ "ಬಿಂದು ಗಗನಾಂಗ ವೇದಾಬ್ದಂ ಕಲಿಯೊಳ್ ವಿರೋಧಿ" ಎಂದು ಕಾಲವನ್ನು ಸೂಚಿಸಿದೆ. ಆದರೆ ಕಲಿ 4800 ವಿರೋಧಿಯಾಗುವುದಿಲ್ಲ, ಬಹುಧಾನ್ಯವಾಗುತ್ತದೆ (1698). ಕಲಿ 4811 ವಿರೋಧಿಯಾಗುತ್ತದೆ (1709). ಹಿಂದೆ ಹೇಳಿದ ಕಾಲಕ್ಕೂ ಇದಕ್ಕೂ ಬಹಳ ಅಂತರವಿರುವುದರಿಂದ ಕಲಿ 4870 ಅಥವಾ 4871 (1769) ಅಭಿಪ್ರೇತವಾದ ಕಾಲವೆಂದು ತೋರುತ್ತದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ತಂದೆಯೊಳಲ್ಲದೇ ಮಹಾಕಪಾಲನೊಳಲ್ಲದೆ ಬಾಳ್ಕೆ ಗಂಡನೊಳ್ |
ಪೊಂದದೆ ಕಾಮವೃತ್ತಿ ಕಡೆಗಾಣದೆ ಬಣ್ಣಗಳಾಣೆಕಾಱನೊಳ್ ||
ನಿಂದಿಹ ಮಟ್ಟವಾವೆಡೆಯೊಳೀಕ್ಷಿಸಲಪ್ಪುದು ನಿನ್ನ ಬಟ್ಟು ವೋ |
ಸ್ಪಂದಳೆಯಲ್ಕದಾವೆಡೆ ಭವಾಭ್ರಲಯಾನಿಲನೇ ಸದಾಶಿವಾ ||
ಅರೆಮುಗುಳಾದ ಮಲ್ಲಿಗೆಯ ಕಂಡದ ಬಟ್ಟು ಶಿರೀಷಜಾಲದೊಳ್ |
ಪರಿಪರಿಯಾದಂತೆ ಮಱಿದುಂಬಿ ಶರನ್ನಗಲಕ್ಷ್ಮಿಗೌರವ ||
ಸ್ಫುರಿಸುವ ಯುಷ್ಮದೀಯಚರಿತಾಮೃತಮಂ ಕಡೆಗೊತ್ತಿ ಘೋರಸಂ |
ಸರಾಗದ ಸೌಖ್ಯಮಂ ನೆನೆವ ಚಿತ್ತವ ನೇಂದಿವರೊಳ್ ಸದಾಶಿವಾ ||

### 4. ಅಪ್ರಸ್ತುತಪ್ರಶಂಸಾಶತಕ ಅಥವಾ ಪ್ರಾಣೇಶ್ವರಶತಕ.

ಇದರಲ್ಲಿ 102 ವೃತ್ತಗಳಿವೆ; ಪ್ರತಿವೃತ್ತವೂ "ಪ್ರಾಣೇಶ್ವರ" ಎಂದು ಮುಗಿಯುತ್ತದೆ. ಈ ಪದ್ಯಗಳು ಅನ್ಯೋಕ್ತಿರೂಪವಾಗಿ ನೀತಿಯನ್ನೂ ವೇದಾಂತವನ್ನೂ ಬೋಧಿಸುತ್ತವೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

ಫುಲ್ಲಾಂಭೋರುಹಕೈರವಪ್ರತತಿಗಳ್ ಮಲ್ಲೀಮತಲ್ಲೀಕನ |
ದ್ವಲ್ಲೀವಲ್ಲರಿಗಳ್ ಭ್ರಮದ್ಭ್ರಮರಿಗಳ್ ಸಂತಾಪಮಂ ಶೀತಮಂ ||
ಎಲ್ಲಾಕಾಲದಿ ಸೈಸಿ ನಿನ್ನ ಬರವಂ ಹಾರೈಸಿ ಸಪ್ರಾಣಮಾ |
ಗಿಳ್ದಿರ್ಪನ್ನಗಮೇಂ ವಸಂತ ತಡೆವೈ ನೋಡೆನ್ನ ಪ್ರಾಣೇಶ್ವರಾ ||
ಸುರಸಾಲಾರುಣಪಲ್ಲವಾನುಭವದಿಂದಂ ಸೊಕ್ಕಿ ಬಂಧೂಕವ |
ಲ್ಲರಿಯಂ ನೋಡುತೆ ಮಲ್ಲಿಕಾಲತೆಯೊಳುದ್ಯತ್ಕಂಠಮಾಧ್ವಾನಮಂ ||
ಮೆಱೆಯುತ್ತಿರ್ಪ ವನಪ್ರಿಯಂ ಕೊಡನೈಕ್ಯಂಸಹಿಚೀ ಪನಾಕ್ಟಸನಂ |
ಕರಟವ್ಯೂಹಮನೇಕೆ ಪುಟ್ಟಿಸಿದನಿಲ್ಲೇನುಂಟು ಪ್ರಾಣೇಶ್ವರಾ ||

5 ಟೀಕಿನ ಕೀರ್ತನೆ.

ಇದರಲ್ಲಿ ವೇದಾಂತಬೋಧಕವಾದ ಪದಗಳೂ ಅವುಗಳ ವ್ಯಾಖ್ಯಾನವೂ ಇವೆ. ಅಲ್ಲಲ್ಲಿ ಸಂಸ್ಕೃತಶ್ಲೋಕಗಳು ಅನುವಾದಮಾಡಲ್ಪಟ್ಟಿವೆ. ಈ ಗ್ರಂಥದಿಂದ ಒಂದು ಪದವನ್ನು ತೆಗೆದು ಬರೆಯುತ್ತೇವೆ—

ಮನವೆಂಬ ಹಾಲಿಗುಪರತಿಯೆಂಬ ಹೆಪ್ಪನಿಕ್ಕಿ ನಿಮಿಷದಧಿಯಾಗೆ ಹಿರಿಯರುಸುರ್ದ |
ವಿನಯೋಕ್ತಿಯೆಂಬ ಮಂತಿಂ ಕಡೆದು ಸಹಜವಾದನುಭೂತಿಯೆಂಬ ಬೆಣ್ಣೆಯೊಳು ತೆಗೆದು
ತನಗೆ ತಾನನ್ಯನಲ್ಲದಹಾಗಿರುವ ಭಾವವನು ಪಿಡಿದು ಕಾಸಿ ತುಪ್ಪವನುಗೈದು |
ನಿನಗುಣಿಸಲಿಚ್ಛೆಯಂ ತಾಳ್ದ ಗೌರೀಶ ಚಿದ್ಘನವೆನಿಸುವೀಶಾನನಿಗೆ ದೇವದೇವ ||

6 ನಿಜದೀಪಿಕಾರತ್ನ

ಇದು ಹಾಡು, ವಚನ, ಸಾಂಗತ್ಯ ಇವುಗಳನ್ನು ಒಳಕೊಂಡಿದೆ; ಪದ್ಧತಿ 25; ವೇದಾಂತವನ್ನು ಬೋಧಿಸುವ ಗ್ರಂಥ. ಆರಂಭದಲ್ಲಿ ದಕ್ಷಿಣಾಮೂರ್ತಿಸ್ತುತಿ ಇದೆ. ಪದ್ಧತಿಗಳ ಕೊನೆಯಲ್ಲಿ—ಇತಿ ಶ್ರೀಮತ್ಸಮಸ್ತತತ್ವತಾತ್ವಿಕವಿಚಾರವಾರೀಣ ಶಾಲ್ಯಕ್ಷಿತಿಪಾಲಕೃಷ್ಣಪ್ರಭುವಿರಚಿತಮಾದ ನಿಜದೀಪಿಕಾರತ್ನಗ್ರಂಥದೊಳ್—ಎಂಬ ಗದ್ಯವೂ, ಗ್ರಂಥಾಂತ್ಯದಲ್ಲಿ

ಇದು ಗೌರೀಶಶಟಿತ್ಪಿಶಂಗಿಮಜಟಾಘೋರಾಟವೀಬಂಭ್ರಮ |
ತ್ರಿದಶಸ್ರೋತಸ್ತುಂಗತರಂಗಸಂಗನ್ನಿಣಾತ್ಕಧ್ವಿರ್ಘ್ವರ್ಸೋದರಂ ||

ಪದಕಾವ್ಯಂ ಕವಿಗಳ್ ವಿಚಾರಿಪುದಿದಂ ಸೌರಭ್ಯಮಂ ಮಿಕ್ಕಲೋ |
ಕದ ವಾಕ್ಯಂಗಳವೋಲ್ ಸರೀಕ್ಷಿಸದೆ ಧೀಮತ್ತಾಮುನಾದೃಷ್ಟಿಯಿಂ ||

ಎಂಬ ಪದ್ಯವೂ ಇವೆ. ಇದರಿಂದ ಸ್ವಲ್ಪಭಾಗವನ್ನು ತೆಗೆದು ಬರೆಯುತ್ತೇವೆ—

ಶರಶರದ ಜಲಧರನಿಕರವೆತ್ತರದಲು ವ | ಸ್ತ್ರರಕೆಂಪಿಗಾದೊಡಂ ಬರುವುದೇ ಎಕ್ಕತಿ ||

ಕಾವಳದ ಹಗ್ಗದಲಿ ಕಲ್ಪಿಸಿದ ಸಟೆಯಾಗ | ಹಾವು ಕಚ್ಚಿದರಾರು ಸಾವರ್ ಜಗದಿ ||

ಹಾಲು ಸಂಸ್ಕಾರದಿಂದಾಗಿ ಘೃತರೂಪಾದ | ಮೇಲೆ ಪೂರ್ವಾಕೃತಿಯು ತಾಳ್ ವೊಸರಹುದೇ ||

ದಗ್ಧಪಟವೆಂದಿನಂದದಿ ತೋರಿಬಳಿಕೆಯುಳಿ ವ | ದಗ್ಧರಾರದನುಟ್ಟು ಕಳೆದರು ಹಿಮವಂ ||

ತನುವಿನೊಳು ಬಂದ ಕಾಮಿನಿಯು ಸಂಸಾರದಿಂ | ತನಯರಂ ಪಡೆವರೆ ಮನುಜರಾರುಂಟು ||

### 7 ಅನುಭವರಸಾಯನ

ಇದು ಪ್ರಾಯಿಕವಾಗಿ ಗದ್ಯದಲ್ಲಿ ಬರೆದಿದೆ, ಅಲ್ಲಲ್ಲಿ ಒಂದೊಂದು ಕಂದವಿದೆ; ಕೊನೆಯಲ್ಲಿ ಮಾತ್ರ 120 ಸಾಂಗತ್ಯಗಳಿವೆ. ಗ್ರಂಥವು ಗುರು-ಶಿಷ್ಯಸಂವಾದರೂಪವಾಗಿ ಅದ್ವೈತ ವೇದಾಂತವನ್ನು ಬೋಧಿಸುತ್ತದೆ. ಇದು "ಸ್ಥಿರಮಮತಾಹಂತಾತರುಪರಶು" ಎಂದು ಕವಿ ಹೇಳುತ್ತಾನೆ. ಅಮಲಜನಮುಕ್ತ್ಯರ್ಥಂ ಇದನ್ನು ಬರೆದಂತೆ ಈ ಕಂದದಲ್ಲಿ ಹೇಳಿದೆ—

ಅನುಭವರಸಾಯನಾಂಕದ | ಜನಕೃತಿಯಂ ಕೃಷ್ಣಭೂಮಿಪಂ ರಚಿಸಿ ಜಗ |
ಜ್ಜನಕಗೆ ಗೌರೀವರನಿಗೆ | ವಿನಯದಿನರ್ಪಿಸಿದನಮಲಜನಮುಕ್ತ್ಯರ್ಥಂ ||

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದುಬರೆಯುತ್ತೇವೆ:

ಮುಕ್ತಿಯೆಂಬುದು ವಸ್ತುವಲ್ಲ ವಸ್ತುವಿನೊಳ | ಗಿರುತಿಹ ಗುಣಗಣವಲ್ಲ |
ಸಂಸಾರಮಾದೊಡಹುದು ತಮೋಗುಣವಾತ್ಮನಿ | ಗೆರಡೆಂಬ ಭೇದಕ್ಕೆ ಜನಕ ||

ಈ ಪ್ರಕೃತಿಯ ಕಾರ್ಯವಾದ ದೇಹೇಂದ್ರಿಯ | ಸ್ತೋಮವಿದಕೆ ಸ್ಥಾಪಕವು |
ಯಾಮಿನಿಯಿಂದ ಕತ್ತಲೆ ಕತ್ತಲೆಯು ಸು | ಸ್ತೋಮವದಿಂ ನಿಶಿಯಸಿವಂತೆ |

## 8 ಭಕ್ತಿಮಾರ್ಗಸರೋವರ

ಇದರಲ್ಲಿ ಶಿವಸ್ತುತಿರೂಪವಾದ 86 ಕೀರ್ತನೆಗಳಿವೆ. ಅಲ್ಲಲ್ಲಿ ಕೆಲವು ಕಂದಗಳೂ ವಚನಗಳೂ ಇವೆ. ಈ ಗ್ರಂಥದಿಂದ ಒಂದು ಕೀರ್ತನೆಯ ಭಾಗವನ್ನು ಉದಾಹರಿಸುತ್ತೇವೆ—

ರಾಗ ಗೌರಿ

ಪಲ್ಲವಿ|| ನಿಜಕೆ ನಿಲುವುದಲ್ಲದೆ ನಡೆಗೆ ನಿಲುಕದೆಯುಂಟೆ | ನೋಡಿ |
ಸುಜನರಾದವರಾಲಿಸಿ ಸೂಕ್ಷ್ಮದೃಷ್ಟಿಯಿಂ ||
ಹಗ್ಗವ ಹಗ್ಗವೆಂದರಿವೆ ಕಡೆಗೆ ನಿಲುವುದೋ | ಮತ್ತಾ |
ಹಗ್ಗವ ಹಾವೆಂದರಿವೆ ನಿಂತುಬರುವುದೋ |
ಬಗ್ಗಿ ನೋಡಿ ಕಾವಳ ಹರಿದು ಬಯಲಲ್ಲಿದ್ದಾಗ | ಮೇಣಾ |
ಹಗ್ಗವ ಕಂಡವರು ನೋಡಿ ಹಾವೆಂದೆನರಾಗ ||1||
ಸ್ಥಾಣುವ ಸ್ಥಾಣುವೆಂದರಿವೆ ಕಡೆಗೆ ನಿಲುವುದೋ | ಮತ್ತಾ |
ಸ್ಥಾಣುವ ಚೋರನೆಂದರಿವೆ ನಿಂತುಬರುವುದೋ |
ಪ್ರಾಣಿಸದೆ ಚಲಿಸದೆ ಸಮೀಪವಾದಾಗ | ಮೇಣಾ |
ಸ್ಥಾಣುವ ತುಂಡವೆಂದು ಬಂದು ತನುವೊಪ್ಪಿಸಿದಾಗ ||2||
ಗುರುಶಾಸ್ತ್ರಮುಖಗಳಿಂದ ತಿಳಿದ ತಿಳಿವಿಗೆ | ಮತ್ತೀ |
ಕರಣದೋಷದಿಂದ ಬಂದ ಭೇದಬುದ್ಧಿಗೆ |
ಸ್ಥಿರತೆಯುಂಟು ಸ್ಥಿರತೆಯಿಲ್ಲವೆಂಬ ತತ್ವವ | ಗೌರೀ |
ವರನ ದಯೆಯಿಂದ ಪಡೆದು ಸುಖಿಸು ಮಾನವಾ ||3||

## 9 ಜ್ಞಾನಮಾರ್ಗಸರೋವರ.

ಇದರಲ್ಲಿಯೂ 86 ಕೀರ್ತನೆಗಳಿವೆ.

## 10 ಧರ್ಮಗುಪ್ತಚರಿತೆ.

ಇದು ಯಕ್ಷಗಾನರೂಪವಾಗಿದೆ. ಸ್ಕಾಂದಪುರಾಣದ ಬ್ರಹ್ಮೋತ್ತರಖಾಂಡದಲ್ಲಿ ಶನಿಪ್ರಶಂಸಾವಸರದಲ್ಲಿ ಉಕ್ತವಾದ ಧರ್ಮಗುಪ್ತರಾ

ಯನ ಕಥೆಯನ್ನು ಕವಿ ಹೀಗೆ ಬರೆದಿದ್ದಾನೆ ಈ ಗ್ರಂಥವು ಪ್ರಾಕೃತ ಜನ ಹೃದಯಾನಂದಾರ್ಥವಾಗಿ ರಚಿತವಾದಂತೆ ಹೇಳಿದೆ.

ಇವನ ಇತರ ಗ್ರಂಥಗಳು ನಮಗೆ ದೊರೆತಿಲ್ಲ

---

## ವೆಂಕಾಮಾತ್ಯ ಸು 1770

ಈತನು ರಾಮಾಯಣ, ಇಂದಿರಾಭ್ಯುದಯ, ಹನುಮದ್ವಿಲಾಸ ಈ ಗ್ರಂಥಗಳನ್ನು ಬರೆದಿದ್ದಾನೆ[1] ಇವನು ಬ್ರಾಹ್ಮಣಕವಿ. ಇವನ ತಂದೆ ರಾಮಪುರೀ ಹಂಪಯಾಮಾತ್ಯ, ತಾಯಿ ಮಾಬಾಂಬೆ. ರಾಮಾಯಣದ ಕೊನೆಯ ಗದ್ಯದಲ್ಲಿ ತಾನು ಆಂಜನೇಯನ ವರಪ್ರಸಾದದಿಂದ ಸರಸ ಸಾಹಿತ್ಯಸಾಮ್ರಾಜ್ಯವನ್ನು ಪಡೆದವನೆಂದೂ ಚತುರ್ವಿಧ ಕವಿತಾವಿಶಾರದನೆಂದೂ ಗಾಂಧರ್ವಕಳಾವಿದನೆಂದೂ ಹೇಳಿಕೊಂಡಿದ್ದಾನೆ. ಇವನ ಅಲಂಕಾರಮಣಿದರ್ಪಣದಲ್ಲಿ ಇವನಿಗೆ ಷಡ್ದರ್ಶನೀವಲ್ಲಭ, ಘಟಿಕಾಪ್ರಬಂಧ ರಚನಾವಿದಗ್ಧ ಎಂಬ ವಿಶೇಷಣಗಳು ಹೇಳಿವೆ[2]. ಇವನು ಹೈದರಲ್ಲಿಖಾನನಲ್ಲಿ ಮಂತ್ರಿಯಾಗಿದ್ದಂತೆ ತಿಳಿವುದರಿಂದ ಇವನ ಕಾಲವು ಸುಮಾರು 1770 ಆಗಬಹುದು

ಪೂರ್ವಕವಿಗಳಲ್ಲಿ ಭಾಸ, ಬಾಣ, ಮಯೂರ, ದಂಡಿ, ಕಾಳಿದಾಸ ಈ ಸಂಸ್ಕೃತ ಕವಿಗಳನ್ನೂ ಹರೀಶ್ವರ, ರುದ್ರಭಟ್ಟ ಈ ಕನ್ನಡ ಕವಿಗಳನ್ನೂ ಸ್ಮರಿಸಿದ್ದಾನೆ

---

1 ಇವನು ಬರೆದಿರುವ ಅಲಂಕಾರಮಣಿದರ್ಪಣವೆಂಬ ಸಂಸ್ಕೃತಗ್ರಂಥದ ಈ ಪದ್ಯದಲ್ಲಿ ಸ್ವರಚಿತವಾದ ಕೆಲವು ಗ್ರಂಥಗಳ ಹೆಸರನ್ನು ಹೇಳಿದ್ದಾನೆ—

ಯೋಽಸೌ ಕಾಮವಿಲಾಸಭಾಣಮಪಿ ವಾ ಮಾಹೇಂದ್ರಕಂ ತದ್ಡಿಮಂ |
ವ್ಯಾಯೋಗಂ ಖರದರ್ಪಘಾತನಕಥಂ ಕಾವ್ಯಂ ಹನೂಮಜ್ಜಯಂ ||
ತತ್ಸೂಕ್ತಿಂಭರಿಭೃಕ್ಷವಪ್ರಹಸನಂ ಕರ್ಣಾಟರಾಮಾಯಣಂ |
ತೇಂಚೇಮಾಂ ಚಿದಭೇದಕಲ್ಪಲತಿಕಾಂ ಕೃತ್ವಾತ್ರ ಬುಧೈರ್ಗೀಯತೇ ||

2 ತನ್ನ ಸುಧಾಲಹರಿಯೆಂಬ ಚಂಪೂಗ್ರಂಥದಲ್ಲಿ ತನ್ನ ವಿಷಯವಾಗಿ ಹೀಗೆ ಹೇಳಿಕೊಂಡಿದ್ದಾನೆ—

ಯಃ ಶ್ರೀರಾಮಪುರೀವರಾಮೃತಕಲಾಧಿಕ್ಯಾರಿಕಾರುಣ್ಯದೃ |
ಕಂಕಾಂತಾಖಿಲಶಾಸ್ತ್ರಭೂಷಣಮಣಿಃ ಸಾಹಿತ್ಯಲೀಲಾಖನಿಃ ||

ಇವನ ಗ್ರಂಥಗಳಲ್ಲಿ

## 1. ರಾಮಾಯಣ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ, ಸಂಧಿ 195, ಪದ್ಯ 9865 ನಮಗೆ ದೊರೆತ ಪ್ರತಿಯಲ್ಲಿ ಗ್ರಂಥದ ಆದಿಭಾಗವಿರಲಿಲ್ಲ. ಈ ಕಥೆಯನ್ನು ಶಿವನು ಪಾರ್ವತಿಗೆ ಹೇಳಿದಂತೆಯೂ ಆಬಳಿಕ ಸೂತನು ಋಷಿಗಳಿಗೆ ಹೇಳಿದಂತೆಯೂ ತಿಳಿಯುತ್ತದೆ ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇದು ರಾಮಚಂದ್ರಪಾದಾರವಿಂದವಂದನಪವನನಂದನವರಪ್ರಸಾದಾಸಾದಿತಸರಸಸಾಹಿತ್ಯಸಾಮ್ರಾಜ್ಯಸರ್ವಂಕಷ ಚತುರ್ವಿಧಕವಿತಾಪರಿಶೀಲನಾತ್ಮನಿಷ್ಠಾಗರಿಷ್ಠಗಾಂಧರ್ವಕಳಾವಿದ ವಿದ್ವಜ್ಜನೋತ್ಪಲಾಲಸೀಯ ರಾಮಪುರೀಹಂಪೆಯಾಮಾತ್ಯತನೂಭವ ವೆಂಕಾಖ್ಯಸುವಿರಚಿತವಾದ ಶ್ರೀಸುದ್ರಾಮಾಯಣಮಹಾಪ್ರಬಂಧದಲ್ಲಿ.

ಇವನ ಬಂಧವು ಪ್ರೌಢವಾಗಿದೆ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

### ಹೇಮಂತಋತು.

ಅಂಬರಕೆ ಕಳುಪಿ ಸಸಿಬಿಂಬಮಂ ಜಡೆಯೊಳಿರು |
ವಂಬುಜಾನನೆಯು ನೀರಧಿಗಟ್ಟ ಪುಲಿದೊವಲಿ |
ನಂಬರವ ಪೊದೆದು ಕಾಂತಾಲಿಂಗನಂಗೈದು ಕೆದಱುತಿಂಗಳಗಂಗಳ ||
ಜೆಂಬಿಡದೆ ವಟನೆಟಲ ಸಾರಲೆಲರುಣಿವೆದೆಯು |
ನಂಬರಂಗೈದು ನಿಜಪಕ್ಕಗಳನಾಳಿದನ |
ನಂಬುಧಿಯ ತಾನಾಗ್ಯೆದಿಟ್ಟ ಹಿಮಭೂಪಾಲನುಪಟಳಕ್ಕಳ್ಕಿ ಭಯದಿ ||

### ಶರದೃತು

ಚಕ್ಕವಕ್ಕಿಗಳಿಂಗಹಸ್ಕರೋಪಾಸನೆಯು |
ಮಿಕ್ಕು ಜೀವಂಜೀವತತಿಗೆ ಚಾಂದ್ರಾಯಣವ |
ಸೊಕ್ಕುವಮೌನವ ಬಕಂಗಳಿಗೆ ಹಂಸೇಗಣಕೆ ತೀರ್ಥಯಾತ್ರಾನಿಯಮವುಂ ||
ಎಕ್ಕತುಳನದಿನದಗಳಿಗೆ ಗುಹಾವಾಸವ|
ನ್ನಕ್ಕಱಿಂದು ದೇಶಗ್ಯೆಯುಲ' ಶರದೆಸ್ಸೇಗಿ ||
ಕಕ್ಕುಲಿತೆಯಿಂ ಪಿಡಿದುವಾಸಮಯದೊಳು ಘನಾಪಾಯಕೃಛ್ರವ ಚಾತಕಂ ||

### ವನ

ಅಳಿಕುಳಧ್ಯಾನದಿಂ ಕಳಕಂಠಗಾನದಿಂ |

ಕಲಹಂಸಯಾನದಿಂ ಕುಸುಮರಸಸಾರದಿಂ |
ಕಲಿತಶುಕನಾದದಿಂದೆಸೆವ ಪ್ರತಾನಸನ್ಮಂಟಪಸ್ಥಾನದಿಂದ ||
ಲಲಿತಸುಮಗಂಧದಿಂ ಫಳರಸದ ಬಿಣ್ಪಿನಿಂ |
ಬಲುನೆಟಿಲ ತಣ್ಪಿನಿಂ ಬಣ್ಣ ಗಿಳಿಯಿಂಚರಂ |
ಮಲಯುಪವನಮಾನಂಗೆ ನಿಳಯದಂತಾವನಂ ಘನಮನೋಹರಮಾದುದು ||

ತಾಲಿವನ

ಮೊಳೆಯುತ್ತ ಕರಲಾಗಿ ಮತ್ತೆ ನೀರೇಱುತಂ |
ಒಳಗಂಗಳಗಲುತಂ ನಳನಳಿಸಿ ಬೆಳೆಯುತಂ |
ಒಳಗೊಳಗೆ ಪ್ರೌಡೆಯಾಂತು ಪೂಜಿಪ್ಪೊಣ್ಮಿ ಪಾಲ್ದುಂಬಿ ಸಾಲ್ದುಂಬಿಗಳ ಕರೆಯುತ ||
ಗಿಳಿಗಳೊಳ್ ಕೆಳೆಯಾಗಿ ಬೆಳೆದೇನು ಪಾರ್ಥಿಕ್ಯ |
ಮುಱಿಯದಾದುದೆನುತ್ತೆ ಬಳುಕಿ ಶಾಲೀವನಂ |
ತಲೆವಾಗಿತೆಂಬಂತೆ ಪಣ್ತೆನೆಗಳಾಂತೆಸೆವುವಲ್ಲಲ್ಲಿ ಸಂತಸದಲಿ ||

ಚಿತ್ರಕೂಟ

ಹರಿಯಷ್ಟವಿಧಿಯ ಗದ್ದುಗೆ ಲಕುಮಿಯಿಕ್ಕೆ ಭೂ |
ಸ್ಮರನ ಮೈತ್ರತೆ ಮನಸ್ಸಂಭವನ ತೋಮರಂ |
ಪರಮೆಗಳ ಭೋಜನದಶಾಲೆ ಸೌಂಭ್ಯದಾಗಾರಮಾಗಿರಲು ಮಗುೞ್ |
ತರುಣಿಯರ ಮುಖಶರ್ವರೀನಾಥನಿಂದೆ ತಾ |
ಮರೆಯಾದೆವೆಂದು ಮಱುಗುತ್ತಮಿರ ಲದ್ರಿಮಣಿ |
ತರಣಿಯಿಂ ವಿಕಸನಂಗೈಸಿದುವೊ ಎನಲಬ್ಜಸಂಕುಲಂ ಶೋಭಿಸಿದುದು ||

ಸಂಧ್ಯಾರಾಗ

ಸ್ಮರನ ವಿಜಯೋತ್ಸವದ ರತುನದ ಪತಾಕೆಯಿದೊ |
ವರುಣಸೌಧಸ್ಥಗಿತಪದ್ಮರಾಗದ ಕೆಂಪೊ |
ಹರನ ಜಟೆಗಳ ಕಾಂತಿ ಪರಕಲಿಸಿ ತೋಱುವುದೊ ಕೆಂಗಣ್ಣೊನೆಯ ಕಾಂತಿಯೊ ||
ತರಣಿಯ್ಯೊತಹ ಮಾರ್ಗರೆತುನಸೋಪಾನಂಗ |
ಳುರುಕಾಂತಿ ಪಸರಿಸಿತೊ ಎನಲು ಸಂಧ್ಯಾರಾಗ |
ಕರಮೆಸೆದುದಂಬರದಮಣಿ ಸರಿಯಲೊಡನೆ ಬರುವರುಣದೇಹಚ್ಛವಿಪೊಲು ||

## 2. ರಮಾಭ್ಯುದಯ

ಇದು ಚಂಪೂರೂಪವಾಗಿದೆ ಇದರಲ್ಲಿ ಲಕ್ಷ್ಮೀದೇವಿಯ ಅವತಾ

ರಾದಿ ವಿಷಯಗಳು ಹೇಳಿವೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಗಳಲ್ಲಿ ಹೇಳಿದ್ದಾನೆ.—

ಆಮಂದರಸಬಂಧುರಭ್ರಮಿತಚಿತ್ತವೃತ್ತಂಧಮಂ |
ಕ್ರಮಕ್ರಮವೃಪೋಷಿತಪ್ರಚುರಹಾವಭಾವಾಲಯಂ ||
ಚಮತ್ಕೃತಿಕೃತೀಶ್ವರಸ್ವಹೃದಯಾಳಿಮೋದೋದಯಂ |
ರಮಾಭ್ಯುದಯಮುಂ ರಮಾಭ್ಯುದಯಮಂ ನತರ್ಗೀಯದೇ ||

ಕಾವ್ಯಾಲಂಕರಣಗತಿ | ಸೇವ್ಯಂ ದುರ್ಬೋಧಕುಕವಿಜನಕವಿಭಾವ್ಯಂ |
ಭವ್ಯಂ ರಸಿಕರ್ಗೆಂ ಸಂ | ಸ್ತವ್ಯಂ ಮತ್ಕಾವ್ಯಮವನಿಯೊಳ್ ವಾಸ್ತವ್ಯಂ ||

ಗ್ರಂಥಾವತಾರದಲ್ಲಿ ರಾಮಸ್ತುತಿ ಇದೆ. ಬಳಿಕ ಕವಿ ಸೀತೆ, ಆಂಜನೇಯ, ಈಶ್ವರ, ಪಾರ್ವತಿ, ಗಣೇಶ, ಸರಸ್ವತಿ, ವಾಲ್ಮೀಕಿ, ವ್ಯಾಸ ಇವರುಗಳನ್ನು ಸ್ತುತಿಸಿದ್ದಾನೆ. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇದು ನಿಖಿಲಬೃಂದಾರಕಬೃಂದಮಕುಟಮಣಿಗಣಪ್ರಭಾಪಟಲನೀರಾಜಿತಶ್ರೀರಾಮಚಂದ್ರಪಾದಾರವಿಂದನಿಷ್ಯಂದಮರಂದಾಸ್ವಾದನತುಂದಿಲೇಂದಿಂದಿರಾಯಮಾಣಮಾನಸ ಜಗತ್ಪ್ರಾಣನಂದನಕಾರುಣ್ಯಕಟಾಕ್ಷಲಬ್ಧಸಾಹಿತ್ಯಸಾಮ್ರಾಜ್ಯಸರ್ವಂಕಷ ಚತುರ್ವಿಧಕವಿತಾಪರಿಶೀಲನಾತ್ಮನಿಷ್ಠಾಗರಿಷ್ಠ ಗಾಂಧರ್ವಕಲಾಧುರಂಧರ ನಿಸ್ಸಹಾಯಪ್ರಬಂಧನಿರ್ಮಾಣಚಾತುರೀಧುರೀಣೋಪಲಾಲಿತ ಶ್ರೀರಾಮಪುರೀಹಂಪೆಯಾಮಾತ್ಯತನೂಭವ ನಂಕಯಾಮಾತ್ಯವಿರಚಿತ ರಮಾಭ್ಯುದಯಮಹಾಪ್ರಬಂಧದೊಳ್.

ಈ ಗ್ರಂಥದಿಂದ ಕಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಕೋತಿಯ ಮರಿಗಳು

ಪಿಡಿದಂಗಾರಮನೈದೆ ಪಣ್ಣೆನುತಲುಂ ಕೈಚಾಚೆ ಚೇಳುತ್ತಲುಂ |
ಕೊಡಪುತ್ತಂ ಕರವಾಳದಂಡಗನುಮಂ ವೈಕಾರದಿಂ ಪಣ್ಗಳಂ ||
ಬಿಡುತಂ ನರ್ತನಗೈದು ಮಾಸಿಗಣಕಂ ಯಾಸ್ಯಂಗಳಂ ತೋಱುತಂ |
ಡೆಡಯಾಸುತ್ತಿಹ ಕೀಶಪೋತಕಗಳೆಂ ತಪ್ಪಲ್ಗಳೊಳ್ ತೋರ್ಪುವೋ ||

ಯುದ್ಧ

ಘಾಣಂಘಾಣಂಗಳುದ್ಧ್ಯಯಾನಕಮಹಾಭೇರೀರವವ್ಯಾಪ್ತಿಯಿಂ |
ಕ್ಷೋಣೀಮಂಡಲದಿಗ್ವಿಭಾಗಗಿರಿಧರಶ್ರೇಣೀಗೃಹಾರಾಜಿ ||
ಕ್ಷೋಣೋದ್ವೇಲನೆಗೈಯುತಂ ಕ್ಷಿತಿರಜಸ್ಸಾಂದ್ರಾಂಧ್ಯನುಂ ಬೀ[illegible] |
ವಾಣೀಶಾಂಡ ಪೃಥಗ್ವಿಧಾನಸೇನೆ ನಡೆದತ್ತೀನೆಂಬಿನಂ ಕೀಶಪಂ ||

ಘಟಿತಾನ್ಯೋನ್ಯಾಗ್ರಭಾಗಪ್ರಕಟಿತರಟನೋದ್ಘಾಟನಾಘಾತಿತಾಃ |
ಸ್ಫುಟಿತೋದ್ಯದ್ದ್ರುಮರ್ಮಮರ್ಮಪ್ರಸೃತಶಿಖಿಕಣಂ ಘುರ್ಘುರಾಲನ್ಯೋನ್ಯದಿಂದಂ||
ಸ್ಫುಟಶೈಲಾಘಾತವೃಕ್ಷಪ್ರಹರಣಶಂಕುಂತಾಭಿಘಾತಂಗಳಿಂ ದೃ|
ಕ್ಕಟುವಾದತ್ತಾಜಿರಂಗಂ ಚಿಕಟಪಟಪಟತ್ತತ್ಕರಘೋಷಾನುಷಂಗಂ||

ಹನುಮದ್ವಿಲಾಸವು ಷಟ್ಪದಿಯಲ್ಲಿ ಬರೆದಿರುವಂತೆ ತಿಳಿಯುತ್ತದೆ

---

## ಸಿಂಗರಾಚಾರ್ಯ ಸು. 1770

ಈತನು ಶ್ರೀರಂಗಮಾಹಾತ್ಮ್ಯವನ್ನು ಬರೆದಿದ್ದಾನೆ ಇವನು ಶ್ರೀವೈಷ್ಣವಕವಿ; ಮೈಸೂರು ರಾಜನಾದ ಬೆಟ್ಟದ ಚಾಮರಾಜನಿಗೆ ಉಪಾಧ್ಯಾಯನಾಗಿದ್ದಂತೆ ಹೇಳುತ್ತಾನೆ. ಈ ರಾಜನು 1770 ರಿಂದ 1776ರವರೆಗೆ ಆಳಿದ ಬೆಟ್ಟದ ಚಾಮರಾಜನೆಂದು ತೋರುತ್ತದೆ ರಾಜ ಒಡೆಯರ ತಮ್ಮನಾದ ಬೆಟ್ಟದಚಾಮರಾಜನು ಸುಮಾರು1600ರಲ್ಲಿದ್ದನು. ಕವಿ ಈತನ ಉಪಾಧ್ಯಾಯನಾಗಿದ್ದಿರಬಹುದು ಎಂಬ ಸಂದೇಹಕ್ಕೆ ಅವಕಾಶವುಂಟು. ಆದರೆ ಇವನ ಬಂಧವನ್ನು ನೋಡಿದರೆ ಇವನು ಅಷ್ಟು ಹಿಂದಣವನಲ್ಲ ಎಂದು ಹೇಳಬಹುದಾಗಿದೆ. ಅಲ್ಲದೆ ತನ್ನ ಕಾಲಕ್ಕೆ ಹಿಂದೆ ಪದ್ಯರೂಪವಾದ ಶ್ರೀರಂಗಮಾಹಾತ್ಮ್ಯವು ಇದ್ದಂತೆ

ಕಬ್ಬಿಗರಾ ಪದ್ಯಮನುಂ | ಡುಬ್ಬಸದಿಂ ದೂಱಿ ಪಟಿಯುರೆನ್ನೀಕೃತಿಯುಂ|
ಕಬ್ಬಿಗರ ರಸಿಕಮನುಜರ್ | ಪರ್ಬಿದ ಮುದದಿಂದೆ ಸವಿಯರೇ ಸಕ್ಕರೆಯಂ||

ಎಂಬ ಪದ್ಯದಲ್ಲಿ ಸೂಚಿಸುವುದರಿಂದ ಒಂದುವೇಳೆ ಮಲ್ಲಿಕಾರ್ಜುನನು (1678) ಬರೆದಿರುವ ಚಂಪೂರೂಪವಾದ ಶ್ರೀರಂಗಮಾಹಾತ್ಮ್ಯಕ್ಕೆ ಈ ಮಾತು ಅನ್ವಯಿಸಬಹುದು ಹಾಗಿದ್ದ ಪಕ್ಷದಲ್ಲಿ ಈ ಸೂಚನೆಯೂ ಮೇಲೆ ಕವಿಗೆ ಹೇಳಿರುವ ಕಾಲವನ್ನು ದೃಢೀಕರಿಸುತ್ತದೆ.

ಇವನ ಗ್ರಂಥ

### ಶ್ರೀರಂಗಮಾಹಾತ್ಮ್ಯ

ಇದು ಗದ್ಯರೂಪವಾಗಿದೆ;10 ಅಧ್ಯಾಯಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಶ್ರೀರಂಗಕ್ಷೇತ್ರದ ಮಾಹಾತ್ಮ್ಯವು ಹೇಳಿದೆ. ಇದರ ಮೂಲವು ಬ್ರಹ್ಮಾಂಡಪುರಾಣದಲ್ಲಿ ಮಹೇಶ್ವರನಾರದಸಂವಾದರೂಪವಾಗಿದೆ ಗ್ರಂ

ಥಾದಿಯಲ್ಲಿ 3 ಪದ್ಯಗಳಿವೆ; ಅಂತ್ಯದಲ್ಲಿ ಈ ಗದ್ಯವಿದೆ—

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಯದುಕುಲಪಯಃ ಪಾರಾವಾರಕಲಾನಿಧಿ ಬಿರುದೆಂತೆಂಬರಗಂಡ ಲೋಕೈಕವೀರ ಶ್ರೀನರಪತಿ ಬೆಟ್ಟದಚಾಮ ಮಹಾರಾಯನ ಉಪಾಧ್ಯಾಯ ಸಿಂಗರಾಚಾರ್ಯವಿರಚಿತಮಪ್ಪ ಶ್ರೀರಂಗಮಾಹಾತ್ಮ್ಯ ದೊಳ್.

ಈಗ್ರಂಥದಿಂದ ಆದಿಭಾಗದಲ್ಲಿರುವ ಕವಿವಿಷಯಕವಾದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ಭೂಭೃದ್ವರ್ಯಕದಂಬವಂದಿತಪದದ್ವಂದ್ವಾರವಿಂದೋಲ್ಲಸ|
ಚ್ಛ್ರೀಭೃದ್ಬೆಟ್ಟದಚಾಮಭೂಪನ ಮಹದ್ವಂಶಾವಳೀಸಂಶ್ರಿತಂ||
ಸಭ್ಯಂ ಸಂಪ್ರತಿ ಸಿಂಗರಾರ್ಯಕವಿರಾಡಧ್ಯಾಪಕಂ ಕನ್ನಡ|
ಶ್ರೀಭಾಷಾತತಿಯಿಂ ಬುಧಂ ರಚಿಸಿದಂ ಶ್ರೀರಂಗಮಾಹಾತ್ಮ್ಯಮಂ||

———

## ಮಹಮೂರ್ತಿ 1772

ಈತನು ಅಷ್ಟಾವರಣತಿಲಕವನ್ನು ಬರೆದಿದ್ದಾನೆ. ಇವನು ವೀರ ಶೈವಕವಿ. ತನ್ನ ಪರಂಪರೆಯನ್ನು ಹೀಗೆ ಹೇಳಿದ್ದಾನೆ.–ಪೂಡವಿಡಿಯ ಹುಚ್ಚಯ್ಯ, ಮಗ ಗುರುಸಿದ್ಧ, ಮಗ ಕರಿವೀರಯ್ಯ, ಮಗ ವೈಯಪ್ಪ, ಮಗ ಕವಿ ಮಹಮೂರ್ತಿ. ಇವನಿಗೆ ಗುರುವಯ್ಯ, ಪರಮಯ್ಯ, ಕರಿ ವೀರಯ್ಯ ಎಂಬ ಮೂವರು ತಮ್ಮಂದಿರಿದ್ದರು. ಇವನ ಗುರು ಗುರುಸಿದ್ಧ. ಇವನು ಕೃಷ್ಣಾತೀರದಲ್ಲಿರುವ ನಾಕಪುರವೆಂಬಳಗೆ ಸಿಷ್ಯಗಳು ಕಟ್ಟಿಸಿ ಕೊಟ್ಟ ಮಠದಲ್ಲಿ ವಾಸವಾಡಿಕೊಂಡಿದ್ದಂತೆ ಹೇಳುತ್ತಾನೆ ಈ ಗ್ರಂಥ ವನ್ನು ಶಕ 1695 ನೆಯ ನಂದನದಲ್ಲಿ, ಎಂದರ 1772 ರಲ್ಲಿ, ರಚಿಸಿದಂತೆ ಹೇಳಿದೆ.

ಪೂರ್ವಕವಿಗಳನ್ನು ಈಪದ್ಯಭಾಗದಲ್ಲಿಹೇಳಿದ್ದಾನೆ —

ವರಕಾಳಿದಾಸಗೆ ಮಯೂರ ಮಲುಹಣಗೆ ಪಾ |
ಲ್ಕುರಿಕೆಸೋಮೇಶ್ವರಗೆ ಗುಬ್ಬಿಯಾಮಲ್ಲಣಾ |
ರ್ಯರಿಗೆ ನಿಜಗುಣದೇವನಿಗೆ ಭೀಮಕವಿಗಳಡಿದಾವರೆಗೆ ನತನಪ್ಪೆನು ||

ಇವನ ಗ್ರಂಥ

## ಅಷ್ಟಾವರಣತಿಲಕ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 11, ಪದ್ಯ 1336. ಇದರಲ್ಲಿ ಅಷ್ಟಾವರಣಗಳ, ಎಂದರೆ ಗುರು ಲಿಂಗ ಜಂಗಮ ವಿಭೂತಿ ರುದ್ರಾಕ್ಷಿ ಪಂಚಾಕ್ಷರಿ ಪಾದೋದಕ ಪ್ರಸಾದ ಇವುಗಳ, ಮಹಿಮೆ ನಿರೂಪಿಸಿದೆ ಅಲ್ಲಲ್ಲಿ ಜೈನರಿಗೂ ವೀರಶೈವರಿಗೂ ನಡೆದ ವಾದಗಳೂ ಕೆಲವರು ರಾಜರುಗಳ ಆಳಿಕೆಯ ವಿಷಯಗಳೂ ಹೇಳಿವೆ ಈ ಗ್ರಂಥವು ‘ ಚೆನ್ನಬಸವೇಶ್ವರನು ನೀಲಮ್ಮನಿಗೆ ಹೇಳಿದ ಶರಣರ ಉನ್ನತಕಥೆ’, ಎಂದೂ “ನವಿಲೆಪುರದರಸ ದೇವರಾಜಂಗೆ ಅವನ ಸತಿ ಮಧುಮಾನಿನಿ ಪೇಳಿದ ಕಾವ್ಯ’’ ಎಂದೂ ಕವಿ ಹೇಳುತ್ತಾನೆ. ಇದಕ್ಕೆ ದೇವರಾಜ ಕಾವ್ಯ ಎಂಬ ಹೆಸರೂ ಇರುವಂತೆ ತೋರುತ್ತದೆ

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ ಬಳಿಕ ಕವಿ ಪಾರ್ವತಿ, ಗಂಗಾದೇವಿ, ಷಣ್ಮುಖ, ಗಣೇಶ, ವೀರೇಶ, ಬಸವ, ಚೆನ್ನಬಸವ ನೀಲಮ್ಮ, ಪ್ರಭುದೇವ, ಅಮರಗುಂಡದ ಮಲ್ಲಿಕಾರ್ಜುನ, ಸುಗ್ಗಲದೇವಿ, ಅಕ್ಕಮ್ಮ, ಸ್ವಗುರು ಗುರುಸಿದ್ಧ, ಅನ್ನದಾನೇಶ, ಮಡಿವಾಳ, ಸಿದ್ಧರಾಮ ಇವರು ಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ—

### ಸ್ತ್ರೀಯರು

ಒಲ್ಲದವನಲಿ'ಸುವರ್ ಒಲಿದವನನ ...'ಸುವರ್ |
ಇಲ್ಲಯಿಂದಱ'ಯದನಕೂಡೆ ಮಾತಾಡುವರ್ |
ಕಲ್ಲೆದೆಯ ಕರಗಿಪರ್ ಸ್ವಪ್ನದಲಿ ಮೊದಲಾಗಿ ಕಲೆನೆಲೆಯ ತೋಱುತಿಹರು ||
ತಲ್ಲಣಂಗೊಳಿಸುವರ್ ತಮ್ಮ ಚಲಗೆಲಿಸುವರ್ |
ಬಲ್ಲತನದೋಱುವರ್ ಕುಲ್ಲಕುಹಕದ ನಿಲಯ |
ದಲೊಲ್ಲಬ್ಬನಡಗಿಸುತ ಹೊಱಗೊಬ್ಬನಿಟ್ಟಿಹರು ಒಲ್ಲೆನೊಲ್ಲೆನು ಧರಣಿಪಾ||
ಸತಿಯಿಂದ ಸತ್ಕೀರ್ತಿ ಸತಿಯಿಂದಲಪಕೀರ್ತಿ |
ಸತಿಯಿಂದಧೋಗತಿಯು ಸತಿಯಿಂದ ಸನ್ಮತಿಯು|
ಸತಿಯಿಂದಲಾಪೇಕ್ಷೆ ಸತಿಯಿಂದ ಸನ್ಮೋಕ್ಷ ಸತಿಯು ಮೋಹದ ಸಂಪತ್ತು||
ಸತಿಯಿಂದ ಕಾಪಣ್ಯ ಸತಿಯಿಂದಲತಿಪುಣ್ಯ |

ಸತಿಯಿಂದ ಮೂವರ್ಗ ಸತಿಯಿಂದ ಸಂಸ್ವರ್ಗ|
ಸತಿಯಿಲ್ಲದವಗೆ ಇಹಪರಲೋಕದಲ್ಲಿ ಸದ್ಗತಿಯಿಲ್ಲ ಕೇಳವನಿಪಾ||
ಇಂದುಮಂಡ ಪೆಲ್ಲಿ ರಾಹುವಿನ ಸ್ಥಳವೆಲ್ಲಿ |
ಬಂದು ತದ್ಗ್ರಾಸಮಂ ಮಾಡುವ ಪರಾಕ್ರಮವ |
ಹೊಂದಿರ್ದು ಸತತವುಂ ತುಡುಕದಲೆ ಸುಮ್ಮನಿಹನೇನುಕಾರಣವೆಂದಡೆ ||
ಮಂದಗಮನೆಯ ಚಂದ್ರಸಾಗ್ಸೃಶ್ಯಮುಖದೊಳಗೆ |
ಸುಂದರದ ನಾಸಿಕವ ಕಾಣುತಲಿ ಬಗಪನಿಹ|
ನೆಂದಱಿದು ಬೈತಲೆಯ ವೇಣಿಸಹಭುಜಗಭಯಗೊಂಡು ತುಡುಕದಲಿರ್ಪನು||

---

## ವರದೇಂದ್ರ 1774

ಈತನು ತಂತ್ರಸಾರವನ್ನು ಬರೆದಿದ್ದಾನೆ. ಇವನು ಮಾಧ್ವಕವಿ. ನಂಜನಗೂಡು ರಾಘವೇಂದ್ರಮಠದಲ್ಲಿ ಸ್ವಾಮಿಯಾಗಿದ್ದನು. ಇವನ ಗುರು ವಸುಧೇಂದ್ರ. ಈತನ ಕಾಲವು 1774 ಎಂದು ಒಂದು ಶಾಸನ ದಿಂದ[1] ತಿಳಿಯುತ್ತದೆ

ಇವನ ಗ್ರಂಥ

### ತಂತ್ರಸಾರ

ಇದು ಹಾಡಿನರೂಪವಾಗಿದೆ; ಪದ 29. ನರಸಿಂಹಭಾಗವತನ ಮಗನಾದ ಜಗನ್ನಾಥದಾಸನ ಪ್ರಾರ್ಥನಾನುಸಾರವಾಗಿ ಈಗ್ರಂಥವನ್ನು ವಸುಧೇಂದ್ರನ ಕೃಪೆಯಿಂದ ರಚಿಸಿದಂತೆ ಕವಿ ಹೇಳುತ್ತಾನೆ. ಇದು ಮೂಲರಾಮನು ಬ್ರಹ್ಮನಿಗೆ ಉಪದೇಶಮಾಡಿದ ಮಹಾಮಂತ್ರದ ಮರ್ಮ ಎಂದು ಹೇಳಿದೆ. ಇದರಿಂದ ಒಂದುಪದವನ್ನು ತೆಗೆದು ಬರೆಯುತ್ತೇವೆ:

ಪಲ್ಲವಿ|| ಪಾಹಿ ಪಂಕೇರುಹೇಕ್ಷಣ ಸರ್ವಕಾಮದ |
ಪಾಹಿ ಪದ್ಮಾಲಯಾನಿಕೇತನ ಸದಾ||
ಆವ ಸರ್ವೋತ್ತಮನು ಆವಾವ ಗುಣಗಳಿಗೆ | ಆವಾವ ಶಬ್ದವಾಚ್ಯನು ಕರುಣದಿ|
ಈವಿಚಾರವನು ಪೇಳ್ವೆನಲು ನಸುನಗುತ ರಾ|ಜೀವಸಂಭವಗಾಗಳೀತೆಱದಿ ನುಡಿದ||
ವನಜಸಂಭವ ಕೇಳು ನಾನೆ ಸರ್ವೋತ್ತಮನು | ಎನಗನಂತಾನಂತಮಂಗಳಗುಣ |
ಪ್ರಣವವಾಚ್ಯನು ನಾನುಅಷ್ಟವರ್ಣೋಪೇತ|ಪ್ರಣವನವವಿಧಾರ್ಥವನುಪೇಳ್ವೆನಿನಗೆ||

---

1 *Mysor Archaeological Report* for 1917 para. 151,

## ಜಗನ್ನಾಥದಾಸ ಸು 1775

ಈತನು ಹರಿಕಥಾಮೃತಸಾರ, ಕೀರ್ತನೆಗಳು, ತತ್ತ್ವಸುವ್ವಾಲಿ ಎಂಬ ಗ್ರಂಥಗಳನ್ನು ಬರೆದಿದ್ದಾನೆ ಇವನು ಮಾಧ್ವಕವಿ ; ಗೋಪಾಲದಾಸನ (ಸು 175[1]) ಶಿಷ್ಯನು. ಇವನ ತಂದೆ ನರಸಿಂಹಾರ್ಯ ಈತನಿಗೆ ಜಗನ್ನಾಥರಾಯ ಎಂಬ ಹೆಸರೂ ಉಂಟು. ದಾಸಕೂಟದವರನ್ನು ನಿಂದಿಸಿದುದರಿಂದ ಈತನಿಗೆ ಹೃದ್ರೋಗವು ಕಂಡು ವಿಜಯರಾಯನ ಆಜ್ಞಾನುಸಾರವಾಗಿ ಗೋಪಾಲದಾಸನಿಂದ ಪರಿಹಾರವಾದಂತೆ ಹೇಳುತ್ತಾರೆ. ಇವನ ಸ್ಥಳ ಮಾನವಿ. ವರದೇಂದ್ರನ (1774) ಸಮಕಾಲದವನೆಂದು ಅವನ ಚರಿತ್ರದಿಂದ ತಿಳಿಯುತ್ತದೆ.

ಇವನ ಗ್ರಂಥಗಳಲ್ಲಿ

### ಹರಿಕಥಾಮೃತಸಾರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ ; ಸಂಧಿ 33, ಪದ್ಯ 953 ಈಗ್ರಂಥವು ವಿಷ್ಣುಸ್ತುತಿರೂಪವಾಗಿಯೂ ದ್ವೈತವೇದಾಂತಬೋಧಕವಾಗಿಯೂ ಇದೆ ಆರಂಭದಲ್ಲಿ ಶ್ರೀಪಾದರಾಯ, ವ್ಯಾಸರಾಯ ಪುರಂದರದಾಸ, ವಿಜಯದಾಸ ಇವರುಗಳನ್ನು ಸ್ತುತಿಸುವ ಸಂಸ್ಕೃತಶ್ಲೋಕಗಳಿವೆ ಆಮೇಲೆ ಕಪಿ ನರಸಿಂಹ, ಲಕ್ಷ್ಮಿ, ಬ್ರಹ್ಮ, ವಾಯು ಸರಸ್ವತಿ, ಮಾರುತಪತ್ನಿ ಬಾದರಾಯಣ, ಮಧ್ವಾಚಾರ್ಯ, ಶಿವ ಇವರುಗಳನ್ನು ಸ್ತುತಿಸಿ ಗ್ರಂಥವನ್ನು ಆರಂಭಿಸಿದ್ದಾನೆ. ಈಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಜನನಿಯನು ಕಾಣದಿಹ ಬಾಲಕ | ನೆನೆದು ಹಂಬಲಿಸುತಿರೆ ಕತ್ತಲೆ|
ಮನೆಯೊಳಡಗಿದ್ದವನ ನೋಡುತ ನಗುತ ಹರುಷದಲಿ||
ತನಯನಂ ಬಿಗಿದಪ್ಪಿ ರಂಜಿಸಿ | ಕನಲಿಕೆಯ ಕಳೆವಂತೆ ಮಧುಸೂ|
ದನನು ತನ್ನವರಿದ್ದೆಡೆಗೆ ಬಂದೊದಗಿ ಸಲಹುವನು||
ಕಂಡ ನೀರೊಳು ಮುಳುಗಿ ದೇಹವ | ದಂಡಿಸಿದ ಫಲವೇನು ದಂಡಕ |
ಮಂಡಲಂಗಳ ಧರಿಸಿ ಯತಿಯೆಂದೆನಿಸಿ ಫಲವೇನು ||
ಅಂಡಜಾಧಿಪನಂಸಗನ ಪದ | ಪುಂಡರೀಕದಿ ಮನವಹರ್ನಿಶಿ|
ಬಂಡುಣಿಯವೋಲಿರಿಸಿ ಸುಖಬಡದಿಪ್ಪ ಮಾನವನು||

1. 136 ನೆಯ ಪುಟವನ್ನು ನೋಡಿ

### ಕೀರ್ತನೆಗಳು

ಈತನ ಕೀರ್ತನೆಗಳಲ್ಲಿ ಜಗನ್ನಾಥವಿಠಲ ಎಂಬ ಅಂಕಿತವಿದೆ. ಒಂದು ಕೀರ್ತನೆಯನ್ನು ಉದಾಹರಿಸುತ್ತೇವೆ—

ರಾಗ ಕಾಪಿ. ಆದಿತಾಳ.

ಪಲ್ಲವಿ|| ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ | ಸಂಗಸುಖವಿತ್ತು ಕಾಯೋ ಕರುಣಾಸಾಗರ||

ಅರಿಯರೊ ನಿನ್ನಲ್ಲದೆ ಮತ್ತನ್ಯದೇವರ| ಮರೆಯರೊ ನೀಮಾಡಿದನಿತ್ಯೋಪಕಾರ| ತೊರೆಯರೊ ನಿನ್ನಂಘ್ರಿಸೇವೆ ಪ್ರತಿವಾಸರ | ಬೆರೆಯರೊ ಪರತತ್ತ್ವವಲ್ಲದ ಇತರವಿಚಾರ||1||

ಕಂಡಕಂಡಲ್ಲಿ ನಿನ್ನ ರೂಪವ ಕಾಂಬರೊ | ಉಂಡು ಉಣಿಸಿದ್ದು ನಿನ್ನ ಯಜ್ಞವೆಂಬರೊ| ಬಂಡುಣಿಯಂದದಿ ನಾಮಾಮೃತವ ಸವಿವರೊ | ಹೆಂಡಿರು ಮಕ್ಕಳು ನಿನ್ನ ದಾಸರೆಂಬರೋ ||2||

ನಗುವರೊ ರೋದಿಸುವರೊ ನಾಟ್ಯವಾಡುವರೊ | ಬಗೆಯರೊ ಬಡತನಭಾಗ್ಯ ಭಾಗವತರು| ತೆಗೆಯರೊ ನಿನ್ನಲ್ಲಿ ಮನವನೊಮ್ಮೆಗಾದರು | ಜಗನ್ನಾಥವಿಠಲನಿನ್ನವರೇನು ಧನ್ಯರೋ ||3||

ಈತನ ತತ್ತ್ವಸುವ್ವಾಲಿ ಹಾಡಿನ ರೂಪವಾಗಿದೆ ; ಇದರಲ್ಲಿ 400 ಚರಣಗಳಿವೆ.

---

### ಗುರುಗೋಪಾಲದಾಸ ಸು. 1775

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ, ಗೋಪಾಲದಾಸನ (ಸು. 1750) ಶಿಷ್ಯನು. ಇವನ ಕೀರ್ತನೆಗಳಲ್ಲಿ ಗುರುಗೋಪಾಲವಿಠಲ ಎಂಬ ಅಂಕಿತವಿದೆ. ಒಂದನ್ನು ಉದಾಹರಿಸುತ್ತೇವೆ—

ರಾಗ ಪಂತುವರಾಳಿ. ಅಟತಾಳ.

||ಪಲ್ಲವಿ|| ಸಾಧಕ ಇದ್ದುದಕೆ||

ಅನುಪಲ್ಲವಿ || ಪರಮಾರ್ಥ ಸಾಧನ ಗುಣಕೀರ್ತನೆನಾಡು||

ಎಂಟೆಂಟೆರಡು ನಾಲ್ಕು ನಾಡಿಯಲಿ | ಎಂಟೆಂಟೆರಡು ರೂಪದಲಿ |
ಎಂಟೆಂಟೆರಡು ಮೂವತ್ತೈದು ವ್ಯಂಜನದಿ | ಎಂಟೆಂಟೆಂಟು ಮತ್ತೆಂಟು ಸ್ವರದಿ
ತಿಳಿ ||1||
ಎಂಟೆಂಟೆರಡು ಕೇಸರದಳವಾ | ಎಂಟುಕಮಲಕರ್ಣಿಕೆಯಲಿ |
ಎಂಟೆಂಟಾಜಾನಾಲ್ಕುಸ್ತಂಭದ | ಮಂಟಪದೊಳಗಿಹ ವೆಂಕಟನ ನೋಡು ||2||
ಎಂಟುಭುಜಗಳಲಿ ಎಂಟುಆಯುಧಪಿಡಿ | ದೆಂಟು ದಳಗಳಲಿ ತಿರುಗುತಲಿ |
ಎಂಟುವಿಧದಿ ಪ್ರೇರಕನಾಗಿರುವ ನವ್ಯ | ನಂಟತನದ ಗುರುಗೋಪಾಲವಿಠಲನ
ತಿಳಿ ||3||

---

## ವರದಗೋಪಾಲದಾಸ ಸು. 1775

ಇವನು ಕೀರ್ತನೆಗಳನ್ನು ಬರೆದಿದ್ದಾನೆ. ಈತನು ಮಾಧ್ವಕವಿ, ಗೋಪಾಲದಾಸನ (ಸು. 1750) ಶಿಷ್ಯನು. ಇವನ ಕೀರ್ತನೆಗಳಲ್ಲಿ ವರದ ಗೋಪಾಲವಿಠಲ ಎಂಬ ಅಂಕಿತವು ದೊರೆಯುತ್ತದೆ. ಒಂದನ್ನು ತೆಗೆದು ಬರೆಯುತ್ತೇವೆ—

ಪಲ್ಲವಿ|| ರಾಮನಾಮಭಜಿಸಿದವರಿಗುಂಟೆ ಭವಬಂಧನ ||
ಅನುಪಲ್ಲವಿ|| ಕಾಮಹರನ ಸತಿಯು ಸದಾ ನೇಮದಿಂದ ಭಜಿಸಿದ ಶ್ರೀ||
ಶಿವನು ಧನ್ಯನಾದ ಪ್ರಾಣಿ | ಯುವತಿ ಪಾವನೆಯಾದಳು |
ರವಿಸುತನು ಪದವಿಪಡೆದ | ಧ್ರುವನು ದಿವಿಜನೆನಿಸಿದ ಶ್ರೀ ||1||
ಈರವರಪ್ರಹ್ಲಾದದ್ರೌಪದಿ | ವರವಿಭೀಷಣರೆಲ್ಲರಿಗೂ |
ವರದಗೋಪಾಲವಿಠಲನಾಮ | ದುರಿತಕಾನನಪಾವಕ ಶ್ರೀ ||2||

---

## ವ್ಯಾಸವಿಠಲದಾಸ ಸು. 1775

ಈತನು ಕೀರ್ತನೆಗಳನ್ನು ಬರೆದಿದ್ದಾನೆ ಇವನು ಮಾಧ್ವಕವಿ; ವೇಣುಗೋಪಾಲದಾಸನ (ಸು. 1750) ಶಿಷ್ಯನು ಇವನಿಗೆ ಕಲ್ಲೂರ ಸುಬ್ಬಣ್ಣ ಎಂಬ ಹೆಸರೂ ಉಂಟು ಈತನ ಕೀರ್ತನೆಗಳಲ್ಲಿ ವ್ಯಾಸವಿಠಲ ಎಂಬ ಅಂಕಿತವಿದೆ. ಒಂದನ್ನು ಉದಾಹರಿಸುತ್ತೇವೆ—

ಪಲ್ಲವಿ| ಸತ್ಯಸಂಕಲ್ಪ ಸ್ವತಂತ್ರ ಸರ್ವೇಶ ಸರ್ವೋತ್ತಮನೆ ಸಾರ್ವಭೌಮ ||

ಅನುಪಲ್ಲವಿ|| ಭೃತ್ಯನಿಗೆ ಒಂದ ಪ್ರಪಂಭಯಂಗಳ ಕಳೆದು | ನಿತ್ಯದಲಿ
ಕಾವ ಸ್ವಾಮಿಪ್ರೇಮಿ||

ಎನ್ನಂಥ ಪಾಪಿಷ್ಠ ಇನ್ನಿಲ್ಲ ಧರೆಯೊಳಗೆ | ನಿನ್ನಂಥ ಕರುಣಿಯಿಲ್ಲ |
ಚೆನ್ನಗುರು ವಿಜಯರಾಯರ ಪೊಂದಿರುವನೆಂದು | ಮನ್ನಿಸಿ ಸಲಹಬೇಕೋ |
ಘನಸಂಸಾರದೊಳು ನಾ ಭವನೆಂಬ ದಾಟಿಸಿ | ನಿನ್ನಸ್ಮೃತಿಯೊಂದು ಇರಲಿ |
ಪನ್ನಗಾಂಗಿತವಾದ ವ್ಯಾಸವಿಠಲನು ಪ್ರೇಮಗೊಲಿದ ಗುರುಪಿತಾಮಹ ಶ್ರೀಶ ||1||

---

## ಲಕ್ಷ್ಮಣಪಂಡಿತ ಸು. 1775

ಈತನು ಅಕಾರಾದಿ ನಿಘಂಟುವನ್ನು ಬರೆದಿದ್ದಾನೆ ಇವನು ಜೈನ ಕವಿ; ಸುಮಾರು 1775 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ

ಈ ನಿಘಂಟುವಿನಲ್ಲಿ ಸಂಸ್ಕೃತಶಬ್ದಗಳಿಗೆ—ಮುಖ್ಯವಾಗಿ ವೈದ್ಯಶಬ್ದಗಳಿಗೆ—ಕನ್ನಡದ ಪರ್ಯಾಯನಾಮಗಳು ಹೇಳಿವೆ

---

## ವಾಸುದೇವ 1777.

ಈತನು ತುರಂಗಭಾರತ, ತತ್ವಚೌಪದ, ನಾರಾಯಣಾಕ್ಷರಮಾಲಿಕಾಸ್ತೋತ್ರ ಇವುಗಳನ್ನು ಬರೆದಿದ್ದಾನೆ

ಇವನು ಹವ್ಯಕಬ್ರಾಹ್ಮಣನು; ಇವನ ತಂದೆ ಶಂಕರನಾರಾಯಣ ಜನ್ಮಸ್ಥಳ ದಕ್ಷಿಣಕನ್ನಡಜಿಲ್ಲೆಯ ಹನ್ನೆರಡುಮಾಗಣೆಯಲ್ಲಿರುವ ಸುಳಗೋಡು ಇವನ ಮನೆತನದವರು ತೋಟಮನೆಬೇಸಾಯಗಾರರಾಗಿದ್ದರು ಇವನು ಬಹಳ ಬಡವನು. ಸಾಲದಿಂದ ಸ್ವತ್ತೆಲ್ಲಾ ಹೋಗಿ ಹೆಂಡರುಮಕ್ಕಳೊಡನೆ ಇಕ್ಕೇರಿಸಾಗರದಪ್ರಾಂತಕ್ಕೆ ಬಂದು ಇಕ್ಕೇರಿ ಅಘೋರೇಶ್ವರನ ಬಳಿ ಚಿಪ್ಪಳಿಯಲ್ಲಿ ಹುಡುಗರಿಗೆ ಓದುಬರಹ ಕಲಿಸುತ್ತಿದ್ದನು. ಕೇದಿಗೆಸರಹು ಎಂಬ ಊರಿನಲ್ಲಿ ಹೊಸದಾಗಿ ಪ್ರತಿಷ್ಠಮಾಡಿದ ಗಣಪತಿಯ ಪೂಜೆಗೆ ಇವನನ್ನು ನೇಮಿಸಿದರು. ಇಲ್ಲಿಯೇ ಇವನ ಕವಿತೆ ಆರಂಭವಾಯಿತು. ಲಕ್ಷ್ಮೀನಾರಾಯಣ ಎಂಬವನು ಇವನಿಗೆ ಪೋಷಕನಾಗಿದ್ದನು. ಸಾಗರದಜನರು ಇವನನ್ನು ಗೌರವದಿಂದ ಕಾಣುತ್ತಿದ್ದರು. ತನ್ನ ಮರಣದಿವಸವನ್ನು ಮುಂದಾಗಿ ಇಷ್ಟಮಿತ್ರರಿಗೆ ತಿಳಿಸಿ

ಅವರೊಡನೆ ಮಾತಾಡುತ್ತ ಸತ್ತನೆಂದು ಹೇಳುತ್ತಾರೆ. ತುರಂಗಭಾರತವನ್ನು ಶಕ 1700 ಹೇವಿಳಂಬಿಯಲ್ಲಿ - ಎಂದರೆ 1777 ರಲ್ಲಿ-ಬರೆದಂತೆ ಹೇಳುತ್ತಾನೆ ಈ ಗ್ರಂಥವನ್ನು ಕೋಲಾರ ಲಕ್ಷ್ಮೀರಮಣದೇವರ ಅಂಕಿತದಲ್ಲಿ ಬರೆದಿದ್ದಾನೆ.

ಇವನ ಗ್ರಂಥಗಳಲ್ಲಿ

### ತುರಂಗಭಾರತ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ ಸಂಧಿ ೯೬, ಪದ್ಯ 4720. "ಭಾರತದ ಜಲಧಿಯೊಳು ಪೇಳ್ದ ವೃತ್ತಾಂತವನೆ ಸಂಕ್ಷೇಪದೊಳಗೆ ಚಿತ್ರಿಸುವೆನು ತಿಳಿವಂತೆ" ಎಂದು ಹೇಳುತ್ತಾನೆ ಗ್ರಂಥಾವತಾರದಲ್ಲಿ ಗಣೇಶಸ್ತುತಿ ಇದೆ ಬಳಿಕ ಕವಿ ಸರಸ್ವತಿ, ಶಿವ, ವಿಷ್ಣು, ಬ್ರಹ್ಮ, ಇವರುಗಳನ್ನು ಸ್ಮರಿಸಿ ಶುಕಶೌನಕವ್ಯಾಸಾದಿಮುನಿಗಳಿಗೆ ವಂದಿಸಿ ಗ್ರಂಥವನ್ನು ಆರಂಭಿಸಿದ್ದಾನೆ ಈ ಗ್ರಂಥದಿಂದ ಕೆಲವುಪದ್ಯಗಳನ್ನು ತೆಗೆದು ಬರೆಯುತ್ತೇವೆ—

#### ಹಸ್ತಿನಾವತಿ

ಊರೊಳಗೆ ಮನೆಮನೆಯ ಬಾಗಿಲೊಳ್ ಮೆರೆವ ಶೃಂ |
ಗಾರಗಳ ಬಾಜಣೆಗಳ ತೋರಣಗಳಿಂದ ವಿ |
ಸ್ತಾರದೊಳ್ ಪರಿವ ಕಾಲಾಳು ಮೇಲಾಳುಗಳ ಸಂದಣಿಯ ಸಂಭ್ರಮದೊಳು ||
ಭೂರಮಣ ಕೇಳ್ ಬಣ್ಣಿಸಲ್ಕರಿದು ಬೀದಿಯೊಳ್ |
ತೇರುಗಳ ವಾಜಿಗಳ ಸ್ವಾರಿಗಳ ಮಾಳ್ಪ ಸಂ |
ಚಾರಿಗಳ ಗಜಗಳ ಸಮೂಹಗಳ ಜವಗಳ ವಿಲಾಸಗಳ ಕಳಕಳಂಗಳ್ ||

#### ಭೀಮಜರಾಸಂಧರ ಮಲ್ಲಯುದ್ಧ

ಬಿಡಿಸಿಕೊಂಬರು ಲಾಗುವೇಗದಿಂ ಬಿನ್ನಣದಿ |
ತೊಡರಿಕೊಂಬರು ಮತ್ತೆ ಪರಿತಂದು ಘೂತ್ಕರಿಸಿ |
ಮುಡುಹಿನಿಂ ಝಡಿಸುತ ಮೈಮೈಗೆ ಮೈಗೊಟ್ಟು ಚಿಮ್ಮಿದರು ಝಡಿತಿಯಿಂದ ||
ನಡಿಸಾಡಿಗೆ ಮೂದಲಿಸಿ ಬೈದರು ಬೊಬ್ಬಿರಿಸಿ |
ತಡವರಿಸಿ ತೊಡೆತೊಡೆಗಳಿಂದವುಕಿ ಬಿಗಿಬಿಗಿದು |
ಹಿಡಿಹಿಡಿದು ಕೈದುಡುಕಿ ಕಾದಿದರು ಜಾಱಿದರು ಏಱಿದರು ಸಂಗರದೊಳು ||

ವಿಷ್ಣು

ಎಸಳುಗಂಗಳ ಕ್ರೊಂಗು ಶೋಭೆಯಿಂ ರಂಜಿಸುವ |
ಮಿಸುಪ ತುಂಬುಗೆವೆ ವಕ್ರಭ್ರೂಲತೆಯ ನೊಸಲ ಕ |
? ಸ್ತೂರಿತಿಲಕವೆಸೆವ ಬಲುವ ಕುಟಿಲಕುಂತಳದಲಸುರಾರಿರಂಜಿಸಿದನು ||
ದೆಸೆಗೆಸೆವ ಪರಿಮಳದ ಮೇಳದಿಂ ಸಂಭ್ರಮಿಸಿ |
ಕುಸುಮರಾಜಿಯನಾಂತ ಶಿರಮುಡಿಗೆಯುಳಿಕುಲಂ |
ದೆಸೆದೆಸೆಗೆ ಝೇಂಕರಿಸೆ ರಂಜಿಸಿದ ನವರತ ಕೇವಣದ ಮಣಿಮಕುಟದಿಂ ||

ತತ್ತ್ವ ಚೌಪದ

ಇದೇ ಇವನು ಬರೆದ ಪ್ರಥಮಗ್ರಂಥವೆಂದೂ ಇದರಲ್ಲಿ ಅದ್ವೈತ ವೇದಾಂತಬೋಧಕವಾದ 54ಪದ್ಯಗಳಿವೆ ಎಂದೂ ತಿಳಿಯುತ್ತದೆ.

ಇವನ ಅಕ್ಷರಮಾಲಿಕಾಸ್ತೋತ್ರವು ನಮಗೆ ದೊರೆತಿಲ್ಲ.

— — —

ಅನಂತಕವಿ ಸು. 1780

ಇವನು ಬೆಳುಗೊಳದಗೊಮ್ಮಟೇಶ್ವರಚರಿತೆಯನ್ನು ಬರೆದಿದ್ದಾನೆ. ಈತನು ಜೈನಕವಿ. ಸುಮಾರು 1673 ಯಲ್ಲಿ ಕಟ್ಟಿದ ಚೆನ್ನಣ್ಣನ ಬಸ್ತಿಯನ್ನು[1] ವರ್ಣಿಸುವುದರಿಂದಲೂ, ಶಕ 1600ನೆಯ ನಳನಾಮವರ್ಷದ ಫಾಲ್ಗುಣದಲ್ಲಿ (1677) ಚಿಕ್ಕದೇವರಾಜನ ಮಂತ್ರಿಯಾದ ವಿಶಾಲಾಕ್ಷಪಂಡಿತನು ಗೊಮ್ಮಟೇಶ್ವರನಿಗೆ ಅಭಿಷೇಕವನ್ನು ಮಾಡಿಸಿದಂತೆಯೂ ಶಕ 1701 ನೆಯ ದುರ್ಮುಖಿವರ್ಷದ ಫಾಲ್ಗುಣದಲ್ಲಿ (1777) ಗೊಮ್ಮಟೇಶ್ವರನಿಗೆ ಮಹಾಪೂಜೆ ನಡೆದಂತೆಯೂ ಹೇಳುವುದರಿಂದಲೂ ಕವಿ ಈವರ್ಷಗಳಿಗೆ ಈಚೆಯವನು ಎಂಬುದು ವ್ಯಕ್ತವಾಗಿದೆ. ಸುಮಾರು 1780ರಲ್ಲಿ ಇದ್ದಿರಬಹುದು.

ಇವನ ಗ್ರಂಥ

ಬೆಳುಗೊಳದ ಗೊಮ್ಮಟೇಶ್ವರಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ; ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 6ಸಂಧಿಗಳೂ 7ನೆಯದರಲ್ಲಿ 240 ಪದಗಳೂ ಇವೆ. ಇದರಲ್ಲಿ ಗೊಮ್ಮಟೇಶ್ವರನ ಚರಿತೆ ಹೇಳಿದೆ. ಅಲ್ಲದೆ ಶ್ರವಣಬೆಳುಗೊಳಕ್ಕೂ ಕೆಲವರು ಜೈನಗುರುಗಳಿಗೂ ಸಂಬಂಧಿಸಿದ ಕೆಲವು ಅಂಶಗಳೂ ಹೇಳಿವೆ :

1. *Mysore Archaeological Report* for 1909, para 106.

ಕಲಿಯುಗದ ೬೦೮ನೆಯ ವರ್ಷದಲ್ಲಿ ಗೊಮ್ಮಟೇಶ್ವರನ ಪ್ರತಿಷ್ಠೆಯಾದಂತೆಯೂ ಚಾವುಂಡರಾಜನು ಹಿಂದಣ ವಿಗ್ರಹವನ್ನೇ ಶಿಲ್ಪಿಗಳಿಂದ ತಿದ್ದಿಸಿದಂತೆಯೂ

ಕಲ್ಯಬ್ದಷಟ್ಶತವಿನುತವಿಭವಚೈತ್ರ | ದಲ್ಲಿಯ ಶುಕ್ಲಪಂಚಮಿಯ |
ಮಲ್ಲಿಯ ರವಿವಾರ ಕುಂಭಲಗ್ನದಿ ಜಿನ | ವಲ್ಲಭಗಾಯ್ತು ಪ್ರತಿಷ್ಠೆ ||
ಕಡೆಯಾಣೆಬೊಂಬೆಗೆ ಕವಿದಿರ್ದ ದೂಳಿಯ | ಕೊಡಹಿಕ ಪೊಳಪಿಕ್ಕಿದಂತೆ |
ಕಡಸಿ ಸಿಲ್ಪಿಗಳಿಂದವೊಪ್ಪವಿಕ್ಕಿಸೆ ಕಾಂತಿ | ಮಡುಗಟ್ಟಿ ನಿಂದವೊಲಾಯ್ತು ||

ಎಂಬ ಪದ್ಯಗಳಲ್ಲಿ ಕವಿ ಹೇಳುತ್ತಾನೆ. ಬಸವಸೆಟ್ಟಿಯ ಮಗನಾದ ಅಣ್ಣಯ್ಯನು ಟಂಕಸಾಲೆ ಮುಂತಾದ ಅಧಿಕಾರವನ್ನು ಹೊಂದಿ ಚಿಕ್ಕದೇವರಾಜನ ಪ್ರೀತಿಗೆ ಪಾತ್ರನಾಗಿದ್ದು ಆತನಿಂದ ಬೆಳ್ಗೊಳದಲ್ಲಿ ಕಲ್ಯಾಣಿಯನ್ನು ಕಟ್ಟಿಸಿದಂತೆಯೂ, ಆ ಅಣ್ಣಯ್ಯನ ಬೀಗನಾದ ಪುಟ್ಟಯ್ಯನು ಪಾರ್ಶ್ವನಾಥಬಸ್ತಿಯಮುಂದಣ ಮಾನಸ್ತಂಭವನ್ನೂ ಚಂದ್ರಗಿರಿಯ ಪ್ರಾಕಾರವನ್ನೂ ಕಟ್ಟಿಸಿದಂತೆಯೂ ಈ ಗ್ರಂಥದಿಂದ ತಿಳಿಯುತ್ತದೆ. ನ್ಯಾಯಕುಮುದಚಂದ್ರೋದಯವೇ ಮುಂತಾದ ಗ್ರಂಥಗಳನ್ನು ಬರೆದ ಪ್ರಭಾಚಂದ್ರನು ಶ್ರವಣಬೆಳ್ಗೊಳದಲ್ಲಿ ಯತಿಯಾಗಿದ್ದಂತೆಯೂ ಅಭಯಚಂದ್ರನು ಶಶಕಪುರದಲ್ಲಿ ಸಳನಿಗೆ ಗುರುವಾಗಿದ್ದಂತೆಯೂ ಕವಿ ಹೇಳುತ್ತಾನೆ.

ಗ್ರಂಥಾವತಾರದಲ್ಲಿ ಗೊಮ್ಮಟೇಶ್ವರಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು, ಸರಸ್ವತಿ, ಶೀಲಸಾಗರಋಷಿ, ಯತಿಪಂಡಿತಾರ್ಯ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವುಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಹಲಸು.

ಕೇಳಿದೊಂದೊಂದ ಕೊಡುವ ಕಲ್ಪವೃಕ್ಷದ | ಜಾಳವ ನಗುವಂದದೊಳು |
ಮೂಲಾಗ್ರವರೆಗೆಡೆವಿಡದೆ ತುಂಬಿಹ ಫಲ | ದೋಳಿಯಿಂ ಮೆಱೆದುವು ಪನಸು ||

ತೆಂಗು

ಸಲಹಿದರನು ಮಱೆಯಲುಬಾರದೆಂಬುದ | ಕಲಿಸುವಂದದಿ ಚೆಂದೆಂಗು |
ತಲೆಯೊಳಗಮೃತಕೊಡವ ಪೊತ್ತೊಡೆಯನ | ಸಿಲುಕಿ ನೋಳ್ಪಂತೊಪ್ಪಿಹುವು ||

ಜಿತೇಂದ್ರಿಯರು

ಹರಿಯ ವಕ್ಷವ ಮೆಟ್ಟಿ ಬ್ರಹ್ಮನ ಮೊಗವೇಱಿ | ಹರನ ಜಟಾಜೂಟವನಡರ್ದ |
ಅರೆವೆಣ್ಣ ಮಾಡಿಮನೋಜಾತ್ಯವಕ್ತೆ | ಎಱಗದಿಹಗೆ ವಾಸಟಿಯೇ ||

ಮರ್ತ್ಯಲೋಕವ ಮಂಕುಗೊಳಿಸಿ ಪಾತಾಳವ | ತೊತ್ತುಳಿದು ಸ್ವರ್ಗವನು |
ಹತ್ತಿ ಜೋಡಾಡಿಪರಾವನಿತಾಜನ | ದತ್ತ ನೋಡದಗಾರು ಸಾಮ್ಯ ||
ಮಣಿಸುತ ಲೋಕವ ತೇತ್ರೈತ್ರೈಯೊಳೆ | ಕುಣಿಸಿ ಕೀಲವ ಪಚಿವಡಿ |
ಮುನಿಜನವನು ಮೂರ್ಛೆಗೊಳಿಸಿ ಮಾಯವ ಮಾಳ್ಪ | ವನಿತೆಯುಗ್ರೇಳಸ
ದಗ್ಗಣಯೇ ||

---

ವೆಂಕಟದಾಸ[1] ಸು. 1780

ಈತನು ಕೀರ್ತನೆಗಳನ್ನು ಬರೆದಿದ್ದಾನೆ ಇವನು ಮಾಧ್ವಕವಿ; ಸುಮಾರು 1780 ರಲ್ಲಿ ಇದ್ದಿರಬಹುದು.

---

ಮಾನವಮಾಧುರಿದಾಸ ಸು 1780.

ಈತನು ಜಲಕ್ರೀಡ, ರಾಸಕ್ರೀಡ, ಸುದಾಮುಕಥೆ ಇವುಗಳನ್ನೂ ಕೀರ್ತನೆಗಳನ್ನೂ ಬರೆದಿದ್ದಾನೆ ಇವನು ಮಾಧ್ವಕವಿ, "ಪೆರಿಯುಕೊಳವಾಸದ ವರದರಾಜನ ದಾಸ" ಎಂದು ಈ ನುಡಿಯಲ್ಲಿ ಹೇಳಿಕೊಂಡಿದ್ದಾನೆ:

ಪೆರಿಯುಕೋವಾಸದ ವರದರಾಜನ ದಾಸ ಪೇಳ್ದನೀಕಥೆಕೇಳಿರೆಲ್ಲ |
ಸುರವರ ಶ್ರೀಕೃಷ್ಣ ಸರ್ವರಿಗೊಲಿವನು ಕರುಣಿಸಿ ಕೈವಿಡಿದು ಸಲಹುವನು ||

ಇವನು ಸುಮಾರು1780ರಲ್ಲಿ ಇದ್ದಿರಬಹುದೆಂದು ತೋರುತ್ತದೆ

---

ಶಾನಭೋಗ ವೆಂಕಟರಮಣಯ್ಯ. ಸು. 1790.

ಈತನು ಮೈಸೂರುರಾಜರಚರಿತ್ರೆಯನ್ನು ಬರೆದಿದ್ದಾನೆ. ಇವನು ಸ್ಮಾರ್ತಬ್ರಾಹ್ಮಣನು ತನ್ನ ವಂಶಾವಳಿಯನ್ನು ಹೀಗೆ ಹೇಳಿದ್ದಾನೆ— ಶ್ರೀರಂಗಪಟ್ಟಣದ ಶಾನಭಾಗ ತಿಮ್ಮಪ್ಪಯ್ಯ ಮಗ ನಂಜಪ್ಪಯ್ಯ; ಮಗ ಯಾಲಕ್ಕಯ್ಯ; ಮಗ ವೆಂಕಟೇಶಯ್ಯ; ಮಗ ಗ್ರಂಥಕರ್ತ ವೆಂಕಟರಮಣಯ್ಯ. ದೊಡ್ಡನವಾಬನ (ಹೈದರ) ಕಾಲದಲ್ಲಿದ್ದ ಚಾಮರಾಜಒಡೆಯರಕಾಲದವರೆಗೆ (1776-1796) ಚರಿತ್ರೆಯನ್ನು ಬರೆದಿರುವುದರಿಂದ ಕವಿಯ ಕಾಲವು ಸುಮಾರು 1790 ಆಗಿರಬಹುದು

ಇವನ ಗ್ರಂಥ

---

1 *Indian Antiquary,* II 308

## ಮೈಸೂರುರಾಜರಚರಿತ್ರೆ

ಇದು ಗದ್ಯರೂಪವಾಗಿದೆ. ಪೂರ್ವದಲ್ಲಿ ಸಂಚಿತವಾಗ ಮೈಸೂರು ದೊರೆಗಳ ಪರಂಪರೆಯನ್ನು ವಿವರಿಸಿ ಬರೆದ ಪೂರ್ವಲೇಖನದ ಆಧಾರದಿಂದ ತನ್ನ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ.

---

### ಪದ್ಮರಾಜ. 1792

ಈತನು ಪೂಜ್ಯಪಾದಚರಿತೆಯನ್ನು ಬರೆದಿದ್ದಾನೆ ಇವನು ಜೈನಕವಿ, ಶ್ರೀವತ್ಸಗೋತ್ರದವನು ತನ್ನ ವಂಶದ ವಿಷಯವಾಗಿ ಹೀಗೆ ಬರೆದಿದ್ದಾನೆ:—

ಗಿರಿಪುರದಲ್ಲಿ ಕರಣಿಕೋತ್ತಮನಾದ ಬೊಮ್ಮಣ್ಣನೆಂಬ ಬ್ರಾಹ್ಮಣಾಸಿದ್ಧನು. ಅವನಿಗೆ ಸಾತಪ್ಪ, ಹುಚ್ಚಬೊಮ್ಮರಸ, ದೇವರಸ ಬೊಮ್ಮರಸ ಎಂದು ನಾಲ್ವರು ಮಕ್ಕಳು. ಕವಿತಾವಿಶಾರದನಾದ ಬೊಮ್ಮರಸನ ಮಗ ವಿಜಯಪ್ಪ ; ಇವನ ಮಗ ಬೊಮ್ಮರಸ; ಇವನ ಮಗ ವಿಜಯ ; ಇವನ ಮಗ ದೇವಯ್ಯ ಇವನ ಮಗ ಅರ್ಕಪ. ಈ ಅರ್ಕಪನು ಹುಟ್ಟಿದ ೧೪ ವರ್ಷಕ್ಕೆ ಕಾವ್ಯಶಬ್ದಜಿನೇಂದ್ರಪ್ರತಿಷ್ಠಾದಿಶಾಸ್ತ್ರವನರಿತಿದ್ದನು ಇವನ ಮಗ ವಿಜಯಪ್ಪ, ತಮ್ಮಂದಿರು ದೇವರಸ, ಬೊಮ್ಮರಸ, ದೇವಚಂದ್ರ ದೇವಚಂದ್ರನ ಮಗ ದೇವಪ್ಪ, ಇವನ ಹೆಂಡತಿ ಕಮಲಮ್ಮ, ಮಕ್ಕಳು ಚಂದಯ್ಯ, ಪದ್ಮರಾಜ. ಈ ಪದ್ಮರಾಜನೇ ಗ್ರಂಥಕರ್ತ.

ಪದ್ಮರಾಜನು ಹೇಳುತ್ತಿರಲು ದೇವಚಂದ್ರನು ಸಹ ಕಾವ್ಯವ ಹೇಳಿದನು ಎಂಬುದರಿಂದ ಇವರಿಬ್ಬರೂ ಸೇರಿ ಗ್ರಂಥವನ್ನು ಬರೆದಂತೆ ತೋರುತ್ತದೆ. ಈ ದೇವಚಂದ್ರನು ರಾಜಾವಳೀಕಥೆಯನ್ನು ಬರೆದವನು. ಪದ್ಮರಾಜನು ಇವನ ಅಣ್ಣನು ಈ ಗ್ರಂಥವನ್ನು ಶಕ 1714 ಪರೀಧಾವಿಯಲ್ಲಿ, ಎಂದರೆ 1792ರಲ್ಲಿ, ರಚಿಸಿದಂತೆ ಹೇಳಿದ.

ಪೂರ್ವಕವಿಗಳಲ್ಲಿ ಪಂಪ, ಪೊನ್ನ, ಜನ್ನಿಗ, ಸುಮನೋಬಾಣ ಇವರುಗಳನು ಕವಿ ಸ್ಮರಿಸಿದ್ದಾನೆ.

ಇವನ ಗ್ರಂಥ

## ಪೂಜ್ಯಪಾದಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ, ಸಂಧಿ 15, ಪದ್ಯ 1932. ಅಲ್ಲಲ್ಲಿ ಕೆಲವು ವೃತ್ತಗಳೂ ಕಂದಗಳೂ ಇವೆ. ಇದರಲ್ಲಿ ಪೂಜ್ಯಪಾದಮುನಿಯ ಚರಿತ್ರವು ಹೇಳಿದೆ. ಅಲ್ಲದೆ ಲೋಕಾಕಾರ, ಶ್ರುತಾವತರಣ ಮುಂತಾದ ಜಿನಮತಪ್ರಕ್ರಿಯೆಗಳೂ ಉಕ್ತವಾಗಿವೆ. ಗ್ರಂಥಾವತಾರದಲ್ಲಿ ವಿಜಯಜಿನಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು, ಸರಸ್ವತಿ, ವೃಷಭಸೇನಾದಿಗಣಧರರು, ಜ್ವಾಲಾಮಾಲಿನಿ, ಪದ್ಮಾವತಿ, ದಶಪೂರ್ವಧರರು ಏಕಾದಶಾಂಗಧಾರಿಗಳು, ಕವಿಪರಮೇಷ್ಠಿ ಸಮಂತಭದ್ರ, ಸಿದ್ಧಸೇನ ಜಿನಸೇನ, ಗುಣಭದ್ರ ಗೋವರ್ಧನ, ದೇವಕೀರ್ತಿ, ಅಕಳಂಕ, ವಿದ್ಯಾನಂದ, ಭಟ್ಟಾಕಳಂಕ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

### ಪೂಜ್ಯಪಾದ

ಹೊಂಬಣ್ಣದಂತೆ ಪೊಳೆವ ಕಾಂತಿ ಮೈಯೊಳು | ತುಂಬಿದ ಲಾವಣ್ಯರಸವು |
ಬೆಂಬಿಸಿ ರತ್ನದಾಭರಣವಿರಲು ತೋರು | ವೆಂಬಂತೆ ಸೊಬಗುದೋರಿದನು ||
ಕನಕ ಕಲ್ಲೊಳು ಕಾಷ್ಠದೊಳಗಗ್ನಿ ಪಾಲೊಳು | ಮಿನುಗುವಘೃತವು ಕಾಣ್ಬಂತೆ |
ತನುವಿನೊಳಗೆ ಪರಮಾತ್ಮರೂಪನು ಕಂಡು | ಘನಸುಖದೊಳು ಮುಳುಗಿದನು ||
ಮು[illegible]ಗೆ ಹೆಚ್ಚದ ಬ[illegible]ಗೆಗೆ ತಗ್ಗದ ಮಹಾ | ಜಲನಿಧಿಯಂದದಿ ಮುನಿಪ |
[illegible] ಆಗಿರ್ಪನ | ಗ್ಗಳಿಕೆಯನೆಂತು ಬಣ್ಣಿಪೆನು ||

### ಆಶೆ

ಬಡವನಿಗುಣಲಾಗೆ ತೊಡಿಗೆಯ ಚಿಂತೆಯು | ತೊಡಲಾಗೆ ಧನಕನಕಗಳ |
ಪಡೆಯೆ ಮಡದಿಯು ಮಡದಿಯಾಗ ಮಕ್ಕಳ | ಪಡೆವ ಚಿಂತೆಯು ಬಂದಪುದು ||
ಮಕ್ಕಳಾಗಲು ಹೊನ್ನ ಕಟ್ಟುವ ಚಿಂತೆಯು | ಅಕ್ಕಟ ನೂರುಸಾವಿರವು |
ದಿಕ್ಕ[illegible]ಯಿಂ ಕೋಟಿ ಬಂದರಮಗ್ನಿಗೆ | ಯಿಕ್ಕಿದಿಂಧನದಂತ ಚಿಂತೆ ||

### ಕೋಪ

ಉಗ್ರವಿಷವನುಳ್ಳ ಕೋಪವೆಂಬಾಕ್ರೂರ | ವ್ಯಾಘ್ರನನಿಯುಟ್ಟಿದವರು |
ಶೀಘ್ರದಿಂ ಮುಕ್ತಿಗೈದುವರು ಕರ್ಮಂಗಳ | ನಿಗ್ರಹಮಾಡ್ಪುದೇನರಿದೆ ||

———

## ದೇವಚಂದ್ರ 1770—1841

ಈತನು ರಾಮಕಥಾವತಾರ, ರಾಜಾವಳೀಕಥೆ ಎಂಬ ಗ್ರಂಥಗಳನ್ನು ಬರೆದಿದ್ದಾನೆ ಅಲ್ಲದೆ ರಾಜಾವಳೀಕಥೆಯಲ್ಲಿ "ಪೂಜ್ಯಪಾದಚರಿತೆ, ಸುಮೇರುಶತಕ, ಯಕ್ಷಗಾನ ರಾಮಕಥಾವತಾರ, ಭಕ್ತಿಸಾರಶತಕತ್ರಯ, ಶಾಸ್ತ್ರಸಾರ ಲಘುವೃತ್ತಿ, ಪ್ರವಚನಸಿದ್ಧಾಂತ, ದ್ರವ್ಯಸಂಗ್ರಹ, ದ್ವಾದಶಾನುಪ್ರೇಕ್ಷೆ ಕಥೆ ಸಹಿತ, ಧ್ಯಾನಸಾಮ್ರಾಜ್ಯ, ಅಧ್ಯಾತ್ಮವಿಚಾರಾದಿಯಂ ಕರ್ಣಾಟಕಸಂಸ್ಕೃತ ಬಾಲನುಡಿಯಿಂ ವಿರಚಿಸಿದೆಂ" ಎಂದು ಹೇಳುವುದರಿಂದ ಈ ಗ್ರಂಥಗಳನ್ನೂ ಈತನು ಬರೆದಿರುವಂತೆ ತಿಳಿಯುತ್ತದೆ ಇವುಗಳಲ್ಲಿ ಮೊದಲು ಹೇಳಿರುವ ನಾಲ್ಕುಗ್ರಂಥಗಳೂ ಉಳಿದುವುಗಳಲ್ಲಿ ಒಂದೆರಡೂ ಕನ್ನಡದಲ್ಲಿರುವಂತೆ ತೋರುತ್ತದೆ.

ಇವನು ಜೈನಕವಿ. ಇವನ ಸ್ಥಳ ಕನಕಗಿರಿ (ಮಲೆಯೂರು). ಮಲೆಯೂರ ಪಾರ್ಶ್ವನಾಥನೇ ಇವನ ಕುಲದೈವವು ಈತನ ವಿಷಯವಾಗಿ ರಾಜಾವಳೀಕಥೆಯಿಂದ ಈ ಅಂಶಗಳು ತಿಳಿಯುತ್ತವೆ:—

ಇವನ ತಾತ ದೇವಚಂದ್ರ, ತಂದೆ ದೇವಯ್ಯ, ತಾಯಿ ಕುಸುಮಾಜಮ್ಮ, ಅಣ್ಣಂದಿರು ಚಂದಪಾರ್ಶ್ವಪದ್ಮರಾಜರು. ಈ ಪದ್ಮರಾಜನು ಅನೇಕಗ್ರಂಥಗಳನ್ನು ಬರೆದಿರುವಂತೆ ಹೇಳಿದೆ. ಕವಿ 1770 ರಲ್ಲಿ ಹುಟ್ಟಿದನು. 14 ನೆಯ ವರ್ಷದಿಂದ ಕರಣಿಕಾಗ್ರಗಣ್ಯನೆನಿಸಿ ಕವನವನ್ನು ಮಾಡಲಾರಂಭಿಸಿದನು. ಇವನ ಪ್ರಥಮಗ್ರಂಥವಾದ ಪೂಜ್ಯಪಾದಚರಿತ್ರೆ 1792 ರಲ್ಲಿ ರಚಿತವಾಯಿತು[1]. ರಾಮಕಥಾವತಾರವನ್ನು 1797 ರಲ್ಲಿ ಆರುತಿಂಗಳೊಳಗೆ ಮಾಡಿದನು. 1804 ರಲ್ಲಿ ಸೀಮೆ ಪೈಮಾಸಿಯಂ ಮಾಡಲು ಮಕಂಜಿ[2] ಸರದಾರಂ ಲಕ್ಷ್ಮಣರಾಯಂವೆರಸು ಕನಕಗಿರಿಗೆ ಬಂದು ಕವಿಯನ್ನು ಸ್ಥಳಪುರಾಣವುಂಟೆ ಎಂದು ಕೇಳಲು ಅವನು ತಾನು ಮಾಡಿದ ಪೂಜ್ಯಪಾದಚರಿತ್ರೆಯನ್ನು ಓದಿ ಹೇಳಿದಾಗ ಅವನನ್ನು ಬಿಡದೆ ಕಮುಗಹಳ್ಳಿಯಲ್ಲಿ ಬಿಟ್ಟಿದ್ದ ಗುಡಾರದ ಒಳಗೆ ಕರೆದುಕೊಂಡುಹೋಗಿ ಪೂರ್ವದ ಕೆಲವು ಪ್ರಪಂಚಗಳನ್ನು ಮೂರುರಾತ್ರಿ ಚೆನ್ನಾಗಿ ಲಾಲಿಸಿ ಕಳಲೆ, ಮಹಿಸೂರು, ಪಟ್ಟಣ, ಇಲಿವಾಲ, ನಾಗಮಂಗಲದವರೆಗೆ ಎರಡುತಿಂಗಳ ಪರ್ಯಂತ ಬಿಡದೆ ದಿನ ಒಂದಕ್ಕೆ ಗ್ರಾಸಕ್ಕೆ ಒಂದುಹಣವಂ ಕೊಡುತ್ತ ರಾತ್ರಿಕಾಲದೊಳು ಪೂರ್ವದ ಪ್ರಪಂಚಗಳು ಜಾತಿಭೇದಗಳು ಮೊದಲಾದ ವಿವರಗಳ

---

1 145ನೆಯ ಪುಟವನ್ನು ನೋಡಿ

2 Colin Mackenzie who conducted the survey of Mysore

ನೆಲ್ಲವಂ ಕೇಳುತ್ತ ರಾಜ್ಯಸೀಮೆಗಳನರಿದು ವಿಂಗಡಿಸುತ್ತ ಗ್ರಾಮಾದಿಗ್ರಾಮಂಗಳಿಂ ನಳ್ತೆಯಂ ಬರೆಯಿಸಿ ಜಾತಿಕೋಮುವಾರು ಕುಳ, ಮನೆ, ಜನ, ಜೀವದನ ಮೊದಲಾದುವಂ ಜಮಾಬಂದಿ ಮುಂತಾದುವಂ ಬರೆಯಿಸಿಕೊಂಡು ಅವನನ್ನು ಬಿಡದೆ ಬಗೆಗಾಳಿಗೊಯ್ಯಬೇಕೆಂದಿರಲು, ಅವನು ಬಹುವಿಧವಾಗಿ ಹೇಳಿಕೊಂಡುದರಿಂದಲೂ ಅವನ ಧರ್ಮೋಪಾಧ್ಯಾಯರು ಬಂದುದರಿಂದಲೂ ಪೂಜ್ಯವಾದಚರಿತೆಯನ್ನು ತೆಗೆದುಕೊಂಡು ಅವನು ಹೇಳಿದ್ದ ಪೂರ್ವದ ವೃತ್ತಾಂತಗಳಂ ಕಾಗದದವಹಿಯೊಳು ಬರೆಯಿಸಿಕೊಂಡು ಈ ಕರ್ಣಾಟದೇಶದೊಳು ನಡೆದ ಪ್ರಪಂಚಗಳನೆಲ್ಲ ಕ್ರೋಡೀಕರಿಸಿ ಬರೆದು ನಾವಿದ್ದಲ್ಲಿಗೆ ತೆಗೆದುಕೊಂಡು ತಿಂಗಳೊಳಗೆ ಒಂದಕೆ ಭಾರಿ ಸಂಬಳವನ್ನು ಮಾಡಿಸಿಕೊಡುತ್ತೇವೆಂದು ಹೇಳಿ ಲಕ್ಷ್ಮೀನಾರಾಯಣನ ಮೂಲಕ ೨೫ ಕುಂಪಣಿ ರೂಪಾಯಿಯನ್ನು ಕೊಡಿಸಿ ಅಪ್ಪಣೆಕೊಡಿಸಿ ಕಳುಹಿಸಿಕೊಟ್ಟನು. ಅಂದುಮೊದಲಾಗಿ ಕವಿ ಈ ಕಥಾಸಂಗ್ರಹವನ್ನು ಮಾಡುತ್ತಿದ್ದು ಸರದಾರಂ ಬಹುದೂರಂ ಪೋದುದರಿಂದ ಒಪ್ಪಿಸುವುದಕ್ಕಿಲ್ಲವಾಯಿತು.

ಈ ರಾಜಾವಳೀಕಥೆಯನ್ನು ಮೈಸೂರು ದೊರೆ ಮುಮ್ಮಡಿಕೃಷ್ಣರಾಜಒಡೆಯರ ಆಶ್ರಿತನಾದ ವೈದ್ಯಸೂರಿಪಂಡಿತನ ಪ್ರೋತ್ಸಾಹದಿಂದ ವ್ಯೋಮತರ್ಕಶೈಲಶಶಿಸಂಖ್ಯಾತವಾದ ಶಕವರ್ಷದಲ್ಲಿ (1760), ಎಂದರೆ 1838 ರಲ್ಲಿ ಬರೆದನು. ಇವನಿಂದ ರಚಿತವಾದ ಗ್ರಂಥಗಳನ್ನು ಅನುಷ್ಟುಪ್ಛಂದದೊಳ್ ಗಣಿಸಿದರೆ ೨೫೦೦೦ ಗ್ರಂಥವಾಗುತ್ತದೆ. ರಾಜಾವಳೀಕಥೆಯನ್ನು ಮುಮ್ಮಡಿಕೃಷ್ಣರಾಜಒಡೆಯರಿಗೆ ಒಪ್ಪಿಸಲು ಮೂರು ನಾಲ್ಕು ವರ್ಷದಿಂದ ಕೂಡಿಬಂದಿಲ್ಲ. 1841 ರಲ್ಲಿ ಚಾಮರಾಜನುಹುತಿ ದೇವೀರಾಂ ಗಿ ಈ ರಾಜಾವಳೀಕಥೆಯ ಸಾರವನ್ನೆಲ್ಲಮಂ ಮೊದಲಿಂ ಕಡೆವರಂ ಚೆನ್ನಾಗಿ ಲಾಲಿಸಿ ಸಂತೋಷಿಸಿ ಕವಿಗೆ ಅತಿಶಯವಾದ ವಸ್ತ್ರತಾಂಬೂಲಾದಿಗಳನಿತ್ತು ಮನ್ನಿಸಿ ಮಹೀಶೂರರಾಜರ ಪರಂಪರೆಯಂ ಸಂಗ್ರಹಿಸಿ ಬರೆದೊಪ್ಪಿಸುವುದೆಂದು ಆಜ್ಞಾಪಿಸಲು ಕವಿ ಹಾಗೆಯೇ ಬರೆದು ಒಪ್ಪಿಸಿದನು.

ಇವನ ಗ್ರಂಥಗಳಲ್ಲಿ—

## 1 ರಾಜಾವಳೀಕಥೆ

ಇದು ಸಾಮಾನ್ಯವಾಗಿ ಗದ್ಯರೂಪವಾಗಿದೆ; ಅಲ್ಲಲ್ಲಿ ಕೆಲವು ಶ್ಲೋಕಗಳೂ ಪದ್ಯಗಳೂ ದೊರೆಯುತ್ತವೆ. ಅಧಿಕಾರ 11 ಇದರಲ್ಲಿ ಜೈನಮತಕ್ಕೆ ಸಂಬಂಧಿಸಿದ ಹಲವು ಇತಿಹಾಸಗಳೂ, ಅನೇಕರಾಜರ ಚರಿತ್ರ

ಗಳೂ ಕೆಲವರು ಕವಿಗಳ ವಿಷಯಗಳೂ ಹೇಳಿವೆ. ಹೀಗೆ ಅನೇಕ ವಿಷಯಗಳನ್ನು ಒಳಕೊಂಡಿರುವುದರಿಂದ ಈ ಗ್ರಂಥವು ಬಹಳ ಉಪಕಾರಕವಾಗಿದೆ. ಜೈನಕವಿಗಳ ಚರಿತ್ರವನ್ನು ಬರೆವಾಗ ಹಲವುಕಡೆ ಈ ಗ್ರಂಥದಿಂದ ನಮ್ಮ ಕವಿಚರಿತೆಯಲ್ಲಿ ಕೆಲವು ಅಂಶಗಳನ್ನು ಅನುವಾದ ಮಾಡಿದ್ದೇವೆ. ಮೈಸೂರುರಾಜರ ವಂಶಾವಳಿಯೂ ಈ ಗ್ರಂಥದಲ್ಲಿ ಸಂಗ್ರಹವಾಗಿ ಹೇಳಿದೆ. ಈ ಗ್ರಂಥದ ಭಾಷೆಯ ವಿಷಯವಾಗಿ ಕವಿ ಹೀಗೆ ಬರೆದಿದ್ದಾನೆ—

ಹಳಗನ್ನಡ ಬೆಳುಗನ್ನಡ | ಪೊಳುಗನ್ನಡ ಮಿಶ್ರಗನ್ನಡಂ ಕಬ್ಬದೊಳಂ |
ತಿಳಿದಲ್ಲ ಮಿಶ್ರಮಾಗಿಯು | ಮಿಳಿಗೆಯ್ದವಂದದೊಳೆ ಪೇೞ್ದೆ ರಾಜಾವಳಿಯಂ ||
ಹಳಗನ್ನಡ ಬೆಳುಗನ್ನಡ | ಪೊಳುಗನ್ನಡವಚ್ಚಗನ್ನಡಂ ಪೊಸತೆಂಬುದು |
ತಿಳುಗನ್ನಡಮಿಶ್ರದಿನಿದ | ನಿಳೆಯೊಳ್ ಸತ್ಪುರುಷರೊದಿ ಕೇಳ್ವುದು ಸತತಂ ||

ಗ್ರಂಥಾವತಾರದಲ್ಲಿ ಜಿನಸ್ತುತಿ ಇದೆ. ಅಧಿಕಾರಗಳ ಅಂತ್ಯದಲ್ಲಿ—

ಇತಿ ಸತ್ಯಪ್ರವಚನಕಾಲಪ್ರವರ್ತನಕನಕಾಚಲಶ್ರೀಜಿನಾರಾಧಕ ಮಲೆಯೂರ ದೇವಚಂದ್ರಪಂಡಿತವಿರಚಿತ ರಾಜಾವಳೀಕಥಾಸಾರದೊಳ್—

ಎಂಬ ಗದ್ಯವಿದೆ.

ಈ ಗ್ರಂಥದಿಂದ ಸ್ವಲ್ಪಭಾಗವನ್ನು ಉದ್ಧರಿಸಿ ಬರೆಯುತ್ತೇವೆ.—

### ಮುಮ್ಮಡಿ ಕೃಷ್ಣರಾಜನ ವರ್ಣನೆ

ನನ್ನಿಯ ನಲ್ಲ, ಪುಸಿವರ ಬೋಜಗ, ಮುದ್ದುಗರ ಮೊದಲಿಗ, ಬಲ್ಲಿದರ ಬಲ್ಲಹ, ವೀರರ ವೀರ, ಸಿತಗರ ಮಿಂಡ, ಬಿರುದೆಂತೆಂಬರ ಗಂಡನೆಂದು ನಾಡುಬೀಡುರಾಜ್ಯದ ಜನಂಗಳೆಲ್ಲಮೊಂದೆಕೊರಲೊಳ್ ಕೊನೆದಾಡುತ್ತಮಿರೆ; ಪ್ರಜಾನುರಾಗದ ಮೊದಲ್, ರಾಮಚಂದ್ರಂಗೆ ಪಡಲು, ವೀರದ ಮೊಳೆ, ಚಿನ್ನಣದ ಬೆಳೆ, ದಯೆಯ ಸೊಂಪು, ದಾಕ್ಷಿಣ್ಯದ ಪೆಂಪು, ನಯದ ಕರ್ಪು, ನನ್ನಿಯಾರ್ಪು, ಚದುರ ಬಲ್ಪು, ಜಾಣ್ಮೆಯ ತೋರ್ಪು, ಜಯದ ನೋಡಿ, ಜಸದ ಗಾಡಿ, ದಾನದ ಪೂಣ್ಕೆ, ಧರ್ಮದ ಕಾಣ್ಕೆ, ತಿಳಿವಿನ ಮೆಚ್ಚು, ಧೀರತೆಯ ಪೆಚ್ಚು, ಒಸಗೆಯುರ್ಬು, ಓಜೆಯ ಕೊರ್ಬು, ಸಿರಿಯ ಕೂಟ, ಸಂಗರದಾಟವೆಂದಾರಾಜನಂ ಬಲ್ಲರ್ ಬಗೆದು ಪೇೞ್ವರ್ ದುರ್ನಯತಮಕ್ಕೆ ಸೂರ್ಯನುಂ ಕುಲಕುಮುದಕ್ಕೆ ಚಂದ್ರನುಂ, ದಾನಧರ್ಮೋತ್ಸವಕ್ಕೆ ಮಂಗಳನುಂ, ತತ್ತ್ವಾರ್ಥದೊಳ್

ಬುಧನುಂ ಸುಗುಣಂಗಳೊಳ್ ಗುರುವುಂ, ಪರಸತಿವಿತತಿಯೊಳ್ ಕವಿಯುಂ, ನಿಷ್ಕಾರ್ಯದೊಳ್ ಮಂದನುಂ, ಅರಾತಿಗಳೊಳ್ ರಾಹುವುಂ, ಧರ್ಮಕೀರ್ತಿಯೊಳ್ ಕೇತುವೆನಿಸಿ ಸುಜನದಾರಿದ್ರ್ಯವಿದ್ರಾವಣನೆನಿಸಿದ ಶ್ರೀ ಕೃಷ್ಣರಾಜಮಹಾರಾಜಂ ಸಕಲಶಸ್ತ್ರಶಾಸ್ತ್ರವಾಹನಾರೋಹಣಾದಿಗಳೊಳಗ್ಗಳನೆನಿಸಿ ದಿಕ್ಕುವರಾರಸಂತೆ ಬಳೆದಂ

## 2 ರಾಮಕಥಾವತಾರ

ಇದು ಚಂಪೂರೂಪವಾಗಿದೆ; ಆಶ್ವಾಸ 16; ಗ್ರಂಥಸಂಖ್ಯೆ 6800 ಇದರಲ್ಲಿ ನಾಗಚಂದ್ರನ ರಾಮಚಂದ್ರಚರಿತಪುರಾಣದೊಳಗೆ ಹೇಳಿರುವ ಕಥೆಯೇ ಸ್ವಲ್ಪವಿಸ್ತಾರವಾಗಿ ವರ್ಣಿತವಾಗಿದೆ ಆ ಗ್ರಂಥದಿಂದ ಅನೇಕ ಪದ್ಯಗಳೂ ಅನುವಾದಮಾಡಲ್ಪಟ್ಟಿವೆ ತನ್ನ ಗ್ರಂಥದ ವಿಷಯವಾಗಿ ಕವಿ ಹೀಗೆ ಹೇಳಿಕೊಂಡಿದ್ದಾನೆ—

ಈ ರಾಮಕಥೆಯುಂ ಮುನ್ನಂ ಆದಿದೇವನ ಸಮವಸರಣದೊಳ್ ಆದಿಚಕ್ರಿಯಪ್ಪ ಭರತೇಶ್ವರಂಗೆಂ ವೃಷಭಪರಮೇಶ್ವರಂ ಮೃದುಮಧುರಶಬ್ದವ್ಯವಸ್ಥದಿವ್ಯಭಾಷೆಯಿಂ ನಿರೂಪಿಸಿದುದು ಪರಂಪರಾತೀರ್ಥಸಂತಾನದಿಂ ಬಂದ ಪಶ್ಚಿಮತೀರ್ಥಂಕರರಪ್ಪ ಶ್ರೀವೀರವರ್ಧಮಾನಸ್ವಾಮಿ ಸರ್ವಭಾಷಾಸ್ವಭಾವದಿಂ ಶ್ರೇಣಿಕಮಹಾಮಂಡಲೇಶ್ವರಂಗಱಿಯೆ ಪೇಳ್ದುದುಂ, ಅದು ಅನುಕ್ರಮದಿಂ ಗುರುಪರಂಪರೆಯಿಂ ವ್ಯಕ್ತಮಾಗುತ್ತುಂ ಬರೆ ಕೂಗಿ ಭಟ್ಟಾರಕರುಂ ನಂದಿಮುನಿವರರುಂ ಕವಿಪರಮೇಷ್ಠಿಗಳುಂ ರವಿಷೇಣಾಚಾರ್ಯರುಂ ವೀರಸೇನಸಿದ್ಧಸೇನರುಂ ಪದ್ಮನಂದೀಶರುಂ ಗುಣಭದ್ರರುಂ ಸಕಲಕೀರ್ತಿಗಳೆಂದಿವರಾದಿಯಾಗಿ ಪೇಳ್ದುದಂ ಚಾಮುಂಡರಾಯ, ನಾಗಚಂದ್ರ, ಮಾಘನಂದಿಸಿದ್ಧಾಂತಿ, ಕುಮುದೇಂದು, ನಯಸೇನರಾದಿಯಾಗಿ ಪೇಳ್ದ ಪುರಾಣದೊಳಂ ರಾಮಚರಿತ್ರದೊಳಂ ಕುಮುದೇಂದುರಾಮಾಯಣದೊಳಂ ಪುಣ್ಯಾಸ್ರವಕಥಾಸಾರದೊಳಂ ರಾಮಕಥಾಸಾರಮಂ ತೆಗೆದು ಅಭಿನವಪಂಪಕವಿಯ ಕವಿತ್ವಮಂ ಮುಂದುಮಾಡಿ ಕರ್ಣಾಟಕಭಾಷಾವಾಕ್ಯರಚನೆಯಿಂದಲ್ಲಕ್ಷ್ಮದರ್ ಕಥಾಸಂದರ್ಭಮಂ ಆದಿರಾಮಕಥಾವತಾರಮೆಂದು ಬರೆದಂ

ಗ್ರಂಥಾಂತ್ಯದಲ್ಲಿ—

ಮುನಿಪತಿಪರಂಪರೆಯಿಂ ಬಂದ ಕಥನಮಂ ಶ್ರೀಮೂಲಸಂಘ ಬಲೋತ್ಕಾರಗಣ ಶ್ರೀಮಾಘಣಂದಿ ಸಿದ್ಧಾಂತಚಕ್ರವರ್ತಿಸುತ ಚತುರ್ವಿಧಪಾಂಡಿತ್ಯಶ್ರೀವಾದಿಕುಮುದಚಂದ್ರಪಂಡಿತ ದೇವಚಂದ್ರನಾಮಮುನಾಕ್ಕೆ ಸಮಾನವಾಗಿ ಅಭಿನವಪಂಪಂ ರಚಿಸಿದ ರಾಮಚರಿತ್ರದೊಳ್ ಪಲವೆಡೆಯಲ್ಲಿ ತೋರ್ಪ ಸಂಶಯಂಗಳಂ ನಿವಾರಿಸಲು ಜಿನಸೇನಾಚಾರ್ಯಶಿಷ್ಯರ್ ಗುಣಭದ್ರಸ್ವಾಮಿ ಮೊದಲಾಗಿ ಪೇಳ್ದ

ತ್ರಿಷಷ್ಟಿಲಕ್ಷಣಮಹಾಪುರಾಣದೊಳಿರ್ದ ಕಥೆಯನೆ ಪ್ರಮಾಣವೊಳು ತೆಗೆದು ಅದಕ್ಕೆ ಸಕಲಜನಶಾಸ್ತ್ರಕಥೆಗಳಂ ಸಂಬಂಧಿಸಿ ಈ ಕಥಾಪ್ರಪಂಚಮನೊರೆದೆಂ—ಎಂದು ಹೇಳುತ್ತಾನೆ.

ಆರಂಭದಲ್ಲಿ ಮುನಿಸುವ್ರತಸ್ತುತಿಯಿದೆ. ಬಳಿಕ ಕವಿ ಸಿದ್ಧರು, ಗಳು, ಸರಸ್ವತಿ, ಗಣಧರರು ಜ್ವಾಲಾಮಾಲಿನಿ, ಪದ್ಮಾವತಿ ಇವರುಗಳನ್ನು ಸ್ತುತಿಸಿದ್ದಾನೆ ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ —

ಇದು ಪರಮಜಿನಸಮಯಕುಮುದಿನೀಶರಚ್ಚಂದ್ರಬಾಳಚಂದ್ರಮುನೀಂದ್ರ ಚರಣನಖಕಿರಣಚಂದ್ರಿಕಾಚಕೋರ ಶ್ರೀಮದಭಿನವಪಂಪವಿರಚಿತ ರಾಮಚಂದ್ರಪುರಾಣಾನಾಂ ಸಂಬಂಧಿಸಿದ ರಾಮಕಥಾವತಾರದೊಳ್

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಸರಸ್ವತೀಸ್ತುತಿ.

ಕಣ್ಣೇಣೆಯ ಭವ್ಯತತಿಗೆ ಕ | ಲ್ಯಾಣಿಯೆ ಕೈವಲ್ಯಮಾರ್ಗಕಿಕ್ಕದ ಗುಣಸಿ |
ಶ್ರೇಣಿಯೆ ಭವಾಬ್ಧಿತರಣದ | ದೋಣಿಯೆ ನಿಲುಕಿರ್ಕೆ ವಾಣಿ ಮನ್ಮುಖದೊಳಗಂ ||

ಸ್ವವಿಷಯ.

ಶ್ರೀಮದ್ಭುವನನಗಾಲಯಸ್ಥಿತವರ ಶ್ರೀಪಾರ್ಶ್ವತೀರ್ಥೇಶ್ವನ |
ಸ್ವಾಮಿ ಶ್ರೀಪದಪದ್ಮಯುಗ್ಮಮಧುಪಂ ಶ್ರೀಜೈನವಿಪ್ರಾನ್ವಯಂ ||
ಶ್ರೀಮದ್ಭವ್ಯಜನಪ್ರಿಯಂ ವಿವಿಧವಿದ್ಯಾಕೌಶಲಂ ಸದ್ಗುಣೋ |
ದ್ದಾಮಂ ದೇವಚನೂಭವಂ ಬರೆದನೀ ಶ್ರೀರಾಮಸತ್ಕಾವ್ಯಮಂ ||

ಇವನ ಇತರ ಗ್ರಂಥಗಳು ನಮಗೆ ದೊರೆತಿಲ್ಲ.

———

ಶ್ರೀದವಿಠಲದಾಸ ಸು 1800

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಜಗನ್ನಾಥದಾಸನ (ಸು. 1775) ಶಿಷ್ಯನೆಂದು ಹೇಳುತ್ತಾರೆ. ಈತನ ಕೀರ್ತನೆಗಳಲ್ಲಿ ಶ್ರೀದವಿಠಲ ಎಂಬ ಅಂಕಿತವಿದೆ. ಒಂದನ್ನು ಉದಾಹರಿಸುತ್ತೇವೆ—

ರಾಗ ಬೇಹಾಗು. ಆದಿತಾಳ.

ಪಲ್ಲವಿ|| ಅವನೇ ಧನ್ಯನೆಲೋ | ಜಗದೊಳಗವನೇ ಧನ್ಯನೆಲೋ ||
ಆವ ಪರಿಯಲೆಂದಾದರು ತನ್ನಯ | ಭಾವಶುದ್ಧಿಲಿ ಭಗವತ್ಪರನಾದವನೆ ಧನ್ಯನೆಲೋ || 1 ||
ಆತ್ಮೇತರಸಂಸ್ಕೃತಿಯೊಳಿದ್ದು | ಸ್ವಾತ್ಮಲಾಭಸಿದ್ಧಿಯ ಸಾಧಿಸಿಕೊಂಡವನೆ ಧನ್ಯನೆಲೋ || 2 ||
ಶ್ರೀಧವವಿಠಲನ ಸಾಕ್ಷಾತ್ಕರಿಸಿ | ಸಾಧುಸೇವ್ಯಚಿತ್ಸುಖಮಯನಾದಂಥವನೆ ಧನ್ಯನೆಲೋ || 3 ||

---

ಶ್ರೀಪತಿದಾಸ. ಸು. 1800.

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಜಗನ್ನಾಥದಾಸನ (ಸು. 1775) ಶಿಷ್ಯನೆಂದು ಪ್ರತೀತಿಯಿದೆ. ಇವನ ಕೀರ್ತನೆಗಳಲ್ಲಿ ಶ್ರೀಪತಿವಿಠಲ ಎಂಬ ಅಂಕಿತವು ದೊರೆಯುತ್ತದೆ. ಒಂದನ್ನು ತೆಗೆದು ಬರೆಯುತ್ತೇವೆ—

ರಾಗ-ಶಂಕರಾಭರಣ. ಆಟತಾಳ.

ಪಲ್ಲವಿ|| ವೆಂಕಟೇಶ ಭವಸಂಕಟಪರಿಹರಿಸೋ ||
ಅನುಪಲ್ಲ || ನಿನ್ನವರವನೆನಿಸೊ ಪಂಕಜಾಕ್ಷ ಅಕಳಂಕನು ನಿಮಹರಿಯ ಆಶ್ರಿತರಿಗೆ ದೊರೆಯೋ ||

ನಾನಾ ಜನ್ಮಗಳಲ್ಲಿ ದೊಲ್ಲಲಿ ಬಂದೆ | ಏನೇ ಗತಿಯೆಂದೆ ||
ಜ್ಞಾನಾಜ್ಞಾನಕೃತಾಖಿಳದುಷ್ಕರ್ಮ | ಅವರಂತೆ ಸುಕರ್ಮ |
ನಾನಾಬಗೆಯಲ್ಲಿ ಆರುತಿರುತನುಭವಿಸಿ | ದುರ್ವಿಷಯವ ಬಯಸಿ |
ಹೀನವೃತ್ತಿಯಲಿ ಚರಿಸಿ ದಿನವ ಕಳೆದೆ | ಈಬಗೆಯಿಂದುಳಿದೆ || 1 ||
ಪಾಪಾತ್ಮಕ ನಾನಾದರೇನು ಕೇಳು ಹರೀ | ಪಾವನ ನೀ ಹೇಳು ಹರೀ |
ಶ್ರೀಪದ್ಮಜಭವಪ್ರಮುಖಸುರೇಶ | ನಾ ನಿನ್ನ ದಾಸ |
ನೀ ಪಾಲಿಸದಿರೆ ಗತಿಯೆ ನೆಲೋ ಮುಂದೆ | ಕಾರುಣ್ಯದಿತಂದೆ |
ಶ್ರೀಪತಿವಿಠಲ ಕರವ ಪಿಡಿಯೊ ಬೇಗ | ನೀ ಸಾಧ್ವರೀಗ || 2 ||

## ಮಧ್ವದಾಸ ಸು. 1800

ಈತನು ಕೀರ್ತನೆಗಳನ್ನೂ ಅಭಿಮನ್ಯುಕಾಳಗವನ್ನೂ ಬರೆದಿದ್ದಾನೆ. ಚಿತ್ರಸೇನಕಾಳಗವನ್ನೂ ಬರೆದಿರುವಂತೆ ತೋರುತ್ತದೆ. ಇವನು ಮಾಧ್ವಕವಿ. ಪುರಂದರದಾಸನನ್ನು ಸ್ತುತಿಸಿದ್ದಾನೆ. ಇವನ ಸ್ಥಳ ಕುಡುಮಪುರ (ಉಡುಪಿ). ಇವನು ಸುಮಾರು 1800ರಲ್ಲಿ ಇದ್ದಿರಬಹುದು. ಕೀರ್ತನೆಗಳು ಹೊರತು ಇವನ ಉಳಿದ ಗ್ರಂಥಗಳು ಯಕ್ಷಗಾನಗಳು.

## ದಾಸರಪದಗಳಲ್ಲಿ ಅಂಕಿತಗಳು

ಇನ್ನು ಕೆಲವು ದಾಸರ ಪದಗಳಲ್ಲಿ ದೇವವಿಠಲ, ವಾಸುದೇವವಿಠಲ, ಸಿರಿವರವಿಠಲ, ಅಚಲಾನಂದವಿಠಲ, ಲಕ್ಷ್ಮೀಪತಿ, ಅಚ್ಯುತ, ರಾಮಮಾರುತಿ, ಮೂಡಲಗಿರಿತಿಮ್ಮಪ್ಪ ಇವೇ ಮೊದಲಾದ ಅಂಕಿತಗಳು ದೊರೆಯುತ್ತದೆ. ಇವುಗಳನ್ನು ಉಪಯೋಗಿಸಿರುವ ಕವಿಗಳಾರೋ ಆವ ಕಾಲದಲ್ಲಿದ್ದರೋ ತಿಳಿಯದು.

---

## ನಾರಸಿಂಹ ಸು. 1800

ಈತನು ವೆಂಕಾಮಾತ್ಯನ (ಸು. 1770) ರಾಮಾಯಣವನ್ನು ಪ್ರತಿಮಾಡಿ ಕೊನೆಯಲ್ಲಿ ಸ್ವಂತವಾಗಿ 6 ಪದ್ಯಗಳನ್ನು ರಚಿಸಿದ್ದಾನೆ; ಕವಿಯಾಗಿರಬಹುದೆಂದು ತೋರುತ್ತದೆ. ಇವನು ಬ್ರಾಹ್ಮಣನು, ಭಾರದ್ವಾಜಗೋತ್ರದವನು. ಇವನ ತಂದೆ ಹರಿಯಪ್ಪ. ಬರಗೀಪುರದ ನಾರಸಿಂಹಪದಭಜಕ ಎಂದು ಹೇಳುವುದರಿಂದ ಬರಗೀಪುರವು ಇವನ ಸ್ಥಳವಾಗಿರಬಹುದೆಂದು ತೋರುತ್ತದೆ. ಇವನ ಕಾಲವು ಸುಮಾರು 1800 ಆಗಿರಬಹುದು. ಇವನ ಪದ್ಯಗಳಲ್ಲಿ ಎರಡನ್ನು ಉದಾಹರಿಸುತ್ತೇವೆ—

ಧರೆಯೊಳು ಭರದ್ವಾಜಗೋತ್ರಸಂಭವನಾದ |
ಬರಗೀಪುರದ ನಾರಸಿಂಹಪದಭಜಕನಹ |
ಹರಿಯಪ್ಪನಾತ್ಮಸಂಭವನಾದ ನರಸಿಂಹ ಬರೆದ ಶ್ರೀರಾಮಚರಿತೆ ||

ತರಣಿಚಂದ್ರಮರಿಪ್ಪಪರಿಯಂತ ವೆಂಕಭೂಪ |
ವರನೇಕಛತ್ರದಿಂ ಧರೆಯ ಪಾಲಿಸಲೆನುತ |
ಸ್ಮರಿಸುತಿಹನನವರತ ಭಜಕಸುರತರುರಾಮಚಂದ್ರನ ದಯಾಸಾಂದ್ರನಾ ||
ಇದುವೆ ಶ್ರೀರಾಮಪದಭಜಕನ ಸುವಾಕ್ಯವು |
ಇದು ಪವನನಂದನನ ವರದ ಕನ್ನಡದ ನುಡಿ |
ಇದು ರಾಮಪುರದರಸನಂಘ್ರಿಸಾರಸಭೃಂಗನೆನಿಪನ ಸುಕಾವ್ಯರಚನೆ ||
ಇದು ಸಕಲರಾಮಚರಿತಾಮೃತದ ತವರುಮನೆ |
ಮುದದಿಂದ ಬರೆದೋದಿ ಕೇಳ್ದ ಮಹೀಜನರ |
ಪದುಳದಿಂದಿಹಪರದಿ ಭೋಗಮೋಕ್ಷವನಿತ್ತು ಪೊರೆವ ಶ್ರೀಗಣಪ ಸಾಧನು ||

---

## ಬ್ರಹ್ಮಣಾಂಕ ಸು 1800

ಈತನು ಜಿನಭಾರತ, ಕಂದರ್ಪಕೊರವಂಜಿ ಇವುಗಳನ್ನು ಬರೆದಿದ್ದಾನೆ. ಇವನು ಜೈನಕವಿ; ಇವನ ಪಿತಾಮಹನು ಚಂದ್ರನಾಥ, ತಂಗೆ ಚಂದಣ್ಣ, ತಾಯಿ ಪೊಂಬುಜೆ, ಸಹೋದರರು, ಚಂದ್ರನಾಥ, ಬ್ರಹ್ಮ, ಪದ್ಮ. ಇವನ ಪೂರ್ವಿಕರು ತುಂಗಭದ್ರಾಸಮೀಪದಲ್ಲಿರುವ ಹುಲಿಗೆಯವರೆಂದೂ ಇಕ್ಷ್ವಾಕುವಂಶದವರೆಂದೂ ಹೇಳುತ್ತಾನೆ. ಇವನ ಸ್ಥಳ ತೊಪಿನಕೆರೆ. ಮಂಗರಸನ (1508) ಗ್ರಂಥದ ಆಧಾರದ ಮೇಲೆ ಜಿನಭಾರತವನ್ನು ಬರೆದಂತೆ ಹೇಳುತ್ತಾನೆ. ಇವನ ಕಾಲವು ಸುಮಾರು 1800 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥಗಳಲ್ಲಿ

### ಜಿನಭಾರತ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 84, ಪದ್ಯ 4628. ಇದಕ್ಕೆ ಪಾಂಡವಕೌರವರ ಚರಿತ್ರೆ ಎಂಬ ಹೆಸರೂ ಉಂಟು. ಇದರಲ್ಲಿ ಜೈನಸಂಪ್ರದಾಯಾನುಸಾರವಾಗಿ ಭಾರತಕಥೆ ಹೇಳಿದೆ. ಗ್ರಂಥಾವತಾರದಲ್ಲಿ ನೇಮಿಜಿನಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು, ಸರಸ್ವತಿ,

ಜ್ವಾಲಾಮಾಲಿನಿ, ಪದ್ಮಾವತಿ, ಬ್ರಹ್ಮದೇವ ಇವರುಗಳನ್ನು ಸ್ತುತಿಸಿದ್ದಾನೆ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

### ಚಂದ್ರೋದಯ

ಕಮಲಿನಿಯು ಕಣ್ಮುಚ್ಚಿ ಶೋಕಿಸೆ । ನವ ರತಿರಲದ ಕಂಸು ಪಕ್ಷಿಸೆ ।
ಕುಮುದಿನಿಯು ನಗೆವೆರಸಿ ತಾಬು ಶೋಕಕರದಗಿನೊಳು ॥
ಕ್ರಮದಿನೊತ್ತಿದ ಮುದ್ರೆಯೆನೆ ಮುಳಿ । ಭ್ರಮರ ಕಮಲದಿ ನೆಲಸಿ ಶೋಭಿಪು
ದಮಲಚಂದ್ರೋದಯದ ಕಾಲದೊಳರಸ ಕೇಳೆಂದ ॥

### ಚಾಮರವೀಜನ.

ಇತ್ತರದಿ ಢಾಳಿಸುವ ಚಾಮರ । ಚಿತ್ತಜನ ಬೀಳುವೆಸೆವ ಭಸ್ಮದ ।
ನೊತ್ತಿ ಚೆಲ್ಲುವತೆರದಿ ಕ್ಷೀರಾರ್ಣವದ ತೆರೆಗಳು ॥
ಒತ್ತಿಬರುವಂದದಲಿ ಶಾಣೆಯ । ಸುತ್ತಿ ಬೀಸುವ ಕರವು ಸೊಗಸಿದ ।
ಬಿತ್ತರದಿ ರಂಜಿಸುವುವವಳಿಚೆಯಮಾಳಿರನ್ನಯರ ॥

### ಅರ್ಜುನಪರಿಹಾಸ

ಕುಟ್ಟ ಧೋತ್ರವ ಸಡಿಲಿಸುತ ಕಟ । ಗಿಟ್ಟ ಸೂತ್ರವ ಹಱಿದು ತಿತಿರೆಯನು ।
ನೆಟ್ಟನೆಟ್ಟನೆ ನಿಲಿಸಿ ಘೋಟಕನ ನೂಡುವಂತಲ್ಲ ॥
ದುಷ್ಟಕಾಳೋರಗನ ತೆರವನು । ಕೊಟ್ಟು ಘೂರ್ಣಿಪ ಬಿಲ್ಲನೆತ್ತುತ ।
ಹುಟ್ಟಿದುದು ಚೆನ್ನಾಯಿತೆಂದರು ನಗುತ ಕೆಲದಲ್ಲಿ ॥

ಇವನ ಕಂದರ್ಪಕೊರವಂಜಿ ನಮಗೆ ದೊರೆತಿಲ್ಲ. ಪ್ರಿಯಬ್ಬರಚಿತವಾದ ದ್ವಾದಶಾನುಪ್ರೇಕ್ಷೆ ಎಂಬ ವೃತ್ತರೂಪವಾದ ಒಂದು ಸಣ್ಣ ಗ್ರಂಥವಿದೆ. ಇದೂ ಏತತ್ಕವಿಕೃತವಾಗಿರಬಹುದೋ ಏನೋ ತಿಳಿಯದು.

---

### ಲಕ್ಷ್ಮಣಶಾಸ್ತ್ರಿ ಸು 1800

ಈತನು ಅಮರಸಿಂಹಕೃತ ನಾಮಲಿಂಗಾನುಶಾಸನಕ್ಕೆ ಕನ್ನಡಟೀಕೆಯನ್ನು ಬರೆದಿದ್ದಾನೆ ಇವನು ಬ್ರಾಹ್ಮಣನು; ಸುಮಾರು 1800ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

## ರಾಮಕೃಷ್ಣ ಸು 1800

ಈತನು ಭಗವದ್ಗೀತೆಗೆ ಟೀಕೆಯನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿ. ಸುಮಾರು 1800 ರಲ್ಲಿ ಇದ್ದಿರಬಹುದು. ಶಂಕರಭಾಷ್ಯವನ್ನು ಅನುಸರಿಸಿ ಈ ಟೀಕೆಯನ್ನು ಬರೆದಂತೆ ಹೇಳುತ್ತಾನೆ ಆರಂಭದ ಈ ಪದ್ಯವಿದೆ—

ಹೇರಂಬಶಾರದಾಗುರು | ಸಾರಪದದ್ವಯಕೆ ನಮಿಸಿ ಗೀತಾಟೀಕೆಯ |
ಶ್ರೀರಾಮಕೃಷ್ಣವಿಬುಧಂ | ಶ್ರೀರಮಣಂಗೊಲ್ದು ಬೋಧಗಂ ವಿರಚಿಸುವೆಂ ||

———

## ರಂಗಾಚಾರ್ಯ ಸು 1800

ಇವನು ಪ್ರಹ್ಲಾದಚರಿತ್ರೆಯೆಂಬ ಯಕ್ಷಗಾನವನ್ನು ಬರೆದಿದ್ದಾನೆ. ಈತನು ಶ್ರೀವೈಷ್ಣವಕವಿ. ಭಾರದ್ವಾಜಗೋತ್ರದವನು; ಆಪಸ್ತಂಬಸೂತ್ರದವನು ಇವನ ತಂದೆ ಲಕ್ಷ್ಮಣಾರ್ಯ, ತಾಯಿ ವೆಂಕಟಾಂಬೆ, ಸ್ಥಳ ಮುಳ್ಳೂರು ವೀರವೈಷ್ಣವ ಎಂದು ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1800 ಆಗಿರಬಹುದೆಂದು ತೋರುತ್ತದೆ.

———

## ನಿಜಲಿಂಗಾರಾಧ್ಯ ಸು 1800

ಈತನು ನಿಜಲಿಂಗಶತಕವನ್ನು ಬರೆದಿದ್ದಾನೆ. ಇವನು ವೀರಶೈವಕವಿ; ತುಂಗಭದ್ರಾತೀರದಲ್ಲಿರುವ ಯಾದ್ರಿಪುರದ ನಿಜಲಿಂಗೇಶ್ವರನ ಅಂಕಿತದಲ್ಲಿ ಈ ಗ್ರಂಥವನ್ನು ಬರೆದಿರುವುದರಿಂದ ಬಹುಶಃ ಆ ಸ್ಥಳದವನಾಗಿರಬಹುದು. ಇವನ ಕಾಲವು ಸುಮಾರು 1800 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ನಿಜಲಿಂಗಶತಕ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಪದ್ಯ 100. ಪ್ರತಿಪದ್ಯವೂ "ನಿಜಲಿಂಗ ಭವಭಂಗ ಶರಣಜನಭಕ್ತಿಸಂಗ" ಎಂದು ಮುಗಿಯುತ್ತದೆ. ಗ್ರಂಥವು ಶಿವಸ್ತುತಿರೂಪವಾಗಿಯೂ ನೀತಿವೈರಾಗ್ಯಬೋಧಕವಾಗಿಯೂ ಇದೆ. ಆರಂಭದಲ್ಲಿ ಶಿವ, ಪಾರ್ವತಿ, ವೀರಭದ್ರ ಇವರುಗಳ ಸ್ತುತಿ ಇದೆ ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಸರಿಯಿಲ್ಲದರಕೂಡೆ ವಾದಿಸುವನತಿಮೂರ್ಖ |
ಗುರುಹಿರಿಯರುಸಿರ್ದ ವಾಕ್ಯದ ವಿಚಾರವನು ಮೂರ್ಖ |
ಗರುವತನವನು ತಳೆದು ಹನ್ನಿವಾಸದ ಮುಳುಗಿ ಗಾಢಿಕಾತಿಗುರೊಳಗನು ||
ನೆಲ್ಲ್ ನಂಜ ನಿಜನೆಂದು ಮರುಳುಗೊಂಬನ ಮೂರ್ಖ |
ಕರುಣಾನಿಧಿ ಭಕ್ತವತ್ಸಲ ನಿಮ್ಮ ಸೊಮ್ಮನನು |
ಸ್ತುತಿಪದವ ಕಡುಮೂರ್ಖ ನಿಜಲಿಂಗ ಭವಭಂಗ ಶರಣಾನಭಕ್ತಿಸಂಗ ||
ಸಂಗೀತಸವಿಯು ಬಧಿರನಿಗೆ ತಿಳಿವುದುಂಟೆ |
ಕಂಗುರುಡನಿಗೆ ಕನ್ನಡಿಯ ಹಂಬಲಿಕೆಯುಂಟೆ |
ರಂಗುಮಾಣಿಕ ಥಳಥಳಿಸುತಿರೆ ಪ್ಲವಂಗಗೆ ಶೃಂಗದ ಪರೀಕ್ಷೆಯುಂಟೇ ||
ಕಂಗೊಳಿಸುವಿನಿಗೋಲು ರುಚಿಯು ಬೋಳನಿಗುಂಟೆ |
ಮಂಗಳಾತ್ಮಕ ನಿಮ್ಮ ದಿವ್ಯನಾಮದ ತಿಳಿಯು |
ದಂಗೆ ಭವಪಡಲುಂಟೆ ನಿಜಲಿಂಗ ಭವಭಂಗ ಶರಣಾನಭಕ್ತಿಸಂಗ ||

---

## ಕಸ್ತೂರಿಸಿದ್ಧ ಸು 1800

ಇವನು ಚೋರಕಥೆಯೆಂಬ ಯಕ್ಷಗಾನವನ್ನು ಬರೆದಿದ್ದಾನೆ ಈತನು ವೀರಶೈವಕವಿ. ಇವನ ತಂದೆ ವಿರೂಪಾಕ್ಷಕರಜಾತನಾದ ಕಸ್ತೂರಿ ನಾಗಣ್ಣ, ತಾಯಿ ಗುರುವಮ್ಮ. "ಬೋಳೇಶನೆಂದೆಂಬ ಕರ್ತುವಿನ ಕೃಪೆಯಿಂದ ಪೇಳ್ದಂ" ಎನ್ನುತ್ತಾನೆ. ಇವನ ಕಾಲವು ಸುಮಾರು 1800 ಆಗಿರಬಹುದು. ಇವನ ಗ್ರಂಥಕ್ಕೆ ಚಿತ್ರಶೇಖರಸೋಮಶೇಖರಕಥೆ ಎಂಬ ಹೆಸರೂ ಉಂಟು. ಇದರಲ್ಲಿ "ಉತ್ತಮವಿಶ್ವಮುಕುಟರಾಯನಿರ್ವರು ಪುತ್ರರು ಚೋರರಾದ" ಕಥೆ ಹೇಳಿದೆ.

---

## ಯಾದವ ಸು 1800

ಇವನು ಕಲಾವತೀಪರಿಣಯವನ್ನು ಬರೆದಿದ್ದಾನೆ. ಬ್ರಾಹ್ಮಣಕವಿಯೆಂದು ತೋರುತ್ತದೆ, ಮುಕುಂದಭಕ್ತನೆಂದೂ ಉಭಯಕವಿತಾವಿಚಕ್ಷಣನೆಂದೂ ಹೇಳಿಕೊಂಡಿದ್ದಾನೆ. ಇವನ ವಿಷಯವಾಗಿ ನಮಗೆ ಇನ್ನೇನೂ ತಿಳಿಯದು. ಇವನು ಸುಮಾರು 1800 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

## ಕಲಾವತೀ ಪರಿಣಯ

ಇದು ಗದ್ಯರೂಪವಾಗಿದೆ ; ಪ್ರಾಯಿಕವಾಗಿ ಹಳಗನ್ನಡಸರಣಿಯಲ್ಲಿ ಬರೆದಿದೆ ; 12 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ ಇದು ಕಲ್ಪಿತಕಥೆಯೆಂದು ತೋರುತ್ತದೆ. ಸೌವೀರದೇಶದ ಲೀಲಾವತಿಯ ದೊರೆಯಾದ ಬೃಹದ್ರಥನು ಸೌರಾಷ್ಟ್ರದೇಶದ ಇರಾವತಿಯ ದೊರೆಯಾದ ಕುವಲಯಾಪೀಡನ ಕುಮಾರಿ ಕಲಾವತಿಯನ್ನು ಮದುವೆಯಾಗಿ ಮನಸ್ತಾಪದಿಂದ ಅಗಲಿ ಪುತ್ರನಾದ ಕುಂಡಲಶ್ರವನಿಂದ ಪರಾಜಿತನಾಗಿ ಪುನಃ ಕಲಾವತಿಯನ್ನು ಸೇರಿ ಸುಖದಿಂದ ರಾಜ್ಯವಾಳಿದನು —ಎಂಬುದೇ ಕಥಾಸಾರ. ಗ್ರಂಥವು "ಅತಿರುಚಿರವಾಗಮೃತವರ್ಷದಿಂ ಪದಶಯ್ಯಾಪಾಕರೀತಿಗಳಿಂ ಧ್ವನಿರಸಾಲಂಕಾರನೀತಿಗಳಿಂದಭಿನವಪ್ರೌಢಸಂವಿಧಾನಂಗಳಿಂ ರುಚಿರತರವಾಗಿದೆ' ಎಂದು ಕವಿ ಹೇಳುತ್ತಾನೆ. ಇದನ್ನು 5ಮಾತ್ರೆಯ ಗಣಗಳುಳ್ಳ ಪ್ರಾಸವಿಲ್ಲದ ರಗಳೆಯ ರೂಪವಾಗಿ ಮೊದಲಿಂದ ಕೊನೆಯವರೆಗೂ ಬರೆದಿರುವಂತೆ ತೋರುತ್ತದೆ

ಈತನ ಬಂಧವು ನಿರರ್ಗಳವಾಗಿಯೂ ಹೃದಯಂಗಮವಾಗಿಯೂ ಇದೆ. ಈ ಗ್ರಂಥದಿಂದ ಸ್ವಲ್ಪಭಾಗವನ್ನು ಉದ್ಧರಿಸಿ ಬರೆಯುತ್ತೇವೆ

### ಕಲಾವತಿಯ ಸೌಂದರ್ಯ

ಸೌಭಾಗ್ಯನು ನಿಖಿಲತೇಜಸ್ಸಾರವನ್ನು ಸಂ | ಗ್ರಹಗೈದು ಆನಾರು ಮಾಕಾರವನ್ನಂತ್ಯ |
ನೋಡಲಾಗಿ ಮಂಡೆಪದಯಂತವೂ ರಚಿಸಿ ಮುಗಿ | ಯಲ್ ಒಬ್ಬಿಕೆ ತದಭಾವ ರೂಪವಾಗಿರುವ ಘನ|
ತಿಮಿರಗಳ ಸಾರವುಂ ಸಂಗ್ರಹಿಸಿ ಚಿಕುರಮಂ | ರಚಿಸಿದನೊ ಎಂಬಂತೆ ಮುಖಕಮಲ ಸೌಂದರ್ಯ |
ಮಧುಪಾನಲೋಭದಿಂದಾ ಭ್ರಮರಿಗಳಿಟ್ಟಿರ್ಕೆ | ಕವಿದಿರುವುದೇನೊ ಎಂಬಂದದಲಿ ತೋರುತಿಹ |
ಘನಕುಟಿಲಕೇಶಪಾಶಗಳಿಂದ ಬಾಲಿಕೆ | ದಿನಂತೆ ಪೊಳೆಯುತಿಹ ಪಣೆಯಲ್ಲಿ ರಚಿಸಿರುವ |

ಕಸ್ತೂರಿಯ ತಿಲಕದಿಂ ಶ್ರುತಿಸಕ್ತರಾಗಿರುವ | ವಿಮಲರ ಸಮುದ್ಗತಿಗೆ
ಎಡರನಾಚರಿಸುವುದೆ |
ವಕ್ರಾತ್ಮರಾಗಿರುವ ಮಲಿನಸ್ವಭಾವರಿಗೆ | ಯುಕ್ತಸಂಬಂಧವಮಂ ಸೂಚಿಸು
ತ್ತಿರುವಂತೆ |
ಶೋಭಿಸುವ ಹುಬ್ಬುಗಳ ಯುಗಳದಿಂ ಮನಸಿಜನ | ವಿಜಯಕೇತನದಂತೆ
ಕಮಲಗಳ ನಿಂದಿಸುವ |
ದೀರ್ಘತರವಾಗಿರುವ ನಯನನ್ನೈದಿಲೆಗಳಿಂ | ವಿಪುಲಸಂಧ್ಯಾರಾಗರುಚಿರ
ಕಪಯುಂತಿರುವ |
ಅಧರರುಚಿಕರ್ವದಿಂ ಪೊಳೆವ ಮೂಗುತಿಯಿಂದ | ಕರುಣೀಯವನಾಗಿರುವ
ತಿಲಕುಸುಮದಂತಿರುವ |
ಚೆಲುವನಾಸಿಕದಿಂದ ಬಿಂಬಫಲಮಂ ಹಳಿವ | ಅಧರಪ್ರವಾಳದಿಂ ದಾಡಿ
ಮದಬೀಜದಂ |
ತಿರುವ ದಂತಗಳಿಂದ ಕರ್ಪೂರದವಳಿಗೆಯು | ತೆಳುವಿಂದಲೊಪ್ಪುತಿಹ
ತಾಂಬೂಲರಸಭರಿತ |
ವದನದಿಂ ದಿವ್ಯಭೂಷಣಕಲಿತಕರ್ಣಾರ್ವ | ಲಂಬಿಮಣಿಕನಕಮಯತಾಟಂಕ
ಯುಗ್ಮರುಚಿ |
ಕವಚಿತಗಳಾಗಿರುವ ಕೃಪಣಿಸು ಸೋಲಿಸುವ | ಕಡಪುಗಳಯುಗಳದಿಂ
ರಮಣೀಯವಾಗಿರುವ |
ರಮಣಿಯಾನನವನ್ನು ಶ್ರೀಲಾಪತೀಪತಿಯು | ನೋಡುವನು.

---

## ಕಪ್ಪನಿ ಸು 1800

ಇವನು ನಂಜುಂಡಶತಕವನ್ನು ಬರೆದಿದ್ದಾನೆ. ಈತನು ವೀರಶೈವ ಕವಿ ಎಂದು ತೋರುತ್ತದೆ; ಸುಮಾರು 1800 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ ತನ್ನ ಗ್ರಂಥವನ್ನು ನಂಜನಗೂಡು ನಂಜುಂಡೇಶ್ವರನ ಅಂಕಿತದಲ್ಲಿ ಬರೆದಿದ್ದಾನೆ

ಇವನ ಗ್ರಂಥ

## ನಂಜುಂಡಶತಕ

ಇದು ಕಂದದಲ್ಲಿ ಬರೆದಿದೆ ; ಪದ್ಯ 103; ನೀತಿಬೋಧಕವಾದ ಗ್ರಂಥ "ಸಂಸ್ಕೃತಶ್ಲೋಕಂಗಳ ಪರಿಮಳದಲರುಗಳ ಕಂದಪದಾಂತರದೊಳ್ ಸರಗಟ್ಟುವೆ ಸುಜನರ ಕಿವಿದುಱುಬಿಗೆ " ಎಂಬುದರಿಂದ ಸಂಸ್ಕೃತ ಶ್ಲೋಕಗಳನ್ನು ಕವಿ ಕನ್ನಡಕ್ಕೆ ಪರಿವರ್ತಿಸಿದಂತೆ ತಿಳಿಯುತ್ತದೆ. ಪ್ರತಿಪದ್ಯವೂ 'ನಂಜುಂಡಲಿಂಗ ನತಜನಸಂಗಾ' ಎಂದು ಮುಗಿಯುತ್ತದೆ ತನ್ನ ಗ್ರಂಥವು "ಮಾತಿನ ಸುಧೆ ತುಂಬಿದ ಕೊಡ, ನೀತಿಯುಮಾಫಲದ ಸಾರ, ಸಂಸಾರಾಬ್ಧಿಗೆ ಸೇತುವೆ " ಎಂದು ಕವಿ ಹೇಳುತ್ತಾನೆ ಆರಂಭ ದಲ್ಲಿ ಗಣಪತಿ, ಸರಸ್ವತಿ, ವಿಷ್ಣು ಇವರುಗಳ ಸ್ತುತಿ ಇದೆ ಈ ಗ್ರಂಥ ದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ರಣಮುಖದೊಳು ರಿಪುಖಡ್ಗಕೆ | ಮಣಿಯದೆ ನಿಲೆ ಧೈರ್ಯವಿಲ್ಲ ಕಾಮಿನಿಯರ ಕಂ|
ಗೊನೆಯಲಗಿಗಳುಕದಿರಲದು | ಘನವೈ ನಂಜುಂಡಲಿಂಗ ನತಜನಸಂಗಾ ||

ಗಂಡನ ಗಣಿಸದ ಹೆಂಡತಿ | ಪುಂಡಾಟದ ಕಲಿತ ಮಗನು ತಸ್ಕರಭೃತ್ಯಂ |
ಚಂಡಿಯುಮಾತುಳ ನೆಱೆಸೆ ಪಗೆ | ಕಂಡಾ ನಂಜುಂಡಲಿಂಗ ನತಜನಸಂಗಾ ||

---

## ಏರಿಶೇಷ ಸು 1800

ಈತನು ಶ್ರೀನಿವಾಸಕಲ್ಯಾಣವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ ; ಮಾಧ್ವನೆಂದು ತೋರುತ್ತದೆ ಇವನ ಗುರು ಹರಿ ವೆಂಕಟಾಚಾರ್ಯ ತಂದೆ ಹರಿಕೃಷ್ಣಾರ್ಯ, ತಾಯಿ ರುಕ್ಮಿಣಿ. ಇವನು ಸುಮಾರು 1800 ರಲ್ಲಿ ಇದ್ದಿರಬಹುದೆಂದು ತೋರುತ್ತದೆ

ಇವನ ಗ್ರಂಥ

### ಶ್ರೀನಿವಾಸಕಲ್ಯಾಣ.

ಇದು ಯಕ್ಷಗಾನರೂಪವಾಗಿದೆ. "ಭವಿಷ್ಯೋತ್ತರಪುರಾಣದಲಿ ಪೇಳಿರುವುದನನುಕರಿಸಿ ಪೇಳ್ವೆ" ಎಂದು ಕವಿ ಹೇಳುತ್ತಾನೆ. ತನ್ನ ವಿಷಯವನ್ನು ಈ ಶ್ಲೋಕದಲ್ಲಿ ಹೇಳಿದ್ದಾನೆ—

ರುಕ್ಮಿಣ್ಯಾಮೇರಿಕೃಷ್ಣಾರ್ಯಸಂಭವೇನ ಯಥಾಮತಿ |
ಶ್ರೀಶ್ರೀನಿವಾಸಕಲ್ಯಾಣಂ ಫಣೀಶೇನ[1] ಪ್ರಕಾಶ್ಯತೇ ||

1. ಫಣೀಶ=ಶೇಷ

## ಚೆನ್ನವೀರಗೌಡ ಸು. 1800

ಈತನು ಕಾಮನ ಯೋಗಪದಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ ; ಸೂಗೂರಪ್ಪನ ಶಿಷ್ಯನು. ಸುಮಾರು 1800 ರಲ್ಲಿ ಇದ್ದಿರಬಹುದು.

ಇವನ ಗ್ರಂಥ.

### ಕಾಮನ ಯೋಗಪದಗಳು.

ಪದಸಂಖ್ಯೆ 157. ಒಂದೆರಡು ಪದಗಳನ್ನು ಉದಾಹರಿಸುತ್ತೇವೆ:

ಸುಖವೆಯೆಂಬ ಮೋಹಿನಿಯು | ಪರಮಾತ್ಮದಿಂದಲುಬಂದು |
ತಿರುಗಿ ಬಾರದಂತೆ ಜಗದಿ | ಅಜ್ಞಾನಸಿಂದಾಡಿಸೋ ||
ಸೋಹಪಾಪಮುಗಳನು ಕೆಡಿಸಿ | ಜ್ಞಾನವೈರಾಗ್ಯವನ್ನು ಪಡೆದು |
ಧ್ಯಾನಾಕೋಟಿಸೃಷ್ಟಿಯೊಳಗೆ ಸು | ಜ್ಞಾನದಿಂದಗಾಡಿದೋ ||

---

## ಶಿವಯೋಗೀಶ್ವರ ಸು 1800

ಇವನು ವೀರಶೈವ ಷಟ್ಸ್ಥಲಸಿದ್ಧಾಂತಸಾರವನ್ನು ಬರೆದಿದ್ದಾನೆ. ಈತನು ವೀರಶೈವಕವಿ ; ಚೆನ್ನವೀರಸ್ವಾಮಿಯ ಶಿಷ್ಯನು ; ಸುಮಾರು 1800 ರಲ್ಲಿ ಇದ್ದಿರಬಹುದು.

ಇವನ ಗ್ರಂಥ

### ವೀರಶೈವಷಟ್ಸ್ಥಲಸಿದ್ಧಾಂತಸಾರ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ, ಪ್ರಕರಣ 3, ಪದ್ಯ 121. ಇದರಲ್ಲಿ ಅಷ್ಟಾವರಣ, ಪಂಚಾಚಾರ ಮುಂತಾದ ವಿಷಯಗಳು ಹೇಳವೆ. ಆರಂಭದಲ್ಲಿ ಗುರುಸ್ತುತಿ ಇದೆ. ಇದರಿಂದ ಒಂದು ಪದ್ಯವನ್ನು ಉದಹರಿಸಿ ಬರೆಯುತ್ತೇವೆ—

ಹೆಪ್ಪಿನೊಳು ಹಾಲಡಗಿದಂತೆಯೊಂದಾನೊಂದು |
ನೆಪ್ಪಿನೊಳಗಖಿವ್ರುಮುಖವೆಗಳಡಗಿದಂತೆ ಕ |
ಒಪ್ಪಿನೊಳು ಸೂರ್ಯಚಂದ್ರಾಗ್ನಿ ಪ್ರಕಾಶಂಗಳಡಗಿ ಶೋಭಿಸುವಂದದಿ ||

ಮುಪ್ಪಿನೊಳು ಬಾಲ್ಯಯೌವನವಡಗಿದಂತಿರದೆ |
ಯುಪಿನಿತವುಮವಧಾನವುಮುಖ್ಯಕ್ರಿಯೆಗಳನೆಲ್ಲ |
ನಿಪ್ಪತಿಯನ್ನೈದಿ ನಿಜವಾದ ಸದ್ಭಕ್ತರಿಗೆ ಭಾವಲಿಂಗಾಚಾರವು ||

---

ವೆಂಕ ಸು 1800.

ಈತನು ಪಾರ್ವತಿಯ ಕೊರವಂಜಿಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಇವನ ಪಿತಾಮಹನು ತಿರುಮಲಯ್ಯ, ತಂದೆ ವೆಂಕಟೇಶಯ್ಯ. ಸ್ಥಳ ಮೇಳಯುಕೋಟೆ ಸರಸಕವಿ ಎಂದು ಹೇಳಿಕೊಂಡಿದ್ದಾನೆ; ಸುಮಾರು 1800 ರಲ್ಲಿ ಇದ್ದಿರಬಹುದೆಂದು ತೋರುತ್ತದೆ. ಇವನ ಗ್ರಂಥವು ಹೀಗೆ ಆರಂಭಿಸುತ್ತದೆ—

ನಿಜಾಂಕಿತನಾದ ದಶರಥರಾಯನ ಕುಮಾರನಾದ ರಾಮಚಂದ್ರನ ಚಿತ್ರಿಯ ಕೈಲಾಸವಾಸಿಯಾದಂಥ ಪಾರ್ವತೀದೇವಿ ಕೌಸಲ್ಯಾದೇವಿಗೆ ಹೇಳ್ದ ಕೊರವಂಜಿ ಕಟ್ಟಳೆಯ ಯಕ್ಷಗಾನಕ್ಕೆ ಕಥಾಪ್ರಾರಂಭವೆಂತೆನೆ

---

ಭಾಳಾಕ್ಷ ಸು 1800

ಇವನು ಕರಿಯಬಂಟನಕಥೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನ ತಂದೆ ಕೆಂಪಣ್ಣಗೌಡ, ತಾಯಿ ಹಲಗಮ್ಮ. ಇವನು ಸುಮಾರು 1800ರಲ್ಲಿ ಇದ್ದಿರಬಹುದು "ಕನ್ನಡಜಾಣರ ಕರ್ಣಕಿಂಪೆನಿಸುವ ವರ್ಣಕಕೃತಿಯನು ಬಿನ್ನಣದಿಂದೊರೆವೆ" ಎಂದು ಹೇಳುತ್ತಾನೆ.

---

ಬಸವಲಿಂಗ ಸು 1800

ಈತನು ಸೌಮಿನೀಕಥೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಕುಂದಗೊಳ್ಳದ ಮಡಿವಳನ ಮಗನು ಇವನ ಕಾಲವು ಸುಮಾರು 1800 ಆಗಿರಬಹುದು ಇವನ ಗ್ರಂಥದಲ್ಲಿ ಸೌಮಿನಿ ಎಂಬ

ದುಷ್ಟ ಸ್ತ್ರೀ ಗೋಕರ್ಣಕ್ಕೆ ಹೋಗಿ ಸದ್ಗತಿಯನ್ನು ಪಡೆದ ಕಥೆ ಹೇಳಿದೆ.

---

## ಶಾಲಿಚೆನ್ನಬಸವ ಸು. 1800.

ಈತನು ವೀರಸಂಗಯ್ಯದುಂದುಮೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ. ಇವನ ಸ್ಥಳ ಧಾರವಾಡ. ಇವನು ಸುಮಾರು 1800 ರಲ್ಲಿ ಇದ್ದಿರಬಹುದು.



# ಹತ್ತೊಂಬತ್ತನೆಯ ಶತಮಾನದ ಕವಿಗಳು

## ರಾಮಕೃಷ್ಣಶಾಸ್ತ್ರಿ ಸು. 1808

ಈತನು ಭುವನಪ್ರದೀಪಿಕೆ ಎಂಬ ಸ್ವರಚಿತವಾದ ಸಂಸ್ಕೃತ ಗ್ರಂಥಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಸಿಂಹಾಸನಪುರಿಯ (ಹಾಸನ) ರಾಮಪಂಡಿತನ ಮಗನು ಈ ಗ್ರಂಥವನ್ನು ಮೈಸೂರು ದೊರೆಯಾದ ಮುಮ್ಮಡಿ ಕೃಷ್ಣರಾಜನ ಸಂತೋಷಾರ್ಥವಾಗಿ 1808 ರಲ್ಲಿ ಆರಂಭಿಸಿದಂತೆಯೂ ಟೀಕೆಯನ್ನು 1815 ರಲ್ಲಿ ಮುಗಿಸಿದಂತೆಯೂ ಹೇಳುತ್ತಾನೆ. ಇವನ ಗ್ರಂಥಕ್ಕೆ ಕೃಷ್ಣರಾಜಗುಣರತ್ನಮಾಲೆ ಎಂಬ ಹೆಸರೂ ಉಂಟು. ಇದರಲ್ಲಿ ಬ್ರಹ್ಮಾಂಡಸೃಷ್ಟಿ, ಕಾಲಪ್ರಮಾಣ, ಮನ್ವಾದಿಗಳು, ಭೂಗೋಳ, ಖಗೋಳ, ಮೈಸೂರು ರಾಜರ ಪರಂಪರೆ, ಮುಮ್ಮಡಿ ಕೃಷ್ಣರಾಜ ಗುಣಕಥನ, ಪುರಾಣಗಳು, ವರ್ಣಾಶ್ರಮ ಧರ್ಮಗಳು ಮುಂತಾದ ಹಲವು ವಿಷಯಗಳು ಹೇಳಿವೆ. ಗ್ರಂಥವು 10 ಪಟಲಗಳಾಗಿ ಭಾಗಿಸಲ್ಪಟ್ಟಿದೆ

---

## ಚಂದ್ರಸಾಗರವರ್ಣಿ. ಸು. 1810.

ಈತನು ಕದಂಬಪುರಾಣ, ಚಂದನೆಯಕಥೆ, ಜಿನಭಕ್ತಿಸಾರ, ಜಿನಮುನಿ, ಪರಶುರಾಮಭಾರತ, ಪುರಾಣಸ್ತೋತ್ರ, ಬೆಟ್ಟವರ್ಧನಚರಿತ್ರೆ, ಬ್ರಹ್ಮಶತಕೋಕ, ಭವ್ಯಾಮೃತ, ಮಲ್ಲಾಶಾಸ್ತ್ರ, ಜಿನರಾಮಾಯಣ ರುದ್ರ ಯಕ್ಷಗಾನ, ವಾಸುದೇವಪಾರಿಜಾತ, ಶಬ್ದಾರ್ಥಮಂಜರಿ, ಸ್ವರಶೋರವಂಜಿ, ಹಿಮಶೀತಳನ ಕಥೆ, ಈ ಗ್ರಂಥಗಳನ್ನು ಬರೆದಿದ್ದಾನೆ.

ಇವನು ಜೈನಕವಿ; ಸೇನಗಣದವನು; ಇವನ ಗುರು ಲಕ್ಷ್ಮೀಸೇನ, ಸ್ಥಳ ತೊಣೆನಕೆರೆ. ಕೆಲವು ಗ್ರಂಥಗಳನ್ನು ಶ್ರವಣಬೆಳ್ಗೊಳಕ್ಕೆ ಉತ್ತರದಲ್ಲಿರುವ ಧರ್ಮಾಕ್ಯಪುರದ ಪೇಟೆಯ ಚಂದ್ರಪ್ರಭನ ಅನುಗ್ರಹದಿಂದ ಬರೆದಂತೆ ಹೇಳುತ್ತಾನೆ. ಈತನ ಜಿನಮುನಿ ಎಂಬ ಗ್ರಂಥದಲ್ಲಿ

ಇವನು ಗೃಹಸ್ಥನಾಗಿದ್ದಾಗ ಸ್ಮರಕೊರವಂಜಿ, ನಾಗಕುಮಾರಷಟ್ಪದಿ ಬೃಹ್ಮಶತಕೋಶ, ಭಾರತ ಈ ನಾಲ್ಕು ಗ್ರಂಥಗಳನ್ನೂ ದೀಕ್ಷೆಯಾದ ಬಳಿಕ ರುದ್ರಯಕ್ಷಗಾನ, ಮಾಲ್ತಾಶಾಸ್ತ್ರ, ಪರಶುರಾಮಭಾರತ, ಭವಾವೃತ, ಚಂದನೆಯ ಯಕ್ಷಗಾನ ಈ ಐದು ಕಾವ್ಯಗಳನ್ನೂ ಬರೆದಂತೆ ಹೇಳಿದೆ. ಇದರಿಂದ ಪರಶುರಾಮಭಾರತವಲ್ಲದೆ ಬೇರೆ ಒಂದು ಭಾರತವನ್ನೂ ಇವನು ಬರೆದಿರುವಂತೆ ತೋರುತ್ತದೆ. ಪರಶುರಾಮ ಭಾರತವನ್ನು 1810 ರಲ್ಲಿಯೂ ಜಿನಮುನಿಯನ್ನು 1814 ರಲ್ಲಿಯೂ ಬರೆದಂತೆ ಕವಿ ಹೇಳುತ್ತಾನೆ.

ಇವನ ಗ್ರಂಥಗಳಲ್ಲಿ

## 1. ಜಿನಮುನಿ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 50, ಪದ್ಯ 2551. ಇದರಲ್ಲಿ ನಾಗಕುಮಾರನೆಂಬ ಮಹಾಮಂಡಲೇಶ್ವರನ ಚರಿತೆ ಹೇಳಿದೆ. ನಾಗದತ್ತನು ಪಂಚಮಿಯ ಉಪವಾಸದ ಮಹಿಮೆಯಿಂದ ಸ್ವರ್ಗದಲ್ಲಿ ಹುಟ್ಟಿ ಅಲ್ಲಿಂದ ಬಂದು ನಾಗಕುಮಾರನಾಗಿ ಭೂಮಿಯಲ್ಲಿ ಜನಿಸಿ ಸಕಲೈಶ್ವರ್ಯವನ್ನೂ ಅನುಭವಿಸಿ ಅಂತ್ಯದಲ್ಲಿ ಮುನಿಯಾಗಿ ಅಪವರ್ಗ ಸುಖವನ್ನು ಪಡೆದನು—ಎಂಬುದೇ ಕಥಾಗರ್ಭ. ಈ ಗ್ರಂಥವನ್ನು ವೇಣುಪುರಿಯ ಶ್ರಾವಕರ ಪ್ರಾರ್ಥನಾನುಸಾರವಾಗಿ ಕವಿ ಧರ್ಮಪುರಿಯ ಬಸದಿಯಲ್ಲಿ ಬರೆದಂತೆ ಹೇಳುತ್ತಾನೆ. ಮೇಲೆ ಹೇಳಿದ ನಾಗಕುಮಾರಷಟ್ಪದಿ ಎಂಬುದು ಈ ಗ್ರಂಥವೇ ಆಗಿರಬೇಕು. ಆರಂಭದಲ್ಲಿ ಚಂದ್ರಪ್ರಭಸ್ತುತಿ ಇದೆ. ಆಮೇಲೆ ಕವಿ ನೇಮಿ, ಸಿದ್ಧಾದಿಗಳು, ಸರಸ್ವತಿ, ಗಣಧರರು, ಪೂಜ್ಯಪಾದ ಇವರುಗಳನ್ನು ಕ್ರಮವಾಗಿ ಹೊಗಳಿದ್ದಾನೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ನಾಡು

ಬಿಡುವಿಡದೆ ತೋಳ್ತುತಿಹ ಸರಸಿಗಳ ಸರಿವಗಳ |
ಕಡೆಗಾಣದೊತ್ತರಿಪ ತೊಱೆಯಿಂದ ಕೆಱೆಯಿಂದ |
ನುಡಿಗಗೋಚರವಾದ ಖಗದಿಂದ ಮೃಗದಿಂದ ಮಣಿಮಯಾಚಲಗಳಿಂದ ||

ಎಡೆಬಿಡದೆ ಶೋಧಿಸುವ ಬೇಡಗಳ ನಾಡುಗಳ |
ತೊಡಗಿದಾರಾಮಗಳ ಸೊಂಪಿನಿಂದಿಂಪಿನಿಂ |
ಕಡುಗುತ್ತಿಹ ಸ್ವರ್ಗವು ಮುದಿಳೆಯಿಂದ ಕಳೆಯಿಂದಲ್ಲನಾಡ ..ರ ಮಹಿಮೆಯದು ||

ಸೂರ್ಯಾಸ್ತ.

ವಾರುಣೀಸಂಗದಿಂದುರುತೇಜಮಂ ನೀಗಿ |
ದೂಟ್ಟಿಗೆಡಗಿ ಪೋದವನಧಿಕಕರೂರತ್ವ |
ನಾರದರ್ನಾಗಲಾಸ್ಯವ ನೋಡೆನೆಂದು ಶತಪತ್ರಗಳ್ ಕಣ್ಮುಚ್ಚಲು
ಆರಜನಿರಾಜನನುಚರರಂತೆ ಭ್ರಮರ ಘೋಂ |
ಕಾರದಾನಂದದಿಂ ಪದ್ಮಂಗಳೆಡೆಗೆ ನೆ |
ಸಾರದುವು ಊರ್ಜಿದುವು ಮುತ್ತಿದುವು ಸುತ್ತಿದುವು ಒತ್ತುವೊತ್ತಿಲಿ ಕುಳಿತುವು ||

2 ಜಿನಭಕ್ತಿಸಾರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 108. ಪ್ರತಿಪದ್ಯವೂ "ರಕ್ಷಿಸನವರತ" ಎಂದು ಮುಗಿಯುತ್ತದೆ ಇದು ಧವಳಾಕ್ಷ್ಯಪುರದ ಚಂದ್ರಪ್ರಭನ ವರದಿಂದ ಲಕ್ಷ್ಮೀಸೇನರ ಭಕ್ತಿಯುಲಿ ವಿರಚಿಸಿದ ಕಾವ್ಯ ಎಂದು ಕವಿ ಹೇಳುತ್ತಾನೆ. ಆರಂಭದಲ್ಲಿ ಚಂದ್ರನಾಥಸ್ತುತಿ ಇದೆ ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಹಲವು ಜನ್ಮದಿ ಗೈದ ಅಘಸಂ | ಚಲಿಸುವುದು ನಿಮ್ಮ ಳಗಿಯೊಂದಿಸ |
ನಲವಿನಲಿ ಭಜಿಸಿದರೆ ನಿಮ್ಮಯ ಸ್ತೋತ್ರಮಾಲಿಗಳ ||
ಒಲಿಸಬಹುದಪವರ್ಗನಾರಿಯ | ಗೆಲಬಹುದಾವಾವ ಗತಿಗಳ |
ನಲಿಸಿದರೆ ನಿಮ್ಮಲ್ಲಿ ಮನವನು ರಕ್ಷಿಸನವರತ ||
ಜೀವನಕೆ ಹಿತವೆಲ್ಲ ಪುಣ್ಯದ | ಭಾವ ಪರಪೀಡನೆಯ ಪಾಪಕೆ |
ತಾವದೆಂಬುದನರಿದು ತೊಡಗಿಸುಚಿತದ ಕಾರ್ಯಗಳ ||
ಭಾವಿಸೊಳ್ಳಿತೆ ಸರ್ವಜನಸಂ | ಜೀವನೆನಿಸಲು ನಿನಗೆ ಸದ್ಗತಿ |
ಯಾವನಾ ಜಿನದೇವ ರಕ್ಷಿಸಲೆಮ್ಮನನವರತ ||

3 ಭವ್ಯಾಮೃತ

ಇದು 110 ಕಂದಗಳನ್ನು ಒಳಕೊಂಡಿದೆ; ಇದರಲ್ಲಿ ಆತ್ಮವಿಚಾರವು ಹೇಳಿದೆ ಆದಿಯಲ್ಲಿ ಜಿನಸ್ತುತಿ ಇದೆ. 107 ನೆಯ ಪದ್ಯ

ದಲ್ಲಿ ಗೊಮ್ಮಟಸಾರವೂ ಪ್ರಾಭೃತವೂ ಪರಮಾರ್ಥದ ತಂದೆತಾಯಿ ಗಳೆಂದು ನಂಬಿ ನೇಮಿಶ್ವರನ ಪಾದವನ್ನು ನೆನೆದು ಈ ಗ್ರಂಥವನ್ನು ಬರೆದುದಾಗಿ ಕವಿ ಹೇಳುತ್ತಾನೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ತನುಬೇಱಾತ್ಮನು ಬೇಱೆಂ | ದನವರತಂ ನಡೆವ ನುಡಿವ ಸಡಗರದೆಡೆಯೊಳ್ |
ಮನದೊಳ್ ಚಿಂತಿಸುವಾತನ | ಘನತರಕರ್ಮಂಗಳೆಗೆಲ್ಲ ನಿರ್ಜರೆಯಕ್ಕುಂ ||
ನಿರಘನ ರುಚಿವಡೆದವನಿಗೆ | ಪರಿಗ್ರಹಾದಿಗಳ ತೊಡರನೇಂ ಕಡೆದಪುದೇ |
ಧರೆಯೊಳು ಮದವೆದ್ದಾನೆಯು | ನೆರೆದಿಹ ಕಡ್ಡಿಗಳ ಬೇಲಿಯೇಂ ತಡೆದಪುದೇ ||

4. ಪರಶುರಾಮಭಾರತ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಅಧ್ಯಾಯ 24, ಪದ್ಯ 1369. ಇದರಲ್ಲಿ 18 ನೆಯ ತೀರ್ಥಂಕರನಾದ ಅರಜಿನನ ಅಂತರಾಳ ಕಾಲದಲ್ಲಿದ್ದ ಸುಭೌಮಪರಶುರಾಮರ ಕಥೆ ಹೇಳಿದೆ: ಪರಶುರಾಮನು ಸಹಸ್ರಬಾಹುವನ್ನು ಸೋಲಿಸಿ ಕ್ಷತ್ರಿಯರನ್ನು 21ಸಾರಿ ಸಂಹರಿಸಿ ಕೊನೆಗೆ ಸುಭೌಮರಾಜನಿಂದ ಹತನಾದನೆಂದು ಹೇಳಿದೆ. ಗುಪ್ತಪುರದಲ್ಲಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಈ ಗ್ರಂಥವು "ಸರಸ ಜನರಿಗೆ ಕುಶಲತತ್ವದ ಸೆರವಿ ಸದ್ಭವ್ಯರಿಗೆ ಮಿಥ್ಯದ ತೊಱವಿ ವಿರತರಿಗರ ಸುಗಳಿಗಿದು ಪೀರಮಂತ್ರ" ಎಂದು ಹೇಳಿದ್ದಾನೆ. ಆರಂಭದಲ್ಲಿ ಚಂದ್ರ ಪ್ರಭಸ್ತುತಿ ಇದೆ. ಆಮೇಲೆ ಕವಿ ಸುಪಾರ್ಶ್ವ, ಅರ, ಸಿದ್ಧರಿಗಳು, ಸರಸ್ವತಿ, ಗಣಧರರು, ಯಕ್ಷರು ಇವರುಗಳನ್ನು ಸ್ತುತಿಸಿದ್ದಾನೆ. ಇದ ರಿಂದ ಒಂದು ಪದ್ಯವನ್ನು ಉದ್ಧರಿಸಿ ಬರೆಯುತ್ತೇವೆ—

ಸೂರ್ಯೋದಯ.

ತೆರಳುತಿಹ ತಮವರಳುವಬ್ಜನಿ | ಕೊಱಗುತಿಹ ಕುಮುದಾಳಿ ಚಿಂತೆಯು |
ಕರೆವಜಾತಿಚಕೋರವಿಟರೆದೆಹಾಱನೊಡರಸುತ ||
ಅರುಣಕಿರಣದ ಜವನಿಕೆಯ ಮಱ | ಗರೆದು ಒಹ ದಿನಕರನ ಬಿಂಬದ |
ಭರವನಱ ಡುಲಿಯುತ್ತಿಹುವು ಕಲರವದ ಖಗನಿಕರ ||

5. ಕದಂಬಪುರಾಣ.

ಇದೂ ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 199, ಕೆಲವು ಸಾಂಗತ್ಯಗಳೂ ಇವೆ. ಇದರಲ್ಲಿ ಹಲವು ವಿಷಯಗಳು ಕವಿಗೆ ತೋರಿ

ರಂತೆ ಸಂಗ್ರಹವಾಗಿ ಹೇಳಿವೆ. ಈ ಕಾರಣದಿಂದಲೇ ಇದಕ್ಕೆ ಕದಂಬ ಪುರಾಣ ಎಂದು ಹೆಸರಿಟ್ಟಂತೆ ಕಾಣುತ್ತದೆ. ಕವಿ ಬಿಟ್ಟವರ್ಧನಚರಿತೆ, ಮುಲ್ಲಾಶಾಸ್ತ್ರ ಎಂಬ ಗ್ರಂಥಗಳನ್ನು ಬರೆದಂತೆ ಇದರಲ್ಲಿ ಹೇಳಿದೆ. ಪ್ರತಿಪಾದಿತವಾದ ವಿಷಯಗಳು, ಬೌದ್ಧಮತವಾದುದು, ಯಜ್ಞಾರಂಭವಾದುದು, ರಾಮಾನುಜಮತವಾದುದು, ಕೃಷ್ಣನಿಗೆ ದೇವತ್ವವಾದುದು, ಮುಲ್ಲಾಶಾಸ್ತ್ರವಾದುದು, ಶ್ವೇತಾಂಬರರಾದುದು, ಲಿಂಗಧಾರಣೆಯಾದುದು, ಕೋಮಟಿಗರು ವೈಶ್ಯರಾದುದು, ಪಣಕಟ್ಟು ಮಾಡಿದುದು, ರಾಜಪುತ್ರರಾದುದು, ಹೆಗ್ಗಣಿಗರಾದುದು ಇತ್ಯಾದಿ. ಅಲ್ಲದೆ ಹಿಮಶೀತಳ, ವಿಕ್ರಮರಾಯ, ಶಾಲಿವಾಹನ, ಭೋಜ, ಕೂನಪಾಂಡ್ಯ, ಹೊಯ್ಸಳರಾಯ, ಬಿಜ್ಜಳ, ಬಲ್ಲಾಳ, ಬಿಟ್ಟವರ್ಧನ, ಚಾಮುಂಡರಾಯ ಇವರುಗಳ ವಿಷಯವಾಗಿಯೂ ಕವಿ ತನಗೆ ತೋರಿದ ಒಂದೆರಡು ಮಾತುಗಳನ್ನು ಹೇಳಿದ್ದಾನೆ. ಆರಂಭದಲ್ಲಿ ಜಿನಸ್ತುತಿಯೂ, ಸರಸ್ವತೀಸ್ತುತಿಯೂ ಇವೆ. 1755 ನೆಯ ಜಯವರ್ಷದಲ್ಲಿ (1834) ಕೊಡಗು ಶೈವವಾಯಿತು ಎಂದು ಕವಿ ಹೇಳುತ್ತಾನೆ. ಈ ಗ್ರಂಥದಲ್ಲಿ ಅನುವಾದಮಾಡಲಿಕ್ಕೆ ಯೋಗ್ಯವಾದ ಪದ್ಯಗಳು ನಮಗೆ ದೊರೆಯಲಿಲ್ಲ.

### 6 ಪುರಾಣ ಸ್ತೋತ್ರ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಪದ್ಯ 51. ಇದರೊಳಗೆ ಜಿನರ ಮಾತಾಪಿತೃ ಜನನ ಪುರ ವರ್ಣ ಯಕ್ಷ ಲಾಂಛನ ಕರ್ಮಕ್ಷಯಾವನಿ ಪಂಚಕಲ್ಯಾಣಗಳು ಹೇಳಿವೆ. ಇದರಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ರತ್ನಪುರಿಯಲಿ ಭಾನುನಂದಿನೃಪ ಶುಭದೇವಿ |
ಪತ್ನಿಗುದಿಸಿದ ಕನಕವರ್ಣನಿಕ್ಷ್ವಾಕುಕುಲ |
ರತ್ನ ನಾಲ್ವತ್ತೈದುಬಿಲ್ಲುದಿಯ ವಜ್ರಾಂಕ ದಶಲಕ್ಷವರುಷವೆನಿಪ ||
ನೂತ್ನದಾಯುಷ್ಯ ಕಿನ್ನರಯಕ್ಷ ಯಕ್ಷಿಕುಲ |
ರತ್ನ ಮಾನಸಿಯಿಂದ ಸಮ್ಮೇದಗಿರಿಯಲ್ಲಿ ||
ನೂತ್ನಕರ್ಮವ ಗೆಲಿದ ಧರ್ಮತೀರ್ಥಕರಂಗೆ ನಾಸರ್ಥಗೈವೆ ನಿರುತ ||

### 7 ಮುಲ್ಲಾ ಶಾಸ್ತ್ರ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ ; ಆಶ್ವಾಸ 8, ಪದ್ಯ 400. ಇದರಲ್ಲಿ ಇಂದ್ರನು ಚೇತೊಬ್ಬನಿಗೆ ಗಣಾಧರಪದವಿಯನ್ನು ಕೊಡಲು ಪಾರ್ಶ್ವಭಟ್ಟಾರಕನು ಕೋಪಗೊಂಡು ಮುಲಲ್ಲಶಾಸ್ತ್ರವನ್ನು ಕಲ್ಪಿಸಿ ಪ್ರಚಾರಮಾಡಿದ ಸಂಗತಿ ಹೇಳಿದೆ. ಈ ಗ್ರಂಥವನ್ನು ಕವಿ ತೋವಿನಕೆರೆಯ ಬಸದಿಯಲ್ಲಿ ಬರೆದಂತೆ ಹೇಳುತ್ತಾನೆ. ಆರಂಭದಲ್ಲಿ ಚಂದ್ರನಾಥಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು, ಸರಸ್ವತಿ, ವೃಷಭಸೇನಾದಿ ಗೌತಮಾಂತ ಋಷಿಗಳು, ಪೂಜ್ಯಪಾದ, ಯಕ್ಷಯಕ್ಷಿಯರು ಇವರುಗಳನ್ನು ಕ್ರಮವಾಗಿ ಸ್ತುತಿಸಿದ್ದಾನೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

ಬಸದಿಯೆಂಬುದಕಾಗ ಪ್ರತಿಕರ | ಹೆಸರಮಾಡಿ ಮಸೂತಿಯೆಂದವ |
ನುಸುರಿದನು ಪ್ರಾಕೃತದಿ ಮೋಕ್ಷಕೆ ಮೊಬ್ಬುಮೆಂಬೆಂಬ ||
ಹೆಸರಿಡಲು ಅರಸೀಗರಾಪುರ | ಕೊಸೆದು ಇಟ್ಟನು ಮೊಬ್ಬುಮೆಕ್ಕತಲಿ |
ಅಸಮಸಾಹಸ ಪಾರ್ಶ್ವಭಟ್ಟಾರಕನು ಕೇಳೆಂದ ||
ಅನ್ನವನು ಚರುವೆಂದು ದೇವರ | ಗನ್ನನೈವೇದ್ಯವನು ಮಾಡುತ |
ದಿನ್ನು ಅನುಚಿತಲೀಗ ಚುರಿಮುರಿಯೆಂದು ಅವಲಕ್ಕಿ ||
ಯನ್ನು ಶರ್ಕರೆಸಹಿತ ದೇವರ | ಗನ್ನವಾದಿ ಜುಮ್ಮರಾತ್ರಿಯೊ |
ಳೆನ್ನುತಲಿ ಬೆಸನಿತ್ತ ಸರ್ವರಿಗರಸ ಅಮುಲಲ್ಲಾ ||
ಮುಲ್ಲೆಯೆಂಬಂಕಿತದ ತನ್ನೊಳ | ಗಲ್ಲನೆಂಬಂಕಿತದ ದೇವರೊ |
ಳೆಲ್ಲ ಪಸನ್ಯದೊಳು ಮಾಡಿದ ಮುಸಲಮಾನರನು ||

### 8 ಜಿನರಾಮಾಯಣ

ಇದೂ ಭಾಮಿನೀಷಟ್ಪದಿಯಲ್ಲಿ ಬರೆದಿದೆ ; ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 74 ಆಶ್ವಾಸಗಳೂ (ಪದ್ಯ 4309) 75 ನೆಯ ಆಶ್ವಾಸದಲ್ಲಿ ಕೆಲವು ಪದ್ಯಗಳೂ ಇವೆ. ಗ್ರಂಥವು ಸಾಮಾನ್ಯವಾಗಿದೆ ; ಕವಿತಾಚಮತ್ಕಾರವೇನೂ ಕಾಣುವುದಿಲ್ಲ.

### 9 ಹಿಮಶೀತಳನ ಕಥೆ

ಇದು ಸಾಂಗತ್ಯದಲ್ಲಿ ಬರೆದಿದೆ ; ಪದ್ಯ 87. ಇದಕ್ಕೆ ಅಕಳಂಕಚರಿತೆ ಎಂಬ ಹೆಸರೂ ಉಂಟು. ಇದರಲ್ಲಿ ಅಕಳಂಕನೆಂಬ ಜೈನಗುರು

ಹಿಮಶೀತಳರಾಜನ ಸಭೆಯಲ್ಲಿ ಬೌದ್ಧರನ್ನು ವಾದದಲ್ಲಿ ಸೋಲಿಸಿ ಅವರನ್ನು ದೇಶಭ್ರಷ್ಟರನ್ನಾಗಿ ಮಾಡಿ ಸಿಂಹಳದ್ವೀಪಕ್ಕೆ ಕಳುಹಿಸಿದ ಕಥೆ ಹೇಳಿದೆ. ಇದರಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ—

ಷಣ್ಮತಗಳ ಸಮನಾಗಿ ರಕ್ಷಣೆಗೈಯ್ಯು। ತುಣ್ಮಿಸದಡಗಿಸದೊರ್ವ |
ರಮ್ಮನೋರಾಗದಿ ಹಿಮಶೀತಳೇಶ ಮ | ಹನ್ಮನುತೆಯೊಳಾಳುತಿರ್ದ ||

## 10 ಬಿಟ್ಟವರ್ಧನ ಚರಿತೆ.

ಇದೂ ಸಾಂಗತ್ಯದಲ್ಲಿ ಬರೆದಿದೆ. ಪದ್ಯ 121. ಇದರಲ್ಲಿ ರಾಮಾನುಜ ಗುರು ತೊಣ್ಣೂರಲ್ಲಿ ಬಿಟ್ಟವರ್ಧನ ರಾಜನನ್ನು ವೈಷ್ಣವನನ್ನಾಗಿ ಮಾಡಿದುದೇ ಮುಂತಾದ ವಿಷಯಗಳು ಹೇಳಿವೆ.

ಆರಂಭದಲ್ಲಿ ಚಂದ್ರಪ್ರಭ, ಸರಸ್ವತಿ ಇವರುಗಳ ಸ್ತುತಿ ಇದೆ. ಇದರಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ—

ಈ ಮುನಿಗಳು ಎನ್ನ ಹಸ್ತದಿ ಭಿಕ್ಷವ | ಪ್ರೀತಿಪಡಿಲು ಬಿಟ್ಟವರ |
ರಾಮಾನುಜಾಚಾರ್ಯಶಿಷ್ಯನಾಗುವೆನೆಂದು | ನೇಮವನಿಟ್ಟ ಭೂಭುಜನು ||
ನಾಮಧಾರಿಗಳಿಗೆ ಗುರುಗಳು ಶಿಕ್ಷೆಗೆ | ನೀಮಿಹುದೆಂದುಲಿದಿನ್ನು |
ರಾಮಾನುಜಾಚಾರ್ಯರು ಎಲ್ಲಕೆ ಕುಲ | ಸ್ವಾಮಿಗಳೆಂದು ನೇಮಿಸಿದ ||

---

## ಶ್ರೀನಿವಾಸಕವಿ ಸು. 1812

ಈತನು ಕೃಷ್ಣನೃಪವಿಜಯೋತ್ಕರ್ಷವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಮೈಸೂರು ದೊರೆಯಾದ ಮುಮ್ಮಡಿಕೃಷ್ಣರಾಜನ ಆಶ್ರಿತನು. ಇವನಿಗೆ ಕವಿಸಾರ್ವಭೌಮ ಎಂಬ ಬಿರುದುಂಟು ಈ ಗ್ರಂಥವನ್ನು 1812 ರಲ್ಲಿ ಬರೆದಂತೆ ಹೇಳುತ್ತಾನೆ.

ಇವನ ಗ್ರಂಥ.

### ಕೃಷ್ಣನೃಪವಿಜಯೋತ್ಕರ್ಷ.

ಇದರಲ್ಲಿ 8 ಪದ್ಯಗಳೂ 6 ಗದ್ಯಗಳೂ ಇವೆ. ಇದು ಮುಮ್ಮಡಿ ಕೃಷ್ಣರಾಜನ ಸ್ತುತಿರೂಪವಾದ ಗ್ರಂಥ ವಿರಾಮಭೇದದಿಂದ ಸಂಸ್ಕೃ

ತರೂಪವಾಗಿಯೂ ಕರ್ಣಾಟರೂಪವಾಗಿಯೂ ಇರುವಂತೆ ಕವಿ ಬಹಳ ಚಮತ್ಕಾರದಿಂದ ಈ ಗ್ರಂಥವನ್ನು ರಚಿಸಿದ್ದಾನೆ[1] ಇದರಿಂದ ಸ್ವಲ್ಪ ಭಾಗವನ್ನು ತೆಗೆದು ಬರೆಯುತ್ತೇವೆ—

ಭೂವಲ್ಲಿ | ರಣದಲಿ | ನಿಯತ | ಶಕ್ರಸಮಶ್ರೀಯು | ಆಳಿದ | ಮಹಾವೀರ್ಯ |
ಕೃಷ್ಣನೃಪೇಂದ್ರಫಲಿಸು | ಕೃಪ | ಜಯಾಹರ್ಮೂರ್ತಿನುತಿಲಕ್ಷ್ಮಿಸು | ರಸಿಕವರ ||
ಅವಧಾರಿಸುಮಹನೀಯ | ಮಹಿಮಾಢ್ಯ | ಮಹಸ್ವಿ | ಮಹಿಸೂರಮಹೀ
ಪತಿ | ಮಹಾವಂಶಜನು | ಶ್ರೀಯುಸ್ವಿವಾರ್ಧಿಕಪ್ರಭಾವಹನು | ಕಪೋಲನಾಸಿಕಾ
ದ್ಯವಯವಸೌಂದರ್ಯಶೋಭಿತನು | ಧರಾಧಿಕಾರಯೋಗ್ಯಮಿತಗಂಭೀರಭಾಷಣನು |
ದ್ರುಹಿಣಾಸ್ಯಪ್ರವಿಶಿಷ್ಟಜಗದಲಿ | ಕಾಂತಿಕಾಂತಗತಿಲಕಸಮನು | ವ್ಯವಸ್ಥಿತಶಮದಮನು |
ವಿಹಿತಧರ್ಮನಿಷ್ಠನು | ಶ್ರೀಪ್ರಸಭಾಸನಾಸ್ಥನು | ಪರಮೋಹಹರಬಲವಿಜಯಾಕೃಪಾ
ದಿಮನೋಹರಗುಣಪ್ರವರ್ಧನನು | ಶ್ರುತಿಪರಿಶೀಲನಾಧ್ಯಸ್ಯಧುರುಕ್ಕಾಂಗದವಿಭಾವನೋ
ಚಿತಶುಚಿತರಲಸದಾಸ್ಯನು | ಸಾರಫಲದಾತನು | ಶಾಂತಿವಿಶಿಷ್ಟನು | ತೋಷಿತದೇವ
ಬ್ರಾಹ್ಮಣಪೂಜೋಪಚಾರಫಲದಿಂದದ್ರವ್ಯಬುದ್ಧಿಸಂಪನ್ನನು | ಪ್ರಣಯರಸರಾಶಿದನು |
ಜಾಯಮಾನವಿಪಕ್ಷಗಳಪ್ರಹಾರಕರಣೋದ್ದಾಮಧೀರನು | ದಾಸದಶಾಧ್ಯುಷಿತರಾಜ
ರಾಜೇಂದ್ರನುಂನಘೋಷಗುಣನಿಧಿಭೂತದಯಾಢ್ಯ | ಗೋಪಾಲನೆ | ಕ್ಷೀಣಾಕ್ಷೀಣಕೃತಿ
ವಿಷಯಕ | ಬಹುಚಾತುರ್ಯಗಾರ | ಕಲಿಯುಗಾವತೀರ್ಣಪ್ರತ್ಯಕ್ಷನಯ | ಸದ್ಯೋಧ |
ನೀ | ಧರ್ಮಪಣವಂತನು | ಸಾಮ್ರಾಜ್ಯಧುರಂಧರನು ||

ಸತ್ಯಜಯಾನ್ವಿತರಣವಿಧಿಯಾಗೋ | ವಿಬುಧರ | ತೋರುತ | ನಿಜ | ವನಮಾಲೀ |
ಕೀರ್ತಿಶುಚೀಕೃತದಿಕ್ತಟನಾಗೋ | ವಿಪುಳಮಹಿಮ | ನೀ | ಹಿತಮತಿಶಾಲೀ |

---

1 ರೀತಿಯಾಕ್ಷಿತಿಷು ವಿರಾಮೈಃ ಪ್ರಭವತಿ ಕರ್ಣಾಟವಾಕ್ಯಯಂ ಪತ್ರಂ |
ಸಂಸ್ಕೃತಕೃತಿಸು ಸಿದ್ಧ್ಯತಿ ಬಾಕಾಂಕನಿದರ್ಶಿತೈಃ ಪದವಿಭಾಗೈಃ ||
ಕೃಷ್ಣಜಯೋತ್ಕರ್ಷಾಖ್ಯಾ ಸಂಸ್ಕೃತಕರ್ಣಾಟವಾಗ್ದ್ವಯಶ್ಲಿಷ್ಟಾ |
ಅನ್ಯಾದೃಶೀ ಕೃತಿರಿಯಂ ಸತ್ಪ್ರೀತ್ಯೈ ಶ್ರೀನಿವಾಸರಚಿತಾಸ್ತು ||

ಸ್ವರ್ಗಭಯಮುಳ್ಳಕ | ಭೂಪನಾವಾಂಗಿಯು | ಆರ್ಜವಪೋಷಿತ | ಸಕಲದ್ವಿಜನು |
ಶ್ರೀಕೃಷ್ಣವಿಭೋ | ಮುಖ್ಯಪೂಜಿತಃ | ಪ್ರೇಮಭರಿತ | ನಿರು| ಪರಮಮಾತನು|

— — —

## ಮುಮ್ಮಡಿಕೃಷ್ಣರಾಜ 1794-1868

ಈತನು ನಮಗೆ ತಿಳಿದಮಟ್ಟಿಗೆ (1) ಅಖಂಡಕಾವೇರೀಮಾಹಾತ್ಮ್ಯ (2) ಅಧ್ಯಾತ್ಮರಾಮಾಯಣ, (3) ಅರ್ಕಪುಷ್ಕರಿಣೀಮಾಹಾತ್ಮ್ಯ, (4) ಉತ್ತರಗೀತೆ, (5) ಉತ್ತರರಾಮಚರಿತಕಥೆ, (6) ಉಷಾಪರಿಣಯ, (7) ಕಾದಂಬರಿ, (8) ಕಾಶೀಖಂಡ, (9) ಕೃಷ್ಣಕಥಾರತ್ನಾಕರ, (10) ಕೃಷ್ಣಕಥಾಸಾರಸಂಗ್ರಹ, (11) ಗಯಾಚರಿತ್ರೆ (12) ಚುಂಚನಕಟ್ಟೆಯಮಾಹಾತ್ಮ್ಯ, (13) ಜಾತಕಸಾಮ್ರಾಜ್ಯಟೀಕೆ, (14) ಜೈಮಿನಿಭಾರತದ ಅಶ್ವಮೇಧಿಕಪರ್ವದಟೀಕೆ, (15) ತುಲಾಕಾವೇರೀಮಾಹಾತ್ಮ್ಯ, (16) ದಶಕುಮಾರಕಥಾಕಲಾನಿಧಿ, (17) ದೇವೀಭಾಗವತತಾತ್ಪರ್ಯಟೀಕೆ, (18) ದೇವೀಮಾಹಾತ್ಮ್ಯಸಪ್ತಶತಿ, (19) ದೇವೀಸಾಯುಜ್ಯದಸೀಸಮಾಲಿಕೆ, (20) ನಂಜುಂಡಶತಕ, (21) ನಳೋಪಾಖ್ಯಾನ, (22) ಪಂಚತಂತ್ರ, (23) ಬತ್ತೀಸಪುತ್ಥಳಿಯಕಥೆ, (24) ಬೇತಾಳಪಂಚವಿಂಶತಿ, (25) ಭಕ್ತವಿಲಾಸದರ್ಪಣ, (26) ಭಗವದ್ಗೀತೆ, (27) ಭರತಸಾರಸಂಗ್ರಹಟೀಕೆ, (28) ಭಾಗವತ, (29) ಭಾಮಾಕಥೆ, (30) ಭಾರತ, (31) ಮಾಳವಿಕಾಗ್ನಿಮಿತ್ರೀಯ, (32) ಯಾದವಗಿರಿಮಾಹಾತ್ಮ್ಯ, (33) ರತ್ನಾವಳಿ ಅಥವಾ ವತ್ಸರಾಜನ ಕಥೆ (34) ರಾಮಕಥಾಕಲ್ಪವೃಕ್ಷ, (35) ರಾಮಾಯಣಟೀಕೆ (36) ರಾಮಾಯಣ ತಾತ್ಪರ್ಯದೀಪಿಕಾಟೀಕೆ, (37) ಲಲಿತೋಪಾಖ್ಯಾನ, (38) ಲೈಂಗಪುರಾಣ, (39) ವಿಕ್ರಮೋರ್ವಶೀಯ, (40) ಶಂಕರಸಂಹಿತೆ, (41) ಶಕುಂತಲೋಪಾಖ್ಯಾನ, (42) ಶನೈಶ್ಚರಕಥೆ, (43) ಶುಕಸಪ್ತತಿ (44) ಶ್ರೀಶೈಲಮಾಹಾತ್ಮ್ಯ, (45) ಸೌಗಂಧಿಕಾಪರಿಣಯ (ಪದ್ಯ), (46) ಸೌಗಂಧಿಕಾಪರಿಣಯ (ಗದ್ಯ), (47) ಹರಿವಂಶ (4 ) ಹರಿಶ್ಚಂದ್ರೋಪಾಖ್ಯಾನ, (49) ಹಾಡುಗಳು, (50) ಹಾಲಾಸ್ಯಮಾಹಾತ್ಮ್ಯ — ಈ ಗ್ರಂಥಗಳನ್ನು ಬರೆದಿದ್ದಾನೆ

ಈತನು ಮೈಸೂರುಸಂಸ್ಥಾನದ ಮಹಾರಾಜರಲ್ಲಿ ಒಬ್ಬನು. ಇವನ ತಂದೆ ಚಾಮರಾಜ, ತಾಯಿ ಕೆಂಪನಂಜಾಂಬೆ ಇವನು 1794 ರಲ್ಲಿ ಜನಿಸಿ, 1799 ರಿಂದ 1868 ರ ವರೆಗೆ ರಾಜ್ಯವಾಳಿ, 1868 ರಲ್ಲಿ ಗತಿಸಿದನು. ಮಹಾರಾಜನಾಗಿದ್ದರೂ ವಿದ್ವದ್ಗೋಷ್ಠಿಯಲ್ಲಿ ವಿಶೇಷವಾಗಿ ಕಾಲವನ್ನು ಕಳೆದು ಸಂಸ್ಕೃತದಲ್ಲಿರುವ ಪುರಾಣೇತಿಹಾಸಕಾವ್ಯನಾಟಕಾದಿಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿಯೂ ನೂತನಗ್ರಂಥಗಳನ್ನು ರಚಿಸಿಯೂ ಕನ್ನಡಿಗರಿಗೆ ಮಹೋಪಕಾರವನ್ನು ಮಾಡಿದ್ದಾನೆ. ಕನ್ನಡ, ಸಂಸ್ಕೃತ ಈ ಎರಡು ಭಾಷೆಗಳಲ್ಲಿಯೂ ಈತನಿಗೆ ವಿಶೇಷವಾದ ಪಾಂಡಿತ್ಯವುಂಟು. ದಾತೃತ್ವ, ವಿದ್ವತ್ಪಕ್ಷಪಾತ ಎಂಬ ಗುಣಗಳಿಗೆ ಈತನು ತವರುಮನೆಯಾದ್ದನು. ವಿದ್ವತ್ಪ್ರಭುವಾಗಿ ವಿದ್ವಾಂಸರಿಗೆ ವಿಶೇಷ ಪ್ರೋತ್ಸಾಹಕನಾಗಿದ್ದುದು ಮಾತ್ರವಲ್ಲದೆ ಧರ್ಮೈಕಪರಾಯಣನಾಗಿ ಎಲ್ಲಾ ಮಠಗಳಿಗೂ ದೇವಾಲಯಗಳಿಗೂ ದಾನಗಳನ್ನುಮಾಡಿ ತನ್ನ ಉದಾರಾಶಯವನ್ನು ಪ್ರಕಟಿಸಿರುವನು. ಈ ಗ್ರಂಥಗಳಲ್ಲಿ ಹಲವನ್ನು ಆಸ್ಥಾನಪಂಡಿತರುಗಳಿಗೆ ಸೂಚನೆಗಳನು ಕೊಟ್ಟು ಬರಸಿರಬಹುದು. ಕೆಲವು ಗ್ರಂಥಗಳ ರಚನಾಕಾಲವನ್ನು ಮಾತ್ರ ಹೇಳಿದ್ದಾನೆ. ಶಕ 1738 ರಲ್ಲಿ (1815) ದೇವೀಮಾಹಾತ್ಮ್ಯವನ್ನೂ, ಶಕ 1742 ರಲ್ಲಿ (1820) ಜೈಮಿನಿಭಾರತದ ಅಶ್ವಮೇಧಕ ಪರ್ವಟೀಕೆ, ಹರಿಶ್ಚಂದ್ರೋಪಾಖ್ಯಾನ, ಶಂಕರಸಂಹಿತೆ, ಶುಕಸಪ್ತತಿ ಇವುಗಳನ್ನೂ, ಶಕ 1745 ರಲ್ಲಿ (1823) ಲಲಿತೋಪಾಖ್ಯಾನವನ್ನೂ, ಶಕ 1769 ರಲ್ಲಿ (1847) ಮಾಳವಿಕಾಗ್ನಿಮಿತ್ರೀಯ, ಶಕುಂತಲೋಪಾಖ್ಯಾನ, ಇವುಗಳನ್ನೂ, ಶಕ 1770 ರಲ್ಲಿ (1848) ನಂಜುಂಡಶತಕವನ್ನೂ, ಶಕ 1771 ರಲ್ಲಿ (1849) ಸಂಖ್ಯಾತರತ್ನಮಾಲಾಟೀಕೆಯನ್ನೂ, ಶಕ 1787 ರಲ್ಲಿ (1864) ಕೃಷ್ಣಕಥಾರತ್ನಾಕರವನ್ನೂ, ಶಕ 1790 ರಲ್ಲಿ (1867) ರಾಮಾಯಣಟೀಕೆಯನ್ನೂ ಬರೆದಂತೆ ಆ ಗ್ರಂಥಗಳಿಂದ ತಿಳಿಯುತ್ತದೆ.

ಸ್ವಯಂಕೃತಕವಿತಾವಧೂರತ್ನ, ಉಭಯಕವಿತಾಲಕ್ಷಣವಿಚಕ್ಷಣ ಎಂದು ಕವಿ ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ

ಇವನ ಗ್ರಂಥಗಳು ಪ್ರಾಯಿಕವಾಗಿ ಗದ್ಯರೂಪವಾಗಿವೆ, ಎರಡು ಮೂರುಮಾತ್ರ ಪದ್ಯರೂಪವಾಗಿವೆ, ಹೆಸರುಗಳಿಂದಲೇ ಆಯಾಗ್ರಂಥ

ಗಳಲ್ಲಿ ಪ್ರತಿಪಾದಿತವಾದ ವಿಷಯಗಳು ವ್ಯಕ್ತವಾಗುತ್ತವೆ. ಕೆಲವುಗ್ರಂಥಗಳ ವಿಷಯವಾಗಿ ಮಾತ್ರ ಸ್ವಲ್ಪ ಅಂಶಗಳನ್ನು ಕೆಳಗೆ ತಿಳಿಸುತ್ತೇವೆ—

## 1 ಶಕುಂತಲೋಪಾಖ್ಯಾನ

ಇದಕ್ಕೆ ಶಾಕುಂತಲನಾಟಕ ನವೀನ ಟೀಕೆಯೆಂಬ ಹೆಸರೂ ಉಂಟು. ಈ ನಾಟಕದೊಡನೆ ವಿಕ್ರಮೋರ್ವಶೀಯ, ಮಾಳವಿಕಾಗ್ನಿಮಿತ್ರೀಯ ಎಂಬುವುಗಳನ್ನೂ ಸೇರಿಸಿ ಕಾಳಿದಾಸನ ಈ ನಾಟಕತ್ರಯಕ್ಕೂ ಟೀಕೆಯನ್ನು ಬರೆದು ಒಟ್ಟುಗ್ರಂಥಕ್ಕೆ ಕೃಷ್ಣರಾಜವಾಣೀವಿಲಾಸ ರತ್ನಾಕರ ಎಂಬ ಹೆಸರನ್ನು ಕೊಟ್ಟಿದ್ದಾನೆ. ಪ್ರತಿನಾಟಕವೂ 4 ಕಲ್ಲೋಲಗಳಾಗಿಯೂ ಪ್ರತಿಕಲ್ಲೋಲವೂ 4 ತರಂಗಗಳಾಗಿಯೂ ವಿಭಾಗಿಸಲ್ಪಟ್ಟಿದೆ. ನಾಟಕಗಳ ಕೊನೆಯಲ್ಲಿ ಈ ಗದ್ಯವಿದೆ—

ಚಂಡಕರಮಂಡಲೋಚ್ಚಂಡತೇಜಃಪ್ರಕಾಂಡಕಾಂಡಷಂಡಖಂಡಿತಾಖಂಡಶೌರ್ಯಪರಿಮಂಡಿತಭಂಡನೋದ್ದಂಡಾರಿವೇದಂಡ ಕಂಡರೂಪದೋರ್ದಂಡಪಾಂಡಿತ್ಯ ಪಾಂಡುರುಚಿಖಂಡದೀರ್ಘಪುಂಡರೀಕಪರಿಪಾಂಡುರಯಶಃಪಿಂಡಿಲಬ್ರಹ್ಮಾಂಡಭಾಂಡೋದ್ಭಟಕಾಲಕೂಟಪ್ರತಿಭಟಕಟಕಪಟಪಟುನಿಶಾಟಕೂಟಪಾಟನಲಂಪಟ ನಟಿಲಪುಟಘಟಿತವಿಕಟಕೃಪೀಟಯೋನಿಕಟಿನೋಹಾಂಧಕಾರಚ್ಛಟಾವಿಘಟನಪಟುನಟನ್ನಹಾನಟಮುಕುಟತಟಪರ್ಯಟತ್ತ್ರಟನೀತಟಾಂತರಂಗರಿಂಗದಭಂಗೋತ್ತುಂಗತರಂಗಸಂಗರಭಂಗದಸಂಭ್ರಮೋಜ್ಜೃಂಭಮಾಣಗಂಭೀರವಾಗ್ಗುಂಭಸಂಭಾವಿತ ಗಿರನಗರವರನಿಲಯಚಂದ್ರಚೂಡಶರಣಾರವಿಂದಸೇವಾಮರಂದನಿರಂತರನಿಷೇವಣ ಸ್ವಯಂವ್ಯಕ್ತವಿಗ್ರಾವಧರಿಷ್ಣು ರಾಜಾಧಿರಾಜ ಶ್ರೀ ಚಾಮರಾಜೇಂದ್ರಪುತ್ರಾತ್ರೇಯಸಗೋತ್ರ ಪವಿತ್ರಚರಿತ್ರ ಕೆಂಪನಂಜಮಾಂಬಾಗರ್ಭಕ್ಷೀರಪಾರಾವಾರರಾಕಾಸುಧಾಕರಾಯಮಾನ ಶಂಖಚಕ್ರಮಕರಮತ್ಸ್ಯಶರಭಸಾಳ್ವಗಂಡಭೇರುಂಡಧರಣೀವರಾಹಹನುಮದ್ಗರುಡಕಂಠೀರವಾದ್ಯನೇಕಬಿರುದಾಂಕಿತ ಬಿರುದೆಂತೆಂಬರಗಂಡ ಪ್ರತಾಪಮಾರ್ತಂಡ ಶ್ರೀಚಾಮುಂಡಿಕಾವರಪ್ರಸಾದಲಬ್ಧಸುಮಹೀಶೂರಮಹಾಸಂಸ್ಥಾನಮಧ್ಯವಿದ್ಯೋತಮಾನಹೃದ್ಯಾನವದ್ಯಕುಲಕ್ರಮಾಗತದಿವ್ಯರತ್ನಸಿಂಹಾಸನಾರೂಢೋಭಯಕವಿತಾಲಕ್ಷಣವಿಚಕ್ಷಣ ಶ್ರೀಕೃಷ್ಣರಾಜಕಂಠೀರವರು ಲೋಕೋಪಕಾರಾರ್ಥವಾಗಿ ಸರಸಜನಾನಂದಕರವಾಗಿ ನವರಸಭರಿತವಾಗಿ ಕರ್ಣಾಟಕಭಾಷೆಯಿಂ ವಿರಚಿಸಿದ ಕೃಷ್ಣರಾಜವಾಣೀವಿಲಾಸರತ್ನಾಕರದೊಳ್.

## 2 ವತ್ಸರಾಜನ ಕಥೆ.

ಇದರಲ್ಲಿ ರತ್ನಾವಳೀನಾಟಕದ ಕಥೆ ವಿಸ್ತಾರವಾಗಿ ಹೇಳಿದೆ. ಇದಕ್ಕೆ ಕೃಷ್ಣರಾಜಸೂಕ್ತಿಮುಕ್ತಾವಳಿ ಎಂದು ನಾಮಾಂತರವು. ಗ್ರಂಥವು 70 ಗುಚ್ಛಗಳಾಗಿ ಭಾಗಿಸಲ್ಪಟ್ಟಿದೆ. ಗ್ರಂಥಾಂತ್ಯದಲ್ಲಿ ಈ ಪದ್ಯವಿದೆ —

ಚಾಮಕ್ಷಿತಿಪತಿಸುತ ಸು | ತ್ರಾಮಾಧಿಕ ಕೆಂಪನಂಜಮಾಂಬಾಸುತನು |
ದ್ದಾಮ ಶ್ರೀಕೃಷ್ಣೇಂದ್ರಂ | ಭೂಮೀಶ್ವರವತ್ಸರಾಜಕಥೆಯುಂ ಪೇಳ್ದಂ ||

## 3 ರಾಮಕಥಾಕಲ್ಪವೃಕ್ಷ

ಇದಕ್ಕೆ ಸಾರಸಂಗ್ರಹಶ್ರೀರಾಮಕಥಾಕಲ್ಪವೃಕ್ಷ ಎಂಬುದು ಪೂರ್ಣವಾದ ಹೆಸರು. ಇದು 4 ಸ್ತಬಕಗಳಾಗಿ ಭಾಗಿಸಲ್ಪಟ್ಟಿದೆ. ಶ್ರೀಮದ್ರಾಮಾಯಣ, ವಿಷ್ಣುಪುರಾಣ, ಪಾದ್ಮಪುರಾಣ ಕೂರ್ಮಪುರಾಣ, ಅಧ್ಯಾತ್ಮರಾಮಾಯಣ, ಶಿವಧರ್ಮೋತ್ತರ, ವಿಷ್ಣುಧರ್ಮೋತ್ತರ, ಜೈಮಿನ್ಯಾದಿಗ್ರಂಥಗಳಲ್ಲಿರುವ ಅನೇಕವಿಧವಾದ ರಾಮಕಥೆಗಳನ್ನು ಪರಿಶೋಧನೆಮಾಡಿ ಸಾರವನ್ನು ಸಂಗ್ರಹಿಸಿ ಲೋಕೋಪಕಾರಾರ್ಥವಾಗಿ ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳುತ್ತಾನೆ.

## 4 ಕೃಷ್ಣಕಥಾರತ್ನಾಕರ

ಇದು 12 ತರಂಗಗಳಾಗಿ ಭಾಗಿಸಲ್ಪಟ್ಟಿದೆ. ಇದರಲ್ಲಿ ಕವಿ ಭಾಗವತದಶಮಸ್ಕಂಧ, ವಿಷ್ಣುಪುರಾಣ, ಹರಿವಂಶ, ಭಾರತಾದ್ಯನೇಕ ಗ್ರಂಥಗಳನ್ನು ಪರಿಶೋಧನೆಗೈದು ಸಾರವನ್ನು ಸಂಗ್ರಹಿಸಿದ್ದಾನೆ

## 5 ರಾಮಾಯಣತಾತ್ಪರ್ಯದೀಪಿಕಾಟೀಕೆ

ಇದರ "ಶ್ರೀಮದ್ರಾಮಾಯಣದೊಳ' ಆಯಾಸ್ಥಳದಲ್ಲಿ ವಾಲ್ಮೀಕಿಮುನೀಶ್ವರನಿಂದ ಗೂಢವಾಗಿ ಸೂಚಿಸಲ್ಪಟ್ಟ ಆಯಾ ತಾತ್ಪರ್ಯಂಗಳಂ ಸ್ಪಷ್ಟವಾಗಿ ನಿರೂಪಿಸಿರುವ ಶ್ರೀ ರಾಮಾಯಣತಾತ್ಪರ್ಯದೀಪಿಕೆಯಂ ಕರ್ಣಾಟಭಾಷೆಯಿಂದ ವಿವರಿಸಿದೆ. ಅಲ್ಲದೆ ಶ್ರೀರಾಮಾವತಾರದಲ್ಲಿ ಜನನವಂ ಮೊದಲುಗೊಂಡು ಆಯಾಕಾಲದಲ್ಲಿ ನಡೆದ ವ್ಯಾಪಾರಂಗಳಿಗೆ ಕಾಲನಿರ್ಣಯವಂ ವಿಶೇಷವಾಗಿ ವಿಸ್ತರಿಸಿ ಪೂರ್ವಕರಾದ ಗ್ರಂಥಕಾರರು ಬರೆದಿರುವ ದೀಪಿಕೆ, ರಾಮಾಯಣಸಂಗ್ರಹದೀಪಿಕೆ, ರಾಮಾಯಣತಾತ್ಪರ್ಯವಿರೋಧ

ಭಂಜಿನಿ, ಪರಶುರಾಮೀಯ ಮೊದಲಾದ ಪ್ರಾಚೀನ ಗ್ರಂಥಂಗಳಂ ಚೆನ್ನಾಗಿ ಪರಿಶೋಧಿಸಿ ಕರ್ಣಾಟಕಭಾಷೆಯಿಂದ ವಿವರಿಸಿರೆ."

6 ಸಂಖ್ಯಾರತ್ನಮಾಲಾ ಟೀಕೆ

ಇದರಲ್ಲಿ 1 ರಿಂದ 120 ರ ವರೆಗೆ ಸಂಖ್ಯಾನಾಮಾವಳಿ ಅಲ್ಲಲ್ಲಿ ಕನ್ನಡದ ಅರ್ಥದೊಡನೆ ಹೇಳಿದೆ.

7 ಭಾಗವತ

ಭಾಗವತಪುರಾಣಕ್ಕೆ ಶ್ರೀಧರೀಯ ವ್ಯಾಖ್ಯಾನಾನುಸಾರವಾಗಿ ಬುಧ ಜನಸಮ್ಮತಿಯಿಂದ ರಚಿಸಿದ ಕೃಷ್ಣರಾಜವಾಣೀವಿಲಾಸವೆಂಬ ಕರ್ಣಾಟಕಭಾಷಾ ಟೀಕೆ.

8 ಸೌಗಂಧಿಕಾಪರಿಣಯ

ಈ ಗ್ರಂಥವನ್ನು ಕವಿ ಪದ್ಯರೂಪವಾಗಿಯೂ ಗದ್ಯರೂಪವಾಗಿಯೂ ರಚಿಸಿದ್ದಾನೆ. ಪದ್ಯಗ್ರಂಥವು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 100, ಪದ್ಯ 6040. ಗದ್ಯಗ್ರಂಥವು 36 ಆಶ್ವಾಸಗಳಾಗಿ ಭಾಗಿಸಲ್ಪಟ್ಟಿದೆ ಇದಕ್ಕೆ ಸಂಕ್ಷೇಪಸೌಗಂಧಿಕಾಪರಿಣಯ ಎಂಬ ಹೆಸರೂ ಇರುವಂತೆ ತೋರುತ್ತದೆ "ಇಂದ್ರನು ದೂರ್ವಾಸಮುನಿಯ ಶಾಪದಿಂದ ರತ್ನಪುರಿಯ ರಾಜನಾದ ಸುಚರಿತ್ರನಿಗೂ ಆವನ ರಾಣಿ ಗುಣವತಿಗೂ ಸುಗಂಧರಾಯನೆಂಬ ಹೆಸರಿನಿಂದ ಮಗನಾಗಿ ಹುಟ್ಟಿ ಸೌಗಂಧಿಕೆಯಾಗಿ ಹುಟ್ಟಿದ ಶಚೀದೇವಿಯನ್ನು ಮದುವೆಯಾಗಿ ಕೊನೆಗೆ ತನ್ನ ಪದವಿಯನ್ನು ಹೊಂದುತ್ತಾನೆ"—ಇದೇ ಕಥಾಗರ್ಭ ಪದ್ಯಗ್ರಂಥದ ಆರಂಭದಲ್ಲಿ ಚಾಮುಂಡಿಕೆ, ನಂಜುಡೇಶ್ವರ ಇವರುಗಳ ಸ್ತುತಿ ಇದೆ ಈ ಕಥೆಯನ್ನೇ ಸಂಗ್ರಹವಾಗಿ ಕವಿಯ ಅಜ್ಞಾನುಸಾರ ದೇವಲಾಪುರದ ನಂಜುಂಡನು ಸಾಂಗತ್ಯದಲ್ಲಿ ಬರೆದಿದ್ದಾನೆ.

9 ದೇವೀಮಾಹಾತ್ಮ್ಯ

ಇದರಲ್ಲಿ ಮಾರ್ಕಂಡೇಯಪುರಾಣದೊಳಗೆ ಪ್ರಸಿದ್ಧವಾಗಿ ದೇವೀಮಾಹಾತ್ಮ್ಯಪ್ರಕಾಶಕವಾದ ಸಪ್ತಶತಿಯೆಂಬ ಮಹಾಮಂತ್ರಾರ್ಥವು ವಿವರಿಸಿದೆ.

### 10 ಶಂಕರಸಂಹಿತೆ

ಇದು ಸ್ಕಾಂದಪುರಾಣಾಂತರ್ಗತವಾದ ಶಂಕರಸಂಹಿತೆಯು ಏವರಣ, ಸಂಭವ, ಅಸುರ, ವೀರಮಹೇಂದ್ರ, ಯುದ್ಧ, ದೇವ, ದಕ್ಷ, ಉಪದೇಶ ಎಂಬ 7 ಕಾಂಡಗಳಾಗಿ ಭಾಗಿಸಲ್ಪಟ್ಟಿದೆ.

### 11 ಭರತಸಾರಸಂಗ್ರಹ ಟೀಕೆ

ಇದರಲ್ಲಿ ಸಂಗೀತ, ನಾಟ್ಯ ಮುಂತಾದ ವಿಷಯಗಳು ಹೇಳುವ ಅನೇಕ ಪೂರ್ವಗ್ರಂಥಗಳನ್ನು ನೋಡಿ ಸಾರವನ್ನು ಸಂಗ್ರಹಿಸಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ[1]

### 12 ಹರಿಶ್ಚಂದ್ರೋಪಾಖ್ಯಾನ

ಭಾರತದ ಅರಣ್ಯಪರ್ವದಲ್ಲಿರುವ ಹರಿಶ್ಚಂದ್ರೋಪಾಖ್ಯಾನಕ್ಕೆ ಸಕಲವ್ಯಾಖ್ಯಾನಾನುಸಾರವಾಗಿ ಬುಧಜನಸಮ್ಮತಿಯಿಂದ ರಚಿಸಿದ ಕರ್ಣಾಟಕ ಭಾಷಾವ್ಯಾಖ್ಯಾನ

### 13 ಅಧ್ಯಾತ್ಮರಾಮಾಯಣ

ಬ್ರಹ್ಮಾಂಡಪುರಾಣದಲ್ಲಿ ಉಮಾಮಹೇಶ್ವರಸಂವಾದರೂಪವಾದ ಅಧ್ಯಾತ್ಮರಾಮಾಯಣದ ವಿವರಣ ಆರಂಭದಲ್ಲಿ ಮೈಸೂರುರಾಜರ ಚರಿತ್ರೆ ಸಂಗ್ರಹವಾಗಿ ಹೇಳಿದೆ

"ಹೀಗೆ ಪ್ರಸಿದ್ಧವಾದ ತಪೋಮಹಿಮೆಯುಳ್ಳ ಶ್ರೀಕೃಷ್ಣರಾಜಒಡೆಯರವರು ಅಧ್ಯಾತ್ಮರಾಮಾಯಣವು ಸರ್ವರಿಗೂ ಆನಂದವನ್ನುಂಟುಮಾಡುವುದು, ಸಕಲಪುಣ್ಯಫಲಂಗಳನ್ನು ಕೊಡುವುದು ಎಂದು ನಿಜಬುದ್ಧಿಯಿಂದ ಆಲೋಚಿಸಿ ಮನೋಹರವಾದ ಕನ್ನಡಭಾಷೆಯಿಂದ ಶೃಂಗಾರರಸ ಮುಂತಾದ ನವರಸಗಳಿಂದ ತುಂಬಿರುವ ಸದ್ಯುಕ್ತಿಗಳೆಂಬ ತೆರೆಗಳಿಂದೆಸೆಯುವ ನದಿಯೋಪಾದಿಯುಳ್ಳಿರುವ ಟೀಕೆಯನ್ನು ಸಜ್ಜನಸಮೂಹಕ್ಕೆ ಸಂತೋಷವನ್ನುಂಟುಮಾಡುವುದಕ್ಕೋಸ್ಕರ ರಚಿಸುವರು"

ಕೊನೆಯಲ್ಲಿ ಇದೇ ತಾತ್ಪರ್ಯವನ್ನು ಒಳಕೊಂಡ ಒಂದು ಸಂಸ್ಕೃತ ಶ್ಲೋಕವೂ ಇದೆ[2]. ಕಾಂಡ 7, ಸರ್ಗ 65; ಗ್ರಂಥಸಂಖ್ಯೆ 8500.

---

1 ಪೂರ್ವಸೂರ್ಯೈರ್ಭರತಾಚಾರ್ಯೈರ್ಯದುಕ್ತಂ ಗ್ರಂಥಕೋಟಿಷು
ತೇಷಾಂ ಸಾರಂ ಸಮುದ್ಧೃತ್ಯ ಸಂಕ್ಷೇಪೇಣ ಕರೋಮ್ಯಹಂ ॥

2 ಅಮುನಾ ಕಿಲ ಲೋಕರಂಜನಾರ್ಥಂ ನಯನಾನಂದಕರೇಣ ಕೃಷ್ಣನಾಮ್ನಾ
ಯದುನಾಥವರೇಣ ನಿರ್ಮಿತೇಯಂ ವರಕರ್ಣಾಟಕಭಾಷಯಾಸ್ಯ ಟೀಕಾ ।

## 14 ಭಾಮಾಕಥೆ

ಇದು ಯಕ್ಷಗಾನ. ಇದರಲ್ಲಿ ಪಾರಿಜಾತಾಪಹರಣದ ಕಥೆ ಹೇಳಿದೆ. ಈ ಅಂಶವು ಈ ಪದ್ಯದಿಂದ ವ್ಯಕ್ತವಾಗುತ್ತದೆ.—

ಶ್ರೀಪತಿ ಕೃಷ್ಣಸ್ವಾಮಿಯಂ | ಶ್ರೀಪದದ ರಚಿಸಿದ ಮಧುರವಾಕ್ಯಗಳಿಂದಂ |
ಭೂಪಾಲಕರೆಲ್ಲ ಕೇಳ್ವಂ | ತೋಮಲಪದಮನುಪಾರಿಜಾತದ ಕಥೆಯಂ ||

## 15 ನಂಜುಂಡಶತಕ

ಇದರಲ್ಲಿ 100 ಕಂದಗಳಿವೆ; ಪ್ರತಿಕಂದವೂ "ಶ್ರೀನಂಜುಂಡ" ಎಂದು ಮುಗಿಯುತ್ತದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ.—

ಹೆಂಡಿಂದಂ ಯೌವನದಾ | ಬ್ಬರದಿಂದಂ ದುಷ್ಟಜನರ ಸಹವಾಸಗಳಿಂ |
ಪರಮಾತ್ಮನೆ ನಿನ್ನಯ ಪದ | ಸರಸಿಜವಂ ಭಜಿಸಲಿಲ್ಲ ಶ್ರೀ ನಂಜುಂಡಾ ||
ಗಳಿಗೋಗಳಿಗಳಗಳಿಗೆಗಳಿಂ | ದೊಳಪೊಕ್ಕದರಾಗಿ ಪೂವಿನಂಬುಗಳಿಂದಂ |
ಘಳಿಲನೆ ಪೂಜಿಸಂ ಗಿಜನಂ | ನಕಟನಿ ಪಸೆಗಿನ್ನೊಂದೆ ಶ್ರೀ ನಂಜುಂಡಾ ||

## 16 ಭಾರತ

ಇದು ಮಹಾಭಾರತದ ಕನ್ನಡಟೀಕೆ. ಇದಕ್ಕೆ ಕೃಷ್ಣರಾಜವಾಣೀವಿಲಾಸ ಎಂದು ಹೆಸರು. ಇದನ್ನು ಶಕ 1742 (1820) ರಲ್ಲಿ ಆರಂಭಿಸಿದಂತೆ ತಿಳಿಯುತ್ತದೆ. ಆರಂಭದಲ್ಲಿ ನಂಜುಂಡೇಶ್ವರ, ಚಂದ್ರ ಇವರ ಸ್ತುತಿ ಇದೆ. ಬಳಿಕ ಟೀಕೆ ಹೀಗೆ ಆರಂಭಿಸುತ್ತದೆ —

ಶ್ರೀಮತ್ಸಮಸ್ತಭೂಮಂಡಲಮಂಡನಾಯಮಾನ ನಿಖಿಲದೇಶಾವತಂಸಕರ್ಣಾಟಕಜನಪದಸಂಪದಧಿಷ್ಠಾನಭೂತ ಶ್ರೀಮನ್ಮಹೀಶೂರಮಹಾಸಂಸ್ಥಾನಮಧ್ಯದೇದೀಪ್ಯಮಾನಾವಿಕಲಕಲಾನಿಧಿಕುಲಪ್ರದೀಪ ರಾಜಕೀರ್ತಿಪಾಲಪ್ರಮುಖನಿಖಿಲರಾಜಾಧಿರಾಜಮಹಾರಾಜಚಕ್ರವರ್ತಿಮಂಡಲಾನುಭೂತದಿವ್ಯರತ್ನಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜರಾಜಪರಮೇಶ್ವರ ಪ್ರೌಢಪ್ರತಾಪಾಪ್ರತಿಮವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರಕಲಾನಿಧಿ ಶಂಖಚಕ್ರಾಂಕುಶಕುಠಾರಮಕರಮತ್ಸ್ಯಶರಭಸಾಳ್ವಗಂಡಭೇರುಂಡಧರಣೀವರಾಹಹನುಮದ್ಗರುಡ ಕಂಠೀರವಾದ್ಯನೇಕವಿರುದಾಂಕಿತ ಶ್ರೀಚಾಮರಾಜಮಹೀಪಾಲ ಧರ್ಮಪತ್ನೀ ಶ್ರೀಕೆಂಪನಂಜಾಂಬಾಗರ್ಭಸುಧಾಂಬುನಿಧಿಪೂರ್ಣಸುಧಾಕರ ... ಶ್ರೀಚಾಮುಂಡಿಕಾಂಬಾವರಪ್ರ

ಸಾದೋದ್ಭವರಾದ ಆತ್ರೇಯಸಗೋತ್ರಆಶ್ವಲಾಯನಸೂತ್ರಋಕ್ಶಾಖಾನುವರ್ತಿಗಳಾದ ಶ್ರೀಮನ್ಮಹೀಶೂರಪುರವರಾಧೀಶ ಶ್ರೀಕೃಷ್ಣರಾಜಒಡೆಯರವರು ಲೋಕಪ್ರಸಿದ್ಧವಾದ ಶ್ರೀಮನ್ಮಹಾಭಾರತವನ್ನು ಬುಧಜನಪ್ರೀತಿಯಿಂದ ಕರ್ಣಾಟಕಭಾಷಾವಚನರಚನೆಯುಳ್ಳ ಶ್ರೀಮತ್ಕೃಷ್ಣರಾಜವಾಣೀವಿಲಾಸವೆಂಬ ಅಂಕಿತದಿಂದ ಎನ್ನಿಸುವುದರಲ್ಲಿ ಆದಿಪರ್ವವನ್ನು ನಿರೂಪಿಸುವದೆಂತೆನೆ.

ಈ ರಾಜನು ಬರೆದಿರುವ ಇನ್ನೂ ಅನೇಕಗ್ರಂಥಗಳಲ್ಲಿ ಇವನ ಬಿರುದಾವಳಿ ಈ ರೀತಿಯಾಗಿಯೇ ಹೇಳಿದೆ. ಭಾರತವಲ್ಲದೆ ಇನ್ನೂ ಹಲವುಗ್ರಂಥಗಳಿಗೆ ಕೃಷ್ಣರಾಜವಾಣೀವಿಲಾಸ ಎಂಬ ಅಂಕಿತವಿದೆ.

## 17 ಹಾಡುಗಳು

ವೈರಾಗ್ಯದ ಹಾಡುಗಳು, ಅನುಭವಪಂಚರತ್ನ ಎಂಬ ಪತ್ರಕೃತಿ ಕೃತವಾದ್ಯ ಕೆಲವು ಹಾಡುಗಳು ದೊರೆಯುತ್ತವೆ. ಇವುಗಳಲ್ಲೆಲ್ಲಾ ಚಾಮುಂಡಿಯ ಅಂಕಿತವಿದೆ. ಒಂದೆರಡನ್ನು ಉದಾಹರಿಸುತ್ತೇವೆ—

ರಾಗ ಭೈರವಿ.

ಪಲ್ಲವಿ|| ಮಾಡಿಮಾಡಿ ಮೋಸಹೋದೆ|ಆಡಿಯಾಡಿ ದುಷ್ಟರೊಡನೆ |
ಬಾಡನೂ ತಿಳಿಯದೆ|ಕೂಡಿ ಮನ್ನ ಕಾರ್ಯಗಳ ನಾ ||
ಧನವ ಬಹಳ ಸೂರೆಮಾಡಿ | ಮನಸಿನಲ್ಲಿ ಮಾನರತಿಯ |
ಗನಸಿನಲ್ಲು ನೆನಸಿನಲ್ಲಿ | ತನುವೆಲ್ಲ ಬಳಲಿಸುತ ನಾ ||೧||
ಬಂಧುಜನರು ಬಯಸಿದ ದಿನ | ತಂದುಕೊಟ್ಟು ಹಿತಕರಿಂದ |
ಬಂಧದೊಳಗೆ ಸಿಲುಕಿ ಬಿಡದೆ | ಹಿಂದುಮುಂದು ತಿಳಿಯದೆ ನಾ ||೨||
ನೇಮಗಳನು ತ್ಯಜಿಸಿ ಹರನ | ನಾಮಭಜನೆಮಾಡದಲ್ಲೆ |
ಕಾಮಮೋಹಲೋಭದಿಂದ | ಚಾಮುಂಡಿಯನು ಸ್ಮರಿಸದೆ ನಾ ||೩||

ಅನುಭವಪಂಚರತ್ನದಲ್ಲಿ ಒಂದು

ರೂಪುಯವ್ವನವು ಧನದ ಬಲುಸಿರಿಯೆರಡು ನೋಡುತ್ತಿರೆ |
ಕೂಡುವ ಉಪಚಾರಗಳ ಹಲವುಬಗೆಯಾಗಿ ಮಾಳ್ಪರು |
ಸ್ತ್ರೀಸುತರು ಸರ್ವರೂ ಅದು ಕಂಡು ಸೇವಿಸಿಕೊಂಬುವರು |
ಮಾನಿನೀಮಣಿ ಕೇಳು ವಿಧಿಬಲವ ತಪ್ಪಿಸಲರಿಯರು |
ಬೊಮ್ಮ ಬರೆದ ಬರಹದಂತೆ ಕಡೆಗೆ ಆಗುವುದು ಕೇಳ್ ಸತ್ಯದಿಂ |

ಮೊದಲುವಿನದ ಬಾಯಿಗೆ ಮಾನವರು ಹಮ್ಮನ್ನಾಡಿ ಫಲವೇನು |
ಶಿವನಾಣೆ ತಾನು ಮಾಡಿದ ಪುಣ್ಯದಂತನುಭವಿಸುವನು | ಶ್ರೀ ಚಾಮುಂಡಿ
ದಯದಿ ||

---

## ಚಾರುಕೀರ್ತಿ ಪಂಡಿತ. 1815.

ಈತನು ಭವ್ಯಜನಚಿಂತಾಮಣಿಯನ್ನು ಬರೆದಿದ್ದಾನೆ. ಇವನು ಜೈನಕವಿ, ಶ್ರವಣಬೆಳ್ಗೊಳದ ಮಠದ ಸ್ವಾಮಿಯಾಗಿದ್ದಂತೆ ತೋರುತ್ತದೆ. ಈ ಗ್ರಂಥವನ್ನು ಶಕ 1737 ನೆಯ ಯುವ ವರ್ಷದಲ್ಲಿ–ಎಂದರೆ 1815 ರಲ್ಲಿ–ರಚಿಸಿದಂತೆ ಹೇಳುತ್ತಾನೆ.

ಇವನ ಗ್ರಂಥ —

### ಭವ್ಯಜನಚಿಂತಾಮಣಿ

ಇದು ಚಂಪೂರೂಪವಾಗಿದೆ, ಆಶ್ವಾಸ 16. ಇದರಲ್ಲಿ "ಜಿನಾರ್ಚನೆಯೊಳಗೊಂದೊಂದರ ಸುಮಹಿಮನ್ವಿದಿನ ಕಥೆಯಂ ಪೇಳ್ವೆಂ" ಎಂದು ಕವಿ ಹೇಳುತ್ತಾನೆ. ಬೆಳ್ಗೊಳದ ಬಾಹುಬಲಿಸನ್ನಿಧಿಯಲ್ಲಿ ಗ್ರಂಥವು ಪೂರ್ಣವಾದಂತೆ ತಿಳಿಯುತ್ತದೆ. ಗ್ರಂಥದ ಕೊನೆಯಲ್ಲಿ ಚಂದ್ರನಾಗದ ವರ್ಣ ಇದನ್ನು 1815 ರಲ್ಲಿ ಶ್ರವಣಬೆಳ್ಗೊಳದ ಮಠಕ್ಕೆ ಪ್ರತಿಮಾಡಿದಂತೆ ಹೇಳಿದೆ. ಗ್ರಂಥಾವತಾರದಲ್ಲಿ ಜಿನಸ್ತುತಿಯೂ ಅನಂತರ ಸಿದ್ಧಾದಿಗಳು, ಗೊಮ್ಮಟ, ಸರಸ್ವತಿ ಇವರುಗಳ ಸ್ತುತಿಯೂ ಇವೆ. ಆಶ್ವಾಸಗಳ ಅಂತ್ಯದಲ್ಲಿ ಈ ಗದ್ಯವಿದೆ.—

ಇದು ವಿನಮದಮರೇಂದ್ರಮಕುಟಕೋಟಿಘಟಿತಮಣಿಗಣಕಿರಣಮಾಲಾಪ್ರಬಂಧ ಶ್ರೀಮದ್ಭಗವಚ್ಚಾರುಚರಣಾರವಿಂದದ್ವಂದ್ವವಂದಿತ ಮತ್ತಮಧುಕರಾಯಮಾನ ಶ್ರೀಮಚ್ಚಾರುಕೀರ್ತಿಪಂಡಿತಾಚಾರ್ಯವಿರಚಿತಮಪ್ಪ ಭವ್ಯಜನಚಿಂತಾಮಣಿಯೊಳ್

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಪಲ್ಲವಪುರ

ಬೆಳೆಯಿಂದ ಕಬ್ಬಿಂದ ಕೊಳಗಳಿಂದ ಸಕಲಾ | ನೆಳೆನಾರಂಗಳಿಂದ ತೋಟ
ಸುಶೋಭಿಪ |
ಕೆಳೆಗೊಂಡು ತಿಂಗಳುತಿರುಳಾದೇಶದಗಲಾ | ತೊಳವಾಗಿ ಕಣ್ಗೆಸೆಯುಪಟ್ಟಣಂತೆ
ಯಿರಲಾ ||

ಲೋಕಕಕೆಯುತಿಶಯುಸಿಂಗರ | ಕಾಕಂವಾಗಿರುವ ದೇಶಲಕ್ಷ್ಮಿಯ ಮುಖವೆಂ |
ಬಾಕರದಿಂ ಪಲ್ಲವಪುರ | ಶ್ರೀಕಾಂತಯು ನಿಳಯುವೆನಲು ರಾಜಿಸುತಿರ್ಪುದು ||

ವೃತ್ತ

ಪಿರಿಯುಲ್ಬಾರದುವೃತ್ತಗಳ | ನಡಸುವ ಶಕ್ತಿಯನು ನೋಡಿಪಿಡಿವುದು ವಿಘ್ನಗ||
ಕಿಡಸಲ್ ಬಿಡಬಾರದು ಅದೆ | ಧೃಢತಪಪದಿಗವುದನೇಯುಸಂವ್ಯಕ್ತ್ವಗಳು ||

ಗುರುಪ್ರಾರ್ಥನೆ

ಅಱಿಯದಜ್ಞಾನದೊಳು ಹೆಱಯುವನು ಮಾಡಿ |
ಸಂಳುತಿಹೆ ನಾ ಗೆ... ಪಾಪ ಕೈಗೂಡಿ |
ಪರಿಹರಿಸು ಆಂಪುತ್ರವೇಕದೊಳು ನೋಡಿ |
ಹರಸುತಿರು ಪರಮಗುರುವೆನ ಗೆದಯುಪಾಡಿ ||

---

ಶಾಂತರಾಜ ಪಂಡಿತ. 1820

ಈತನು ಲಕ್ಷ್ಮೀದೇವಿಗೆ ಹೂಮುಡಿಸುವ ಹಾಡುಗಳನ್ನು ಬರೆದಿದ್ದಾನೆ. ಇವನು ಜೈನಕವಿ ಸಂಸ್ಕೃತದಲ್ಲಿ 'ಸರಸಜನಚಿಂತಾಮಣಿ' ಎಂಬ ದೊಡ್ಡ ಕಾವ್ಯವನ್ನು ಬರೆದಿದ್ದಾನೆ. ಇದು 1820ರಲ್ಲಿ ರಚಿತವಾಯಿತು. ಈ ಗ್ರಂಥದಿಂದ ಕವಿಯ ವಿಷಯವಾಗಿ ಈ ಅಂಶಗಳು ತಿಳಿಯುತ್ತವೆ.—ಇವನ ತಂದೆ ಪದ್ಮಪಂಡಿತ, ತಾಯಿ ಕೆಂಪದೇವಮ್ಮ, ಹೆಂಡತಿ ಚೆಲುವಮ್ಮ, ಶ್ವಶುರ ಬ್ರಹ್ಮದೇವ, ಮಾತುಲ ದೊಡ್ಡಯ್ಯ; ಬಿರುದುಗಳು ಅಸಾಧಾರಣಕಲಿಯುಗ ಪ್ರಥಮದಾಕ್ಷಿಣಾತ್ಯ ಕವಿಚಕ್ರವರ್ತಿ, ಮಹಾಕವಿ ಧರ್ಮಚಕ್ರವರ್ತಿ. ಶ್ರವಣಬೆಳ್ಗೊಳದ ಚಾರುಕೀರ್ತಿಪಂಡಿತನು ಈತನಿಗೆ ಕೊಡುತ್ತಿದ್ದ ವರ್ಷಾಶನವನ್ನು ಮೈಸೂರುದೇವರಾಜನು ತಾನೇ ಕೊಡುವುದಾಗಿ ಒಪ್ಪಿಕೊಂಡಂತೆ ತಿಳಿಯುತ್ತದೆ. ಈ ಹಾಡುಗಳ ಅಂತ್ಯದಲ್ಲಿ ಮೈಸೂರುರಾಜನಾದ ಮುಮ್ಮಡಿ ಕೃಷ್ಣರಾಜನಿಗೆ ಮಂಗಳವಾಗಲಿ ಎಂದಿರುವುದರಿಂದ ಈತನು ಆ ದೊರೆಯ ಆಶ್ರಿತನಾಗಿದ್ದಿರಬಹುದು[1].

1. ಈತ ಶಕ 1684 ಸ್ವಭಾನುವಿನಲ್ಲಿ (1763) ಹುಟ್ಟಿದಂತೆ ತಿಳಿಯುತ್ತದೆ. ಅಲ್ಲದೆ ಇವನು 1789ರಲ್ಲಿ ಶಾಕಟಾಯನಪ್ರಕ್ರಿಯಾಸಂಗ್ರಹವನ್ನೂ 1804 ರಲ್ಲಿ ಲೋಕವಿಭಾಗವನ್ನೂ 1808ರಲ್ಲಿ ವೃತ್ತರತ್ನಾಕರವ್ಯಾಖ್ಯೆಯನ್ನೂ ಪ್ರತಿಮಾಡಿದಂತೆ ನಮಗೆ ದೊರೆತ ಆ ಗ್ರಂಥಗಳ ಪ್ರತಿಗಳಿಂದ ತಿಳಿಯುತ್ತದೆ. ಮತ್ತು ತೆರಕಣಾಂಬಿಯ ನೇಮಿಚಂದ್ರನು ಈತಗೋಸ್ಕರ 1804ರಲ್ಲಿ ಜೈನೇಂದ್ರವ್ಯಾಕರಣ ಪ್ರಕ್ರಿಯಾವತಾರವನ್ನೂ, 1807 ರಲ್ಲಿ ಉತ್ತರಪುರಾಣವನ್ನೂ ಪ್ರತಿಮಾಡಿದಂತೆ ನಮಗೆ ದೊರೆತ ಆ ಗ್ರಂಥಗಳ ಪ್ರತಿಗಳಿಂದ ತಿಳಿದುಬರುತ್ತದೆ.

ಇವನ ಗ್ರಂಥ--

ಲಕ್ಷ್ಮೀದೇವಿಗೆ ಹೂಮುಡಿಸುವ ಹಾಡುಗಳು

ಇದರಿಂದ ಒಂದೆರಡು ನುಡಿಗಳನ್ನು ತೆಗೆದು ಬರೆಯುತ್ತೇವೆ.—

ಇಂಪುಗಾರ್ತಿಯರಂದಗಾರ್ತಿಯರಾಣ್ಮಗೆ |
ಕಂಪುಗಾರ್ತಿಯರ್ ಜಾಣೆಯರ ಮನದಾಣ್ಮಗೆ ||
ಸೊಂಪುಗಾರ್ತಿಯರ್ ಬಿಂಕಗಾರ್ತಿಯರಾಣ್ಮಗೆ |
ಸಂಪಿಗೆಯ ಹೂವ ಮುಡಿಸಿದರು ||
ಸೋಬಗವಾಂತ ಶ್ರೀ ಕವಿಚಕ್ರವರ್ತಿಯು |
ಒಡೆಯಂ ಘನವ್ಯಕರಣಿಕಾಗ್ರೇಸರನು |
ತೇಜೋಯುತಶಾಂತರಾಜಪಂಡಿತನು ..
ರಾಜಿತ ಲಕ್ಷ್ಮೀದೇವಿಗೆ ಸುತಿಸಿಂಬ |
ಜಾಜಿಯ ಹೂಮಾಲೆಯ ಮುಡಿಸಿದನು ||

---

## ವೆಂಕಟರಾಮಶಾಸ್ತ್ರಿ, 1823

ಈತನು (1) ಅಮರುಕಟೀಕೆ, (2) ಕನಿತ್ರಯೋದಶೀವ್ರತ, (3) ಅಮಾಸೋಮವಾರವ್ರತ, (4) ಧನುರ್ಮಾಸ ಮಹಿಮೆ (5) ಗಜಗೌರೀ ವ್ರತ ಕಥೆ ಈ ಗ್ರಂಥಗಳನ್ನು ಬರೆದಿದ್ದಾನೆ.

ಇವನು ಬ್ರಾಹ್ಮಣ ಕವಿ ಇವನ ಸ್ಥಳ ದೇವನಾಪುರ ಅಥವಾ ದೇವಾಂಡಹಳ್ಳಿ; ಇವನ ತಾಯಿ ವೆಂಕಟಮ್ಮ. 'ಸಕಲವಿದ್ಯಾವಿಲಾಸ ಚತುರ, ಸಾಹಿತ್ಯಾಲಂಕಾರಧುರೀಣ' ಎಂದು ತನ್ನನ್ನು ವಿಶೇಷಿಸಿ ಹೇಳಿ ಕೊಂಡಿದ್ದಾನೆ. ಇವನು ಮೈಸೂರು ರಾಜನಾದ ಮುಮ್ಮಡಿಕೃಷ್ಣರಾಜನ ಆಶ್ರಿತನು. ಇವನ ಗ್ರಂಥಗಳಲ್ಲಿ (2) ಮತ್ತು (3) 1823ರಲ್ಲಿಯೂ (4) 1839 ರಲ್ಲಿಯೂ, (1) 1842 ರಲ್ಲಿಯೂ, ವಿರಚಿತವಾದವೆಂದು, ಆ ಗ್ರಂಥಗಳಿಂದ ತಿಳಿಯುತ್ತದೆ

ಇವನ ಗ್ರಂಥಗಳಲ್ಲಿ

### 1. ಅಮರುಕ ಟೀಕೆ

ಇದು ಅಮರುಕಶತಕಕ್ಕೆ ಕರ್ನಾಟಕವ್ಯಾಖ್ಯಾನ; "ನವ್ಯ ಕರ್ನಾಟಭಾಷಾ ಪ್ರಕಟಿತ ಶೃಂಗಾರದೀಪಿಕಾಸರ್ವಸಂಗ್ರಹ" ಎಂದು ಕವಿ ಹೇಳುತ್ತಾನೆ.

2. ಶನಿತ್ರಯೋದಶೀ ವ್ರತ

ಆರಂಭದಲ್ಲಿ "ಸ್ವಭಾನುವರ್ಷದಲ್ಲಿ (1823) ದೇವಾಂಡಹಳ್ಳಿ ವೆಂಕಟರಾಮಶಾಸ್ತ್ರಿ ಕನ್ನಡಿಸಿ ಒಪ್ಪಿಸಿದ ಶನಿತ್ರಯೋದಶೀ ವ್ರತ" ಎಂದಿದೆ. ಅದರ ಅಂತ್ಯದಲ್ಲಿ "ಕೃಷ್ಣರಾಜ ಕೃತಕರ್ಣಾಟಕ ವಚನ ರಚನಾಭಿಧಾನವಾದ ಸ್ಕಾಂದಪುರಾಣಸ್ಥ ಶನಿತ್ರಯೋದಶೀಕಲ್ಪವೆಂಬ ಕೇದಾರಖಂಡದ ಅಧ್ಯಾಯಾರ್ಥ" ಎಂದಿದೆ. 75 ಶ್ಲೋಕಗಳಿಗೆ ಕನ್ನಡಟೀಕೆ.

3. ಅಮಾಸೋಮವಾರ ವ್ರತ

ಆರಂಭದಲ್ಲಿ "ಲಕ್ಷ್ಮಮ್ಮಣ್ಣಿಯವರಿಗಾಗಿ ದೇವಾಂಡಹಳ್ಳಿ ವೆಂಕಟರಾಮಶಾಸ್ತ್ರಿ ಕನ್ನಡಿಸಿದುದು" ಎಂದಿದೆ. ಅಂತ್ಯದಲ್ಲಿ "ಕೃಷ್ಣರಾಜರು ಕೃಷ್ಣರಾಜವಾಣೀವಿಲಾಸ ಎಂದು ಬುಧಜನಪ್ರೀತಿಗೋಸ್ಕರ ವಿಸ್ತರಿಸಿದ ಕರ್ಣಾಟಕ ಭಾಷಾವ್ಯಾಖ್ಯಾನವಾದ ಭವಿಷ್ಯಪುರಾಣದ ಅಮಾಸೋಮವಾರವ್ರತ" ಎಂದಿದೆ. ಶ್ಲೋಕಗಳಿಗೆ ಕನ್ನಡಟೀಕೆ.

4. ಧನುರ್ಮಾಸ ಮಹಿಮೆ

ಇದು ಭವಿಷ್ಯೋತ್ತರ ಪುರಾಣಾಂತರ್ಗತವಾದುದು. ಅಂತ್ಯದಲ್ಲಿ "ವಿಕಾರಿ ಸಂವತ್ಸರದಲ್ಲಿ (1839) ಮಹಾಮಾತುಶ್ರೀಯವರ ಸನ್ನಿಧಿಗೆ ದೇವಾಂಡಹಳ್ಳಿ ವೆಂಕಟರಾಮಶಾಸ್ತ್ರಿ ಒಪ್ಪಿಸಿದುದು" ಎಂದಿದೆ. ಆರಂಭದಲ್ಲಿ ಕವಿ ತನ್ನ ತಾಯಿ ವೆಂಕಟದೇವಿಯ ಹೆಸರನ್ನು ಹೇಳಿದ್ದಾನೆ.1

ಕೆಂಪುನಾರಾಯಣ. 1823

ಈತನು ಮುದ್ರಾಮಂಜೂಷವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಹೊಯಿಸಣಿಗಕುಲದವನು; ಮೈಸೂರುದೊರೆಯಾದ ಮುಮ್ಮಡಿಕೃಷ್ಣರಾಜನ ಆಶ್ರಿತನಾಗಿದ್ದನು. ಈ ಗ್ರಂಥವನ್ನು ಶಕ 1745 ರಲ್ಲಿ, ಎಂದರೆ 1823 ರಲ್ಲಿ, ಬರೆದಂತೆ ಹೇಳುತ್ತಾನೆ

ಇವನ ಗ್ರಂಥ

ಮುದ್ರಾಮಂಜೂಷ

ಇದು ಮುದ್ರಾರಾಕ್ಷಸವೆಂಬ ಸಂಸ್ಕೃತನಾಟಕಕ್ಕೆ ಗದ್ಯರೂಪ

1 ಶ್ರೀಮದ್ವೆಂಕಟದೇವಾಂಬಾ ಸುತೇ ನಾ ಕೃತಭಾಷಯಾ
ಧನುರ್ಮಾಸಮಹಿಮ್ನೋಽಸ್ಯ ಟೀಕಾಂ ವಿತನುತೇ ಮುದಾ ||

ವಾದ ಭಾಷಾಂತರವು; ಆಶ್ವಾಸ 18. ಇದರಲ್ಲಿ ಚಾಣಕ್ಯನ ಸಹಾಯದಿಂದ ಚಂದ್ರಗುಪ್ತನಿಗೆ ನಂದರಾಜ್ಯಪ್ರಾಪ್ತಿಯಾದ ಕಥೆ ಹೇಳಿದೆ. ಆರಂಭದಲ್ಲಿ ಚಾಮುಂಡಿಕಾಸ್ತುತಿ ಇದೆ ಅಂತ್ಯದಲ್ಲಿ ಮುಮ್ಮಡಿಕೃಷ್ಣರಾಜನ ಔದಾರ್ಯದರ್ಶಕವಾದ ಈ ಶ್ಲೋಕವಿದೆ—

ಚಿರಂ ಜೀಯಾತು ಚಾಮೇಂದ್ರತನಯಃ ಕೃಷ್ಣಭೂಮಿಪಃ |
ಯತ್ಕಟಾಕ್ಷಾಂಕುರಸ್ತೋಮಃ ಕಲ್ಪದ್ರುಮಾಯತೇ ||

---

## ವೆಂಕಕವಿ 1825

ಈತನು 1825 ರಲ್ಲಿ ನಾರಸಿಂಹನ (1768) ಅನುಭವಶಿಖಾಮಣಿಯನ್ನು ಪ್ರತಿಮಾಡಿದಂತೆ ಹೇಳಿ ಕೆಲವು ಪದ್ಯಗಳನ್ನು ಮಾಡಿದ್ದಾನೆ. ವೆಂಕಕವೀಂದ್ರ ಎಂದು ಹೇಳಿಕೊಂಡಿರುವುದರಿಂದ ಕವಿಯಾಗಿದ್ದಿರಬಹುದು. ಯಾವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು ಇವನು ಬ್ರಾಹ್ಮಣಕವಿ; ತುಗ್ಗಲಿಯಪುರದ ಕರಣಿಕ ಎಂದು ಹೇಳಿಕೊಂಡಿದ್ದಾನೆ. ಇವನ ಸ್ಥಳ ಪಾಲ್ಯೂರಪುರ ಇವನ ಪದ್ಯಗಳಲ್ಲಿ ಒಂದನ್ನು ತೆಗೆದು ಬರೆಯುತ್ತೇವೆ—

ಬರೆದ ಕಾವ್ಯದಿ ಹಸ್ತದೋಷದಿ | ಇರಲು ತಿದ್ದುವುದೆಲ್ಲ ಬಾಧಕತೆ |
ಮಚ್ಚಿಸು ಪಟ್ಟವಿಭೇದವಾಗಿ ಶುದ್ಧಗೊಳಿಸುವುದು ||
ಪರಮಯೋಗಾಭ್ಯಾಸತತ್ಪರ | ನಿರುತ ಧ್ಯಾನಾನಂದಮಯದಿಂ |
ಗುರುನ ಸೊನ್ನೇಪುರಬಾಲನು ಕರುಣದಿಂ ಪೊರೆವ ||

---

## ವೆಂಕಟೇಶಭಟ್ಟ 1830

ಈತನು ವಿಠೋಬಚರಿತೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಇವನ ಸ್ಥಳ ಕುಂದಾಪುರ. ಈ ಗ್ರಂಥವನ್ನು 1830 ರಲ್ಲಿ ಬರೆದಂತೆ ತಿಳಿಯುತ್ತದೆ.

ಇವನ ಗ್ರಂಥ

### ವಿಠೋಬಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ; ಪದ್ಯ 70 ಇದಕ್ಕೆ ವಿಠಲಚರಿತೆ ಎಂಬ ಹೆಸರೂ ಉಂಟು. ಇದರಲ್ಲಿ ದ್ರವ್ಯಾಪೇಕ್ಷೆಯಿಂದ ಬಲಿಕೊಡ

ಸುಬ್ರಹ್ಮಣ್ಯ ಸು. 1830.

ಇವನು ತಾರಾಶಶಾಂಕನಾಟಕವನ್ನು ಬರೆದಿದ್ದಾನೆ. ಈತನು ಬ್ರಾಹ್ಮಣಕವಿ; ಬಾಡಾಲವಂಶದವನು; ನಾರಾಯಣಾರ್ಯನ ಮಗನು ಇವನ ಸ್ಥಳ ಅಣುಪ್ರಸ್ಥ ಪುರ ಎಂದರೆ ಚಿಕ್ಕಬಳ್ಳಾಪುರ. ಇವನು ಮೈಸೂರು ದೊರೆಯಾದ ಮುಮ್ಮಡಿ ಕೃಷ್ಣರಾಜನ ಆಶ್ರಿತನು. ಆತನ ಆಜ್ಞೆಯಿಂದ ಈ ಗ್ರಂಥವನ್ನು ಬರೆದಂತೆ ಹೇಳು ತ್ತಾನೆ. ಇವನ ಕಾಲವು ಸುಮಾರು 1830 ಆಗಬಹುದು.

ಇವನ ಗ್ರಂಥ

ತಾರಾಶಶಾಂಕನಾಟಕ

ಇದು ಯಕ್ಷಗಾನರೂಪವಾಗಿದೆ; ಶೃಂಗಾರರಸಪೂರ ಎಂದು ಕವಿ ಹೇಳು ತ್ತಾನೆ. ಅಂತ್ಯದಲ್ಲಿ ಶ್ರೀ ಕೃಷ್ಣರಾಜೇಂದ್ರನ ಆಜ್ಞಾನುಸಾರದಿಂ ಅಣುಪ್ರಸ್ಥಪುರ ವಾಸ ಬಾಡಾಲವಂಶಪ್ರಕಾಶ ನಾರಾಯಣಾರ್ಯಸುತ ಸುಬ್ರಹ್ಮಣ್ಯವಿರಚಿತ ಶೃಂಗಾರ ರಸಪೂರ ತಾರಾಶಶಾಂಕನಾಟಕಂ ಎಂದಿದೆ

---

ಸೋಬಾನೆ ರಂಗದಾಸ ಸು. 1830.

ಇವನು ಕೃಷ್ಣರಾಜಡೋಳೋತ್ಸವಪಂಕ್ತಿಯನ್ನು ಬರೆದಿದ್ದಾನೆ. ಈತನು "ಕೃಷ್ಣ ರಾಜಚರಣಕಮಲಸೇವಾಧುರೀಣ'' ಎಂದು ಹೇಳಿಕೊಂಡಿರುವುದರಿಂದ ಮೈಸೂರು ದೊರೆಯಾದ ಮುಮ್ಮಡಿಕೃಷ್ಣರಾಜನ ಆಶ್ರಿತನೆಂಬುದು ವ್ಯಕ್ತವಾಗುತ್ತದೆ.

ಇವನ ಗ್ರಂಥ

ಕೃಷ್ಣರಾಜಡೋಳೋತ್ಸವಚರಿತೆ

ಇದರಲ್ಲಿ ಹಾಡುಗಳೂ ಷಟ್ಪದಿಗಳೂ ಇವೆ. ಮಾಗಡಿಯ ರಂಗನಾಥದೇವರು ಚರಣಕಟಾಕ್ಷದಿಂದ ಈ ಗ್ರಂಥವನ್ನು ರಚಿಸಿದಂತೆ ಕವಿ ಹೇಳುತ್ತಾನೆ.

---

ಗುರುಕೃಷ್ಣ ಸು. 1830

ಇವನು ತತ್ತ್ವಕೀರ್ತನೆಗಳು, ಕೃಷ್ಣಸ್ವಾಮಿನು ದಾನಕೊಟ್ಟ ಪದ, ಕೃಷ್ಣಬಾಲಲೀಲೆ ಇವುಗಳನ್ನು ಬರೆದಿದ್ದಾನೆ. ಇವನ ಗ್ರಂಥಗಳ ಕೊನೆಯಲ್ಲಿ ಮೈಸೂರು ರಾಜನಾದ ಮುಮ್ಮಡಿಕೃಷ್ಣರಾಜನಿಗೆ ಮಂಗಳ ವಾಗಲಿ ಎಂದಿರುವುದರಿಂದ ಇವನು ಆ ರಾಜನ ಕಾಲದಲ್ಲಿ ಇದ್ದಿರಬೇಕು

ಇವನ ಹಾಡುಗಳಲ್ಲಿ ಗುರುಕೃಷ್ಣ ಎಂಬ ಅಂಕಿತವು ಅಲ್ಲಲ್ಲಿ ದೊರೆಯುತ್ತಾರೆ. ಅಲ್ಲದೆ

ಗುರುಕೃಷ್ಣ ಬೋಧೆಯನ್ನು ಬೋಧಿಸೆ | ಗುರುಕೃಷ್ಣಶಿಷ್ಯನಿಗೆ |
ಗುರುಕೃಷ್ಣನಂಕಿತದಲಿ ಗ್ರಂಥವ | ಗುರುಕೃಷ್ಣನಾಗಿಯೆ ಮಾಡಿದನಿಂತು ||

ಎಂಬ ಪದದಿಂದ ಈತನ ಗುರು ಗುರುಕೃಷ್ಣ ಎಂದು ತಿಳಿವುದಲ್ಲದೆ ಈತನ ಹೆಸರೂ ಗುರುಕೃಷ್ಣ ಎಂದಿರಬಹುದು ಎಂದು ತೋರುತ್ತದೆ. ಈತನು ಬ್ರಾಹ್ಮಣಕವಿ.

ಇವನ ಗ್ರಂಥಗಳಲ್ಲಿ

1. ತತ್ವದಕೀರ್ತನೆಗಳು.

ಈ ಹಾಡುಗಳ ಸಂಖ್ಯೆ 1000 ಕ್ಕೆ ಮೇಲೆ ಇದೆ. ಪ್ರತಿಹಾಡೂ 'ಗುರುಕೃಷ್ಣ' ಎಂದು ಮುಗಿಯುತ್ತದೆ. ಅಂತ್ಯಭಾಗದಲ್ಲಿರುವ

ಗುರುಕೃಷ್ಣಬೋಧೆಗೆ ಬರುವ ತತ್ವಗಳನ್ನು | ಒರೆದೆ ಮುನ್ನೂರಱುವತ್ತ ಗುರುಕೃಷ್ಣ |
ಪರಿಪರಿಯಲಿ ಓದಿ ವರಬ್ರಹ್ಮಸಂಧಾನಿ | ಸಿರಿಕ ಪಾಡೆ ರಾಗದಿ ಗುರುಕೃಷ್ಣ ||

ಎಂಬ ಹಾಡಿನಿಂದ 360 ತತ್ವಗಳನ್ನು ಹೇಳಿರುವಂತೆಯೂ ಚಿದಾನಂದಾವಧೂತನ ಜ್ಞಾನಸಿಂಧುವನ್ನು ಅನುಸರಿಸಿರುವಂತೆಯೂ ತಿಳಿಯುತ್ತದೆ

2 ಕೃಷ್ಣಸ್ವಾಮಿಯ ದಾನಕೊಟ್ಟ ಪದ.

ಇದು ಸಾಂಗತ್ಯದಲ್ಲಿ ಬರೆದಿದೆ; ಪದ್ಯ 157 ಇದರಲ್ಲಿ ಹೇಳಿರುವ ಕಥೆ ಈ ಪದ್ಯದಲ್ಲಿ ಸೂಚಿತವಾಗಿದೆ—

ಸತ್ಯಭಾಮಾದೇವಿ ಚಿತ್ತವಲ್ಲಭನ ತಾ | ನರ್ಥಿಯಿಂದೆಸಗಿದ ನಾರದಗೆ |
ಮತ್ತೆ ದಾನವನಿತ್ತ ಸತ್ಕಥೆಗಳನ್ನು | ವಿಸ್ತಾರವಾಗಿ ಪೇಳುವೆನು ||

ಆದಿಯಲ್ಲಿ ಗುರುಕೃಷ್ಣನ ಸ್ತುತಿಯಿದೆ.

3. ಕೃಷ್ಣಬಾಲಲೀಲೆ

ಇದು ಭಾಗವತಪುರಾಣಾರ್ಥವಿವರಣರೂಪವಾಗಿದೆ; ಕೀರ್ತನವನ್ನ ಬರೆದಿದೆ. ಅಲ್ಲಲ್ಲಿ ತಿರುಪತಿವೆಂಕಟರಮಣಸ್ತುತಿ ಇದೆ. ಆರಂಭದಲ್ಲಿ ಈ ಪದ್ಯವಿದೆ—

ಮೂಲವ್ಯಾಖ್ಯಾನಗಳ ಮುಖ್ಯತಾತ್ಪರ್ಯಗಳು ।
ಈ ಲಲಿತಭಾಷೆಯೊಳಗೆಚಿಕ್ಕದಾಗಿರಲು ।
ಬಾಲಕನ ಮುಖದಲ್ಲಿ ಬರುವುದೆಂತಿದು ಕೃಷ್ಣ ।
ತಾ ಲಭಿಸಿಕೊಡಲಾಗಿ ತದನುಮಧ್ವೋಪಸಿಯದು ॥
ಗಣಗಳವಜೊಳಗಿಲ್ಲ ಗುರುಕೃಷ್ಣಕಥೆಸರಾಗ ।
ಗುಣಯುಕ್ತರಿಂ ಜೋಡುಗೂಡಿಯೂ ಇರವು ॥

ಮಹಲಿಂಗರಂಗನ ಅನುಭವಾಮೃತದ ಪದ್ಯಗಳಿಗೆ ಟೀಕಿನ ರೂಪವಾದ ಒಂದು ವ್ಯಾಖ್ಯಾನವು ದೊರೆಯುತ್ತದೆ. ಅದೂ ಏತಕ್ಕೆ ವಿಕೃತವಾಗಿರಬಹುದೆಂದು ತೋರುತ್ತದೆ.

---

## ಶ್ರೀನಿವಾಸ ಸು. 1830

ಈತನು ಕೃಷ್ಣರಾಜ ವರ್ಷವರ್ಧಂತೀ ಶತಕವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ, ಶಾಂಡಿಲ್ಯಗೋತ್ರದವನು, ಇವನ ತಂದೆ ನಾರಾಯಣನು, ಸ್ಥಳ ಗೋಕರ್ಣ. ಮುಮ್ಮಡಿ ಕೃಷ್ಣರಾಜನ ವರ್ಷವರ್ಧಂತಿಯ ಮಹೋತ್ಸವವನ್ನು ನೋಡಲು ಪತ್ನೀಪುತ್ರರೊಡನೆ ಗೋಕರ್ಣದಿಂದ ಮೈಸೂರಿಗೆ ಬಂದು ಅಲ್ಲಿ ತಾನು ಕಂಡ ಮಹೋತ್ಸವದ ವಿಭವಗಳನ್ನು ಈ ಗ್ರಂಥರೂಪವಾಗಿ ರಚಿಸಿದ್ದಾನೆ. ಇವನ ಕಾಲವು ಸುಮಾರು 1830 ಆಗಬಹುದು.

ಇವನ ಗ್ರಂಥ

ಕೃಷ್ಣರಾಜವರ್ಷವರ್ಧಂತೀ ಶತಕ.

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 3, ಪದ್ಯ 101. ಇದರಲ್ಲಿ ಮುಮ್ಮಡಿ ಕೃಷ್ಣರಾಜನ ವರ್ಷವರ್ಧಂತೀಮಹೋತ್ಸವವು ವರ್ಣಿತವಾಗಿದೆ. ಗ್ರಂಥಾವತಾರದಲ್ಲಿ ಲಕ್ಷ್ಮಿ, ಚಾಮುಂಡಿ ಇವರುಗಳ ಸ್ತುತಿ ಇದೆ. ಕವಿ ಈ ಗ್ರಂಥದಲ್ಲಿ ಪ್ರತಿಪಾದಿತವಾದ ವಿಷಯಗಳನ್ನು ತನ್ನ ಹೆಂಡತಿಗೆ ಹೇಳುತ್ತಾನೆ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ:

ಚಾಮುಂಡಿಬೆಟ್ಟ

ಶುಕಶಾರಿಕಾನಿವಹಮಧುಮಧುರವಚನದಿಂ |
ಪಿಕಪುಂಜಪರಿಸ್ಫುರಿತಪಂಚಮಸ್ವರದಿಂದ |
ಸುಕಲಷಟ್ಪದಗಳ ಸಂಗೀತರಾಗದಿಂ ಸೋಗೆಗಳ ಶಬ್ದದಿಂದ ||
ಸುಕಪೋತಸಂತತಿಯ ಹೂಂಕಾರದಿಂದಲುಂ |
ಸಕಲಗಿರಿಯಿಂದೆಸೆವ ಕೃಷ್ಣನೃಪನಿಲಯದಂ |
ಶಕಳಂಕಚಾಮುಂಡಿಗಿರಿವರವು ಸಲೆ ವಿರಾಜಿಸುತಿರ್ಪುದೇನೆಂತನು ||

ಚಾಮರ

ಸುರರು ಪೂಮಳೆಗಳಂ ಕೃಷ್ಣರಾಜೋತ್ತಮನ |
ವರಶಿರೋಭಾಗದೊಳ್ ಪರಮಸಂತೋಷದಿಂ |
ಸುರಿಯಲವು ಮಕುಟದೊಳ್ ಬಿದ್ದುರುಳುವಾಗ ವ್ಯಜನಗಳ ಗಾಳಿಯಿಂದ ||
ಪರಿದು ಮೇಲ್ಭಾಗಕ್ಕೆ ಪೋಪುವೆಂಬಂತೆ ವರ |
ತರುಣಿಯರ್ ಕರಗಳಂ ಧರಿಸುತ್ತಿರುವ ಸಿತ |
ಶರಚಾಮರದ್ವಯಂ ಶೋಭಿಸುವುದೀಗಲಿದ ಬೇಗದಿಂ ಕಾಂತೆ ನೋಡು ||

---

## ಗೇರಸೊಪ್ಪೆ ಶಾಂತಯ್ಯ ಸು. 1830

ಈತನು ಏಕಾದಶೀಪ್ರಸಂಗ, ಕರ್ಣಪರ್ವ, ಜರಾಸಂಧನಕಾಳಗ, ದ್ರೋಣಪರ್ವ, ಭೀಷ್ಮಪರ್ವ, ರಾವಣದಿಗ್ವಿಜಯ, ಲವಣಸಂಹಾರ, ಸೀತಾಕಲ್ಯಾಣ, ಸೀತಾವಿಯೋಗ, ಸುಭದ್ರಾಕಲ್ಯಾಣ, ಸುರಥಸುಧನ್ವರ ಕಾಳಗ, ಇವೇ ಮುಂತಾದ ಪ್ರಸಂಗಗಳನ್ನು ಅಥವಾ ಯಕ್ಷಗಾನಗಳನ್ನು ಬರೆದಿದ್ದಾನೆ. ಇವನು ಸಾರಸ್ವತ ಬ್ರಾಹ್ಮಣನು; ಮಂಗಳೂರುಜಿಲ್ಲಾ, ಹೊನ್ನಾವರದಲ್ಲಿ ಪ್ರಿನ್ಸಿಪಲ್ ಸದರ್ ಅಮೀನನಾಗಿದ್ದನು. ಇವನ ಗ್ರಂಥಗಳಲ್ಲಿ ಪ್ರತಿಪಾದಿತವಾದ ವಿಷಯಗಳು ಅವುಗಳ ಹೆಸರುಗಳಿಂದಲೇ ವ್ಯಕ್ತವಾಗುತ್ತವೆ.

---

## ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಸು. 1830

ಈತನು ಹಳಗನ್ನಡನುಡಿಗನ್ನಡಿ, ಹೊಸಗನ್ನಡನುಡಿಗನ್ನಡಿ, ಶಬ್ದಮಂಜರಿ ಧಾತುಮಂಜರಿ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಇವನು

ಶ್ರೀವೈಷ್ಣವಕವಿ ; ಮದರಾಸ್ ಸದರ್ ಅದಾಲತ್ ಕೋರ್ಟಿನಲ್ಲಿ ವಕೀಲನಾಗಿದ್ದನು. ಹೊಸಗನ್ನಡನುಡಿಗನ್ನಡಿಯನ್ನು ಶಕ 1761 ಕ್ಕೆ (1838) ಹಿಂದೆಯೇ ಬರೆದಂತೆಯೂ ಆ ವರ್ಷ ಬಬ್ಬಸರದಾರನ ಸಹಾಯದಿಂದ ಮುಂದ್ರಿಸಿದಂತೆಯೂ ಹೇಳುತ್ತಾನೆ.

ಈ ಗ್ರಂಥದ ಆರಂಭದಲ್ಲಿ ಈ ಪದ್ಯವಿದೆ:—

ಶ್ರೀರಮಣನ ಪದಕಮಲವ | ಸಿರದಿಂ ಸಾಷ್ಟಾಂಗವೆರಗಿ ಕೃಷ್ಣಾಚಾರ್ಯಂ |
ಶ್ರೀರಂಗಪುರನಿಕೇತಂ | ವಿರಚಿಸಿ ಹೊಸಗನ್ನಡನುಡಿಗನ್ನಡಿಯನೊಲವಿಂ ‖

---

## ತಮ್ಮಯ್ಯಕವಿ 1834

ಈತನು ರಾಜವಂಶರತ್ನಪ್ರಭೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ ; ಹರಿತಸಗೋತ್ರದವನು ; ಆಶ್ವಲಾಯನಸೂತ್ರದವನು, ಋಗ್ವೇದಿ. ಇವನ ಪಿತಾಮಹನು ವೆಂಕಟರಮಣಶಾಸ್ತ್ರಿ ತಂದೆ ವೆಂಕಟನಾರಾಯಣಶಾಸ್ತ್ರಿ, ಸ್ಥಳ ಸಿಂಹಾಸನ ನಗರಿ (ಹಾಸನ) ಈತನು ಮೈಸೂರು ದೊರೆಯಾದ ಮುಮ್ಮಡಿ ಕೃಷ್ಣರಾಜನಲ್ಲಿ ಸಮ್ಮುಖ ಕವಿವರ್ಯನಾಗಿದ್ದನು. ಇವನಿಗೆ ವೆಂಕಟಕೃಷ್ಣ ಎಂಬ ಹೆಸರೂ ಉಂಟು. ಈ ಗ್ರಂಥವನ್ನು ದೊರೆಯ ಆಜ್ಞಾನುಸಾರವಾಗಿ 1834 ರಲ್ಲಿ ಬರೆದು ಒಪ್ಪಿಸಿದಂತೆಯೂ ದೊರೆಯಿಂದ ವಿಶೇಷವಾಗಿ ಮರ್ಯಾದೆಯನ್ನು ಪಡೆದಂತೆಯೂ ತಿಳಿಯುತ್ತದೆ. ಕೋಸಲಕುಲತಿಲಕ ಎಂದು ಕವಿ ಹೇಳಿಕೊಂಡಿದ್ದಾನೆ.

ಪೂರ್ವಕವಿಗಳಲ್ಲಿ ಕಾಳಿದಾಸ, ಮಯೂರ ಭನಭೂತಿ, ದಂಥಿ, ಸುಬಂಧು, ಬಾಣ, ಹರ್ಷ, ಬಿಲ್ಹಣ, ಭಟ್ಟಿ, ಹರದತ್ತ, ನೀಲಕಂಠ, ರುದ್ರಭಟ್ಟ ಹರೀಶ್ವರ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

### ರಾಜವಂಶ ರತ್ನಪ್ರಭೆ

ಇದು ಚಂಪೂರೂಪವಾಗಿದೆ; ರುಚಿಪ್ರಚಾರ ಎಂಬ ಐದು ವಿಭಾಗಗಳನ್ನು ಒಳಕೊಂಡಿದೆ; ಅಲ್ಲಲ್ಲಿ ಕೆಲವು ಸೀಸಪದ್ಯಗಳೂ ಇವೆ ಮುಮ್ಮಡಿಕೃಷ್ಣರಾಜನು "ನಮ್ಮ ವಂಶಕ್ರಮವ ಬರೆ" ಎಂದು ಆಜ್ಞಾಪಿಸಲು ಈ ಗ್ರಂಥವನ್ನು ಬರೆನಂತೆ ಕವಿ ಹೇಳುತ್ತಾನೆ. ಇದರಲ್ಲಿ ರಾಜನೃಪನಿಂದ ಮೈಸೂರುರಾಜರ ಪರಂಪರೆಯೂ ಮುಮ್ಮಡಿಕೃಷ್ಣರಾಜನು ಮಾಡಿದ

ಧರ್ಮಕಾರ್ಯಗಳೂ ರಚಿಸಿದ ಗ್ರಂಥಗಳೂ ಹೇಳಿವೆ. ಗ್ರಂಥಾವತಾರದಲ್ಲಿ ವಿಷ್ಣುಸ್ತುತಿ ಇದೆ. ಬಳಿಕ ಕವಿ ಚಾಮುಂಡಿ, ಶಿವ, ಪಾರ್ವತಿ, ಸರಸ್ವತಿ, ಗುರುಶಂಕರಾರ್ಯ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇನೆ:—

ರಾಜನೃಪಸ್ತುತಿ.

ಆರಾಜಕ್ಷಿತಿಪಾಲಖಡ್ಗನಿಹತಾರಾತಾತ್ಯಾದಿವಿಶ್ವಂಭರಾ ।
ಭಾರಾಸಕ್ತನೃಪೌಘರೋಷದಳಿತಪ್ರಾಭಾಕರೋನ್ಮಂಡಲ ॥
ಸ್ಫಾರಾನಲ್ಪಮಹಾಕ್ಷತಕ್ಷರದಸೃಗ್ಘಾರಪ್ರವಾಹಂಗಳಾ ।
ತಾರಾಮಾರ್ಗವನೈದಿ ಕಾಣಿಸೆ ಜನರ್ ತಾಂ ಸಂಜೆಗೆಂಪೆನ್ನುವರ್ ॥

ವರ್ಷಾಕಾಲ

ಕಲಶಾಂಭೋನಿಧಿಮಧ್ಯಸುಂದರಸಿತಾಕಾರಾತಿವಿಸ್ತಾರಭೂ ।
ವಲಯಾಂತರ್ಗನಮಾನಮುಂಬಿರವಸಸ್ವಾತಾಶನೇಂದ್ರಾಂಗಕಂ ॥
ಜಲಪರ್ಯಂಕಶಯಾನಮಾಧವವಿರಾಡಾನಂದನಿದ್ರಾಪ್ರದಂ ।
ವಲಭಿಜ್ಜಾಪವಿಭಾಸುರಂ ಪೊಳೆದುದಾವರ್ಷರ್ತು ವಾತ್ಯೋಘದಿಂ ॥

---

## ಮಾವನೂರು ಚೆನ್ನಬಸವ. 1840.

ಈತನು ಶರಣಬಸವಚರಿತೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಪಿತಾಮಹನು ಶಿವಲಿಂಗದೇವ, ತಂದೆ ಅಯ್ಯಪ್ಪ, ತಾಯಿ ಬಸವಮ್ಮ, ಗುರು ಮೊಳೆಯಶಾಂತೇಶ, ಸ್ಥಳ ನಗರದೇಶದ ಮಾವನೂರ ‡ ಈ ಗ್ರಂಥವನ್ನು ಕರ್ಣಾಟದೇಶದಲ್ಲಿಯ ಎಳಮೇಲಿಪುರದ ಭಕ್ತರ ಇಷ್ಟಾನುಸಾರವಾಗಿ ಶಕ ೧೭೬೨ ನೆಯ ಶಾರ್ವರಿ ವರ್ಷದಲ್ಲಿ—ಎಂದರೆ 1840 ರಲ್ಲಿ ಬರೆದಂತೆ ಕವಿ ಹೇಳುತ್ತಾನೆ. ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ—

ಪರಮಶಿವಕವಿ ಕಾಳಿದಾಸಂ । ಗರುವ ಬಾಣ ಮಯೂರ ಮಲುಹಣ
ಕೆರೆಯಪದ್ಮರಸಯ್ಯನುದ್ಭಟ ಪಂಡಿತಾರಾಧ್ಯ ॥
ಹರಿಹರೇಶ್ವರ ರಾಘವಾಂಕನ ಸಿರಿಪತಿ ಸುಪಂಡಿತರ ಹೃತ್ಸರ ।
ಸಿರುಹದೊಳು ಧ್ಯಾನಿಸುತ ಕೃತಿಯಂ ಪೇಳ್ವೆನುಗ್ಗದೆ ॥

---

‡ ಇದು ನಿಜಾಂ ಇಲಾಖಾ ಆಂದೆಲಿ ತಾಲೂಕಿನಲ್ಲಿರುವಂತೆ ತಿಳಿಯುತ್ತದೆ.

ಇವನ ಗ್ರಂಥ

### ಶರಣಬಸವ ಚರಿತೆ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 15, ಪದ್ಯ 1010. ಇದರಲ್ಲಿ ಶರಣಬಸವ ಎಂಬ ಶಿವಭಕ್ತನ ಚರಿತವು ಹೇಳಿದೆ. ಕಥಾಗರ್ಭವು ಈ ಪದ್ಯದಲ್ಲಿ ಸೂಚಿತವಾಗಿದೆ —

ಹರನ ಬಸವನು ಕೈಕೊಳುತ್ತೀ | ಧರಣಿಯೊಳಗಿಹ ಪುಷ್ಪಕರಡಿಗೆ |
ಪುರದೊಳಿಹ ಸಾಲೋಕ್ಯವಂಶದಿ ಜನಿಸಿ ಮಹಿಮೆಯನು ||
ಮೆಱೆದು ತಟ್ಧವನಾಜ್ಞೆಯೊಳು ಕಲ | ಬುರಗಿಪುರಕಂ ಬಂದು ಗೋಪ್ಯದೊ |
ಳಿರದೆ ಶಿವನೊಳಗೈಕ್ಯವಾದನು ಶರಣಬಸವಣ್ಣ ||

ಕಥಾನಾಯಕನು ನಿಜಾಂ ಇಲಾಖಾ ಆಂದೋಲಿತಾಲ್ಲೂಕು ಅರಳು ಗುಂಡಿಗೆ ಎಂಬ ಗ್ರಾಮದಲ್ಲಿ 1746 ರಲ್ಲಿ ಜನಿಸಿ ಕಲಬುರಗಿಯಲ್ಲಿ 1822 ರಲ್ಲಿ ಬಯಲಾದಂತೆ ಹೇಳುತ್ತಾರೆ ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ ಬಳಿಕ ಕವಿ ಪಾರ್ವತಿ, ಗಣಪತಿ, ಸುಬ್ರಹ್ಮಣ್ಯ, ವೀರೇಶ, ಬಸವ, ಚೆನ್ನಬಸವ, ಸಿದ್ಧರಾಮ, ರೇವಣಾರ್ಯ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಭೃಂಗಿ

ಕೊಂಕಿಸುತ್ತೆದೆ ಝುಂಕಿಸುತ ಮೈ | ಡೊಂಕಿಸುತ ಕಾಲ್ಕೈಯು ಗದಗದ |
ನಂಕಿಸುತ ಗಹಗಹಿಸಿ ನಗುತಂ ಬೆರೞಿಯಂಜಿಸುತ ||
ಟೊಂಕದೊಳು ಕೈಯಿಟ್ಟು ಮುಂದಕೆ | ಭೇಂಕನಾನನದಿರುಹಿ ಚೇಷ್ಟಿಸಿ |
ಬಿಂಕದಿಂ ನರ್ತಿಸಿದನಾಭೃಂಗೀಶ ಹರುಷದಲಿ ||

ದಾನ

ಕೆಱೆಯು ತುಂಬಿದಬೞಿಕ ಕೋಡಿಗ | ಳಿರದಿರಲು ಕೆಱೆಯೊಡೆದು ಜಲ ತಾಂ |
ಹರಿದು ಹೋಗುವುದದಕೆ ಕೋಡಿಯು ಬಿಡುವುದೇ ಸಹಜ ||
ವರಧನವ ಘಟಿಸಿದವ ಧರ್ಮಗ | ಳೞಿಯದಿರಲರಸಗ್ನಿ ಚೋರರೊ |
ಳಿರದೆ ಕೆಡುವುದು ಧರ್ಮದಿಂ ಸತ್ಕೀರ್ತಿಪುಣ್ಯಗಳು ||

ಊಟ

ಕೆಲರು ಹೊಟ್ಟೆಯು ಮುಱಿದುಕೆಳುತಂ | ಕೆಲರು ನೆಟ್ಟನೆ ನಿಗುರುತುಣ್ಣುತ |
ಕೆಲರು ಮೋರೆಯ ಮುಱಿಯುತಂ ಹೊಟ್ಟೆಯನು ಝಲ್ಲಿಸುತ ||

ಕೆಲಕೆಲರು ಕಾಲ್ಗಳನು ಚಾಚುತ | ಕೆಲರು ಡರ್ರನೆ ತೇಗುತಂ ತಾಂ |
ಕೆಲರು ವೃಟ್ಟ್ರುದ ಸಡಿಲಿಸುತಲುಣುತಿರ್ದರೇನೆಂಬೆ ||

---

## ಮುದ್ದಗಿರಿ ನಂಜಪ್ಪ ಸು. 1840.

ಈತನು ಕೃಷ್ಣರಾಜೇಂದ್ರವಿಲಾಸವನ್ನು ಬರೆದಿದ್ದಾನೆ. ಇವನು ವೀರಶೈವಕವಿ ಎಂದು ತೋರುತ್ತದೆ. ಮೈಸೂರು ದೊರೆಯಾದ ಮುಮ್ಮಡಿ ಕೃಷ್ಣರಾಜನ ಆಶ್ರಿತನು. ಆತನನ್ನು ಸ್ತುತಿಸಿ ಈ ಗ್ರಂಥವನ್ನು ಬರೆದಿದ್ದಾನೆ. ಇವನ ಕಾಲವು ಸುಮಾರು 1840 ಆಗಿರಬಹುದು. 'ಆಂಧ್ರಕರ್ಣಾಟಕಕವಿತಾವಿಶಾರದ' ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

### ಕೃಷ್ಣರಾಜೇಂದ್ರವಿಲಾಸ.

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಪ್ರಕರಣ 6. ಕೃಷ್ಣರಾಜ ಯಶೋವರ್ಣನಾತ್ಮಕವಾದ ಗ್ರಂಥವು.

---

## ಸೀತಾರಾಮಸೂರಿ ಸು. 1840.

ಈತನು ಸಹಸ್ರಾಯುಕಥೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; "ಕೃಷ್ಣರಾಜಮುದೇ ಕಥಿತಾ" ಎಂದು ಹೇಳುವುದರಿಂದ ಮೈಸೂರು ದೊರೆಯಾದ ಮುಮ್ಮಡಿ ಕೃಷ್ಣರಾಜನ ಆಶ್ರಿತನಾಗಿದ್ದಂತೆ ತೋರುತ್ತದೆ. ಇವನ ಕಾಲವು ಸುಮಾರು 1840 ಆಗಿರಬಹುದು.

ಇವನ ಗ್ರಂಥ

### ಸಹಸ್ರಾಯುಕಥೆ.

ಇದು ಬ್ರಹ್ಮಾಂಡೋಪಪುರಾಣದ ಉತ್ತರಭಾಗದಲ್ಲಿರುವ ಲಲಿತೋಪಾಖ್ಯಾನದ ಪೂರ್ವಖಂಡದಲ್ಲಿಯ ಹಯಗ್ರೀವಾಗಸ್ತ್ಯಸಂವಾದರೂಪವಾದ 24 ಅಧ್ಯಾಯಗಳ ಕರ್ಣಾಟಕ ಟೀಕೆ.

---

## ಸುಬ್ರಹ್ಮಣ್ಯ. ಸು. 1840.

ಇವನು ಶಂಬರಾಸುರನ ಕಾಳಗವನ್ನು ಬರೆದಿದ್ದಾನೆ. ಈತನು ಬ್ರಾಹ್ಮಣಕವಿ; ಇವನ ತಂದೆ ಪೌರಾಣಿಕಕುಲಜಾತ ದೈವಜ್ಞ ವಿಟ್ಠಲ, ತಾಯಿ, ಗೌರಿ. ಆತನ

ಕಾಲವು ಸುಮಾರ 1810 ಆಗಿರಬಹುದೆಂದು ಊಹಿಸುತ್ತೇವೆ

ಇವನ ಗ್ರಂಥ

ಶಂಬರಾಸುರನ ಕಾಳಗ

ಇದು ಯಕ್ಷಗಾನರೂಪವಾಗಿದೆ, ಪದ 385. ಇದರಲ್ಲಿ "ಪರಮಶುಕ ಮುನಿ ಪರೀಕ್ಷಿತನೃಪಾಲಗೆ ಪೇಳ್ದ ಪರಮಹಾಭಾಗವತಸಾರದೊಳ್ ಸ್ಮರ ಜನಿಸಿ ರತಿಯ ಕೈಪಿಡಿದ ಸಂಗತಿ" ಹೇಳಿದೆ

---

ರಾಮ ಬ್ರಹ್ಮಾನಂದಯೋಗಿ ಸು 1810

ಈತನು ಭಕ್ತಿಸುಧಾರಸವನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿ; ಬ್ರಹ್ಮಸಮಾಜಸ್ಥಾಪನಾಚಾರ್ಯ ಸದ್ಬ್ರಹ್ಮೋಪಾಸನಾವರ್ಯ ಪರಮಹಂಸಪರಿವ್ರಾಜ ರಾಮಮೋಹನಾಚಾರ್ಯನ ಶಿಷ್ಯನು ಇವನ ಕಾಲವು ಸುಮಾರು 1810 ಆಗಬಹುದು.

ಇವನ ಗ್ರಂಥ.

ಭಕ್ತಿಸುಧಾಸರ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಪದ್ಯ 125 ಇದು "ನಿತ್ಯಾನಿತ್ಯಕಾರ್ಯಕಾರಣವೆನಿಪ ಜಗಜ್ಜೀವಪರಮಾಧಾರನಾದ" ಎಂದು ಕವಿ ಹೇಳುತ್ತಾನೆ. ಪ್ರತಿಪದ್ಯವೂ "ಪಾಲಿಸು ಭುವನಸಂಕುಲವ" ಎಂದು ಮುಗಿಯುತ್ತದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಮನವ ನಿಲ್ಲಿಸಲೇನು ಫಲ ನೆಱೆ | ತನುವ ನಿಲ್ಲಿಸಲೇನುಫಲ ಸಂ |
ಜನಿಸಿ ತೋಱುವ ವಚನಗಳನುಱೆಪೇನುಫಲ ತವ ಗೆ ||
ಅನವರತ ನಿನ್ನೊಳಗೆ ಭಕ್ತಿಯ | ನನುಕರಿಸದಿರಲೇನು ಫಲ ನಿಜ |
ವೆನಿಸುವಚಲಾನಂದ ಪಾಲಿಸು | ಭುವನಸಂಕುಲವಾ ||
ಅಂಧಕಗೆ ಕನ್ನಡಿಯ ಪಂಬಲ | ಸಿಂದಕಗೆ ಸದ್ಧರ್ಮನೀತಿಯು |
ಕುಂದುಕೊಱತೆಗಳಿದ್ದವಗೆ ಸುಕ್ಷೇಮಪರಿಣಾಮ ||
ಚಂದದಿಂದೊಪ್ಪುವವೆ ಸತ್ಯವ | ನಿಂದು ಪಿಡಿನಾತಂಗೆ ದುಃಖಿತ |
ರಂಗ ತೋಱುವುದುಂಟೆ ಪಾಲಿಸು ಭುವನಸಂಕುಲವಾ ||

---

ದೇವಲಾಪುರದ ನಂಜುಂಡ 1841

ಈತನು (1) ಅಪರಾಧಸ್ತೋತ್ರ, (2) ಕೃಷ್ಣರಾಜ ಪಟ್ಟಾಭಿಷೇಕ ವರ್ಣನೆ, (3) ಕೃಷ್ಣರಾಜಭಕ್ತಿಸಾರ, (4) ಕೃಷ್ಣರಾಜಭೋಗಾವಳಿ, (5) ಕೃಷ್ಣರಾಜ

ಶೃಂಗಾರಶತಕ, (6) ಕೃಷ್ಣರಾಜೇಂದ್ರವೃತ್ತರತ್ನಾವಳೀ ಟೀಕೆ, (7) ಕೃಷ್ಣೇಂದ್ರಗೀತೆ, (8) ತಿಬ್ಬಾಂಬಿಕಾಶತಕ, (9) ಲಿಂಗಸ್ತುತಿ, (10) ಶಂಕರಾಷ್ಟಕ, (11) ಶೈಲಜಾಧವಸ್ತೋತ್ರ, (12) ಸಮುದ್ರಮಥನಕಥೆ, (13) ಸೌಗಂಧಿಕಾಪರಿಣಯ ಈ ಗ್ರಂಥಗಳನ್ನು ಬರೆದಿದ್ದಾನೆ.

ಇವನು ವೀರಶೈವಕವಿ, ಇವನ ತಂದೆ ದೇವರಸ, ತಾಯಿ ನಂಜಮಾಂಬೆ, ಸ್ಥಳ ದೇವಲಾಪುರ, ಇಷ್ಟದೇವತೆ ನಂಜನಗೂಡು ನಂಜುಂಡೇಶ್ವರ. ಇವನು ಮೈಸೂರು ಮುಮ್ಮಡಿಕೃಷ್ಣರಾಜನ ಆಶ್ರಿತನಾಗಿದ್ದನು ಆ ದೊರೆಯ ಸ್ತುತಿರೂಪವಾದ ಅನೇಕಗ್ರಂಥಗಳನ್ನು ಬರೆದಿದ್ದಾನೆ "ಉಭಯಕವಿತೆಯೊಳು ಚತುರ" ಎಂದು ಹೇಳಿಕೊಂಡಿದ್ದಾನೆ ಕೃಷ್ಣರಾಜಶೃಂಗಾರಶತಕವನ್ನು 1811 ರಲ್ಲಿಯೂ ಕೃಷ್ಣರಾಜಭಕ್ತಿಸಾರವನ್ನು 1862 ರಲ್ಲಿಯೂ ಬರೆದಂತೆ ಆ ಗ್ರಂಥಗಳಿಂದ ತಿಳಿಯುತ್ತದೆ ಇವನ ಗ್ರಂಥಗಳಲ್ಲಿ ಕೆಲವು ಷಟ್ಪದಿರೂಪವಾಗಿಯೂ ಕೆಲವು ಸಾಂಗತ್ಯದಲ್ಲಿಯೂ ಕೆಲವು ವೃತ್ತದಲ್ಲಿಯೂ ಕೆಲವು ಕಂದದಲ್ಲಿಯೂ ಕೆಲವು ಹಾಡಿನ ರೂಪವಾಗಿಯೂ ರಚಿಸಲ್ಪಟ್ಟಿವೆ ಸಮುದ್ರಮಥನಕಥೆ ಯಕ್ಷಗಾನದಲ್ಲಿದೆ.

1 ಸೌಗಂಧಿಕಾಪರಿಣಯ

ಇದು ಸಾಂಗತ್ಯದಲ್ಲಿ ಬರೆದಿದೆ, ಸಂಧಿ 11, ಪದ 726. ಈ ಗ್ರಂಥವು ಮುಮ್ಮಡಿಕೃಷ್ಣರಾಜನು ರಚಿಸಿರುವ ಸೌಗಂಧಿಕಾಪರಿಣಯದ ಕಥೆಯ ಸಂಗ್ರಹವೆಂದೂ ಆದೊರೆಯ ಆಜ್ಞಾನುಸಾರವಾಗಿ ರಚಿತವಾಯಿತೆಂದೂ ಕವಿ ಹೇಳುತ್ತಾನೆ. ಇಂದ್ರನು ದೂರ್ವಾಸ ಋಷಿಯ ಶಾಪದಿಂದ ರತ್ನಪುರಿಯ ರಾಜನಾದ ಸುಚರಿತ್ರನಿಗೂ ಗುಣವತಿಗೂ ಸುಗಂಧರಾಯನೆಂಬ ಮಗನಾಗಿ ಹುಟ್ಟಿ ಸೌಗಂಧಿಕೆಯಾಗಿ ಹುಟ್ಟಿದ ಶಚಿಯನ್ನು ಮದುವೆಯಾಗಿ ಕೊನೆಗೆ ತನ್ನ ಪದವಿಯನ್ನು ಹೊಂದುತ್ತಾನೆ—ಎಂಬುದೇ ಕಥಾಸಾರ. ಗ್ರಂಥಾವತಾರದಲ್ಲಿ ಗರಳಪುರಿಯ ನಂಜುಂಡ, ಚಾಮುಂಡಿ, ಗಣೇಶ, ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡುಪದ್ಯಗಳನ್ನುದ್ಧರಿಸಿ ಬರೆಯುತ್ತೇವೆ —

ನಕ್ಷತ್ರ.

ಪರಮೇಶ್ವರ ನಾಟ್ಯವಾಡಲು ಶಿರದಿಂದ | ಬಿದ್ದ ಮಲ್ಲಿಗೆ ಮೊಗ್ಗುಗಳ |
ಪರಿಯೊಳು ಗಗನಕಾಂತೆಯ ಪಣ್ಣೆಕಲ್ಲಿನ | ತೆಱದೊಳೊಪ್ಪಿದುವು ತಾರೆಗಳು ||

ಬೆಳ್ದಿಂಗಳು

ಹಾಲ ಚೆಲ್ಲಿದ ಚಂದದೊಳು ಪುಷ್ಪಬಾಣನ | ಬೇಳುವೆ ಬೂದಿಯತೆಱದಿ |
ಮೂಱು ಲೋಕವ ತುಂಬಿ ತುಳುಕುತ ತೋಱಿತು | ವೇಲಾದ ಬೆಳದಿಂಗಳಾಗ ||

2. ಕೃಷ್ಣರಾಜಭಕ್ತಿಸಾರ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಪದ್ಯ 108. ಪ್ರತಿಪದ್ಯವೂ 'ಕೃಷ್ಣೇಂದ್ರ ರಕ್ಷಿಸು ನಮ್ಮನನವರತ'' ಎಂದು ಮುಗಿಯುತ್ತದೆ. ಇದು ಮುಮ್ಮಡಿ ಕೃಷ್ಣರಾಜನ ಸ್ತುತಿರೂಪವಾಗಿದೆ; ಇದಕ್ಕೆ ಕೃಷ್ಣೇಂದ್ರಭಕ್ತಿಸಾರಾಷ್ಟೋತ್ತರಶತಕ ಎಂಬ ಹೆಸರೂ ಉಂಟು. ಇದರಲ್ಲಿ ಕೃಷ್ಣರಾಜನು ಗ್ರಹಣದರ್ಪಣ, ಸಂಖ್ಯಾರತ್ನಕೋಶ, ಶ್ರೀತತ್ವನಿಧಿ ಮೊದಲಾದ ಗ್ರಂಥಗಳನ್ನು ರಚಿಸಿದುದು, ಉಡುಪಿಯ ಕೃಷ್ಣನಿಗೆ ಪಚ್ಚೆಮುತ್ತಿನ ಮಾಲೆಯನ್ನೂ ಅಮಪವಾಡಿವೀರಭದ್ರನಿಗೆ ರಜತಕವಚವನ್ನೂ ಸಮರ್ಪಿಸಿದುದು, ಗುಡಿಗೋಪುರಗಳನ್ನು ಕಟ್ಟಿಸಿದುದು ಇವೇ ಮೊದಲಾದ ವಿಷಯಗಳು ಹೇಳಿವೆ. ''ಸಲಹಿದೊಡೆಯನು ಬುದ್ಧಿ ವಿದ್ಯೆಯ ಕಲಿಸಿರುವ ಗುರು ಅನ್ನಪ್ರದನು ನೀನು ನಿನ್ನ ಸುಗುಣಾವಳಿಯ ವರ್ಣಿಸೆ ಎನ್ನ ಜನ್ಮಕೆ ಫಲವಿದು'' ಎಂದು ಕವಿ ದೊರೆಯವಿಷಯವಾಗಿ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಶಿವ, ಪಾರ್ವತಿ, ಗಣೇಶ, ವೀರಭದ್ರ, ಷಣ್ಮುಖ ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರಯುತ್ತೇವೆ —

ಶೂರ ಕೇಳ್ಳೆ ದೇವಗಂಗೆಯ | ತೀರದಲ್ಲಾ ಕಲ್ಪವೃಕ್ಷವು |
ಭೂರಿತಪಹನು ಗೈದು ನಿನ್ನಯ ಹಸ್ತವಾಗುದಿಸಿ ||
ಬೀಱುತಿಹುದಿಷ್ಟಾರ್ಥವೆಲ್ಲವ | ಯಾರ ಕೈಗಿಂತಹುದು ಶಕ್ತಿಯು |
ತೋಱಿಸೈ ಕೃಷ್ಣೇಂದ್ರ ರಕ್ಷಿಸು ನಮ್ಮನನವರತ ||
ಎಲುವನಿತ್ತ ದಧೀಚಿ ಮಾಂಸವ | ಬಲದೊಳಿತ್ತನು ಶಿಬಿಯು ಚರ್ಮ |
ಕಲಿತಕವಚವನಿತ್ತ ಕರ್ಣನು ಬಲಿಯು ಬೇಡಲ್ಕೆ ||
ನೆಲವನಿತ್ತನು ನಿನ್ನೊಲಿಂತು | ಜ್ವಲಸುರತ್ನಾಭರಣವಿತ್ತಿಹ |
ಚೆಲುವರಾರ್ ಕೃಷ್ಣೇಂದ್ರ ರಕ್ಷಿಸು ನಮ್ಮನನವರತ ||

3. ಕೃಷ್ಣೇಂದ್ರಗೀತೆ.

ಇದರಲ್ಲಿ 32 ಪದಗಳಿವೆ ಒಂದನ್ನು ತೆಗೆದು ಬರೆಯುತ್ತೇವೆ —

ಬಗಸುಗಣ್ಣಿನಾ ಸೊಗಸುಗಾಜನೇ | ತಗಲಿ ವಿರಹವಾ ತಾಳಲಾಱೆನು |
ನಗೆಯ ತೋಱದೇ ನಾಚಿಸುತ್ತಿಹೆ | ಮುಗಿವೆ ಕೈಗಳಾ ಮೋದದಿಂದಲೆ ||

4. ಶೈಲಜಾಧವಸ್ತೋತ್ರ.

ಇದು ಶಿವಸ್ತುತಿರೂಪವಾಗಿದೆ, ವೃತ್ತ 33 ಇದರಿಂದ ಒಂದು ಪದ್ಯವನು ತೆಗೆದು ಬರೆಯುತ್ತೇವೆ—

ಮುಂಡಿತಪುಂಡರೀಕನಯನೋಜ್ವಲಬಾಣ ಪರೇಶ ಮೇರುಕೋ |
ದಂಡ ಪಿಚಂಡಮಧ್ಯನಿಜದೀಕ್ಷಿತಲೋಕ ಗಿರೀಶ ದುಃಖಮಂ ||
ಖಂಡಿಸಿ ಭೋಗಮೋಕ್ಷಸುಖವೀಯುವುದೆನ್ನುತೆ ಭಕ್ತಿಯಿಂದ ನಂ |
ಜುಂಡನು ನಿನ್ನ ಭವ್ಯನುತಿಯನ್ನೆಸಗಿರ್ಪನು ಶೈಲಜಾಧವಾ ||

5 ಶಂಕರಾಷ್ಟಕ.

ಇದರಲ್ಲಿ ತೂಣಕವೃತ್ತಗಳು 8 ಇವೆ. ಒಂದು ವೃತ್ತವನ್ನು ತೆಗೆದು ಬರೆಯುತ್ತೇವೆ :—

ನಿನ್ನ ನಾಮವನ್ನು ಪೇಳಿ ಧನ್ಯನಾಗಲೊಲ್ಲದೆ |
ಹೊನ್ನುಹೆಣ್ಣುಮಣ್ಣಿನಾಸೆಯನ್ನು ತಾಳಿ ನಿಲ್ಲದೆ ||
ಕುನ್ನಿಯಂತೆ ಸುತ್ತಿ ಸೌಖ್ಯವನ್ನು ಪೊಂದಲಿಲ್ಲದೆ |
ಬನ್ನವಾಂತು ಮೂಢನಾದೆಯೆನ್ನ ಕಾಯೊ ಶಂಕರಾ ||

6 ಲಿಂಗಸ್ತುತಿ.

ಇದರಲ್ಲಿ 27 ಪದ್ಯಗಳಿವೆ. ಒಂದು ಪದ್ಯವನ್ನು ತೆಗೆದುಬರೆಯುತ್ತೇವೆ:

ಎನ್ನಯ ಮನದಲಿ ನೆಲಸಿಹ ಲಿಂಗಂ | ಎನ್ನಯ ಪಾಪವ ಖಂಡಿಪ ಲಿಂಗಂ |
ಎನ್ನಯ ಶ್ರೀಗುರುಶಂಕರಲಿಂಗಂ | ಜಯಜಯ ಶಂಭೋ ಶಂಕರಲಿಂಗಂ ||

7. ಕೃಷ್ಣರಾಜಪಟ್ಟಾಭಿಷೇಕವರ್ಣನೆ.

ಇದು ಸಾಂಗತ್ಯದಲ್ಲಿ ಬರೆದಿದೆ ಇದರಲ್ಲಿ ಮುಮ್ಮಡಿಕೃಷ್ಣರಾಜನ ಷಷ್ಠಿತಮವತ್ಸರ ಪಟ್ಟಾಭಿಷೇಕಮಹೋತ್ಸವವು ವರ್ಣಿಸಿದೆ.

8 ಕೃಷ್ಣರಾಜ ಭೋಗಾವಳಿ.

ಇದರಲ್ಲಿ 27 ಪದಗಳಿವೆ. ಒಂದು ಪದವನ್ನು ತೆಗೆದು ಬರೆಯುತ್ತೇವೆ :—

ಮಾರನ ಮೀಱಿದ ಚೆಲುವನು ಧರೆಯೊಳು | ಬೇಱುವನೀದೊರೆಯು | ಚೆಲುವನು
ನಾರಿಯ ಜಗವಂಪೊರೆಯಲು ನಲಿಯುತ | ತೋಱುವನಾಹರಿಯು | ಧರೆಯೊಳು||

9. ಅಪರಾಧಸ್ತೋತ್ರ.

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ, ಪದ್ಯ 127, ಶಿವಸ್ತುತಿರೂಪವಾಗಿದೆ ಮುಮ್ಮಡಿಕೃಷ್ಣರಾಜನ ಅನುಗ್ರಹವು ತಪ್ಪಿದಮೇಲೆ ಈ ಗ್ರಂಥವನ್ನು ಬರೆದುದಾಗಿ ಪ್ರತೀತಿ ಇದೆ.

10. ಕೃಷ್ಣರಾಜಶೃಂಗಾರಶತಕ.

ಇದರಲ್ಲಿ 101 ಕಂದಗಳಿವೆ, ಅಲ್ಲಲ್ಲಿ ಗದ್ಯಭಾಗವೂ ಇದೆ. ಕೃಷ್ಣರಾ

ಜನು ಗಜಾರೂಢನಾಗಿ ಬೀದಿಯಲ್ಲಿ ಬರುವಾಗ ಅವನನ್ನು ನೋಡಿದ ಪುರಸುಂದರಿಯರ ಮನೋವೃತ್ತಿಗಳನ್ನು ವಿವರಿಸುವುದಾಗಿ ಕವಿ ಹೇಳುತ್ತಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ನಾರಿಯ ಭುವನಕ್ಕಿವ ಜಂ | ಭಾರಿಯೊ ಭುಜಯುಗ್ಮದಿಂದಮವನಿಯೊಳಿಹ ದೈ |
ತ್ಯಾರಿಯೊ ನೇತ್ರದ್ವಯದ ಪು | ರಾರಿಯೊ ಶ್ರೀಕೃಷ್ಣರಾಜನಾವವನಮ್ಮಾ ||
ಪಿಡಿನಡೆಯಿಂ ನಿಡುಜಡೆಯಿಂ | ಬಡನಡುವಂ ಬಳ್ಕುವಂತೆ ಭಾರಸ್ತನಗಳ್ |
ಜಡಿಯುತ್ತಿರೆ ಜಗದೊಡೆಯನ | ಸಡಗರದಿಂ ನೋಳ್ಪೊಡೋರ್ವ ಚದುರೆಯು ಬೆಡಗಿಂ ||
ಸ್ಮರನಿಂ ಪೆರ್ಚಿದ ಕುಸುಮಾ | ಕರನಿಂ ವಿರಹಾಗ್ನಿ ಹೆಚ್ಚಿ ಕಂದಿ ಹಿಮಾನೀ |
ಕರನಿಂ ಮಱುಗುವೆನು ಶಿವಂ | ಕರ ನೀಂ ಶ್ರೀ ಕೃಷ್ಣರಾಜ ಕರುಣದಿ ಸಲಹೈ ||

---

ರಂಗಶಾಸ್ತ್ರಿ. 1849.

ಈತನು ನರಸಿಂಹಪುರಾಣಸ್ಥವಾದ ಪ್ರಹ್ಲಾದಚರಿತ್ರೆಗೆ ಕನ್ನಡಟೀಕೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ, ಶ್ರೀರಂಗಪಟ್ಟಣದವನು. ಶಕ 1770 ನೆಯ ಕೀಲಕದಲ್ಲಿ (1849) ಈ ಟೀಕೆಯನ್ನು ಬರೆದಂತೆ ಹೇಳುತ್ತಾನೆ. ಇವನ ಟೀಕೆಗೆ ವಿದ್ವತ್ಸಂತೋಷಿಣಿ ಎಂದು ಹೆಸರು. ಅಧ್ಯಾಯ 2

---

ಲಿಂಗ. ಸು 1850.

ಇವನು ಮಕರಾಂಕಸೇನಕಥೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ ಈತನು ವೀರಶೈವಕವಿ ಎಂದು ತೋರುತ್ತದೆ. ಇವನ ಕಾಲವು ಸುಮಾರು 1850 ಆಗಿರಬಹುದು. ನಂಜಪುರಿಚೆನ್ನಕೇಶವ, ರಾಘವೇಂದ್ರಗುರುಮೂರ್ತಿ ಇವರುಗಳನ್ನು ಸ್ತುತಿಸಿದ್ದಾನೆ. ಪೂರ್ವಕವಿಗಳಲ್ಲಿ ರಾಘವಾಂಕ, ಹರಿಹರ, ಹಂಪ, ನಾಗವರ್ಮ ಇವರುಗಳನ್ನು ಸ್ಮರಿಸಿದ್ದಾನೆ ತನ್ನ ಗ್ರಂಥದ ವಿಷಯವಾಗಿ ಹೀಗೆ ಹೇಳುತ್ತಾನೆ —

ವನಿತೆಯ ಸವಿನುಡಿಗಿಂದಂ | ಘನವಾಗಿಹುದಮೃತಸಾರ ಲಿಂಗನ ಕೃತಿಯೊಳ್ ||

ಅಳಿಯಲಿಂಗರಾಜನೂ ಇದೇ ಹೆಸರಿನ ಒಂದು ಯಕ್ಷಗಾನವನ್ನು ಬರೆದಿದ್ದಾನೆ. ಈ ಕವಿ ತದ್ಭಿನ್ನನೆಂದು ತೋರುತ್ತದೆ.

---

## ಅಪರಾಳತಮ್ಮಣ್ಣ. ಸು. 1850

ಈತನು ಕೃಷ್ಣಪಾರಿಜಾತ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನ ಸ್ಥಳ ರಾಯಿಚೂರು. ಇವನು ಸುಮಾರು 1850 ರಲ್ಲಿ ಇದ್ದಿರಬಹುದು.

---

## ಆರ್ಯಾಚಾರ್ಯ ಸು. 1850.

ಈತನು ಲಘು ಅಧ್ಯಾತ್ಮಮಾಲೆಯನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಸುಮಾರು 1850 ರಲ್ಲಿ ಇದ್ದಿರಬಹುದು ಇವನ ಗ್ರಂಥವು ದ್ವೈತಸಿದ್ಧಾಂತವನ್ನು ಸಂಗ್ರಹವಾಗಿ ಬೋಧಿಸುತ್ತದೆ.

---

## ನಂದಪ್ಪ. ಸು. 1850.

ಈತನು ಪ್ರಭುಚರಿತ್ರೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನು ವೀರಶೈವಕವಿ, ಇವನ ಗುರು ಚೆನ್ನಮಲ್ಲಿಕಾರ್ಜುನ, ಸ್ಥಳ ಹೊಸಕೋಟೆ ಇವನು ಸುಮಾರು 1850 ರಲ್ಲಿ ಇದ್ದಿರಬಹುದು. ಇವನ ಗ್ರಂಥದಲ್ಲಿ ಪ್ರಭುದೇವನ ಚರಿತೆ ಹೇಳಿದೆ.

---

## ವೇದಾಂತರಾಘವಾಚಾರ್ಯ 1851.

ಈತನು ಶಾಲ್ಯದ ಕೃಷ್ಣರಾಜನ (1760) ನಿಜದೀಪಿಕಾರತ್ನಕ್ಕೆ ಕನ್ನಡಟೀಕೆಯನ್ನು ಬರೆದಿದ್ದಾನೆ ಇವನು ಶ್ರೀವೈಷ್ಣವಕವಿ, ಮುಮ್ಮಡಿಕೃಷ್ಣರಾಜನ ಆಸ್ಥಾನವಿದ್ವಾಂಸನೆಂದೂ ಸಂಸ್ಕೃತಾಂಧ್ರಕರ್ಣಾಟಕವಿತಾವಿಶಾರದನೆಂದೂ ತಿರುಮಲಸೋಮನನಗರನಿವಾಸಿಯೆಂದೂ ಹೇಳಿಕೊಂಡಿದ್ದಾನೆ. ಈ ಟೀಕೆಯನ್ನು 1851 ರಲ್ಲಿ ಬರೆದಂತೆ ಹೇಳುತ್ತಾನೆ.

---

## ಮಾನವಿ ವೀರಪ್ಪ. 1851.

ಈತನು ಕಥಾಸಾಗರವನ್ನು ಬರೆದಿದ್ದಾನೆ. ಇವನು ವೀರಶೈವಕವಿ ಎಂದು ತೋರುತ್ತದೆ. ಇವನ ಸ್ಥಳ ಹುಬ್ಬಳ್ಳಿ. ಈ ಗ್ರಂಥವನ್ನು 1851 ರಲ್ಲಿ ಬರೆದಂತೆ ಹೇಳುತ್ತಾನೆ. ಇದರಲ್ಲಿ 40 ಕಥೆಗಳು ಹೇಳಿವೆ.

---

## ಅಳಿಯ ಲಿಂಗರಾಜ (1823-1874).

ಈತನು ನಮಗೆ ತಿಳಿದಮಟ್ಟಿಗೆ (1) ಅಂಗದಸಂಧಾನ, (2) ಇಂದ್ರಕೀಲ,

(3) ಕುಶಲವರ ಕಥೆ, (4) ಕೃಷ್ಣಬಾಲಲೀಲೆ, (5) ಕೃಷ್ಣಾರ್ಜುನರ ಕಾಳಗ, (6) ಗಯಚರಿತ್ರೆ, (7) ಗಿರಿಜಾಕಲ್ಯಾಣ, (8) ಚಂದ್ರಾನನೀಕಥೆ, (9) ಚಂದ್ರಾವಳಿಯ ಜೋಗಿಪಾಡು, (10) ಚಿಕ್ಕ ಪಟ್ಟಾಭಿಷೇಕ, (11) ಚೂಡಾಮಣಿ, (12) ಜಲಂಧರಕಾಳಗ, (13) ತಾರಕವಧೆ, (14) ದ್ರೌಪದೀಸ್ವಯಂವರ, (15) ನರಪತಿಚರಿತ, (16) ನಳಕೂಬರವಿಲಾಸ, (17) ನಳಚರಿತ್ರ, (18) ಪಂಚವಿಂಶತಿಲೀಲೆ, (19) ಪಾರಿಜಾತಾಪಹರಣ, (20) ಪುತ್ರಕಾಮೇಷ್ಟಿ, (21) ಪ್ರಭಾವತೀಪರಿಣಯ, (22) ಬಭ್ರುವಾಹನಕಾಳಗ, (23) ಬಾಲಲೀಲೆ, (24) ಮಕರಾಂಕಸೇನಕಥೆ, (25) ಮದಾಲಸಾಪರಿಣಯ, (26) ಮಹಾಲಿಂಗಶತಕ, (27) ಮ್ಯುರಾವಣಕಥೆ, (28) ಮೋಹಿನಾಟಕ, (29) ರಾಮೋದಯಕಥೆ, (30) ರುಕ್ಮಾಂಗದಚರಿತ್ರೆ, (31) ಲಾವಣಿಗಳು, (32) ವನವಾಸರಾಮಾಯಣ, (33) ವಾಲಿಸುಗ್ರೀವರ ಕಾಳಗ, (34) ವಿರಾಟಪರ್ವ, (35) ವೀರಭದ್ರಶತಕ, (36) ಶೃಂಗಾರಸೂತ್ರೋದಾಹರಣಪದ, (37) ಸೀತಾಕಲ್ಯಾಣ, (38) ಸೀತಾಪಹಾರ, (39) ಸೀತಾಸ್ವಯಂವರ, (40) ಸುಧನ್ವನ ಕಾಳಗ, (41) ಸೇತುಬಂಧ, (42) ಸ್ಯಮಂತಕೋಪಾಖ್ಯಾನ—ಈ ಗ್ರಂಥಗಳನ್ನು ಬರೆದಿದ್ದಾನೆ. ಇವಲ್ಲದೆ (43) ಶಿವಭಕ್ತಿರತ್ನಾಕರ (44) ಮಹಾಲಿಂಗನಕ್ಷತ್ರಮಾಲಿಕೆ, (45) ಶ್ರೀಕಂಠನಕ್ಷತ್ರಮಾಲಿಕೆ, (46) ಸೀತೇಶತಾರಾವಳಿ, (47) ಲಂಕಾದಹನ ಎಂಬ ಗ್ರಂಥಗಳನ್ನೂ ಬರೆದಿದ್ದಾನೆ ಎಂದು ಕೆಲವರು ಹೇಳುತ್ತಾರೆ.

ಇವನು ಮೈಸೂರು ಅರಸುಗಳ ಸಮುದಾಯಕ್ಕೆ ಸೇರಿದವನು. ಇವನ ತಂದೆ ಲಿಂಗರಾಜ, ತಾಯಿ ಕೆಂಪದೇವಾಂಬಿಕೆ, ಗುರು ರೇಣುಕಾಚಾರ್ಯವಂಶೋದ್ಭವನಾದ ಚನ್ನವೀರದೇಶಿಕ. ಇವನು ಶಕ 1745 ಸ್ವಭಾನುವಿನಲ್ಲಿ (1823) ಹುಟ್ಟಿದನು, ಶಕ 1796 ಭಾವದಲ್ಲಿ (1874) ಗತಿಸಿದನು. ಈತನು ಬಾಲ್ಯದಿಂದ ಮೈಸೂರುದೊರೆಯಾದ ಮುಮ್ಮಡಿಕೃಷ್ಣರಾಜನ (1799-1868) ಪೋಷಣೆಯಲ್ಲಿದ್ದು ವಿದ್ಯಾವಂತನಾದನು. ಆ ದೊರೆ ಇವನಿಗೆ ದೊಡ್ಡಪುಟ್ಟತಾಯಮ್ಮಣ್ಣಿ, ಚಿಕ್ಕಪುಟ್ಟತಾಯಮ್ಮಣ್ಣಿ ಎಂಬ ಇಬ್ಬರು ಕನ್ಯೆಯರನ್ನು ಮದುವೆಮಾಡಿ ಅಪರಿಮಿತವಾದ ಧನಕನಕಾದಿಗಳನ್ನು ಕೊಟ್ಟನು ಈ ಕಾರಣದಿಂದ ಇವನಿಗೆ ಅಳಿಯಲಿಂಗರಾಜ ಎಂಬ ಹೆಸರು ಬಂದಿತು. ಐಶ್ವರ್ಯವಂತನಾಗಿದ್ದರೂ ಈತನು ಸರ್ವಕಾಲದಲ್ಲಿಯೂ ವಿದ್ವಜ್ಜನಸಹವಾಸ, ಪಾರಪ್ರವಚನ, ನೂತನಗ್ರಂಥರಚನೆ ಇವುಗಳಲ್ಲಿಯೇ ಆಸಕ್ತನಾಗಿದ್ದು ಸಂಸ್ಕೃತಕರ್ಣಾಟಭಾಷೆಗಳಲ್ಲಿ ಉದ್ದಾಮಪಾಂಡಿತ್ಯವನ್ನು ಪಡೆದು ಆಕಾಲದ ಕರ್ಣಾಟಕವಿಗಳಲ್ಲಿ ಅಗ್ರೇಸರನೆನಿಸಿಕೊಂಡಿದ್ದನು ಸಂಗೀತವೇ ಮೊದಲಾದ ಕಳೆ

ಗಳಲ್ಲಿಯೂ ನಿಪುಣನೆನಿಸಿಕೊಂಡಿದ್ದನು. ಈತನ ಸಭೆಯಲ್ಲಿ ಯಾವಾಗಲೂ ದೊಡ್ಡ ವಿದ್ವಾಂಸರು ಸೇರಿ ನಾನಾವಿಧಗ್ರಂಥಗಳನ್ನು ಅವಲೋಕಿಸಿ ಅರ್ಥಾನು ವಾದಮಾಡುತ್ತ ಇದ್ದುದರಿಂದ ಇವನ ಸಾಧಾರಣಸೇವಕರೂ ಕೂಡ ಪ್ರಾಯಿ ಕವಾಗಿ ಕವಿತಾಶಕ್ತಿಯನ್ನು ಪಡೆದಿದ್ದರು. ದಾತೃತ್ವ, ವಿದ್ವತ್ಪಕ್ಷಪಾತ ಇವು ಗಳಲ್ಲಿ ಈತನು ಬಹಳ ಹೆಸರುವಾಸಿಯನ್ನು ಹೊಂದಿದ್ದನು. ದೊರೆಯ ಸಭೆಯಲ್ಲಿ ಇವನಿಗೆ ಉಭಯಕವಿತಾವಿಶಾರದ ಎಂಬ ಬಿರುದು ಪ್ರಾಪ್ತವಾಯಿತು. ಕೆಲವು ಗ್ರಂಥಗಳ ಆರಂಭದಲ್ಲಿ ಮುಮ್ಮಡಿಕೃಷ್ಣರಾಜ, ಅವನ ಮಹಿಷಿ ಲಿಂಗಾಂಬೆ ಇವರುಗ ಳನ್ನು ವಂದಿಸಿದ್ದಾನೆ.

ಚಂಪು, ಸಾಂಗತ್ಯ, ಷಟ್ಪದಿ, ಯಕ್ಷಗಾನ, ಶತಕ, ಹಾಡು, ಲಾವಣಿ ಇವೇ ಮೊದಲಾದ ರೂಪದಲ್ಲಿರುವ ಇವನ ಗ್ರಂಥಗಳು ಈತನ ಸರ್ವತೋ ಮುಖವಾದ ಕವಿತಾಶಕ್ತಿಯನ್ನು ಸೂಚಿಸುತ್ತವೆ ಕೆಲವುಗ್ರಂಥಗಳ ರಚನಾಕಾ ಲವನ್ನು ವಿಶೇಷವಾಗಿ ಕಲಿವರ್ಷದಲ್ಲಿಯೂ ಒಂದೆರಡುಕಡೆ ಶಕವರ್ಷದಲ್ಲಿಯೂ ಹೇಳಿ ದ್ದಾನೆ. ಶಕ 1775ರಲ್ಲಿ (1852) ಮದಾಲಸಾಪರಿಣಯ, ಸ್ಯಮಂತಕೋಪಾ ಖ್ಯಾನ ಇವುಗಳನ್ನೂ, ಶಕ 1783ರಲ್ಲಿ (1860) ಜಲಂಧರಕಾಳಗವನ್ನೂ, ಕಲಿ 4953ರಲ್ಲಿ (1851) ನಳಕೂಬರವಿಲಾಸವೆಂಬ ಯಕ್ಷಗಾನವನ್ನೂ, ಕಲಿ 4962 ರಲ್ಲಿ (1861) ಗಿರಿ ಜಾಕಲ್ಯಾಣವನ್ನೂ, ಕಲಿ 4964 ರಲ್ಲಿ (1862) ದ್ರೌಪದೀಸ್ವಯಂವರವನ್ನೂ, ಕಲಿ 4966 ರಲ್ಲಿ (1864) ಚಂದ್ರಾವಳೀಕಥೆಯನ್ನೂ, ಕಲಿ 4967 ರಲ್ಲಿ (1865) ಕುಶಲವರ ಕಥೆ, ಸುಧ ನ್ವನ ಕಾಳಗ ಇವುಗಳನ್ನೂ, ಕಲಿ 4968 ರಲ್ಲಿ (1866) ವಿರಾಟಪರ್ವ, ಇಂದ್ರಕೀಲ ಕೃಷ್ಣಬಾಲಲೀಲೆ, ಬಭ್ರುವಾಹನಕಾಳಗ, ಸೀತಾಪಹಾರ ಇವುಗಳನ್ನೂ, ಕಲಿ 4969 ರಲ್ಲಿ (1867) ಪಾರಿಜಾತಾಪಹರಣ, ಮೋಡಿನಾಟಕ, ನರಪತಿಚರಿತ ಇವುಗ ಳನ್ನೂ ಬರೆದಂತೆ ಆ ಗ್ರಂಥಗಳಿಂದ ತಿಳಿಯುತ್ತದೆ.

ಪೂರ್ವಕವಿಗಳಲ್ಲಿ ರಾಘವಾಂಕ, ಹರಿಹರ, ದೇವೇಶ್ವರ, ಪಂಪ, ನಾಗವರ್ಮ ಇವರುಗಳನ್ನು ಸ್ಮರಿಸಿದ್ದಾನೆ.

"ಶ್ರೀ ಕೃಷ್ಣನೃಪತಿಳಕಜಾಮಾತೃತಾಭಾಗ್ಯಸಾಕಲ್ಯನಿಧಿ, ಶ್ರೀ ಕಾಳಿಕಾ ರಮಣ ನಿರುಪಮಕೃಪಾಲಬ್ಧ ವಿದ್ಯಾವಿನೋದರಸಿಕ, ಅಧ್ಯಾತ್ಮಭೂವನಿತಾನರ್ತನ ರಂಗಭೂತರಸನ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ತನ್ನ ಕವಿ ತಾಚಾತುರಿಯನ್ನು ಪ್ರಭಾವತೀಪರಿಣಯದ ಈ ಪದ್ಯಗಳಲ್ಲಿ ಹೀಗೆ ಹೇಳಿಕೊಂ ಡಿದ್ದಾನೆ :—

ಇನಿದೊಸರ್ವ ತನಿಮಾವಿನೊಳ್ಪೊಣ್ಮ ರಸದ ಚೆಲ್ವ |
ಕೆನೆವಾಲಸವಿಯೆದುಸಿರದಚ್ಚ ಪುಡಿಯನ್ನದುರಿ |
ಪನುವಡೆದು ಕಾಶ್ಮೀರದೊಡವೆರಸಿ ಹಳುಕುಸಕ್ಕರೆನುಚ್ಚ ಸಾರ್ಚಿ ಸುಣ್ಪಿಂ ||
ಇನಿಯುಳಿನಿವಾಯ್ಗ್ರೆಪೆಯುತಾರಸಾಯನವು ಗ |
ಳ್ಕನೆ ಮುಕ್ಕುಳಿಸುತವಳು ಮುಗುಟೀಯೆ ಸವಿದು ಝು |
ಮ್ಮನೆ ನಲಿವ ಮನದನ್ನನೊಳ್ಸೋಗದೊಲೆನ್ನ ಕೃತಿ ರಸಿಕರಂ ಮರುಳಿಸಗದೇ ||
ಇದು ಪೊಸತು ರೀತಿ ಭಾಪಿದುವೆ ರಸವೃತ್ತಿ ಮ |
ತ್ತಿದಿದಲಂಕೃತಿ ಚಾತುರೀ ಮಾಧುರೀಪದಪಿ |
ದಿದುವೆ ಮಝು ಸರಸೋಕ್ತಿಯುಕ್ತ್ಯುಕ್ತಿಯುಚ್ಚರಿಯಿದಿದು ಮನೋಗಮುಭಾವದ ||
ಪದಪಿದುವೆ ಭಳರೆ ಲಸದರ್ಥಗೌರವಮಿದಿಂ |
ತಿದು ನವರಸಾಧಾರಸಾರಕೃತಿಯೆಂದು ಕೋ |
ವಿದರೊಲ್ದು ಮೆಚ್ಚೆಯೊಚ್ಚತಮಾಂ ನಿವಿರ್ಚಿದೆಂ ಸುಶ್ರಾವ್ಯಮಂ ಕಾವ್ಯಮಂ ||

ಇವನ ಗ್ರಂಥಗಳಲ್ಲಿ ಗಯಚರಿತ್ರೆ, ನಳಕೂಬರವಿಲಾಸ ಇವೆರಡೂ ಚಂಪೂರೂಪವಾಗಿಯೂ ಯಕ್ಷಗಾನರೂಪವಾಗಿಯೂ ಇವೆ, ಗಿರಿಜಾಕಲ್ಯಾಣವನ್ನು ಸಾಂಗತ್ಯದಲ್ಲಿಯೂ ಯಕ್ಷಗಾನರೂಪವಾಗಿಯೂ ಬರೆದಿದ್ದಾನೆ, ನರಪತಿಚರಿತ್ರವು ಅಲಂಕಾರಗ್ರಂಥ; ಪ್ರಭಾವತೀಪರಿಣಯವು ವಾರ್ಧಕಷಟ್ಪದಿಯಲ್ಲಿದೆ, ವೀರಭದ್ರಶತಕವು ವೃತ್ತರೂಪವಾಗಿಯೂ ಮಹಾಲಿಂಗಶತಕವು ಕಂದರೂಪವಾಗಿಯೂ ಇವೆ, ಹಾಡುಗಳನ್ನೂ ಲಾವಣಿಗಳನ್ನೂ ಬಿಟ್ಟರೆ ಉಳಿದುವುಗಳೆಲ್ಲಾ ಪ್ರಾಯಿಕವಾಗಿ ಯಕ್ಷಗಾನಗಳಾಗಿವೆ. ಇವುಗಳಲ್ಲಿ ಪ್ರತಿಪಾದಿತವಾದ ಪುರಾಣಕಥೆಗಳು ಹೆಸರುಗಳಿಂದಲೇ ವ್ಯಕ್ತವಾಗುತ್ತವೆ. ಕೆಲವು ಮುಖ್ಯವಾದ ಗ್ರಂಥಗಳನ್ನು ಮಾತ್ರ ಕೆಳಗೆ ವಿವರಿಸುತ್ತೇವೆ.

## 1. ನರಪತಿಚರಿತ.

ಇದು ಚಂಪೂರೂಪವಾಗಿದೆ. ಪೀಠಿಕೆ, ಶಬ್ದಾಲಂಕಾರ, ಅರ್ಥಾಲಂಕಾರ ಎಂಬ 3 ಉಲ್ಲಾಸಗಳನ್ನು ಒಳಕೊಂಡಿದೆ. ಈ ಗ್ರಂಥವನ್ನು ತನ್ನ ಪತ್ನಿಯರಿಗೋಸ್ಕರ ಬರೆದಂತೆ ಕವಿ ಹೇಳುತ್ತಾನೆ. ಲಕ್ಷಣಪದ್ಯಗಳು ಪತ್ನಿಯರನ್ನು ಸಂಬೋಧಿಸಿ ಹೇಳಲ್ಪಟ್ಟಿವೆ. ಉದಾಹರಣಪದ್ಯಗಳೆಲ್ಲಾ ಮುಮ್ಮಡಿ ಕೃಷ್ಣರಾಜನ ಸ್ತುತಿರೂಪವಾಗಿವೆ. ಈ ದೊರೆ ಸಭೆಯಲ್ಲಿ ಈ ಗ್ರಂಥವನ್ನು ಓದಿಸಿ ಕೇಳಿ ಸಂತೋಷ

ಪಟ್ಟು ಕವಿಗೆ ಉಭಯಕವಿತಾವಿಶಾರದ ಎಂಬ ಬಿರುದನ್ನು ಕೊಟ್ಟಂತೆ ಪ್ರತೀತಿ ಇದೆ. ಗ್ರಂಥಾವತಾರದಲ್ಲಿ ವೀರೇಶ್ವರಸ್ತುತಿ ಇದೆ ಬಳಿಕ ಕವಿ ಈಶ್ವರ, ಪಾರ್ವತಿ, ಗಣೇಶ, ಸರಸ್ವತಿ ಇವರುಗಳನ್ನು ಹೊಗಳಿದ್ದಾನೆ ಉಲ್ಲಾಸಗಳ ಅಂತ್ಯದಲ್ಲಿ ಈ ಗದ್ಯವಿದೆ :—

ಇದು ವಿನಮದಖಿಲಸುರಾಸುರಸ್ತೋಮಮಸ್ತಕತಲವಿನ್ಯಸ್ತಪ್ರಶಸ್ತಕೋಟೀರಕೋಟೀತಟಘಟಿತಮಣಿಗಣಕಿರಣಪಟಲಪಾಟಲಿತಚರಣಪುಂಡರೀಕ ಶ್ರೀವೀರಭದ್ರಕರುಣಾಕಟಾಕ್ಷಸಮಾಸಾದಿತಾನಿತರಸಾಧಾರಣಸಾರಸ್ವತೋದಯಕಮನೀಯನಪ್ಪ ನಿಖಿಲಸರಸಕವಿಕುಲತಿಲಕ ಶ್ರೀ ಲಿಂಗರಾಜವಿರಚಿತಮಾದ ನರಪತಿಚರಿತಮೆಂಬಲಂಕಾರಶಾಸ್ತ್ರದೊಳ್

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಮಹಿಶೂರಪುರ

ಅತ್ಯುಚ್ಚಸೌಧಶಿಖರಪ್ರತಿಬದ್ಧರತ್ನ | ಪ್ರತ್ಯಗ್ರಕಾಂತಿಚಯಕರ್ಬುರರಾಜಮಾರ್ಗಂ |
ಸತ್ಯೈಕತಾನಮವನೀಸುರಭಾಗಧೇಯಂ | ನಿತ್ಯಂ ಪುರಂ ಮೆರೆವುದೀಮಹಿಶೂರನಾಮಂ ||

ಪರಿಕರಾಂಕುರಾಲಂಕಾರ

ಧರಣಿಪಕೃಷ್ಣೇಂದ್ರನ ಸುಂ | ದರತೆಯನಾಲಿಸುತೆ ಕಂಡು ಕನಸಿನೊಳವನಂ |
ಧರಿಸಿತ್ತು ದೃಕ್ಫಲಮನಿ | ತೆರಜದಿಂ ಚಕ್ಷುಶ್ರ್ಶವೋಂಗನಾನಿಕುರುಂಬಂ ||

ನಿಂದಾನ್ಯುಕ್ತ್ಯಲಂಕಾರ.

ವಿತರ ಸಾಸಂ ಕೃಷ್ಣ | ಕ್ಷ್ಮಾಪತರುಣೀರಮಣ ಪೇಟ ನೀನೆಚ್ಚೊಡೆ ಬ |
ಲ್ಕ್ಯಾತಾಶುಗಮೊಂದಂ ರಿಪು | ಜಾತಂ ಬಿಡುತಿಹುದು ನೋಡ ಪಂಚಾಶುಗಮಂ ||

ವಿಭಾವನಾಲಂಕಾರ.

ರಿಪುವನಿತಾಜನಾಶ್ರುಜಲಧಾರೆಯಿನಾಗಿಹ ಮೇಘಕಾಲದೊಳ್ |
ನೃಪವರ ಕೃಷ್ಣರಾಜ ತವ ಕೀರ್ತಿಮರಾಳಿ ವಿರೂಢಹರ್ಷದಿಂ ||
ದಪಗತಶಂಕೆಯಿಂ ತೊಳಲುತಿರ್ಪುದು ಸೆಲ್ಲಜಗತ್ತಿನೊಳಂ ಪ್ರತಾಪಸ |
ತ್ತಪನನುಮಾಗಳುಂ ಬೆಳಗುತಿರ್ಪನುದೀಕ್ಷಿಸೆ ಚಿತ್ರಮಲ್ತೆಪೇಳ್ ||

2 ಪ್ರಭಾವತೀಪರಿಣಯ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ, ದೊಡ್ಡ ಗ್ರಂಥ. ಇದರಲ್ಲಿ "ಹರಿವಂಶದೊಳಗೆ ರಂಜಿಪ ರುಕ್ಮಿಣೀಕುಮಾರನು ದನುಜಸುತೆಯ ಪ್ರಭಾವತಿಯನೊಲಿಸಿ ಪರಿಣಯವಾದ" ಕಥೆ ಹೇಳಿದೆ ಗ್ರಂಥಾವತಾರದಲ್ಲಿ ಈಶ್ವರ, ಪಾರ್ವತಿ, ಗಣೇಶ, ಸರಸ್ವತಿ ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ :—

ಸಮುದ್ರ

ಸಿರಿಯ ಪೊಸ ತವರೂರು ಪವಳದನ್ನದ ಪಾರು |
ಸುರರ್ಕೈಸಿರಿಯ ನಾಡು ಹರಿಯಿರುವ ಮಣಿಬೀಡು |
ಅರಸಂಚೆಗಳ ಗೊತ್ತು ಬಾಡಬನ ಸವಿದುತ್ತು ಮುತ್ತುಸಸಿಗಿಡುವೆ ಬಿತ್ತು ||
ಪೆಪೆಗೆ ಪುಟ್ಟಿದ ನೆಲೆಯು ತೆರೆವೆಣ್ಣ ಮೇಖಲೆಯು |
ವರುಣಗಿಪಾರ್ಗರಂ ನೀರ್ದೇರಿನೋಗರಂ |
ಮಹೆವೊಕ್ಕ ಗಿರಿಯ ಬೈತಿಡುವೊಡಲ್ ತಾನೆನುತ್ತಿಂಗಡಲ್ ಕಂಗೊಂಡುದು||

3 ನಳಕೂಬರವಿಲಾಸ (ಚಂಪು)

ಆರಂಭದಲ್ಲಿ ವೀರಭದ್ರಸ್ತುತಿ ಇದೆ ಕಥಾಗರ್ಭವನ್ನು ಕವಿ ಈ ಪದ್ಯದಲ್ಲಿ ಸೂಚಿಸಿದ್ದಾನೆ—

ನಳಕೂಬರನಸುಗೆಯ ಶರ | ದಳತೆಗೆ ನ್ಯೆಯಿಕ್ಕಿ ಸೊಕ್ಕಿ ಮನದನ್ನಳ ಕೋ |
ಮಳಲೀಲಾಜಾಳವ ನೆನೆ | ದಳಲಿದ ಪರಿಯುನ್ನು ಪೇಳ್ವೆನಿಳೆ ಮೆಚ್ಚುವವೋಲ್ ||

ಈ ಗ್ರಂಥದಿಂದ ನಳಕೂಬರನ ವಿರಹಸೂಚಕವಾದ ಒಂದು ಪದ್ಯವನ್ನು ಉದಾಹರಿಸುತ್ತೇನೆ —

ಕಾಂತೆಯ ಪಧುಮುಖಚಳದಳ | ಕಾಂತೆಯ ನಿಜಲಲಿತವಿಲಸಿತಾಪಸ್ಮೃತವಿಟ |
ಸ್ವಾಂತೆಯ ಕಾಣದೆ ಕುಂದಸು | ದಂತೆಯ ತಾಂ ಕಂತುಕುಂತಹತಿಗೆಡೆಯಾದಂ ||

4 ವೀರಭದ್ರಶತಕ.

ಇದರಲ್ಲಿ 101 ವೃತ್ತಗಳಿವೆ, ಪ್ರತಿವೃತ್ತವೂ "ಶ್ರೀ ವೀರಭದ್ರೇಶ್ವರಾ" ಎಂದು ಮುಗಿಯುತ್ತದೆ. ಪೂರ್ವಕವಿಗಳಲ್ಲಿ ವಾಲ್ಮೀಕಿ, ಭೋಜ, ಕಾಳಿದಾಸ, ಬಿಲ್ಹಣ ಇವರುಗಳನ್ನು ಸ್ಮರಿಸಿದ್ದಾನೆ. , ಕೆಲವೆಡೆಗಳಲ್ಲಿ ಸೋಮೇಶ್ವರಶತಕವನ್ನು ಅನುಸರಿಸಿರುವಂತೆ ತೋರುತ್ತದೆ. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ—

ಇದು ಶಾಲ್ವಿಡಿದು ಮೇಲ್ವಾಯ್ವ ನಾಲ್ದೋಳ ಬೆಟ್ಟುವಗೆಯು ಸಾರದೆಯಾಣ್ಮರ್ ಮುಂಕೊಂಡ ಮೊಗ್ಗರಂಗೊಂಡು ಮೊಟ್ಟುಗ್ಗವ ಬೋಪೆಯರ್ಕಳ ತಲೆಯ ಟೌಳಿಯೊಳೊಪ್ಪಿ ಮಿಱುಗುವ ರನ್ನವೆಳಗನೊಳಕೊಂಡು ತನ್ನ ಕಳೆಯಿಂ ನೇಸಱ ಕೆಂಗದಿರ್ಗಳಂ ಕಂದಿಸಿ ಬಾಂಬೊಳೆಯೊಳ್ ಬೆಳೆದ ಕೆಂದಾವರೆಬಿ ಪದಂದವಂ ನಂದಿಸಿ ಮೈವೆಡೆದ ತನ್ನಡಿದಾವರೆಯಂ ಎಡೆವಿಡದೆ ನನ್ನಿವಡೆದಡಿಗಡಿಗೆ ಸಡಗರಂಬಡೆದೊಡನೊಡನೊಡಲುಬ್ಬಿ ನಿಡಿದುಂ ಜಾನಿಸುತ್ತೆತ್ತೆತ್ತಲುಂ ಜಸಂಬೆತ್ತ ಕಿತ್ತಡಿಯರ್ಗೆ ತೆತ್ತಿಗನಪ್ಪ ವೀಡನ ಕಡುಸಿರಿವಡೆದ ಕಡೆಗಣ್ಣ ಕುಡಿವೆಳಗ ಜೊನ್ನವಲದಿಂ ಪೆಂಪುವೆತ್ತ ಕಬ್ಬದೇಪ್ಗೆಯಂ ಪಡೆದು ಮೂಜಗಂಗಳೊಳ್, ಸೋಜಿಗಂಗುಡುವ ಬಿತ್ತರಕಿತ್ತಿವೊತ್ತವಂ ಗೊಂಟುಗಳೊಳಂಟಿಸಿ ಚಪ್ಪನ್ನದೇಶದರಸುಗಳೊಪ್ಪದಿಂದೊಪ್ಪಿಪ ಕಪ್ಪವನೊಪ್ಪುಗೊಳುತ್ತ ಮಹಿಸೂರೊಳುದ್ಭವಾದ ಗದ್ದುಗೆಯೊಳ್ ಮಂಡಿಸಿ ಮನ್ನೆಯಗಂಡರ ಗಂಡನಾದ ಕೃಷ್ಣರಾಜಂಗೆ ಕೂರ್ಮೆಯಳಿಯನಾಗಿ ದೊಡ್ಡಲಿಂಗರಾಜನ ಮಡದಿ ಕೆಂಪದೇವಾಂಬೆಯು ಗಬ್ಬಪಾಲ್ಗಡಲ್ಗೆ ಪುಣ್ಣಿಮೆತಣ್ಗದಿರನಾಗಿ ಸಿರಿನುಡಿವೆಣ್ಗಳೊಡವೆರೆದ ಲಿಂಗರಾಜನುಸಿರಿದ ವೀರಭದ್ರಶತಕಂ ಸಂಪೂರ್ಣಂ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ನರಿಯಂ ಕೊಲ್ವೊಡೆ ದಿವ್ಯಬಾಣತತಿಯಂ ಸಂಧಾನಮಂ ಗೆಯ್ವುದೇ |
ಕುಱಿಯಂ ಸೀಳ್ವೊಡೆ ವಜ್ರಸಾರಧನುವಂ ಕೈಗೊಳ್ವುದೇಂ ಚಂದಮೇ ||
ಸರಿಯಂ ಪೊಂದದ ದಕ್ಷನಂ ವಿಮಥಿಸಲ್ ಕ್ಷುಭ್ಯದ್ದಿಶಾಪಾಲಭೀ |
ಕರರೂಪಂ ಮಿಗೆ ತಾಳ್ವರೇ ಭರದಿ ನೀಂ ಶ್ರೀವೀರಭದ್ರೇಶ್ವರಾ ||
ಸುರಚಾಪಪ್ರಭೆಯಂತೆ ಮೇಘವಿಲಸದ್ವಿದ್ಯುಲ್ಲತಾರೋಚಿಯಂ |
ತುರುನಿದ್ರಾಗತಹೇಮದಂತೆ ಜಲದಿಂದುಬ್ಬೇಱ್ವ ಬಲ್ಗುಳ್ಳೆಯಾ ||
ಕರದಂತಸ್ಥಿರವನ್ನು ಪೊಂದುತಿರುವೀಸ್ತ್ರೀಚಿತ್ತವಂ ನಂಬಿ ಕಾ |
ತರಿಸಲ್ಕಾತನ ಬಾಟು ಗಾಳಿಯು ಸೋಡರ್ ಶ್ರೀವೀರಭದ್ರೇಶ್ವರಾ ||

6 ಮಹಲಿಂಗಶತಕ

ಇದು ನೀತಿಬೋಧಕವಾಗಿದೆ ಪ್ರತಿಪದ್ಯವೂ ಮಹಲಿಂಗ ಎಂದು ಮುಗಿಯುತ್ತದೆ ಇದರಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ಬಾಣಸಿಗ

ಶುಚಿ ನಿರ್ಮಲಮನನಾಪ್ತನು | ರುಚಿಗಳ ಒಲ್ಲವನು ಸೂಪಶಾಸ್ತ್ರಜ್ಞನು ತಾ |
ನಚಪಲಮನನಾಗಿರುವವ | ನುಚಿತದ ಬಾಣಸಿಗನೆನಿಪನೈ ಮಹಲಿಂಗಾ ||

6 ಗಿರಿಜಾಕಲ್ಯಾಣ

ಇದು ಸಾಂಗತ್ಯದಲ್ಲಿ ಬರೆದಿದೆ, ಅಧ್ಯಾಯ 6, ಪದ್ಯ 493.

7. ಪುತ್ರಕಾಮೇಷ್ಟಿ

ಇದು ಯಕ್ಷಗಾನರೂಪವಾಗಿದೆ ಇದರಲ್ಲಿ

ವರವಾಲ್ಮೀಕಿತಪೋಧನ | ವಿರಚಿತರಾಮಾಯಣಾಬ್ಧಿ ಮಥನೋದ್ಗತಬಂ|
ಧುರರಾಮಕಥಾಮೃತವ | ನ್ನೆಱೆವೆನು ವಿಬುಧರ್ಗೆ ಯಕ್ಷಗಾನದೊಳಲೆಯಿಂ ||

ಎಂದು ಕವಿ ಹೇಳುತ್ತಾನೆ

8 ಕೃಷ್ಣಾರ್ಜುನರ ಕಾಳಗ

ಇದೂ ಯಕ್ಷಗಾನವೇ. ಇದರಲ್ಲಿ

ವೃಷ್ಣಿವೊಕ್ಕ ಗಯನ ಸಲಹಲು | ಹರಿಯೊಳ್ ಧುರವೆಸಗಿ ಜಲಧಿ ಜಯವಂ ಪಡೆದಾ |
ನರನ ರಿಪುವಿಪಿನವೈಶ್ವಾ | ನರನ ಚರಿತ್ರವನು ಜಗಮುಘೇ ಎನೆ ಪೇಳ್ವೆಂ ||

ಎಂದು ಕವಿ ಹೇಳುತ್ತಾನೆ.

---

ವೆಂಕಟರಮಣಯ್ಯ. 1857.

ಈತನು ಗಯೋಪಾಖ್ಯಾನವನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿ ಹರಿತಸಗೋತ್ರದವನು, ಉಲಿಚನಾಡು ನರಸಯ್ಯನ ಮಗನು. ಇವನ ಸ್ಥಳ ಕೃಷ್ಣಗಿರಿ. " ಸಂಸ್ಕೃತಾಂಧ್ರಕರ್ಣಾಟಭಾಷೆಗಳಲ್ಲಿ ಸರಳಕವಿಸಾರ್ವಭೌಮ ನೆನಿಸಿ ಬಹುಗ್ರಂಥಕರ್ತೃವಾದ ಪೆನ್ಷನ್ ಶಿರಸ್ತೇದಾರ್ " ಎಂದು ಹೇಳಿಕೊಂಡಿದ್ದಾನೆ. ತೆಲುಗಿನಲ್ಲಿ ಅಧ್ಯಾತ್ಮರಾಮಾಯಣವನ್ನು ಬರೆದಿರುವಂತೆ ತಿಳಿಯುತ್ತದೆ. ಗಯೋಪಾಖ್ಯಾನವನ್ನು 1857 ರಲ್ಲಿ ರಚಿಸಿದಂತೆ ಹೇಳುತ್ತಾನೆ.

ಇವನ ಗ್ರಂಥ

ಗಯೋಪಾಖ್ಯಾನ

ಇದು ಚಂಪೂಗ್ರಂಥ, ಸಂಧಿ 28, ಗದ್ಯ ಪದ್ಯ 1141; ಕೆಲವು ಷಟ್ಪದಿಗಳೂ ಇವೆ. ಇದರಲ್ಲಿ ಗಯನೆಂಬ ಗಂಧರ್ವನಿಗೆ ಅಭಯವನ್ನು ಕೊಟ್ಟ

ಪಾರ್ಥನೊಡನೆ ಕೃಷ್ಣನು ಕಾದಿದ ಕಥೆ ಹೇಳಿದೆ. ಗ್ರಂಥಾವತಾರದಲ್ಲಿ ರಾಮನ ಸ್ತುತಿ ಇದೆ. ಬಳಿಕ ಕವಿ ಸೀತೆ, ಶಿವ, ಪಾರ್ವತಿ, ಬ್ರಹ್ಮ, ಸರಸ್ವತಿ, ಗಣಪತಿ, ವ್ಯಾಸ, ವಾಲ್ಮೀಕಿ ಇವರುಗಳನ್ನು ಸ್ತುತಿಸಿದ್ದಾನೆ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ.—

ದ್ವಾರಕಾಪಟ್ಟಣ

ಪರಿಲಸಚ್ಛಂದೋನುವರ್ತಿ ಸದ್ವೃತ್ತಭಾ |
ಸ್ವರಮಾಗಿಯರ್ಥವಿಸ್ತಾರಮಂ ತೋರುತ |
ಕ್ಷರಪದಂ ತಾನಾಗಿ ಪ್ರಾಸಶೋಭಿತಮಾಗಿ ಯತಿಗಣಾರಾಧ್ಯಮಾಗಿ ||
ಗುರುಮಾತ್ರೆಗಳ ಕೂಡಿ ಸಂಧಿಸದ್ವಿಗ್ರಹ |
ಸ್ಫುರಿತಾಶಯಪ್ರದಾಭಿಖ್ಯೆಯಿಂದೊಪ್ಪಿತಾ |
ಪುರವರಂ ಪ್ರೌಢಕವಿರಚಿತಸತ್ಕೃತಿಯಂತೆ ವಿಬುಧಜಯಸೇವ್ಯವಾಗಿ ||
ವಾಜಿಗಳಾತ್ಮವೇಗವಿಭವಾಪಹದುಸ್ಸಹವಾತಸಂಘದ |
ತ್ತಾಜಿಗಳದ್ಭುತಪ್ಲವಭವಾಶುಗಧಾಪಿತಘೋರವಾರಿಮು ||
ಗ್ರಾಜಿಗಳನ್ಯಸೈನಿಕನಿಕಾಯಸುಖಾಸ್ಪದದೇವರಾಜ್ಯಸಂ |
ಯೋಜಿಗಳಿಂತು ತತ್ಪುರದೊಳೊಪ್ಪುವುವಪ್ರತಿಮಪ್ರಭಾವದಿಂ ||
ಧರೆಯೊಳ್ ಕೌಶಿಕನಾಮಮಂ ಕೊಳದೆ ಮಾತಂಗಾಶ್ರಯಂ ತಾನೆ ತ |
ಗಿರದೇ ಪುಣ್ಯಾಜನಾರಿಯೆಂದೆನಿಸದೇಯೆಂದುಂ ಸುರಾಮೋದದಿಂ ||
ಪರಿತುಷ್ಟಾತ್ಮಕನಾಗಿ ಶೋಭಿಸದೆ ಶುಂಭದ್ಗೋತ್ರನಿರ್ಭೇದಿಯಾ |
ಗಿರದೇ ವರ್ತಿಸಲಾಪುರೀನೃಪಜನಗ್ಗಿಂದ್ರಂ ಸಮಂ ಭಾವಿಸಲ್ ||

---

## ನಂಜಯ್ಯ. ಸು 1860

ಈತನು ತ್ರಿಪುರದಹನ, ರಾಧಾವಿಲಾಸ, ಸೋಮಶೇಖರ ಚಿತ್ರಶೇಖರಕಥೆ ಇವುಗಳನ್ನು ಬರೆದಿರುವಂತೆ ತೋರುತ್ತದೆ. ಇವನು ಗಟ್ಟದ ಕೆಳಗಣಿಂದ ಬಂದು ಅಳಿಯಲಿಂಗರಾಜನ (1823—1874) ಆಶ್ರಿತನಾಗಿದ್ದಂತೆ ತಿಳಿಯುತ್ತದೆ. ಇವನ ಗ್ರಂಥಗಳಲ್ಲಿ ಇವನ ಹೆಸರು ಕಂಠೋಕ್ತವಾಗಿ ಹೇಳಿಲ್ಲ. ಆದರೂ ಮಂಜುನಾಥ ಎಂಬ ಅಂಕಿತದಿಂದ ಏತತ್ಕೃತವೆಂದು ಊಹಿಸಬಹುದಾಗಿ ಪೂರ್ವಿಕರು ಹೇಳು ತ್ತಾರೆ. ಇವನ ಗ್ರಂಥಗಳೆಲ್ಲಾ ಯಕ್ಷಗಾನರೂಪವಾಗಿವೆ ತ್ರಿಪುರದಹನದ ಆರಂಭದಲ್ಲಿ ಈ ಕಂದವಿದೆ:—

ಸ್ಮರಹಗಲೀಲಾಚರಿತೆಯು | ಧರೆಯೊಳ್ ಎಸ್ತರಿಪೆನೆಂಬ ಕೌತುಕದಿಂದಂ |
ವಿರಚಿಸುವೆ ಯಕ್ಷಗಾನದಿ | ದುರಿತಾಪಹಮಪ್ಪ ತ್ರಿಪುರವಿಜಯದ ಕಥೆಯಂ ||

ಸೋಮಶೇಖರಚಿತ್ರಶೇಖರಕಥೆಯಲ್ಲಿ ಲಿಂಗರಾಜನ ಕೃಪೆಯಿಂದ ಆ ಗ್ರಂಥವನ್ನು ಬರೆದಂತೆ 'ಕವಿತಾಸತಿಯಂ ನಟಿಸುವ | ದಿವಿಜೇಂದ್ರನ ಪೋಲ್ವ ಲಿಂಗಭೂಪನ ಪದಪ | ಲ್ಲವಕರುಣದಿನುಸಿರ್ವೆಂ " ಎಂಬ ಪದ್ಯಭಾಗದಲ್ಲಿ ಹೇಳಿದ್ದಾನೆ.

ಈ ಗ್ರಂಥದ ಆದಿಯಲ್ಲಿ ಈ ಪದ್ಯವಿದೆ. —

ಶ್ರೀರಮಣಪ್ರಿಯಮಿತ್ರಂ | ವಾರಣವರಚರ್ಮವಸ್ತ್ರಸಂವೃತಗಾತ್ರಂ |
ಭೂರಿಸುರಸ್ತುತಿಪಾತ್ರಂ | ಕೋರಿದನೊಲಿದೀಗೆ ಮಂಜುನಾಥಂ ದಯದಿಂ ||

—————

## ನ್ಯಾಪತಿ ಲಕ್ಷ್ಮೀ ನರಸಿಂಹ ಸು. 1860.

ಈತನು ರಾಮಕಥಾರಂಜನವನ್ನು ಬರೆದಿದ್ದಾನೆ ಇವನು ಮಾಧ್ವಕವಿ; ಕೌಂಡಿನ್ಯಗೋತ್ರದವನು, ಕಲ್ಪಗಿರಿರಂಗವಿಟ್ಠಲನ ಭಕ್ತನು. ಇವನ ತಂದೆ ಸುಬ್ಬಣ್ಣ; ತಾಯಿ ಲಕ್ಷ್ಮೀವಾಂಬೆ. ಇವನ ಗ್ರಂಥದ ಸುಂದರಕಾಂಡವು 1867 ರಲ್ಲಿ ಮುದ್ರಿತವಾಗಿದೆ

ಇವನ ಗ್ರಂಥ

### ರಾಮಕಥಾರಂಜನ

ಇದರಲ್ಲಿ ಸುಂದರಕಾಂಡವು ಮಾತ್ರ ಅಚ್ಚಾಗಿದೆ, ಸರ್ಗ 68. ಗ್ರಂಥವು ವೃತ್ತ, ಗೀತಿ, ಸೀಸಪದ್ಯ, ಕಂದ ಇವುಗಳಲ್ಲಿ ಬರೆದಿದೆ. ಕನ್ನಡ ಕವಿತೆಯಾಗಿದ್ದರೂ ತೆಲುಗಿನ ವಾಸನೆ ವಿಶೇಷವಾಗಿ ಕಾಣುತ್ತದೆ ಇದರಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ —

ಹರಿವರನದ್ರಿರಾಜನಿಭನಾಗ ಸುವೇಗಯುತರ್ ಮಹೇಂದ್ರಭೂ |
ಧರಶಿಖರಾಗ್ರದಲ್ಲಿ ವಿವಿಧಕ್ಷಿತಿಜಾಕುಲದಲ್ಲಿ ಶೈಲನಿ ||
ರ್ಝರಿಯೊಳು ಭಿನ್ನಪಕ್ಷಗಿರಿಸಾಟಿನಿಪಾತವ ಕೂಡಿ ಸೇರಿದರ್ |
ಹರಿವರರಾ ಅರೋಗಿನ ಮಹಾತ್ಮನ ಪ್ರೀತಿಯು ಕೂಡೆ ನೋಡಿದರ್ ||

—————

## ನಂಜುಂಡಶಿವಯೋಗಿ. ಸು 1860.

ಈತನು ಅಟವೀಶ್ವರ ಗೀತಾಮಂಜರಿಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಗುರು ಅಟವೀಶ್ವರ, ಸ್ಥಳ ಮತಕೂರು. ಇವನು ಸುಮಾರು 1860 ರಲ್ಲಿ ಇದ್ದಿರಬಹುದು ಇವನ ಗ್ರಂಥದಲ್ಲಿ ಸ್ವಗುರುಸ್ತುತಿರೂಪವಾದ ಹಾಡುಗಳಿವೆ; ಅಲ್ಲಲ್ಲಿ ಕೆಲವು ಕಂದವೃತ್ತಗಳೂ ಇವೆ.

---

## ವೀರೇಶ್ವರಶಾಸ್ತ್ರಿ. ಸು. 1860.

ಈತನು ಸ್ವಕೃತ ವೀರಶೈವಾನ್ವಯಚಂದ್ರಿಕೆಗೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಗುರು ಚೆನ್ನಬಸವ, ಸ್ಥಳ ಗುಬ್ಬಿ. ಇವನು ಸುಮಾರು 1860 ರಲ್ಲಿ ಇದ್ದಿರಬಹುದು

---

## ಹಿರಣ್ಯಗರ್ಭ ಸು 1860

ಈತನು ಸರಸ್ವತೀಪ್ರಬಂಧವನ್ನೂ ವಿಶ್ವಕೃತಿಪರೀಕ್ಷಣವನ್ನೂ ಬರೆದಿದ್ದಾನೆ. ಇವನು ಜೈನಕವಿ; ಇವನಿಗೆ ರಾಜರಾಜ ಎಂಬ ಹೆಸರೂ ಇದ್ದಂತೆ ತೋರುತ್ತದೆ. ಇವನು ಧಾರ್ವಾಡ ಪ್ರಾಂತದಲ್ಲಿ ಇದ್ದನು. ಪೂರ್ವಕವಿಗಳಲ್ಲಿ ನೇಮಿಚಂದ್ರ, ಅಗ್ಗಳ, ಪೊನ್ನ, ಗುಣವರ್ಮ, ನಾಗವರ್ಮ, ಪಂಪ, ಕೇಶವ, ಮಧುರ ಇವರುಗಳನ್ನು ಸ್ಮರಿಸುತ್ತಾನೆ. ವಿಶ್ವಕೃತಿಪರೀಕ್ಷಣವನ್ನು 1873 ರಲ್ಲಿ ಬರೆದಂತೆ ತಿಳಿಯುತ್ತದೆ.

ಇವನ ಗ್ರಂಥಗಳಲ್ಲಿ

### 1 ಸರಸ್ವತೀ ಪ್ರಬಂಧ.

ಇದು ಚಂಪೂರೂಪವಾಗಿದೆ. ನಮಗೆ ದೊರೆತ ಪ್ರತಿ ಅಸಮಗ್ರ; ಗ್ರಂಥವು 12 ಆಶ್ವಾಸಗಳುಳ್ಳುದು ಎಂದು ಹೇಳುತ್ತಾರೆ. "ಕೃತಿ ಲೀಲಾವತಿ ವಲ್ಲಭಂ ಚತುರತಾಚಾತುರ್ವರ್ಮನಿಂ ಶ್ರೀಸರಸ್ವತಿದೇವೀಕಥೆಯೆಂಬ ಪೂರ್ವಕಥೆಯಂ ಚಂಪೂನಿಬಂಧತ್ವದಿಂ" ರಚಿಸುವೆನು ಎಂದು ಕವಿ ಹೇಳುತ್ತಾನೆ. ತನ್ನ ಗ್ರಂಥದ ಉತ್ಪತ್ತಿಯನ್ನು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ—

ಮೃದುಮಧುರೋಕ್ತಿಯಿಂ ಸರಸದಿಂ ರಸದಿಂ ಸ್ಮಿತಭಾವದೇಷ್ಟೆಯಿಂ |
ವಿದಿತವಿಧಕ್ತಿಯುಕ್ತಪದದಿಂ ಪದದಿಂವೃ ನಿವಿಶಾರ್ವರ್ಧದಿಂ ||
ಸದಮಲಲಕ್ಷಣಾಕ್ಷಗಣದಿಂ ಗಣದಿಂ ಚತುರ್ಶಕವೃತ್ತಿಯಿಂ |
ವಿದಿತವಿವರ್ಣದಿಂದೆಸೆಗುವಿಶಕೃತಿ ಧೀಕೃತಿ ರಾಜರಾಜನಾ ||

ನವರಸಮಾಸ್ಪದೊಳ್ ತೊಳಪ ತಂಬುಲದ ಟ್ರವವಾಗೆ ಭಾವವು |
ಕ್ಕುವ ನಗೆಯಾಗೆ ಛಂದವಿದು ಚೆಲ್ವಿಕೆಯಾಗೆ ವಿಚಿತ್ರವೃತ್ತವು ||
ಣ್ಮುವ ಮೊಲೆಯಾಗೆ ವೃತ್ತಿ ಕಡೆಗಣ್ಕಿನೋಟಗುವಾಗೆ ಮತ್ಕೃತಿ |
ಪ್ರವಿದಿತನರ್ತಕೀ ಸುಜನಚಿತ್ತಮನೊಯ್ಯನೆ ಸೂರೆಗೊಳ್ಳದೇ ||

ಗ್ರಂಥಾವತಾರದಲ್ಲಿ ಪದ್ಮಪ್ರಭಸ್ತುತಿ ಇದೆ. ಬಳಿಕ ಕವಿ ಸಿದ್ಧರು, ವೃಷಭಸೇನ, ಗೌತಮ, ಸರಸ್ವತಿ, ಸಮಂತಭದ್ರ, ಪೂಜ್ಯಪಾದ, ಅಕಳಂಕ ಇವರುಗಳನ್ನು ಸ್ತುತಿಸಿದ್ದಾನೆ. ಆಶ್ವಾಸಗಳ ಕೊನೆಯಲ್ಲಿ ಈ ಗದ್ಯವಿದೆ —

ಇದು ವಿದಿತಾರ್ಹತ್ತ್ವದವಿದಗ್ಧವಿನಬಂಧುರಸುಕವಿವದನಸರೋಜವಿನಿರ್ಗತವರ್ತತುರಂಗ ಸಂಗನಿಧೂರ್ತಕಲಾಧೂರ್ತಲ ಹಿರಣ್ಯಗರ್ಭಕವಿಶಿರೋಮಣಿ ವಿರಚಿತ ಸರಸ್ವತೀಪ್ರಬಂಧದೊಳ್.

ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

ಆಕಳು

ಜಲಮಂ ಕುಡಿದಾಡುವ ಸಂ | ಚಲಗಳ ಕಂಬಳದ ಸೆಳೆಯ ಕೊಂಬಿನ ಒಲ್ಗ |
ಜ್ಜಲದ ಪಲತೆಱದಬಣ್ಣದ | ಎಳದುರುಗಳ ಒಳಗಮೆಸೆದುದಾಪೂಪಮಾಳಲೊಳ್ ||

ಕೊಳ.

ಇದು ಸಿಷ್ಟಂ ತನ್ನ ಲಿಷ್ಟಂ ವಟತರುವೆಸಿಪೀವಾಂಛೆಯಿಂ ಚಂದ್ರಮಂ ಸೂ |
ಸಿದಪಂ ಪೀಯೂಷಮಂ ತಾನಿರುಳೊಳದುವೆ ತಷ್ಛೈಲಸಂಸರ್ಗದಿಂ ಮಾ ||
ಣದೆ ಸಾತ್ರಂದಷ್ಪದಷ್ಕಕರವರವಿಪುಲಪ್ರಾಂತನುಂ ತೀವಿತಂತ |
ಲ್ಲದೊಡೆಂತುಂ ತುಂಬಿ ತುಳ್ಕಾಡುಗುಮೆ ವಿಧುವಿಗಂ ಗ್ರಾವಕಿಸ್ನಾವ ನೇಕಂ ||

## ನೇಮಿಚಂದ್ರ

ವಿನಮಿತಶಾರದಾರಮಣನಮ್ಮಗಣಾಶನನಾನತರ್ಗಜಿವಾರದ್ಯ |
ದ್ವನನಂದಿನೇಶ್ವರಂ ಶ್ರುತಧರಸ್ತುತಿನರ್ತನಸಂಗವರ್ತ್ತನ ||
ಕರ್ಣನ ಮತಸಾರ್ಥವರ್ಧನ ವಸುಧಾಶರಣಾದಿಕವೀಂದ್ರಮಲ್ಲನಂ |
ದೆನಿಸುವ ನೇಮಿಚಂದ್ರನ ಪದಾಂಬುಜಕಾನತನಪ್ಪೆ ಚಿತ್ತದೊಳ್ ||

2 ವಿಶ್ವಕೃತಿ ಪರೀಕ್ಷಣ.

ಇದು ಗದ್ಯಗ್ರಂಥ. ಇದರಲ್ಲಿ ನೇಮಿಚಂದ್ರ, ಅಗ್ಗಳ ಇವರ ಗ್ರಂಥಗಳ ಪರಾಮರ್ಶವೂ ಅನುವಾದವೂ ಇವೆ. ನೇಮಿಚಂದ್ರನ ಕಾಲವಾದಮೇಲೆ ಕೇಶಿರಾಜನು ಶಬ್ದಮಣಿದರ್ಪಣದ ಪರಿಭಾಗದಲ್ಲಿ ಹೇಳುವ ಪ್ರತ್ಯುತಕವಿಗಳು ಇದ್ದರು ಎಂದು ಕವಿ ಅಭಿಪ್ರಾಯಪಡುತ್ತಾನೆ.

## ಕಮಲ ಪಂಡಿತ 1886

ಈತನು ರತ್ನಕರಂಡಕಕ್ಕೆ ಟೀಕೆಯನ್ನು ಬರೆದಿದ್ದಾನೆ. ಇವನು ಜೈನಕವಿ; ಕಾಶ್ಯಪ ಗೋತ್ರದವನು; ದೊಡ್ಡಯ್ಯನ ಮಗನು. ಇವನ ಸ್ಥಳ ಶ್ವೇತಪುರ. ಮೈಸೂರು ದೊರೆ ಮುಮ್ಮಡಿ ಕೃಷ್ಣರಾಜನ ಆಶ್ರಿತನಾದ ಸೂರಿಪಂಡಿತನ ಇಷ್ಟಾನುಸಾರವಾಗಿ ಈ ಟೀಕೆಯನ್ನು 1886ರಲ್ಲಿ ಬರೆದಂತೆ ಹೇಳುತ್ತಾನೆ. ಮೂಲಗ್ರಂಥ ಸಮಂತಭದ್ರಕೃತ. ಟೀಕೆಗೆ ಬಾಲಬೋಧಿನಿ ಎಂದು ಹೆಸರು.

---

## ಮಹಾದೇವ. 1870.

ಇವನು ಮಹಾಲಿಂಗೇಂದ್ರವಿಜಯವನ್ನು ಬರೆದಿದ್ದಾನೆ. ಈತನು ವೀರಶೈವಕವಿ; ಇವನ ತಂದೆ ಹರಸಮಯೋತ್ಕೃಷ್ಟಸಿದ್ಧಾಂತಮಂ ನೆಗಳ್ದ ಪೊಂದುರುಶೀಲಮುಳ್ಳ ಸೋಮೇಶವಾಣೀಶ್ವರ, ಗುರು ಅಟ್ಟಿಪುರೀಪತಿಯಪ್ಪ ಶಿವಲಿಂಗದೇಶಿಕ. ಈ ಗ್ರಂಥವನ್ನು ಶಕ 1792ನೆಯ ಪ್ರಮೋದವರ್ಷದಲ್ಲಿ (1870) ಬರೆದಂತೆ ಹೇಳುತ್ತಾನೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ—

ಧೀಮನಂ ಕುಕವಿಕುಲಭೀಮನಂ ಪಾಲ್ಕುರಿಕೆ | ಸೋಮನಂ ಶಿವಕವಿಮನಃಪಯೋಂ
ಬುಧಿಸಮು |
ಶಿಷ್ಟೇಮನಂ ಸೋಮವಿಧೃತಾಗಮಸ್ಪುರಾಶಂಕರಾರಾಧ್ಯನಂ ಸ್ವಸ್ತ್ಯನಂ ||
ಕಾಮಹರಪದಹೃದಯಪದ್ಮನಂ ಪದ್ಮನಂ| ಶ್ರೀಮಹಿತಭೋಜನಂ ಕವಿಕೇಶಿರಾಜನಂ |
ನಾಮದಿಂದೆಂಗಿ ಬಣ್ಣಿಸಿ ಕಂಪ್ಪಕೊಳ್ಪುದುಂ ಬೇಡುವೆಂ ಭಕ್ತಿಯಿಂದಂ ||

ಈ ಕವಿಗಳಲ್ಲದೆ ಹರೀಶ್ವರ, ಷಡಕ್ಷರದೇವ ಇವರುಗಳನ್ನೂ ಬೇರೆ ಕಡೆ ಸ್ಮರಿಸಿದ್ದಾನೆ.

ಇವನ ಗ್ರಂಥ

## ಮಹಾಲಿಂಗೇಂದ್ರ ವಿಜಯ.

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 32. ಪದ್ಯ 2081 ಇದರಲ್ಲಿ ಚಿನ್ಮೂಲಗಿರಿ(ಚಿತ್ರದುರ್ಗ) ಮಠದ ಮಹಾಲಿಂಗೇಶ್ವರನ ಚರಿತ್ರವು ಹೇಳಿದೆ. ಬಸವ, ಚೆನ್ನಬಸವ, ಪ್ರಭುದೇವ, ಸಿದ್ಧರಾಮ, ತೋಂಟದ ಸಿದ್ಧಲಿಂಗ ಇವರುಗಳ ಚರಿತ್ರವು ಕಾವ್ಯರೂಪವಾಗಿ ರಚಿತವಾಗಿರುವಂತೆ ಈ ಗುರುವಿನ ಚರಿತ್ರವನ್ನು ತಾನು ಬರೆವುದಾಗಿ ಕವಿ ಹೇಳುತ್ತಾನೆ ಈ ಗುರು "ಪುರಾಣವನ್ನು ಹೇಳಿ ದುಃಖವನ್ನು ನೀಗು" ಎಂದು ಹೇಳಲು ತಾನು ಬರೆದಂತೆ ಹೇಳುತ್ತಾನೆ. ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ಭೃಂಗಿ ಇವರುಗಳನ್ನೂ ಬಸವ ಮುಂತಾದವರನ್ನೂ[1], ಹೊಗಳಿದ್ದಾನೆ. ಸಂಧಿಗಳ ಕೊನೆಯಲ್ಲಿ

ಇದು ನಿಖಿಲಸತ್ಕೃತ್ಯಾದಪಂಕಜರೇಣು | ವಿದಿತಭಸಿತತ್ರಿಪುಂಡ್ರಾಂಕಿತಾಳಿಕಮಹ |
ತ್ಪದಮಹಾಸಿದ್ಧೇಶಶಿವಲಿಂಗದೇಶಿಕೋತ್ತಮದಯಾನುಗತನಾ ||
ಭ್ಯುದಿತಮತಿ ಸತ್ಕೃತಿ ಮಹಾದೇವಸುಪ್ರಣೀ | ತದ ಮಹಾಲಿಂಗೇಂದ್ರವಿಜಯಂ ||

ಎಂದಿದೆ.

———

1 ಬಸವ, ಚೆನ್ನಬಸವ, ಅಲ್ಲಮ, ಶಿವಲಿಂಗಗುರು, ಮಯಿಂಗೇಂದ್ರ ಘಟ್ಟದ ಬಟ್ಟ ಬದ್ಧಮಹಾಲಿಂಗ, ತೋಂಟದಾರ್ಯ, ರೇವಣ, ಮರುಳಸಿದ್ಧ, ಏಕೋರಾಮ, ಪಂಡಿತಾರಾಧ್ಯ, ವಿಶ್ವೇಶ್ವರ, ಸಿದ್ಧರಾಮ.

## ಗಂಗಾಧರನಂದಿವಾಳೇಶ್ವರ. ಸು. 1870.

ಈತನು ಕವಿತಾಪದ್ಧತಿ, ಕಾದಂಬರೀಕಥೆ, ಶಬ್ದಮಂಜರಿ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವಕವಿ, ಧಾರವಾಡ ಪ್ರಾಂತದವನು. ಈತನ ಕವಿತಾಪದ್ಧತಿ ಛಂದಸ್ಸನ್ನು ಬೋಧಿಸುತ್ತದೆ. ಇದರ ಆರಂಭದಲ್ಲಿ ಈ ಪದ್ಯವಿದೆ. —

ಲಕ್ಷಣದಿ ಪದವನುಸಿರದೋಡದೆ | ರಕ್ಷಿಪುದಾಕೃತಿಯು ಪೇಳ್ದ ಕವಿಯಂ ಸತತಂ |
ಲಕ್ಷಣದಪ್ಪಿದೊಡಾಕೃತಿ | ಭಿಕ್ಷನ ಬೇಡಿಪುದು ಜಗದೊಳಿದು ಸಿದ್ಧಾಂತಂ ||

---

## ಶ್ರೀನಿವಾಸ 1871

ಈತನು ಅರ್ಚಾವತಾರವಿಲಾಸವನ್ನು ಬರೆದಿದ್ದಾನೆ. ಇವನು ಶ್ರೀವೈಷ್ಣವನು; ಇವನ ತಂದೆ ತಿರುನಾರಣಾಚಾರ್ಯ, ತಾಯಿ ಸಿಂಗಾರಮ್ಮ; ಗುರು ಶ್ರೀನಿವಾಸಬ್ರಹ್ಮತಂತ್ರಪರಕಾಲಯತಿ, ಸ್ಥಳ ಗೊರೂರು. ಈಗ್ರಂಥವನ್ನು 1871ರಲ್ಲಿ ಬರೆದಂತೆ ಹೇಳುತ್ತಾನೆ.

ಇವನ ಗ್ರಂಥ

### ಅರ್ಚಾವತಾರ ವಿಲಾಸ.

ಇದು ಷಟ್ಪದಿಯಲ್ಲಿ ಬರೆದಿದೆ; ಸಂಧಿ 31, ಪದ್ಯ 1760. ಇದರಲ್ಲಿ ಶ್ರೀರಂಗ, ಕಾಂಚಿ, ತಿರುಪತಿ, ಮೇಲುಕೋಟೆ ಈ ಪುಣ್ಯಕ್ಷೇತ್ರಗಳ ವೈಭವವು ಹೇಳಿದೆ; ಮೈಸೂರು ಮುಂತಾದ ಸ್ಥಳಗಳ ವರ್ಣನೆಯೂ ಇದೆ. ಇದರಿಂದ ಒಂದು ಪದ್ಯವನ್ನುದಾಹರಿಸುತ್ತೇವೆ:—

ತೆಂಗು.

ಚಿಕ್ಕತನದಲಿ ತನಗೆ ತಕ್ಕಷ್ಟು ನೀರ್ಗಳ |
ನ್ನಕ್ಕರದಿ ಪೊಯ್ದು ಪರಿಪಾಲಿಸಿದವರಿವರೆಂದು |
ಸಕ್ಕರೆಗೆ ಸದೃಶವಾದೆಳನೀರುಗಳ ತಮ್ಮ ತಲೆಯೊಳಗೆ ಪೊತ್ತುಕೊಂಡು |
ಉಕ್ಕಿದತಿಹರುಷದಿಂ ನಿಜಜೀವವಿರುವನಕ |

ಕಕ್ಕುಲಿತಿಬರದೆ ಕೊಡುತಿರ್ಪ ಕಂದೆಂಗುಗಳ್ |
ನೊಕ್ಕಸಿಂ ಬೆಳೆದಿರ್ಪವಿಲ್ಲಿ ಕೃಶವುಂ ಮಡೆಯುದಿರುತಿರ್ಪ ಮನುಜರಂತೆ ||

ಈತನು ಮುದ್ರಾರಾಕ್ಷಸಕಥೆಯನ್ನು ಬರೆದಂತೆ ತೋರುತ್ತದೆ. ಇದು ಗದ್ಯಗ್ರಂಥ; ಅಶ್ವಾಸ 11

---

## ವೆಂಕಟವರದಾಚಾರ್ಯ. ಸು. 1875

ಈತನು ಶಚೀಪರಿಣಯನಾಟಕವನ್ನು ಬರೆದಿದ್ದಾನೆ. ಇವನು ಶ್ರೀವೈಷ್ಣವನು; ಇವನ ಸ್ಥಳ ಸರಗೂರು.

ಇವನ ಗ್ರಂಥ

### ಶಚೀಪರಿಣಯ ನಾಟಕ

ಭಾರತದ ಆದಿಪರ್ವದಲ್ಲಿರುವ ಈ ಕಥೆಯನ್ನು ನಾಟಕರೂಪವಾಗಿ ಬರೆದಿದ್ದಾನೆ. ಆರಂಭದಲ್ಲಿ ಮೈಸೂರು ಚಾಮರಾಜೇಂದ್ರ ಒಡೆಯರ ಶ್ರೇಯಃಪ್ರಾರ್ಥನೆ ಇದೆ. ಈ ಗ್ರಂಥದಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ—

ವಸಂತ.

ಪರಿಹೃತಪಿಕಾಳಿಚಿಂತಂ | ಸ್ಫುರಿತಲತಾಂತಂ ವಿಯೋಗಿಜನಹೃತ್ಕುಂತಂ |
ಪರಿಶೋಭಿಸಿದಂ ವಸಂತಂ | ಸುರಭಿತಪರಿದಿಗಂತಮಂಗಜೋತ್ಸವಕಾಂತಂ ||

---

## ಪದ್ಮನಾಭಮಹಾರಾಜ ಸು. 1880

ಈತನು ನಿಗಮಸಾರಾಮೃತ, ದಾಸಬೋಧೆ ಇವುಗಳನ್ನು ಬರೆದಿದ್ದಾನೆ. ಇವನು ತಾಳಿಕೋಟಿ ರಾಜನಾಗಿದ್ದು ಸನ್ಯಾಸಿಯಾದಂತೆ ತಿಳಿಯುತ್ತದೆ. ಇವನನ್ನು "ಶ್ರೀಮದದ್ವೈತ ಸಚ್ಚಿದಾನಂದೇಂದ್ರ ಆತ್ಮಕೃಪ" ಎಂದು ವಿಶೇಷಿಸಿ ಹೇಳಿದೆ. ಇವನ ಕಾಲವು ಸುಮಾರು 1880 ಆಗಿರಬಹುದು. ಇವನ ಗ್ರಂಥಗಳು ಗದ್ಯರೂಪವಾಗಿ ಗುರುಶಿಷ್ಯಸಂವಾದರೂಪವಾಗಿಯೂ ಅದ್ವೈತವೇದಾಂತಬೋಧಕವಾಗಿಯೂ ಇವೆ.

---

## ಭೂಮೀಶಕವಿ. 1883

ಈತನು ದಶಾವತಾರಸ್ತೋತ್ರವನ್ನು ಬರೆದಿದ್ದಾನೆ. ಈತನು ಧಾರವಾಡ ಪ್ರಾಂತದವನು. ಈತನ ಗ್ರಂಥಕ್ಕೆ ಹರಿಲೀಲಾಮೃತಸಾರ ಎಂಬ ಹೆಸರೂ ಉಂಟು. ಇದನ್ನು ಶಕ 1806 ಸ್ವಭಾನುವಿನಲ್ಲಿ ಬರೆದಂತೆ ತಿಳಿಯುತ್ತದೆ. ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಪದ್ಯ 145 ಆರಂಭದಲ್ಲಿ ವಿಷ್ಣು, ಶಿವ, ಗಣಪತಿ, ಸರಸ್ವತಿ ಇವರುಗಳ ಸ್ತುತಿ ಇದೆ. ಈ ಗ್ರಂಥದಿಂದ ಒಂದು ಪದ್ಯವನ್ನು ಉದಾಹರಿಸುತ್ತೇವೆ—

ಮೊಗವ ನೋಡಲು ಸೋಮನಂದದಿ | ಸೊಗಯಿಸಿತು ತವ ನಾಸಿಕವು ಸಂ |
ಪಗೆಯ ಪೂ[illegible]ಗಿ ಶೋಭಿಸಿತು ರದನಗಳು ||
ಝಗಿಪ [illegible]ದಿ | ಸೊಗಯಿಸಲು ನಗಧರನೆ ಸುರವೈ |
ರಿಗಳು ಬೆ[illegible]ಬೆದರೀಕ್ಷಿಸುತ ನಿನ್ನ ||

---

## ಬಸವಕವಿ. 1887

ಈತನು ಸಿದ್ಧಲಿಂಗಕಾವ್ಯವನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಇವನ ಗುರು "ಗುರುಮೂರ್ತಿಪುರದೀಶ" ನಾದ ಚೆನ್ನಬಸವ. ಈ ಗ್ರಂಥವನ್ನು ಶಕ 1809 ಸರ್ವಜಿತುವಿನಲ್ಲಿ—ಎಂದರೆ 1887 ರಲ್ಲಿ, ರಚಿಸಿದಂತೆ ಹೇಳುತ್ತಾನೆ.

ಪೂರ್ವಕವಿಗಳಲ್ಲಿ ಕೆರೆಯ ಪದ್ಮರಸ, ಮುಳಯರಾಜ, ಹರಿಹರ, ಪಾಲ್ಕುರಿಕೆ ಸೋಮ, ಪಂಡಿತಾರಾಧ್ಯ, ಕಾಳಿದಾಸ, ಭೀಮರಸ, ಚಾಮರಸ, ರಾಘವಾಂಕ, ಬಾಣ, ಕೇಶಿರಾಜ, ಮಲುಹಣ, ಮಗ್ಗೆಯಮಾಯಿದೇವ, ಶಂಕರ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

### ಸಿದ್ಧಲಿಂಗ ಕಾವ್ಯ.

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 16, ಪದ್ಯ 438. ಇದರಲ್ಲಿ ಕಂಥೆಯ ಸಿದ್ಧಲಿಂಗನ ಚರಿತವೂ ಸೂಳೆಯ ಕೆರೆಯನ್ನು ಕಟ್ಟಿಸಿದ ವೃತ್ತಾಂತವೂ ಹೇಳಿವೆ.

ಕಥಾಸಾರ—ಕರ್ಣಾಟಕದೇಶದೊಳಗೆ ಸ್ವರ್ಗಾವತಿಯೆಂಬ ಪಟ್ಟಣದಲ್ಲಿ ವಿಕ್ರಮರಾಜನೂ ಅವನ ಹೆಂಡತಿ ಸೂತನೆಯೂ ಇದ್ದರು. ಬಹುಕುಟುಂಬಿಯಾ

ಮಲ್ಲಯ್ಯನೆಂಬ ಒಬ್ಬ ಶಿವಭಕ್ತನು ರಾಜನಲ್ಲಿ “ನಾನು ಬಡವನು; ನನ್ನ ಮಕ್ಕಳಲ್ಲಿ ಒಬ್ಬನನ್ನು ನೀನು ತೆಗೆದುಕೊಂಡು ನನ್ನ ಬಡತನವನ್ನು ಪರಿಹರಿಸಬೇಕು” ಎಂದು ಬೇಡಿಕೊಳ್ಳಲು, ರಾಜನು ಒಬ್ಬ ಮಗನನ್ನು ಸಾಕಿಕೊಂಡು ರಾಣಾವೆರಾಯನೆಂದು ಹೆಸರಿಟ್ಟು ಯುವರಾಜಪದವಿಯನ್ನು ಕೊಟ್ಟನು. ನೂತನೆ ತನಗೆ ಮಕ್ಕಳಿಲ್ಲವೆಂದು ಕೊರಗುತ್ತಿರಲು ರಾಜನು ತನ್ನ ಪಟ್ಟಣದ ದೇವರಾದ ಸಿದ್ಧಲಿಂಗನನ್ನು ಭಜಿಸಿದುದರಿಂದ ಅವಳಿಗೆ ಪಾರ್ವತಿಯ ಅವತಾರವಾದ ಶಾಂತವ್ವೆಯೆಂಬ ಮಗಳು ಹುಟ್ಟಿದಳು. ಹರಿದ್ರಾವತೀತೀರದಲ್ಲಿಯ ಸುರಗಿಯಲ್ಲಿ ಹುತ್ತದೊಳಗೆ ಒಂದು ಲಿಂಗವಿರುವುದನ್ನು ತಿಳಿದು ರಾಜನು ಆ ಲಿಂಗವನ್ನು ಸ್ತುತಿಸಲು ಸ್ವಾಮಿ ಕಂಥೆಯ ಸಿದ್ಧೇಶ್ವರನಾಮದಿಂದ ಉದ್ಭವಿಸಿದನು. ಅವನಿಗೆ ರಾಜನು ಮಗಳನ್ನು ಕೊಟ್ಟು ಮದುವೆಮಾಡಿ, ಅತನಿಂದ ಸುರಗಿರಿಲಿಂಗದ ಮಹಿಮೆಯನ್ನು ತಿಳಿದು ಆ ಪ್ರಾಂತದಲ್ಲಿ ಪಟ್ಟಣವನ್ನೂ ಕೆರೆಯನ್ನೂ ಕಟ್ಟಿಸಬೇಕೆಂದು ನಿಶ್ಚಯಿಸಿ ಆನೆಗುಕೆರೆಯೆಂಬ ಪಟ್ಟಣವನ್ನೂ ಒಂದು ಕೆರೆಯನ್ನೂ ನಿರ್ಮಿಸಿದನು. ಕಂಥೆಯ ಸಿದ್ಧೇಶ್ವರನು ಮಣಿಭದ್ರೆಯೆಂಬ ಸೂಳೆಗೆ ವಾಗ್ದಾನಮಾಡಿದ್ದಂತೆ ಆ ಕೆರೆಗೆ ರಾಜನು ಸೂಳೆಯ ಕೆರೆ ಎಂಬ ಹೆಸರನ್ನಿಟ್ಟನು. ಬಳಿಕ ಸಿದ್ಧೇಶ್ವರನು ಶಾಂತವ್ವೆಯೊಡನೆ ಕೈಲಾಸಕ್ಕೆ ಹೋದನು. ಕೆಲವು ಕಾಲವಾದ ಮೇಲೆ ವಿಕ್ರಮರಾಜನು ರಾಣಾವೆರಾಯನಿಗೆ ರಾಜ್ಯವನ್ನು ಒಪ್ಪಿಸಿ ನೂತನೆಯೊಡನೆ ಕೈಲಾಸಕ್ಕೆ ಹೋದನು.

ಗ್ರಂಥಾವತಾರದಲ್ಲಿ ವೇಶ್ಯಾತಟಾಕೇಶ್ವರನ (ಸೂಳೆಯಕೆರೆಯ ಸಿದ್ಧಲಿಂಗನ) ಸ್ತುತಿ ಇದೆ. ಆ ಮೇಲೆ ಶಿವ ಪಾರ್ವತಿ, ಗಣೇಶ, [illegible] ಸುಬ್ರಹ್ಮಣ್ಯ, ನಂದಿ, ಭೃಂಗಿ ಇವರುಗಳನ್ನು ಸ್ಮರಿಸಿ, ಬಳಿಕ ಬಸವನೇ ಮ[illegible]ರನ್ನು[1] ಸ್ತುತಿಸಿದ್ದಾನೆ.

ಈ ಗ್ರಂಥವು ಅತಿನವೀನವಾದುದು. ಈಗಲೂ ಇಂಥ ವಿಷಯಗಳನ್ನು ಕುರಿತು ಪದ್ಯಗ್ರಂಥವನ್ನು ರಚಿಸುವವರಿದ್ದಾರೆ ಎಂಬುದಕ್ಕೆ ಇದು ನಿದರ್ಶನವಾಗಿದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ. —

1 ಬಸವ, ಚೆನ್ನಬಸವ, ಸಿದ್ಧರಾಮ, ಮಹಾದೇವಿಯಕ್ಕ, ಅಕ್ಕನಾಗಮ್ಮ, ಮಾದಿರಾಜ, ಮರುಳು ಶಂಕರ, ಮೇದಾರಕೇತಯ್ಯ, ಮಡಿವಾಳ ಮಾಚಯ್ಯ, ಗೊಹಾರ, ಕರಿಕಾಲಚೋಳ, ಕಾಚರಾಜ, ಉರಗೆರಾಯಣ್ಣ, ಕಿನ್ನರಿಯ ಬೊಮ್ಮ, ಮಂಚಣ್ಣ, ನಿರವಕಲ್ಲಯ್ಯ, ನುಲಿಯ ಚಂದಯ್ಯ, ಉರಲಿಂಗ ಪೆದ್ದಯ್ಯ, ಅಮುಗಿದೇವಯ್ಯ

### ಕರ್ಣಾಟಕದೇಶ

ಪುರವೈರಿಸಖನಂತೆ ಧನಪಾಲರಾಗಿಯುಂ |
ಹರದತ್ತನಂತೆಸೆವ ಕೀರ್ತಿಯುತರಾಗಿಯುಂ |
ಮುರವೈರಿಸುತನಂತೆ ಚೆಲ್ವುಳ್ಳರಾಗಿಯುಂ ಬೃಂದಾರಕೇಂದ್ರನಂತೆ ||
ವಿಶೇಷತ್ವಭೋಗದೊಳ್ ಸಂಯುಕ್ತರಾಗಿಯುಂ |
ಶರಧಿಸುತನಂತಧಿಕಶಾಂತಿಯುತರಾಗಿಯುಂ |
ಸರಧಿಪನಂತೆ ಬಹುಗಂಭೀರರಾಗಿಯುಂ ಜನರೆಸೆದರಾನಾಡೊಳು ||

### ಸೂಳೆಯರು

ಮೃಗಂಪಿಗಂದೆಱಗಿ ಬರುವಳಿಯ ನಿಕರಗಂ |
ಬೇಗದಿಂದಾಳಿಯರ ಕೈಗಳಿಂ ನೋಯಿಸುತ |
ಲಾಗ ನಡೆಗಂ ಸೋಲ್ತು ಬರುವಂಚೆವಿಂಡುಗಳ ನೂಪುರಧ್ವನಿಗಳಿಂದ ||
ಆಗಾಗ ಬೆದಱಿಸುತ್ತುಕ್ತಿಗಂ ಮನಸೋಲು |
ವಾಗಿಳಿಯ ತೊಲಗಿಸುತ್ತಂಗಜನ ಪಡೆಯಂತೆ |
ರಾಗದಿಂದೊಪ್ಪಿದರ್ ವಾರನಾರೀವಿತತಿ ಭೂಪಾಲನೋಲಗದೊಳು ||

### ಈಶ್ವರಸ್ತುತಿ.

ಭುವನಶುಚಿಪವನಸಖವಿಧುತಪನಸುಪುರುಷತನು |
ಜವನಹರ ಜಡಜಸುತಜಡಜದೃಗಮರನಿಕರ |
ದಿವಿಜಪತಿನುತ ಭುಜಗಧರ ಕುಧರಗೃಹ ಗಗನಕಚ ಗರಳಧರ ಶಂಕರ ||
ಧವಳತನು ಪವನಸಖನಯನ ಕಲುಷಜಯಗಿರಿ |
ಶಿವ ಮದನತನುವಿಪಿನಶಿಖಿ ಧನಪಸಖ ಶಿವ |
ಕವಿನುತನೆ ವೇಶ್ಯಾಕಟಾಕೇಶ ಗುರುಸಿದ್ಧಲಿಂಗ ವಿಗೆ ಸುಹೆಮ್ಮನು ||

### ಮಗನಿಗೆ ವಿಕ್ರಮರಾಯನ ಬುದ್ಧಿವಾದ.

ಬಡವರಂ ಕಡಿಸದಿರು ದುಷ್ಕೃತ್ಯಮಾಡದಿರು |
ಗರುಡುಗರ್ತಾಣ್ಯದೊಳಗೆಷ್ಟಿಂ ಮತ್ತೆಯುದಿರು |
ನಡೆಯದಿರು ದುರ್ಮಾರ್ಗಮಂ ಪರರ ನಾರಿಯರ ನೋಡದಿರು ದುರ್ಗುಣದಲಿ||

ಬಿಡದೆ ಮಹೋತ್ಕರಂ ಕಾಪಾಡು ರಿಪುನೃಪರ ।
ಕಡಿದಿಕ್ಕು ಲೋಕದ ಜನಂಗಳ್ಗೆ ನಿಷ್ಠ್ರುರ ।
ದೊಡೆಯನೆಂದೆನಿಸದಿರು ಮಗನೆ ರಾಜ್ಯವಂ ಸುಗುಣದಿಂ ನಡೆಯೆಂದನು॥

## ಇತರ ಕವಿಗಳು ಮತ್ತು ಗ್ರಂಥಕರ್ತರು

ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ಇನ್ನೂ ಅನೇಕರು ಗ್ರಂಥರಚನೆಯನ್ನು ಮಾಡಿದ್ದಾರೆ. ಆದರೆ ಇವರ ಚರಿತವನ್ನೆಲ್ಲಾ ಇದುವರೆಗೂ ಬರೆದಂತೆ ವಿವರವಾಗಿ ಬರೆಯಲು ಸಾಧ್ಯವಿಲ್ಲ. ಇದಲ್ಲದೆ ಇವರುಗಳಲ್ಲಿ ನಿಜವಾಗಿಯೂ ಕವಿಗಳು ಎಂದು ಹೇಳಿಸಿಕೊಳ್ಳುವುದಕ್ಕೆ ಯೋಗ್ಯರಾದವರು ಕೆಲವರೇ ಆಗಿರುತ್ತಾರೆ. ಉಳಿದವರಲ್ಲಿ ಕೆಲವರು ಸಂಸ್ಕೃತ, ಬಂಗಾಳಿ, ತೆಲುಗು, ಇಂಗ್ಲಿಷ್ ಈ ಭಾಷೆಗಳಲ್ಲಿರುವ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಇನ್ನು ಕೆಲವರು ಸಣ್ಣ ಕಾವ್ಯಗಳನ್ನೂ ಯಕ್ಷಗಾನಗಳನ್ನೂ ಹಾಡುಗಳನ್ನೂ ಬರೆದಿದ್ದಾರೆ. ಮತ್ತೆ ಕೆಲವರು ಪಾಠಶಾಲೆಗಳಿಗೆ ಉಪಯೋಗವಾಗುವಂತೆ ಪುಸ್ತಕಗಳನ್ನು ರಚಿಸಿದ್ದಾರೆ. ಜೀವಂತರಾದ ಗ್ರಂಥಕರ್ತರ ಹೆಸರನ್ನು ನಾವು ಎತ್ತುವುದಿಲ್ಲ. ಸ್ವಲ್ಪಕಾಲಕ್ಕೆ ಹಿಂದೆ ಗತಿಸಿದವರ ಚರಿತ್ರೆಯನ್ನು ಲಂಬಿಸಿ ಬರೆವುದು ನಮ್ಮ ಉದ್ದೇಶವಲ್ಲವಾದುದರಿಂದ ಅಂಥವರ ವಿಷಯವನ್ನೂ ಗ್ರಂಥಗಳನ್ನೂ ನಮಗ ತಿಳಿದಮಟ್ಟಿಗೆ ಬಹಳ ಸಂಕ್ಷೇಪವಾಗಿ ತಿಳಿಸುತ್ತೇವೆ.

## ಬಸವಪ್ಪ ಶಾಸ್ತ್ರಿ.

ಈತನು ವೀರಶೈವ ಕವಿ, ಮೈಸೂರು ಅರಮನೆಯಲ್ಲಿ ಆಸ್ಥಾನ ಕವಿಯಾಗಿದ್ದನು. ಪುಸ್ತಕ ವಾಚನದಲ್ಲಿ ಈತನ ಪಾಂಡಿತ್ಯವು ಅದ್ವಿತೀಯವಾಗಿದ್ದಿತು, ಕವಿತೆಯೂ ಮಾನ್ಯವಾದುದು.

**ಗ್ರಂಥಗಳು** — ಸಾವಿತ್ರೀಚರಿತ್ರೆ (ಷಟ್ಪದಿ), ಭರ್ತೃಹರಿ ಸುಭಾಷಿತ (ವೃತ್ತ), ನೀತಿಸಾರಸಂಗ್ರಹ (ಕಂದ), ದಮಯಂತೀಸ್ವಯಂವರ (ಚಂಪು), ಶಾಕುಂತಳ, ಚಂಡಕೌಶಿಕ, ಉತ್ತರರಾಮಚರಿತ, ಶೂರಸೇನಚರಿತ್ರೆ. ಕೊನೆಯ ನಾಲ್ಕೂ ನಾಟಕಗಳು, ಇವುಗಳಲ್ಲಿ ಶೂರಸೇನಚರಿತ್ರೆ "ಒಥೆಲ್ಲೊ" ಎಂಬ

ಇಂಗ್ಲಿಷ್ ನಾಟಕದ ಪರಿವರ್ತನ. ರೇಣುಕಾರ್‍ಯವಿಜಯ ಎಂಬ ಚಂಪೂಗ್ರಂಥವನ್ನೂ ಬರೆದಂತೆ ತಿಳಿಯುತ್ತದೆ.

## ಎಸ್. ಜಿ. ನರಸಿಂಹಾಚಾರ್ಯ.

ಈತನು ಶ್ರೀವೈಷ್ಣವ ಕವಿ; ಮೈಸೂರು ವಿದ್ಯಾಭ್ಯಾಸದ ಇಲಾಖೆಯಲ್ಲಿ ಕನ್ನಡ ಟ್ರಾನ್ಸ್ಲೇಟರ್ (ಪರಿವರ್ತಕ) ಎಂಬ ಕೆಲಸದಲ್ಲಿ ಇದ್ದನು. ಕಾವ್ಯಮಂಜರಿ ಎಂಬ ಮಾಸಿಕ ಪತ್ರಿಕೆಗೆ ಸಂಪಾದಕನಾಗಿದ್ದು ಹಲವು ಉತ್ತಮ ಕನ್ನಡ ಗ್ರಂಥಗಳನ್ನು ಪ್ರಚಾರಕ್ಕೆ ತಂದನು. ಕರ್ಣಾಟಕ ಕವಿಚರಿತೆಯ ಪ್ರಥಮಸಂಪುಟದ ರಚನೆಗೆ ಸಹಾಯಕನಾಗಿದ್ದನು. ಕವಿತೆ ಲಲಿತವಾದುದು.

**ಗ್ರಂಥಗಳು**— ಅಜನೃಪಚರಿತೆ, ದಿಲೀಪಚರಿತೆ: ಇವೆರಡೂ ರಘುವಂಶದ ಭಾಗಗಳ ಷಟ್ಪದೀರೂಪವಾದ ಪರಿವರ್ತನ, ಪ್ರೋಷಿತ ಪ್ರಿಯಾ ಸಮಾಗಮ (ಕಂದ), ಅಲ್ಲಾವುದ್ದೀನ್-ಅದ್ಭುತದೀಪ, ಈಸೋಪನ ನೀತಿಕಥೆಗಳು, ಗಲಿವರನ ದೇಶಸಂಚಾರ, ಭಾರತವೀರಚರಿತ, ಗಯ್ಯಾಳಿಯನ್ನು ಸಾಧುಮಾಡುವಿಕೆ.

## ನಂಜನಗೂಡು ಅನಂತನಾರಾಯಣ ಶಾಸ್ತ್ರಿ.

ಈತನು ಸ್ಮಾರ್ತಕವಿ; ಮೈಸೂರು ನಗರನಿವಾಸಿಯಾಗಿದ್ದನು ಕವಿತೆ ಸರಳವಾದುದು.

**ಗ್ರಂಥಗಳು**— ನಾಗಾನಂದನಾಟಕ, ಕರ್ಪೂರಮಂಜರೀ ಪರಿಣಯ ನಾಟಕ, ಸತ್ಯವತೀ ಚರಿತೆ.

## ಅಂಬಳೆ ಲಕ್ಷ್ಮೀನರಸಿಂಹ ಶಾಸ್ತ್ರಿ

ಈತನು ಸ್ಮಾರ್ತಕವಿ, ಮೈಸೂರು ವೆಸ್ಲಿಯನ್ ಮಿಷನ್ ಪಾಠಶಾಲೆಯಲ್ಲಿ ಬಹಳ ದಿವಸ ಉಪಾಧ್ಯಾಯನಾಗಿದ್ದನು ತೆಲುಗಿನಲ್ಲಿಯೂ ಕವನಶಕ್ತಿಯುಂಟು.

**ಗ್ರಂಥಗಳು**— ಸುಮತಿಶತಕ, ಭಾನುಶತಕ, ವಿದುರನೀತಿ: ಇವು ಮೂರೂ ಕಂದದಲ್ಲಿ ಬರೆದಿವೆ; ಕರ್ಣಾಟಕ ಚಂದ್ರಾಲೋಕ.

## ನಂದಳಿಗೆ ಲಕ್ಷ್ಮೀನಾರಣಪ್ಪ.

ಈತನು ಸ್ಮಾರ್ತಕವಿ, ಇವನ ತಂದೆ ಪಾರಾಳಿ ತಮ್ಮಯ್ಯ, ತಾಯಿ ಮಹಾಲಕ್ಷ್ಮಿ, ಸ್ಥಳ ಉಡುಪಿ ತಾಲ್ಲೂಕು ನಂದಳಿಗೆ ಇವನನ್ನು ಬಾಲ್ಯದಲ್ಲಿ ಮನೆಯವರು ಮುದ್ದಣ್ಣನೆಂದು ಕರೆಯುತ್ತಿದ್ದರು ಈತನು ಉಡುಪಿಯಲ್ಲಿ ಕಸರತ್ತನ್ನು ಕಲಿಸುವ ಉಪಾಧ್ಯಾಯನಾಗಿದ್ದನು ಶ್ರೀರಾಮಪಟ್ಟಾಭಿಷೇಕವನ್ನು ತಾಯಿಯ ಹೆಸರಿನಲ್ಲಿಯೂ ರಾಮಾಶ್ವಮೇಧವನ್ನು ತನ್ನ ಬಾಲ್ಯದ ಹೆಸರಿನಲ್ಲಿಯೂ ಬರೆದಿದ್ದಾನೆ ಅದ್ಭುತರಾಮಾಯಣದ ಕವಿಯ ಕೈಬರಹದ ಪ್ರತಿಯ ಮುಖ ಪತ್ರದಲ್ಲಿ "ನಂದಳಿಗೆ ಲಕ್ಷ್ಮೀನಾರಾಯಣನಿಂದ ವಿರಚಿತಮಾದುದು" ಎಂದಿರುವುದರಿಂದ ಇದೂ ಏತತ್ಕೃತವೇ. ಈ ಮೂರು ಗ್ರಂಥಗಳನ್ನೂ ತನ್ನವೆಂದು ಹೇಳಿದರೆ ಅಚ್ಚು ಹಾಕುವರೋ ಇಲ್ಲವೋ ಎಂಬ ಶಂಕೆಯಿಂದ ಪೂರ್ವಗ್ರಂಥಗಳೆಂದು ಹೇಳಿ ಕಾವ್ಯಮಂಜರೀಸಂಪಾದಕರಿಗೆ ಕಳುಹಿಸಿಕೊಟ್ಟನು. ಅವು ಮುದ್ರಿತವಾದುವು ಅನೇಕ ಜನಗಳಿಗೆ ಪೂರ್ವಗ್ರಂಥಗಳೆಂಬ ಭ್ರಾಂತಿ ಈಗಲೂ ಇದೆ. ನಾವೂ ಈ ಭ್ರಾಂತಿಗೊಳಗಾಗಿ ಇವುಗಳಿಗೆ ಸುಮಾರು 1750 ಎಂಬ ಕಾಲವನ್ನು ಕೊಟ್ಟೆವು. ಈಚೆಗೆ ವಿಚಾರಮಾಡಿದುದರಲ್ಲಿ ನಿಜಾಂಶವು ಹೊರಪಟ್ಟಿತು. ಆಧುನಿಕನಾದರೂ ಈತನ ಬಂಧವು ಶ್ಲಾಘ್ಯವಾಗಿದೆ.

**ಇತರ ಗ್ರಂಥಗಳು** — ಕುಮಾರ ವಿಜಯ, ರತ್ನಾವಳೀ ಕಲ್ಯಾಣ: ಇವೆರಡೂ ಯಕ್ಷಗಾನಗಳು, ಭಗವದ್ಗೀತೆ (ಭಾ.ಷ), ರಾಮಾಯಣ (ವಾ.ಷ), ಕಾಮಶಾಸ್ತ್ರ.

## ಸಿ ಆರ್. ಚೆಲ್ಲಮ್ಮ.

ಈಕೆ ಬ್ರಾಹ್ಮಣ ಕವಿ, ಮೈಸೂರು ಮಹಾರಾಣಿ ಬಾಲಿಕಾಪಾಠಶಾಲೆಯಲ್ಲಿ ಉಪಾಧ್ಯಾಯಿನಿಯಾಗಿದ್ದಳು.

**ಗ್ರಂಥಗಳು**—ರುಕ್ಮಿಣೀಪರಿಣಯ, ಪಾರಿಜಾತಾಪಹರಣ, ರಾಜಕಲಾನಿಧಿ, ವೈರಾಗ್ಯಮಂಜರಿ, ದ್ವಾದಶಮಂಜರೀ ಸ್ತೋತ್ರ, ಗೀತಿಕಾವಳಿ.

## ಗೊರೂರು ನರಸಿಂಹಾಚಾರ್ಯ.

ಇವನು ಶ್ರೀವೈಷ್ಣವ ಕವಿ. ಇವನ ಸ್ಥಳ ಹಾಸನದ ಸಮೀಪದಲ್ಲಿರುವ ಗೊರೂರು.

**ಗ್ರಂಥಗಳು**—ಕನ್ನಡ ವಿಶ್ವಗುಣಾದರ್ಶ, ಕನ್ನಡ ಭರ್ತೃಹರಿ, ಕಾವೇರೀ ಪುರಾಣ, ಕೃಷ್ಣಚರಿತಾಮೃತ, ನೃಹರಿಬಿನ್ನಪ, ಕಥಾಮಂಜರಿ

## ವೀರಸಗರೆ ಪುಟ್ಟಣ್ಣ.

ಈತನು ವೀರಶೈವ ಕವಿ, ಇವನ ಸ್ಥಳ ಮೈಸೂರ ಮೈಸೂರು ತೋಷೀ ಖಾನೆ ಬೀಗನಂಜಪ್ಪಾಜಿಯು ಮುಮ್ಮಗ ಸಿದ್ದರಾಜ ಅರಸಿನ ಆಶ್ರಿತನಾಗಿದ್ದಂತೆ ತಿಳಿಯುತ್ತದೆ

**ಗ್ರಂಥಗಳು**— ಅಂಕನಾಥೇಶಭಕ್ತಿವಿಜಯ (ಷ), ಚಾಮರಾಜೇಂದ್ರ ಶತಕ (ಕಂದ), ದುಶ್ಶಾಸನ ನಾಟಕ, ಗರುಡಹನುಮದ್ವಿಲಾಸ, ದ್ರೌಪದೀಸ್ವಯಂವರ, ಧ್ರುವಚರಿತ್ರೆ, ನಳಚರಿತ್ರೆ, ಸೀತಾಪತೀಕಥೆ, ಪಂಚವಟೀರಾಮಾಯಣ, ರತಿಕಲ್ಯಾಣ, ಶನಿದೇವರ ಮಹಾತ್ಮ್ಯ ಸಾಸಂದಗಣೇಶನ ಕಥೆ, ವಿನೋದರಸ ಮಂಜರಿ, ಅರ್ಜುನ ಜೋಗಿ ಹಾಡುಗಳು, ದೇವರ ಜಾತ್ರೆಯ ಪದಗಳು, ಬಾಲಿಕಾ ಗೀತರತ್ನಾವಳಿ, ಗಿರಿಜಾಕಲ್ಯಾಣ ನಾಟಕ, ಹರಿಶ್ಚಂದ್ರ ನಾಟಕ, ತುರಾಲಾವಣಿ, ವಿವೇಕವಿಜಯ

## ನಂಜನಗೂಡು ಸುಬ್ಬಾಶಾಸ್ತ್ರಿ.

ಈತನು ಸ್ಮಾರ್ತಕವಿ, ಇವನ ಸ್ಥಳ ಮೈಸೂರು.

**ಗ್ರಂಥಗಳು**—ಸೀತಾಚರಿತ್ರೆ, ಉತ್ತರ ಸೀತಾಚರಿತ್ರೆ ಎರಡೂ ಷಟ್ಪದಿ ಯಲ್ಲಿ ಬರದಿವೆ.

## ಧೋಂಡೇ ನರಸಿಂಹ ಮುಳಬಾಗಿಲು.

ಇವನು ಬ್ರಾಹ್ಮಣ ಕವಿ, ಧಾರವಾಡದ ಶಿಕ್ಷಕಶಿಕ್ಷಣಾಲಯದಲ್ಲಿ ಬಹುಕಾಲ ಉಪಾಧ್ಯಾಯನಾಗಿದ್ದನು. ಈತನ ಸ್ಥಳ ಕೋಲಾರದ ಜಿಲ್ಲಾ ಮುಳಬಾಗಿಲು.

ಗ್ರಂಥಗಳು— ಹಿತೋಪದೇಶ (ಚಂಪು), ಉತ್ತರರಾಮಚರಿತ ನಾಟಕ, ಮಾಳವಿಕಾಗ್ನಿಮಿತ್ರ, ಮೃಚ್ಛಕಟಿಕೆ, ವೇಣೀಸಂಹಾರ, ಛಂದಸ್ಸಾರ, ಕನ್ನಡ ಕೈಪಿಡಿ, ನುಡಿಗಟ್ಟು

## ಗರಣಿ ಕೃಷ್ಣಾಚಾರ್ಯ

ಈತನು ಮಾಧ್ವಕವಿ, ಮದರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಬಹಳ ದಿವಸ ಕನ್ನಡ ಪಂಡಿತನಾಗಿದ್ದನು ಇವನ ಸ್ಥಳ ಮಧುಗಿರಿ ತಾಲ್ಲೂಕು ಗರಣಿ

ಗ್ರಂಥಗಳು —ಮೃಚ್ಛಕಟಿಕೆ, ನಾಗಾನಂದ ನಾಟಕ ಕಥೆ, ನೀತಿಶತಕ, ದೀರ್ಘಾಯುಸ್ಸೂತ್ರ

## ಜ...ರಾಯಾಚಾರ್ಯ

ಈತನು ಮಾಧ್ವಕವಿ, ಮೈಸೂರು ಮಹಾರಾಣಿ ಬಾಲಿಕಾಪಾಠಶಾಲೆಯಲ್ಲಿ ಉಪಾಧ್ಯಾಯನಾಗಿದ್ದನು

ಗ್ರಂಥಗಳ.—ಚಂಡಕೌಶಿಕನಾಟಕ, ಮದಾಲಸಾ ಪರಿಣಯ, ರಾಮವರ್ಮ ಲೀಲಾವತೀ ಚರಿತ್ರೆ, ವೇಣೀಸಂಹಾರ ನಾಟಕ, ಮಹಾಬಧಿರಪ್ರಹಸನ, ಕರ್ಣಾಟಕ ಭಾಷಾಕರ, ಪಾಕಶಾಸ್ತ್ರ

## ಶಾಂತಕವಿ

ಈತನು ಮಾಧ್ವಕವಿ, ಇವನಿಗೆ ಬಾಳಾಚಾರ್ಯ ಸಕ್ಕರಿ ಎಂಬ ಹೆಸರೂ ಉಂಟು ಇವನು ಸುಮಾರು 70 ಗ್ರಂಥಗಳನ್ನು ಬರೆದಿದ್ದಾನೆ ಇವುಗಳೆಲ್ಲಾ ಪ್ರಾಯಿಕವಾಗಿ ಯಕ್ಷಗಾನಗಳು

ಗ್ರಂಥಗಳು —ಮೇಘದೂತ (ಷ), ವಿರಹತರಂಗ (ಷ), ಶ್ರೀ ವಿದ್ಯಾರಣ್ಯರ ಚರಿತ್ರೆ (ಹಾಡು), ಉಷಾಹರಣ ನಾಟಕ, ಕೀಚಕವಧ, ಗಜೇಂದ್ರಮೋಕ್ಷ, ಗಿರಿಜಾಕಲ್ಯಾಣ, ಚಂದ್ರಾವಳೀಚರಿತ್ರೆ, ಬಾಣಾಸುರನಾಟಕ, ಮನೋರಮ ನಾಟಕ, ವತ್ಸಲಾಹರಣ, ಸಿರಿಯಾಳಸತ್ವಪರೀಕ್ಷೆ, ಸೀತಾರಣ್ಯಪ್ರವೇಶ, ಸುಂದೋಪಸುಂದವಧೆ, ನಾಟಕಪದ ಸಂಗ್ರಹ, ಶೃಂಗಾರಪದ ಸಂಗ್ರಹ, ದುಂದುಮೆ ಪದ, ಕೃಷ್ಣಮೋಹಿನೀ ದುಂದುಮೆ, ಮೌನೇಶ್ವರನ ಬಾಲಲೀಲೆ—ಇತ್ಯಾದಿ.

## ಮಹಾಂತದೇಶಿಕ.

ಈತನು ವೀರಶೈವ ಕವಿ; ಬೆಂಗಳೂರು ತಿಪ್ಪಸೆಟ್ಟಿ ಮಠದ ಗುರುಸಿದ್ಧಸ್ವಾಮಿಯ ಕರಜಾತನು.

ಗ್ರಂಥಗಳು—ರಾಜೇಶ್ವರ ಶತಕ, ವೇಣುಗೋಪಾಲ ಶತಕ, ರೇಣುಕಾರ್ಯಸ್ತೋತ್ರ, ಅಂಬಾಸ್ತೋತ್ರ, ಸಿರಿಯಾಳನ ಚರಿತ್ರೆ, ಸತ್ಯಹರಿಶ್ಚಂದ್ರಮಹಾರಾಯನ ಚರಿತ್ರೆ, ಗಂಗಾಧರ ಸ್ತೋತ್ರ, ಗಣಾಷ್ಟಕ, ನಿರಾಳಗುರುಸ್ತೋತ್ರ.

## ಬಾಗಲೂರು ರಾಮಸ್ವಾಮಿ.

ಇವನು ಸ್ಮಾರ್ತಕವಿ, ಇವನ ಸ್ಥಳ ದೇವನಹಳ್ಳಿ ತಾಲ್ಲೂಕು ಬಾಗಲೂರು

ಗ್ರಂಥ— ವಾಸಿಷ್ಠರಾಮಾಯಣ (54 ಸರ್ಗ), ಕಂದ, ವೃತ್ತ, ಷಟ್ಪದಿ, ಗೀತ, ವಚನ ಎಲ್ಲವನ್ನೂ ಒಳಕೊಂಡಿದೆ.

## ಎಣ್ಣೆಮಡಿ ವೆಂಕಟರಮಣಯ್ಯ.

ಈತನು (ಸಾರಸ್ವತ) ಬ್ರಾಹ್ಮಣ ಕವಿ, ಇವನ ಸ್ಥಳ ಉತ್ತರಕನ್ನಡ ಜಿಲ್ಲಾ ಕುಮ್ಟ. ಗ್ರಂಥ—ರುಕ್ಮಿಣೀ ಸ್ವಯಂವರ.

## ಎಂ ಶ್ರೀನಿವಾಸಯ್ಯಂಗಾರ್.

ಈತನು ಶ್ರೀವೈಷ್ಣವ ಕವಿ, ಮಾಲೂರು ಮಾಡಭೂಷಿ ಶೇಷಾದ್ರಿ ಅಯ್ಯಂಗಾರ್ರ ಮಗ

ಗ್ರಂಥ—ರುಕ್ಮಿಣೀಪರಿಣಯ (ಚಂಪು), ಷಟ್ಪದಿಗಳೂ ಇವೆ. ಬಮ್ಮೇರ ಪೋತನ ಆಂಧ್ರಭಾಗವತದ ಈ ಭಾಗವನ್ನು ಪರಿವರ್ತಿಸಿ ವಿಸ್ತರಿಸಿದ್ದಾನೆ.

## ವೀರಪ್ಪಾರಾಧ್ಯ.

ಇವನು ವೀರಶೈವ ಕವಿ, ಮಾಲೂರು ತಾಲ್ಲೂಕು ಅರಸಿನಗುಂಟೆ ಹೊಸ ಮಠದ ಅಧ್ಯಕ್ಷನಾಗಿದ್ದನು. ಗ್ರಂಥ—ಅಟವೀಶಭಜನಾಮೃತ (ಶರಷಟ್ಪದಿ).

## ಭೀಮಾಜಿ ಶ್ರೀನಿವಾಸ ಅಡಬಡ್ಡಿ.

ಇವನು ಬ್ರಾಹ್ಮಣ ಕವಿ, ಧಾರವಾಡ ಪ್ರಾಂತದವನು.

ಗ್ರಂಥಗಳು—ಪೊಣ್ಣಡಗನ್ನಡಿ (ನಾನಾಪದ್ಯ), ನೀತಿದರ್ಪಣ (ಕಂದ).

## ವೆಂಕಟಾಚಲಯ್ಯ

ಈತನು ಸ್ಮಾರ್ತ ಕವಿ, ದೇವನಹಳ್ಳಿ ತಾಲ್ಲೂಕು ಕುಂದಾಣದಲ್ಲಿ ಉಪಾಧ್ಯಾಯನಾಗಿದ್ದನು ಗ್ರಂಥ—ಕಲಿಧರ್ಮಶತಕ (ಕಂದ).

## ನಂಜುಂಡಾಚಾರ್ಯ.

ಈತನು ಅಕ್ಕಸಾಲೆ, ಇವನ ಸ್ಥಳ ರಾಮನಾಥಪುರ.

ಗ್ರಂಥ—ತ್ರಿಮೂರ್ತ್ಯಾತ್ಮಕಚರಿತ್ರೆ (ಷ), (ವಿಶ್ವಕರ್ಮಪುರಾಣಾಂತರ್ಗತ).

## ಸರಗೂರು ವೆಂಕಟವರದಾಚಾರ್ಯ

ಈತನು ಶ್ರೀವೈಷ್ಣವ ಕವಿ, ಇವನ ಸ್ಥಳ ಚಾಮರಾಜನಗರದ ತಾಲ್ಲೂಕು ಸರಗೂರು.

**ಗ್ರಂಥಗಳು**—ತಪತೀಪರಿಣಯ ನಾಟಕ, ವ್ಯಾಘ್ರಾಚಲ ಮಾಹಾತ್ಮ್ಯ, ರಾಧಾಕೃಷ್ಣವಿಲಾಸ, ಗೋಪಿಕಾಗೀತೆ, ಶ್ರೀನಿವಾಸಸಂಕೀರ್ತನ.

## ಬಿ. ವೆಂಕಟಾಚಾರ್ಯ.

ಈತನು ಶ್ರೀವೈಷ್ಣವನು, ಮೈಸೂರು ಸರ್ಕಾರದಲ್ಲಿ ಮುನ್ಸಿಫ್ ಕೆಲಸದಲ್ಲಿದ್ದನು. ಬಂಗಾಳಿ ಭಾಷೆಯ ಅನೇಕ ಗ್ರಂಥಗಳನ್ನು ಕನ್ನಡಕ್ಕೆ ಪರಿವರ್ತಿಸಿ ಕನ್ನಡ ಸಾಹಿತ್ಯವನ್ನು ವೃದ್ಧಿಗೊಳಿಸಿದನು. ಈತನ ಗ್ರಂಥಗಳ ಸಂಖ್ಯೆ ಸುಮಾರು 50 ರ ವರೆಗೆ ಇರಬಹುದು

**ಗ್ರಂಥಗಳು**—ಅಹಲ್ಯಾಬಾಯಿ, ಅಡವಿಯಹುಡುಗಿ, ಅತ್ತಿಗೆ, ಅಂತಃಪುರದ ರಹಸ್ಯ, ಯವನಯಾಮಿನೀವಿನೋದಗಳು (ಅರೇಬಿಯನ್ ನೈಟ್ಸ್), ಆನಂದಮಠ, ಇಂದಿರಾ, ಕಪಾಲಕುಂಡಲಾ ಕಮಲಾಕಾಂತ, ಚಂದ್ರಶೇಖರ, ದುರ್ಗೇಶನಂದಿನಿ, ದೇವಿ ಚೌಧುರಾಣಿ, ನೀರದ, ಪರಿಮಳಾ, ಭಾರತಮಹಿಳೆಯರು, ಭ್ರಾಂತಿವಿಲಾಸ, ಮಾಧವೀಲತಾ, ಮಾಲತಿ, ಮೃಣ್ಮಯಿ, ಯುಗಳಾಂಗುರೀಯ, ರಜನಿ, ರಮಾಬಾಯಿ, ರಾಜಸಿಂಹ, ರಾಧಾರಾಣಿ, ವಿಷವೃಕ್ಷ, ಶರಣಾಗತ, ಶಾಕುಂತಲಕಥೆ, ಸೀತಾರಾಮ, ಸೀತಾವನವಾಸಕಥೆ, ಕೃಷ್ಣಕಾಂತನ ಉಯಿಲು, ಲೋಕೈಕ ಚತುರನ ಕಥೆ, ರಾಮೇಶ್ವರನ ಅದೃಷ್ಟ, ರಾಜಸ್ಥಾನದ ಕಥೆಗಳು, ರಾಸಲೀಲಾ, ಪ್ರಾಚೀನ ಮತ್ತು ನವೀನ ಸ್ತ್ರೀಪುರುಷರು, ಭಗವಚ್ಛಾಸ್ತ್ರಭಾಸ್ಕರ—ಇತ್ಯಾದಿ.

## ಕುಂಡಲಗಿರಿಯಾಚಾರ್ಯ.

ಈತನು ಮಾಧ್ವನು, ಮೈಸೂರು ಶಿಕ್ಷಕಶಿಕ್ಷಣಾಲಯದಲ್ಲಿ ಉಪಾಧ್ಯಾಯನಾಗಿದ್ದನು

ಗ್ರಂಥಗಳು—ಜೀವಂಧರಚರಿತೆ, ಧರ್ಮಶರ್ಮಾಭ್ಯುದಯ, ಹರ್ಷಚರಿತೆ, ಶಬ್ದಾನುಶಾಸನಪ್ರಕಾಶಿಕೆ.

## ವೆಂಕಟರಂಗೋಕಟ್ಟಿ.

ಈತನು ಬ್ರಾಹ್ಮಣನು, ಧಾರವಾಡದ ಶಿಕ್ಷಕಶಿಕ್ಷಣಾಲಯದಲ್ಲಿ ಅಧ್ಯಕ್ಷನಾಗಿದ್ದನು

ಗ್ರಂಥಗಳು—ಬಧಿರ್ಶೀಲ್ಡನ ಕಥೆ, ಆರುಬೆರಲಿನ ಕುರುಹು, ಜ್ಯೋತಿಶ್ಶಾಸ್ತ್ರ, ಕರ್ಣಾಟಕದ ಗೆಜೆಟಿಯರ್, ಪ್ರಾಕೃತಿಕ ಭೂಗೋಳಶಾಸ್ತ್ರ, ಕನ್ನಡ ಲಘುವ್ಯಾಕರಣ, ವಿಧವೆಗಳ ಮುಂಡನ ಅನಾಚಾರ, ಉಪನ್ಯಾಸವಿದ್ಯೆ, ಅರೇಬಿಯನ್ ನೈಟ್ಸ್ ಕಥೆಗಳು.

## ಎಂ ಬಿ. ಶ್ರೀನಿವಾಸಯ್ಯಂಗಾರ್, ಎಂ ಎ

ಈತನು ಶ್ರೀವೈಷ್ಣವನು, ಮೈಸೂರು ವಿದ್ಯಾಭ್ಯಾಸದ ಇಲಾಖೆಯಲ್ಲಿ ಟ್ರಾನ್ಸ್‌ಲೇಟರಾಗಿಯೂ (ಪರಿವರ್ತಕ) ಉಪಾಧ್ಯಾಯನಾಗಿಯೂ ಇದ್ದನು ಇವನ ಸ್ಥಳ ಮೈಸೂರು

ಗ್ರಂಥಗಳು—ಜಯಸಿಂಹರಾಜಚರಿತೆ, ಹೇಮರಾಜವಿಲಾಸ, ನೀತಿಚಿಂತಾಮಣಿ, ಹಿಂದೂಚರಿತ್ರಸಂಗ್ರಹ, ಹಿಂದೂದೇಶದ ನಾಗರಿಕ (Citizen of India), ನಿತ್ಯಾನುಸಂಧಾನ ಟೀಕೆ (ತಮಿಳು ಗ್ರಂಥಗಳಿಗೆ ಕನ್ನಡ ಟೀಕೆ).

## ಬಿ. ಸೋಮನಾಥಯ್ಯ.

ಈತನು ಸ್ಮಾರ್ತನು, ಇವನ ಸ್ಥಳ ತುಮಕೂರು ತಾಲ್ಲೂಕು ಬೆಳ್ಳಾವೆ

ಗ್ರಂಥಗಳು— ರಾಜಶೇಖರಚರಿತೆ, ಶ್ರೀರಂಗಪಟ್ಟಣದ ಚರಿತೆ, ವಿಜ್ಞಾನದೀಪಿಕೆ.

## ವೆಂಕಟೇಶ ಶಾಸ್ತ್ರಿ

ಈತನು ಸ್ಮಾರ್ತನು ; ಇವನ ಸ್ಥಳ ನೆಲಮಂಗಲದ ತಾಲ್ಲೂಕು ಸೊಂಡೆಕೊಪ್ಪ.

ಗ್ರಂಥಗಳು—ಕೃಷ್ಣಬೋಧಾಮೃತ, ಹನ್ನೆರಡುರಾಜರ ಕಥೆ (ನರನಾರಾಯಣ ಸಂವಾದರೂಪ), ದ್ವಾದಶಮಂಜರಿಕಾಸ್ತೋತ್ರ ಟೀಕೆ, ಪುಷ್ಪಸೌರಭಕಥೆ.

## ಶಿವರುದ್ರಸೋಮಪ್ಪ ಕುಲಕರ್ಣಿ

ಈತನು ವೀರಶೈವನು ; ಧಾರವಾಡಪ್ರಾಂತದವನು ; ಕನ್ನಡ ಶಾಲಾಧ್ಯಾಪಕನಾಗಿದ್ದನು.

ಗ್ರಂಥಗಳು—ಸನ್ನತಾಯಿ, ನಾಡನೆಲೆಕಾರ, ಜೀವಿಗರ ಚಿಂತಾಮಣಿ, ಹಿತೋಪದೇಶ (ಉತ್ತರಾರ್ಧ), ಭೂಮಂಡಲಬೋಧಿನಿ.

## ಧಾರಾಪುರದ ತಿಮ್ಮಪ್ಪದಾಸ.

ಈತನು ಮಾಧ್ವಕವಿ, ಹರಿಕಥೆ ಮಾಡುತ್ತಿದ್ದನು.

ಗ್ರಂಥಗಳು—ಲಾಕ್ಷಾಗೃಹದಹನ, ಬಕಾಸುರವಧೆ, ಗಾಲವಚರಿತ್ರೆ : ಇವು ಯಕ್ಷಗಾನಗಳು, ಮೂರುವರವಜ್ರದ ಕಥೆ. ಸುಭದ್ರಾಪರಿಣಯ, ಸುರಥಸುಧನ್ವರ ಕಾಳಗ ಎಂಬ ಯಕ್ಷಗಾನಗಳನ್ನೂ ಬರೆದಿರುವಂತೆ ತೋರುತ್ತದೆ.

## ಸಿದ್ಧರಾಮ ಶಿವಯೋಗಿ.

ಇವನು ವೀರಶೈವಕವಿ, ತಾಂಡೂರು ಹೊಸಪೇಟೆ ನಿಜಮಠಕ್ಕೆ ಸೇರಿದವನು.

ಗ್ರಂಥ—ಚೆನ್ನಬಸವಾಭ್ಯುದಯ (ಷ).

## ದಕ್ಷಿಣಾಮೂರ್ತಿಶಾಸ್ತ್ರಿ

ಈತನು ಸ್ಮಾರ್ತನು ; ಮೈಸೂರು ಪ್ರಾಚ್ಯಕೋಶಾಲಯದಲ್ಲಿ ಪಂಡಿತನಾಗಿದ್ದನು.

ಗ್ರಂಥಗಳು—ಅಲ್ಲಾವುದೀನ್ ಅದ್ಭುತದೀಪ, ಶಬ್ದಭಾಸ್ಕರ, ರಾಜಶೇಖರವಿಲಾಸ ಟೀಕೆ, ಶಂಕರವಿಜಯ ವ್ಯಾಖ್ಯಾನ

## ಹುರಗಗೆರೆ ರುದ್ರಕವಿ

ಈತನು ವೀರಶೈವಕವಿ. ಗ್ರಂಥಗಳು — ಶಿವನಾಟಕ, ಮಾರ್ಕಂಡೇಯ ಚರಿತೆ, ಮೀನಾಕ್ಷೀಕಲ್ಯಾಣ.

## ಸಿದ್ಧಾಂತಿ ಸುಬ್ರಹ್ಮಣ್ಯಶಾಸ್ತ್ರಿ.

ಈತನು ಸ್ಮಾರ್ತನು, ಮದರಾಸ್ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ಕನ್ನಡ ಪಂಡಿತನಾಗಿದ್ದನು

**ಗ್ರಂಥಗಳು**—ಚಾರುದರ್ಶೀಷ್ ಕಥೆ, ಶಕುನಸಂಗ್ರಹ, ಜೈಮಿನಿಭಾರತದ ಟೀಕೆ, ಭಾಗವತ ಟೀಕೆ, ಬೃಹಜ್ಜಾತಕ ಟೀಕೆ, ಅಷ್ಟಗನ್ನಡ ರಾಮಾಯಣ (ವ) ಅಸಮಗ್ರ.

## ದೇವಶಿಖಾಮಣಿ ಶ್ರೀನಿವಾಸಯ್ಯಂಗಾರ್.

ಈತನು ಶ್ರೀವೈಷ್ಣವ ಕವಿ; ಹಿರೋಡೆ ಸಬಾಡಿವಿಜನ್ ಕಚೇರಿಯಲ್ಲಿ ಕೆಲಸದಲ್ಲಿದ್ದನು

ಗ್ರಂಥಗಳು—ಪ್ರಬೋಧಚಂದ್ರೋದಯ, ಕಿರಾತಾರ್ಜುನೀಯ ಕಥೆ, ಗಿರಿಜಾಕಲ್ಯಾಣಕಥೆ, ಧ್ರುವೋಪಾಖ್ಯಾನ, ನಳಚರಿತ್ರೆ, ಪ್ರಹ್ಲಾದಚರಿತ್ರೆ, ವನಮಾಲಿ ವಿಲಾಸಕಥೆ, ಮುಕುಂದಮಾಲೆ.

## ಚಂದ್ರಶೇಖರಶಾಸ್ತ್ರಿ.

ಈತನು ಸ್ಮಾರ್ತಕವಿ, ಬೆಂಗಳೂರು ದಿವಾನ್ ಕಚೇರಿಯಲ್ಲಿ ಕೆಲಸದಲ್ಲಿದ್ದನು.

ಗ್ರಂಥಗಳು— ದ್ರೌಪದೀ ವಸ್ತ್ರಾಪಹರಣ, ಮನುಚರಿತ್ರೆ, ಮಂದಾರವಲ್ಲೀ ಪರಿಣಯ.

## ಎ. ಆನಂದರಾಯ.

ಈತನು ಮಾಧ್ವನು; ಮೈಸೂರು ಸರಕಾರದಲ್ಲಿ ಅಸಿಸ್ಟೆಂಟ್ ಕಮಿಷನರ್ ಕೆಲಸದಲ್ಲಿದ್ದನು.

ಗ್ರಂಥ — ಪಾಂಚಾಲೀಪರಿಣಯ ನಾಟಕ (Merchant of Venice).

## ಗೋಡಪಲ್ಲಿ ರಾಮಶಾಸ್ತ್ರಿ.

ಈತನು ಸ್ಮಾರ್ತಕವಿ ಗ್ರಂಥಗಳು—ಚಂಡಕೌಶಿಕ ನಾಟಕ, ಚಂಡೀ ಮದಮರ್ದನ ನಾಟಕ, ತಾರಾಶಶಾಂಕವಿಜಯ, ಚೋರಕಥೆ, ಕುಮಾರರಾಮನ ನಾಟಕ.

## ಲೋಕನಾಥಕವಿ.

ಈತನು ಸ್ಮಾರ್ತಕವಿ, ಇವನ ಸ್ಥಳ ಶ್ರೀನಿವಾಸಪುರ.

ಗ್ರಂಥಗಳು—ದಶಕುಮಾರಚರಿತೆ, ಧ್ರುವಚರಿತ್ರೆ, ವೈದ್ಯಶತಶ್ಲೋಕೀ ಟೀಕೆ, ಸನತ್ಕುಮಾರಗೃಹವಾಸ್ತುದರ್ಪಣಟೀಕೆ.

## ಮೋಟಗಾನಹಳ್ಳಿ ಶಂಕರಶಾಸ್ತ್ರಿ.

ಈತನು ಸ್ಮಾರ್ತಕವಿ. ಗ್ರಂಥ—ಇಂದ್ರಸಭಾನಾಟಕ.

## ನಕಲಿ ಶಾಮರಾಯ.

ಈತನು ಬ್ರಾಹ್ಮಣಕವಿ; ಇವನ ಸ್ಥಳ ಬೆಂಗಳೂರು. ಗ್ರಂಥ—ಧರ್ಮ ಪಾಲಚರಿತೆ (ನಾಟಕ).

## ಬಳ್ಳಾರಿ ರಾಮಭಟ್ಟ.

ಈತನು ಸ್ಮಾರ್ತನು. ಗ್ರಂಥ—ಕೃಷ್ಣಚರಿತ್ರೆ.

## ವೆಂಕಟಾಚಲಪಂಡಿತ.

ಈತನು ಸ್ಮಾರ್ತಕವಿ; ಕೊಳ್ಳೆಗಾಲಂ ಪಾಳ್ಯದ ಕೊಂಡಾಪಂಡಿತರ ಮಗನು.

ಗ್ರಂಥ—ಮಂದಾರೋಜ್ವಲಾಪರಿಣಯ ನಾಟಕ (ಗುಲೇಬಕಾವಲಿ).

## ಕ. ಅನಂತರಾಮಯ್ಯ.

ಈತನು ಸ್ಮಾರ್ತಕವಿ. ಗ್ರಂಥಗಳು—ಅಜಾಮಿಳಚರಿತೆ, ಪ್ರಹ್ಲಾದಚರಿತೆ.

## ಯಳಂದೂರ ಸಿದ್ಧಲಿಂಗಪ್ಪ.

ಈತನು ವೀರಶೈವಕವಿ, ಇವನ ಸ್ಥಳ ಬೇಲೂರು

ಗ್ರಂಥ—ಕರಿಯಬಂಟನಕಥೆ.

## ಸುಬ್ಬಯ್ಯ.

ಈತನು ಬ್ರಾಹ್ಮಣಕವಿ; ಎಲ್ಲಲಗೌರಿಯರ ಪುತ್ರ.

ಗ್ರಂಥಗಳು—ರಾವಣೋದ್ಭವ, ರುಕ್ಮಿಣೀಸ್ವಯಂವರ.

## ಸಾಗ್ಗರ ಶ್ರೀಕಂಠಶಾಸ್ತ್ರಿ.

ಈತನು ಸ್ಮಾರ್ತಕವಿ ಗ್ರಂಥ—ಕರ್ಣಾಟಕಮಾಳವಿಕಾಗ್ನಿಮಿತ್ರ.

## ಹರಿಭಟ್ಟರ ತಮ್ಮಯ್ಯ.

ಈತನು ಸ್ಮಾರ್ತಕವಿ. ಗ್ರಂಥಗಳು—ದ್ರೌಪದೀಸ್ವಯಂವರ, ಸುಧನ್ವಚರಿತ್ರೆ. ಅಷ್ಟೋತ್ತರಶತಮಂಗಳಗೀತಾವಳಿಯನ್ನೂ ಬರೆದಿರುವಂತೆ ತೋರುತ್ತದೆ.

## ಅಪ್ಪಾಭಟ್ಟ

ಇವನು ಸ್ಮಾರ್ತಕವಿ, ಇವನ ಸ್ಥಳ ಗುಬ್ಬಿ ತಾಲ್ಲೂಕು ದಂಡಿನ ಸಿವರ.

ಗ್ರಂಥ—ಮಾರ್ಕಂಡೇಯನಾಟಕ.

## ಭಾಗವತ ಕರಿಯಪ್ಪ.

ಇವನು ಬ್ರಾಹ್ಮಣಕವಿ, ಇವನ ಸ್ಥಳ ತಿಪಟೂರು ತಾಲ್ಲೂಕು ಬೊಮ್ಮಲಾಪುರ. ಗ್ರಂಥ—ನರಕಾಸುರನ ಕಾಳಗ

## ವೆಂಕಟಾದ್ರಿ ಶಾನುರಾಯ.

ಈತನು ಬ್ರಾಹ್ಮಣನು, ಕೊಡಗು ಪ್ರಾಂತದವನು. ಕೆಲವು ಯಕ್ಷಗಾನಗಳನ್ನೂ ಹಾಡುಗಳನ್ನೂ ಬರೆದಿರುವಂತೆ ಹೇಳುತ್ತಾರೆ.

## ಶೇಷಗಿರಿರಾವ್ ತುರಮುರಿ.

ಈತನು ಬ್ರಾಹ್ಮಣಕವಿ, ಧಾರವಾಡ ಪ್ರಾಂತದವನು.

ಗ್ರಂಥ—ಶಾಕುಂತಲನಾಟಕ.

## ಶಿವಪ್ಪಶಾಸ್ತ್ರಿ.

ಈತನು ವೀರಶೈವಕವಿ. ಗ್ರಂಥಗಳು—ಶಿವಯೋಗರಹಸ್ಯ, ವೀರಶೈವಾಮೃತಪುರಾಣ ಟೀಕೆ, ದ್ರೌಪದೀಸ್ವಯಂವರ ನಾಟಕ, ಪ್ರಭಾವತೀದರ್ಬಾರು ನಾಟಕ, ಮನೋವಿಜಯ ಟೀಕೆ, ಅಟವೀಶಗೀತಾಮಂಜರಿ.

## ವೆಂಕಟನರಸಯ್ಯ.

ಈತನು ಬ್ರಾಹ್ಮಣಕವಿ; ಮೈಸೂರು ಮದನವಿಲಾಸತೊಟ್ಟಿ ಕಟ್ಟಿಗೆ ದಫೇದಾರನಾಗಿದ್ದನು.

ಗ್ರಂಥ—ಹನುಮದ್ವಿಲಾಸ.

## ವೆಂಕಟರಮಣಭಟ್ಟ.

ಈತನು ಬ್ರಾಹ್ಮಣನು; ಅಪ್ಪಣ್ಣಭಟ್ಟನ ಮಗನು. ಇವನ ಸ್ಥಳ ಉಡುಪಿ.

ಗ್ರಂಥ—ಇಂದ್ರವಿಜಯ.

## ದ್ರಾವಿಡ ವೆಂಕಟಕವಿ.

ಈತನು ಬ್ರಾಹ್ಮಣಕವಿ. ಗ್ರಂಥಗಳು—ಮೈರಾವಣನ ಕಾಳಗ, ರಾವಣದಿಗ್ವಿಜಯ.

## ಎಂ. ಬಿ. ರಾಮರಾಯ.

ಈತನು ಬ್ರಾಹ್ಮಣಕವಿ, ಸದಾಶಿವರಾಯನ ಪೌತ್ರನು.

ಗ್ರಂಥ—ಚಾರುಶೀಲೆಯಚರಿತ್ರೆ (ನಾಟಕ).

## ಹೇಮರಡ್ಡಿ.

ಮಾಲೂರು ಲಕ್ಷ್ಮಣರೆಡ್ಡಿಯ ಮಗನು ಗ್ರಂಥ—ಪ್ರಹ್ಲಾದಚರಿತೆ.

## ತಂಬಿನಕಟ್ಟೆ ಗುರುರಾಯಾಚಾರ್ಯ.

ಈತನು ಮಾಧ್ವಕವಿ. ಗ್ರಂಥ— ಚಿತ್ರಕೇತುಚರಿತೆ; (ಭಾಗವತಾಂತರ್ಗತ).

## ಕೇಶವರಾಮಯ್ಯ.

ಈತನು ಬ್ರಾಹ್ಮಣಕವಿ, ಇವನ ಸ್ಥಳ ಹಯಪುರ (ಹಗ್ಗುಂದ).

ಗ್ರಂಥ—ನೀಲಧ್ವಜನಕಾಳಗ.

## ಮಂಜಯ್ಯಸಾಸ.

ಈತನು ಬ್ರಾಹ್ಮಣಕವಿ; ಉಡುಪಿಯಕಡೆಯವನು.

ಗ್ರಂಥ—ಚಿತ್ರವಿಚಿತ್ರರಕಾಳಗ.

## ವಿಷ್ಣುಕವಿ.

ಈತನು ಬ್ರಾಹ್ಮಣಕವಿ; ರಾಮನ ಮಗನು. **ಗ್ರಂಥಗಳು**—ಇಂದ್ರಕೀಲ, ಉತ್ತರಗೋಗ್ರಹಣ, ಬಾಣಾಸುರನ ಕಾಳಗ, ಶ್ರೀನಿವಾಸಕಲ್ಯಾಣ

## ಅನಂತರಾಮಯ್ಯಂಗಾರ್

ಈತನು ಶ್ರೀವೈಷ್ಣವಕವಿ. **ಗ್ರಂಥ**—ಕೃಷ್ಣಪಾರಿಜಾತ.

## ಭಾಸ್ಕರಕವಿ.

ಈತನು ಬ್ರಾಹ್ಮಣಕವಿ **ಗ್ರಂಥ**—ಚಂದ್ರಾವಳೀಕಥೆ.

## ಸೂರ್ಯನಾರಾಯಣಪ್ಪ.

ಈತನು ಬ್ರಾಹ್ಮಣಕವಿ. **ಗ್ರಂಥ**—ಜಾನಕೀಪರಿಣಯ.

## ಕೃಷ್ಣಾಜಿ ಬಾಪೂರಾವ್.

ಈತನು ಬ್ರಾಹ್ಮಣಕವಿ, ಧಾರವಾಡ ಪ್ರಾಂತದವನು.

**ಗ್ರಂಥ**—ದ್ರೌಪದೀಸ್ವಯಂವರ.

## ಗುಂಡೋಕೃಷ್ಣ ಚುರುಮುರಿ.

ಈತನು ಬ್ರಾಹ್ಮಣಕವಿ, ಧಾರವಾಡ ಪ್ರಾಂತದವನು

**ಗ್ರಂಥ**—ರಾಘವೇಂದ್ರರಾವ್ ನಾಟಕ.

## ಶ್ರೀನಿವಾಸಕವಿ.

ಇವನು ಬ್ರಾಹ್ಮಣಕವಿ. **ಗ್ರಂಥ**—ಸುಮತಿಶತಕ (ಕಂದ).

## ಶಂಕರಕವಿ.

ಈತನು ಬ್ರಾಹ್ಮಣಕವಿ. **ಗ್ರಂಥ**—ಗಿರಿಜಾಕಲ್ಯಾಣನಾಟಕ.

## ಎಂ. ವೀರಭದ್ರಯ್ಯ

ಈತನು ವೀರಶೈವಕವಿ, ಮೈಸೂರು ಬಿ ಪುಟ್ಟಣ್ಣನ ಮಗನು.

**ಗ್ರಂಥಗಳು**—ಸಿರಿಯಾಳಚರಿತ್ರೆ (ಲಾವಣಿ), ಕೃಷ್ಣರಾಜಪಟ್ಟಾಭಿಷೇಕದ ಲಾವಣಿ.

**ಶಿವನಂಜೇಗೌಡ.**

ಈತನು ವೀರಶೈವನು ; ಹಳೇಬೀಡು ಪಟೇಲನಾಗಿದ್ದನು.

**ಗ್ರಂಥ**—ಹಳೇಬೀಡು ಪುರಾತನಚರಿತೆ.

**ಅಶ್ವತ್ಥನಾರಾಯಣಶಾಸ್ತ್ರಿ.**

ಈತನು ಸ್ಮಾರ್ತನು **ಗ್ರಂಥಗಳು**—ಧರ್ಮಸಾಮ್ರಾಜ್ಯ, ಧರ್ಮಪದ, ಬೌದ್ಧಾವತಾರ, ವ್ಯಾಘ್ರೀಜಾತಕ

**ಎಚ್. ಅಶ್ವತ್ಥಣ್ಣಸೆಟ್ಟಿ.**

ಈತನು ವೈಶ್ಯನು. **ಗ್ರಂಥ**—ಹೈದರ್‌ನಾಮೆ

**ನರಸಿಂಹಪೌರಾಣಿಕ.**

ಈತನು ಸ್ಮಾರ್ತನು , ಇವನಿಗೆ ಗುಂಡಶಾಸ್ತ್ರಿ ಎಂಬ ಹೆಸರೂ ಉಂಟು

**ಗ್ರಂಥ**—ಪೌರುಷಪ್ರಕಾಶ

**ಎಸ್. ಶ್ರೀನಿವಾಸರಾಯ ಬಿ. ಎ.**

ಈತನು ಸ್ಮಾರ್ತನು , ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಉಪಾಧ್ಯಾಯನಾಗಿದ್ದನು. **ಗ್ರಂಥ**—ನಾಟಕಕಥಾರತ್ನಮಾಲೆ.

**ಕೆರೂರು ವಾಸುದೇವಾಚಾರ್ಯ**

ಈತನು ಬ್ರಾಹ್ಮಣನು , ಧಾರವಾಡ ಪ್ರಾಂತದವನು.

**ಗ್ರಂಥಗಳು** — ಇಂದಿರಾ, ಯದುಮಹಾರಾಜ, ನಳದಮಯಂತಿ, ಔರಂಗಜೇಬ.

**ಎಲ್. ಜಯರಾಯ ಬಿ. ಎ**

ಈತನು ಮಾಧ್ವನು , ಇವನ ಸ್ಥಳ ಮೈಸೂರು

**ಗ್ರಂಥ**—ಪೀಟರನ ಚರಿತ್ರೆ.

**ಬಿ. ನರಸಿಂಹಯ್ಯ.**

ಇವನು ಸೂತಕುಲದವನು , ಬೆಂಗಳೂರು ಸೆಂಟ್ರಲ್ ಬುಕ್‌ಡಿಪೋವಿನಲ್ಲಿ ಕೆಲಸದಲ್ಲಿದ್ದನು.

**ಗ್ರಂಥ**—ಶ್ರೀಸೂತಪುರಾಣ.

## ಸೂ. ಕೃಷ್ಣಶಾಸ್ತ್ರಿ.

ಈತನು ಸ್ಮಾರ್ತನು. **ಗ್ರಂಥ**—ಜಗನ್ಮೋಹಿನೀರತ್ನಕಲಾವಿಲಾಸ

## ಕಂ. ಟಿ. ಶ್ರೀನಿವಾಸರಾಯ.

ಈತನು ಬ್ರಾಹ್ಮಣನು. **ಗ್ರಂಥ**—ಶತಕಂಠರಾಮಾಯಣ.

## ಕೆ ರಾಘವಾಚಾರ್ಯ.

ಈತನು ಬ್ರಾಹ್ಮಣನು. **ಗ್ರಂಥ**—ಪದ್ಮಿನೀಚರಿತ್ರೆ

## ಸೀತಾರಾಮಸಿಂಗ್.

ಈತನು ಮರಾಠಿಯವನು, ಗಂಜಾಂ ಕೃಷ್ಣಸಿಂಗನ ಮಗನು.

**ಗ್ರಂಥ**—ಶ್ರೀರಂಗಮಾಹಾತ್ಮ್ಯ

## ಪಾಂಡ. ರಂಗಯ್ಯ

ಈತನು ಬ್ರಾಹ್ಮಣನು, ಗುಬ್ಬಿ ತಾಲ್ಲೂಕು ಬಿದರೆಯಲ್ಲಿ ಉಪಾಧ್ಯಾಯನಾಗಿದ್ದನು.

**ಗ್ರಂಥ**—ಹರಿಹರನಾಮಾಮೃತಸಾರಸಂಗ್ರಹ.

## ನಾಡಕರ್ಣಿ ಅಣ್ಣಪ್ಪಯ್ಯ.

ಈತನು ಸಾರಸ್ವತ ಬ್ರಾಹ್ಮಣನು, ಉತ್ತರಕನ್ನಡ ಪ್ರಾಂತದವನು. ಇವನು ಯಕ್ಷಗಾನಗಳನ್ನೂ ಹಾಡುಗಳನ್ನೂ ಬರೆದಿರುವುದಾಗಿ ಹೇಳುತ್ತಾರೆ. ಇವನಿಗೆ ಶೀಘ್ರಕವಿ ಎಂಬ ಬಿರುದುಂಟು.

## ಶಾಂತಿಬಾಯಿ.

ಇವಳು ಬ್ರಾಹ್ಮಣಿತಿ, ಉತ್ತರಕನ್ನಡ ಪ್ರಾಂತದವಳು, ಹಾಡುಗಳನ್ನು ಬರೆದಿದ್ದಾಳೆ.

## ಶಾಮರಾವ್ ವಿಠಲಕಾಯಕಿಣಿ.

ಈತನು ಸಾರಸ್ವತ ಬ್ರಾಹ್ಮಣನು, ಉತ್ತರಕನ್ನಡ ಪ್ರಾಂತದವನು; ಮುಂಬಯಿ ಹೈಕೋರ್ಟು ವಕೀಲನಾಗಿದ್ದನು

**ಗ್ರಂಥ**—ಕರ್ಣಾಟಕ ವಿಶ್ವಗುಣಾದರ್ಶ ಸಮುದ್ರಯಾನ ವಿಧವಾ ವಿವಾಹಗಳ ವಿಷಯವಾಗಿಯೂ ಬರೆದಿದ್ದಾನೆ.

ಶೇಷೋಜನಾರ್ದನ ಕಣ್ಣೂರ ಬಿ. ಎ.

ಈತನು ಬ್ರಾಹ್ಮಣನು, ಧಾರವಾಡ ಪ್ರಾಂತದವನು. ಗ್ರಂಥ—ಕೇಡು ತಂದ ಉಂಗರ (ಶಾಕುಂತಲ).

ಚೆನ್ನಬಸವಪ್ಪ ಬಸವಲಿಂಗಪ್ಪ.

ಈತನು ವೀರಶೈವನು, ಧಾರವಾಡ ಪ್ರಾಂತದವನು

**ಗ್ರಂಥ**—ನಗದವರನ್ನು ನಗಿಸುವ ಕಥೆ (Comedy of Errors).

ವೆಂಕಟಸುಬ್ಬಮ್ಮ.

ಇವಳು ಶೂದ್ರಳು, ಕೊಡಗುಪ್ರಾಂತದವಳು, ಹಾಡುಗಳನ್ನು ಬರೆದಿದ್ದಾಳೆ.

ಸಜೀವ ರಾಮಕೃಷ್ಣಯ್ಯ

ಈತನು ಸಾರಸ್ವತ ಬ್ರಾಹ್ಮಣನು, ಮಂಗಳೂರು ಸೆಂಟ್ ಜೇವಿಯರ್ ಕಾಲೇಜಿನಲ್ಲಿ ಕನ್ನಡ ಪಂಡಿತನಾಗಿದ್ದನು. ಇವನು ಕೆಲವು ಗ್ರಂಥಗಳನ್ನು ಬರೆದಿದ್ದಾನೆಂದು ಹೇಳುತ್ತಾರೆ

ಬೆಳ್ಳಾರ ರಾಮಕೃಷ್ಣಯ್ಯ

ಈತನು ಸಾರಸ್ವತ ಬ್ರಾಹ್ಮಣನು, ಮಂಗಳೂರು ಪ್ರಾಂತದವನು. ಇವನು ಕೆಲವು ಗ್ರಂಥಗಳನ್ನು ಬರೆದಿರುವುದಾಗಿ ಹೇಳುತ್ತಾರೆ.

ಎಚ್. ನಾರಾಯಣರಾಯ ಬಿ. ಎ. ಬಿ. ಎಲ್.

ಈತನು ಸಾರಸ್ವತ ಬ್ರಾಹ್ಮಣನು, ಮದರಾಸಿನಲ್ಲಿ ವಕೀಲನಾಗಿದ್ದು ಬಳಿಕ ಮುಂಬಯಿಯಲ್ಲಿ ವಾಸವಾಗಿದ್ದನು. ಗ್ರಂಥಗಳು—ಆಂಗ್ಲಕವಿತಾವಳಿ, ಬ್ರಾಹ್ಮಗೀತಾ, ಕನ್ನಡದ ಕಥಾನಕ, ಇಂಗ್ಲಿಷ್ ಕನ್ನಡಕೋಶ.

ಟಿ ಸುಬ್ಬರಾಯಶಾಸ್ತ್ರಿ.

ಈತನು ಸ್ಮಾರ್ತನು, ಇವನ ಸ್ಥಳ ಬೆಂಗಳೂರು **ಗ್ರಂಥ**—ರಾಮಾಯಣ ಟೀಕೆ (ಭಾವನಿರೂಪಣ)

ರಂಗಬಲಿದದಾಸ

ಈತನು ಮಾಧ್ವನು, ಕೀರ್ತನೆಗಳನ್ನು ಬರೆದಿದ್ದಾನೆ.

### ರಾಯವೇಲೂರು ಕಠಕೋಪದಾಸ.

ಇವನು ಬ್ರಾಹ್ಮಣನು ; ಕೀರ್ತನೆಗಳನ್ನು ಬರೆದಿದ್ದಾನೆ.

### ಆರ್. ರಘುನಾಥರಾಯ ಬಿ. ಎ.

ಈತನು ಮಾಧ್ವನು ; ಮೈಸೂರು ವಿದ್ಯಾಭ್ಯಾಸದ ಇಲಾಖೆಯಲ್ಲಿ ಹೈಸ್ಕೂಲ್ ಹೆಡ್ಮಾಸ್ಟರಾಗಿದ್ದನು. ಗ್ರಂಥಗಳು— ಕರ್ಣಾಟಕವ್ಯಾಕರಣೋಪನ್ಯಾಸಮಂಜರಿ, ಸ್ತ್ರೀಪುನರ್ವಿವಾಹ, ಸನಾತನಧರ್ಮದೀಪಿಕೆ

### ನರಸಿಂಗರಾಯ

ಈತನು ಬ್ರಾಹ್ಮಣನು , ಮಂಗಳೂರು ಪ್ರಾಂತದವನು. ಗ್ರಂಥ— ಕಿಸಂವಾರ್ ಗ್ಯಾಸರಿ ಎಂಬ ಕೋಶ.

### ಟಿ. ವ್ಯಾಸರಾಯ

ಈತನು ಮಾಧ್ವನು. ಗ್ರಂಥ— ವಾಗಟಿಗಳು.

### ಎಲ್. ಸುಬ್ಬರಾಯ

ಈತನು ಬ್ರಾಹ್ಮಣನು ; ಇವನ ಸ್ಥಳ ಮೈಸೂರು. ಗ್ರಂಥ— ವನಸ್ಪತಿಶಾಸ್ತ್ರ

### ಎಟ್. ನರಸಿಂಹಯ್ಯಂಗಾರ್

ಈತನು ಶ್ರೀವೈಷ್ಣವನು , ಮೈಸೂರು ಸರಕಾರದಲ್ಲಿ ಪಶುಚಿಕಿತ್ಸೆಯ ಅಧಿಕಾರದಲ್ಲಿದ್ದನು. ಗ್ರಂಥಗಳು— ಆರೋಗ್ಯಶಾಸ್ತ್ರ, ಪಶುವೈದ್ಯಸಂಗ್ರಹ.

### ಜೆ. ಜೆ. ನೊರೋನ

ಈತನು ಕ್ರೈಸ್ತನು. ಗ್ರಂಥ — ಅಪಾಯದಲ್ಲಿನ ಉಪಾಯಸಂಗ್ರಹ (Ambulance Lectures)

### ಆರೋಗ್ಯಂಪಿಳ್ಳೆ

ಈತನು ಕ್ರೈಸ್ತನು. ಗ್ರಂಥ— ಆರೋಗ್ಯಸೂತ್ರಸಂಗ್ರಹ.

### ಜೆ. ಬಸವಪ್ಪಸೆಟ್ಟಿ

ಈತನು ಕ್ರೈಸ್ತನು. ಗ್ರಂಥ— ಇಂಗ್ಲಿಷ್ ವೈದ್ಯಪ್ರಕಾಶಿಕೆ.

### ಹೊಸ ಪಂಡಿತ ಭೀಮರಾಯ

ಈತನು ಬ್ರಾಹ್ಮಣನು, ಇವನ ಸ್ಥಳ ಮೈಸೂರು. ಗ್ರಂಥಗಳು—ವೈದ್ಯ ಸಂಗ್ರಹ, ನಾಡೀಪ್ರಕರಣ.

### ಪಾಂಡುರಂಗ ಚಿಂತಾಮಣಿ ಪೇಟಕರ

ಈತನು ಬ್ರಾಹ್ಮಣನು, ಧಾರವಾಡ ಪ್ರಾಂತದವನು. ಗ್ರಂಥ—ಶಬ್ದ ವ್ಯುತ್ಪತ್ತಿ.

### ಮೈಸೂರು ವೇದಾಂತ ಶಿವರಾಮಶಾಸ್ತ್ರಿ

ಈತನು ಸ್ಮಾರ್ತನು ಗ್ರಂಥಗಳು—ವೇದಾಂತಮುಕ್ತಿಮಾರ್ಗಪ್ರದೀಪಿಕೆ, ಬ್ರಹ್ಮಾನಂದಬೋಧೆ (ಷ), ಶಂಕರಾನಂದತತ್ತ್ವ.

### ಎಚ್. ವಿ ನಂಜುಂಡಯ್ಯ ಎಂ. ಎ. ಎಂ. ಎಲ್.

ಈತನು ಸ್ಮಾರ್ತನು, ಮೈಸೂರು ಸರಕಾರದಲ್ಲಿ ಕೌನ್ಸಿಲರಾಗಿದ್ದನು. ಗ್ರಂಥಗಳು—ವ್ಯವಹಾರದೀಪಿಕೆ, ಲೇಖ್ಯಬೋಧಿನಿ, ಅರ್ಥಶಾಸ್ತ್ರ.

### ಬಾಪು ಸುಬ್ಬರಾಯ ಬಿ. ಎ.

ಈತನು ಮಾಧ್ವನು, ಕರ್ಣಾಟಕ ಗ್ರಂಥಮಾಲೆಯ ಸಂಪಾದಕನಾಗಿದ್ದನು. ಗ್ರಂಥಗಳು—ಚಂಡಮಾರುತ, ನಿಭಾರ್ಗ್ಯಮುರಾದ್.

### ಎಂ. ಸೂರ್ಯನಾರಾಯಣರಾಯ

ಈತನು ಸ್ಮಾರ್ತನು, ಮೈಸೂರು ಸರಕಾರದಲ್ಲಿ ಡೆಪ್ಯುಟಿ ಕಮಿಷನರಾಗಿದ್ದನು. ಗ್ರಂಥ—ಸ್ತ್ರೀಧರ್ಮನೀತಿ.

### ಕೃಷ್ಣಮನಾಯುಡು

ಈತನು ನಾಯುಡು; ಮೈಸೂರು ಸರಕಾರದಲ್ಲಿ ದೊಡ್ಡ ಅಧಿಕಾರದಲ್ಲಿದ್ದನು. ಗ್ರಂಥ—ಹಿಂದೂಸ್ತ್ರೀ ಪುನರ್ವಿವಾಹ.

### ಎಸ್. ಆರ್ ಕರಿಬಸವಶಾಸ್ತ್ರಿ

ಈತನು ವೀರಶೈವನು; ಇವನ ಸ್ಥಳ ಮೈಸೂರು. ಗ್ರಂಥಗಳು—ಬಸವರಾಜವಿಜಯ, ಚೆನ್ನಬಸವೇಶವಿಜಯ, ಪಂಡಿತಾರಾಧ್ಯಚರಿತೆ,

### ವಿರೂಪಾಕ್ಷಪಂಡಿತ

ಈತನು ವೀರಶೈವಕವಿ, ಹೈದರಾಬಾದು ಪ್ರಾಂತದವನು. ಗ್ರಂಥ— ಆಲಂದೆಯ ಶರಣಬಸವಪುರಾಣ (ಷ)

### ಅರಮನೆ ಮಲ್ಲಿಸೆಟ್ಟಿ

ಈತನು ವೀರಶೈವನು, ಇವನ ಸ್ಥಳ ಮೈಸೂರು. ಗ್ರಂಥಗಳ—ವೈದ್ಯಸಂಗ್ರಹ, ನೀತಿಸಾರ.

### ಆರ್. ವೆಂಕಟಸುಬ್ಬರಾಯ ಬಿ. ಎ. ಬಿ. ಎಲ್.

ಈತನು ಮಾಧ್ವನು, ಮದರಾಸಿನಲ್ಲಿ ಹೈಕೋರ್ಟು ವಕೀಲನಾಗಿದ್ದನು.

ಗ್ರಂಥ— ಹಿಂದೂ ಲಾ

### ವೇಲುಗೋಟೆ ರಾಜಮ್ಮ

ಈಕೆ ಮಾಧ್ವಳು. ಗ್ರಂಥಗಳು — ದೂರ್ವಾಸಚರಿತ್ರೆ, ಅನಂತಪದ್ಮನಾಭಕಥೆ (ಹಾಡು).

### ಹಾಡಿನ ರಂಗಮ್ಮ

ಈಕೆ ಮಾಧ್ವಳು, ಇವಳ ಸ್ಥಳ ನಂಜನಗೂಡು, ಹಾಡುಗಳನ್ನು ಬರೆದಿದ್ದಾಳೆ.

### ವೆಂಕಟಲಕ್ಷ್ಮಮ್ಮ

ಈಕೆ ಶ್ರೀವೈಷ್ಣವಳು, ಇವಳ ಸ್ಥಳ ಎಣ್ಣೆಹೊಳೆ ಕೊಪ್ಪಲು. ಗ್ರಂಥ— ಕೃಷ್ಣಪಾರಿಜಾತ.

### ಅರಮನೆ ನಾಟಕದ ಸುಬ್ಬರಾಯ

ಈತನು ಸ್ಮಾರ್ತನು; ಇವನ ಸ್ಥಳ ಮೈಸೂರು. ಗ್ರಂಥಗಳು—ವಲೀಮುಖವಿಲಾಸ ನಾಟಕ, ಪ್ರಜ್ಞಾವತೀವಿಜಯ, ಯುವರಾಜಕಲ್ಯಾಣ.

### ಶಾವಣ್ಣಾಚಾರ್ಯ

ಈತನು ಬ್ರಾಹ್ಮಣಕವಿ. ಗ್ರಂಥ—ಯೋಗರತ್ನಾಕರ (ಷ).

## ಶ್ರೀನಿವಾಸಕವಿ

ಈತನು ಬ್ರಾಹ್ಮಣಕವಿ, ಇವನ ಸ್ಥಳ ತುರುವೇಕೆರೆ. **ಗ್ರಂಥ**— ಹಿಂದೂ ದೇಶದಚರಿತ್ರನಿರ್ವಚನಪದ್ಯಕಾವ್ಯ.

## ಗುರುಲಿಂಗಸ್ವಾಮಿ

ಈತನು ವೀರಶೈವನು, ಧಾರವಾಡದ ಎರಡೆತ್ತಿನಮಠದ ಸ್ವಾಮಿಯಾಗಿದ್ದನು. **ಗ್ರಂಥ**— ಲಿಂಗಾಯತಮತೋತ್ಪತ್ತಿನಿರ್ಣಯ.

## ಬಸವಣ್ಣಕವಿ

ಈತನು ವೀರಶೈವನು **ಗ್ರಂಥ**— ನಯನಜನ ಕಥೆ (ಪದಗಳು) ನಯನಜನೆಂಬವನು ಒಬ್ಬ ವೀರಶೈವಶರಣನು

## ಅರಮನೆಯ ಹೂವಿನ ಶಿವಲಿಂಗದೇವ

ಈತನು ವೀರಶೈವನು, ಬೆಟ್ಟದಪುರದ ಮಠದ ಚಿಕವೀರದೇಶಿಕನ ಕರಜಾತನು. ಇವನ ಸ್ಥಳ ಮೈಸೂರು. ಗ್ರಂಥ— ಹರಣೀಹರಣೋದ್ಧರಣ (ಶಿವರಾತ್ರಿಯ ಕಥೆ).

## ಅಯ್ಯಪ್ಪ

ಈತನು ಬ್ರಾಹ್ಮಣನು ಗ್ರಂಥ— ಚಿದಾನಂದಾವಧೂತರ ಬಾಲಲೀಲೆ (ಪದಗಳು).

## ತಂಬಳಬೀಡು ಪರ್ವತಯ್ಯ

ಈತನು ವೀರಶೈವಕವಿ; ಇವನ ಸ್ಥಳ ಆದವಾನಿ. ಗ್ರಂಥ— ವಿಶ್ವರೂಪಶಿ ವೀರಭದ್ರಶತಕ (ಷ).

## ತಿ ಸ. ಬಾಲ್ಕಶಾಸ್ತ್ರಿ

ಈತನು ಬ್ರಾಹ್ಮಣನು ಗ್ರಂಥ— ಕ್ಷತ್ರಿಯಪುರಾಣಟೀಕೆ.

## ಎಳಂದೂರು ಅಣ್ಣಾಜಿರಾಯ

ಈತನು ಮಾಧ್ವನು. ಗ್ರಂಥಗಳು— ಭ್ರಾಂತಿವಿಲಾಸ, ಇಂದ್ರಸಭೆ, ಹಾಡುಗಳು.

## ರಾಜಾಪಾರ್ಟ್ ಸೂಲಿಬೆಲೆ ಡಿ. ಶಾಮರಾಯ

ಈತನು ಸ್ಮಾರ್ತನು ಗ್ರಂಥಗಳು—ಚಂದ್ರಹಾಸನಾಟಕ, ಪ್ರಭಾವತೀ ದರ್ಬಾರ್ ನಾಟಕ, ಚಿತ್ರಭೋಗಕಮಲಾವತೀನಾಟಕ, ನಳನಾಟಕ, ಸತ್ಯವರ್ಮ ಚರಿತ್ರನಾಟಕ, ಅನಂದಸುಂದರೀಕಥೆ.

## ವಿಶ್ವೇಶ್ವರಾನಂದಸರಸ್ವತಿ

ಈತನು ಬ್ರಾಹ್ಮಣನು ; ಮೈಸೂರು ನಿರಂಜನಮಠಕ್ಕೆ ಸೇರಿದವನು. ಗ್ರಂಥಗಳು—ಹೋಲ್ಕರನ ಚರಿತ್ರೆ, ಧರ್ಮದರ್ಪಣ.

## ಕೆ. ಶೇಷಾದ್ರಿ ಅಯ್ಯಂಗಾರ್ ಎಲ್. ಎ. ಜಿ.

ಈತನು ಶ್ರೀವೈಷ್ಣವನು, ಮೈಸೂರು ನಾರ್ಮಲ್ ಸ್ಕೂಲಿನಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥಗಳು—ಉದ್ಭಿಜ್ಜಶಾಸ್ತ್ರ, ವ್ಯವಸಾಯಬೋಧಿನಿ.

## ಬಿ. ಎಸ್. ದಾಸಪ್ಪ ಬಿ. ಎ.

ಈತನು ಸ್ಮಾರ್ತನು ; ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥ—ಖನಿಜಶಾಸ್ತ್ರ

## ಚನ್ನಪಟ್ಟಣದ ಅಹೋಬಲದಾಸ

ಈತನು ಶೂದ್ರನು ; ತುಲಸೀರಾಮದಾಸನ ಶಿಷ್ಯನು. ಗ್ರಂಥ—ಕೀರ್ತನೆಗಳು.

## ವೆಂಕಟಾಚಲಂ

ಈತನು ಬ್ರಾಹ್ಮಣನು ಗ್ರಂಥ—ಲಕ್ಕಾಲಕ್ಕಿ ಫಾರ್ಸ್.

## ಬಾಳಾಚಾರ್ಯ

ಈತನು ಮಾಧ್ವಕವಿ ; ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿದ್ದನು. ಗ್ರಂಥ—ಪದ್ಮಾವತೀಪರಿಣಯ.

### ವಿಷ್ಣುದಾಸ

ಈತನು ಮಾಧ್ವಕವಿ ; ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿದ್ದನು.
ಗ್ರಂಥಗಳು—ಗೋವರ್ಧನಗಿರಿಯ ಕಥೆ, ಪುಂಡರೀಕಚರಿತ್ರೆ.

### ಶೇಷದಾಸ

ಈತನು ಬ್ರಾಹ್ಮಣನು, ಇವನ ಸ್ಥಳ ದ್ರಾವಿಡದೇಶದ ಉತ್ತಮಲ್ಲೂರು.
ಗ್ರಂಥಗಳು—ವೈಕುಂಠನಳಚರಿತ್ರೆ, ಸಭಾಪರ್ವ.

### ವೆಂಕಟ

ಈತನು ಬ್ರಾಹ್ಮಣನು. ಗ್ರಂಥಗಳು—ಪ್ರಹ್ಲಾದಚರಿತ್ರೆ, ಮಹಾಶೃಂಗಾರ ನಾಟಕ, ಕೃಷ್ಣಸಂಧಾನ, ಚಂದ್ರಕಳಾವತೀವಿಲಾಸ, ಸುಭದ್ರಾಕಲ್ಯಾಣ, ಸೌಗಂಧಿಕಾಪರಿಣಯ.

### ನುಗ್ಗಿಹಳ್ಳಿ ರಂಗಾಚಾರ್ಯ

ಈತನು ಶ್ರೀವೈಷ್ಣವನು. ಗ್ರಂಥ—ಅಕ್ರೂರಚರಿತ್ರೆ

### ಮುದ್ದುಕವಿ

ಈತನು ವೀರಶೈವನು ಗ್ರಂಥ—ಪಾರಿಜಾತ.

### ವಾಸುದೇವ

ಈತನು ಬ್ರಾಹ್ಮಣನು ; ಮುಮ್ಮಡಿ ಕೃಷ್ಣರಾಜನ ಕಾಲದಲ್ಲಿದ್ದನು.
ಗ್ರಂಥ—ಅಂಬರೀಷಚರಿತ್ರೆ.

### ವಿದ್ವಾನ್ ವೆಂಕಟಾಚಾರ್ಯ

ಈತನು ಶ್ರೀವೈಷ್ಣವನು ; ಗ್ರಂಥಗಳು—ಚಂದ್ರಾವಳಿ, ಭೋಜಪ್ರಬಂಧ, ಕಲಾನಾಥ.

### ಬೊಮ್ಮಲಾಟಂ ವೀರಭಟ್ಟರ ಕಾಮಣ್ಣ

ಈತನು ಬ್ರಾಹ್ಮಣನು. ಗ್ರಂಥಗಳು—ಚಂದ್ರಾವಳಿ, ಶಾಕುಂತಳ.

### ಸರಗೂರು ರಾಮಾನುಜಾಚಾರ್ಯ

ಈತನು ಶ್ರೀವೈಷ್ಣವನು, ಸರಗೂರು ವೆಂಕಟವರದಾಚಾರ್ಯನ ಸಹೋದರನು.
ಗ್ರಂಥ—ಭಾಗವತ (ಶ್ರೀಕೃಷ್ಣಲೀಲೆ)

## ಯುರೋಪಿಯನರು

ವಿದೇಶೀಯರಾದ ಪಾದ್ರಿಗಳೂ ಇತರರೂ ಕನ್ನಡ ಭಾಷೆಯ ವ್ಯಾಸಂಗಕ್ಕೆ ಅನುಕೂಲವಾದ ಕೆಲವು ಪುಸ್ತಕಗಳನ್ನು ಬರೆದು ಮುದ್ರಿಸಿ ಸಹಾಯಮಾಡಿದ್ದಾರೆ. **ರೀವ್.** ಇಂಗ್ಲಿಷ್ ಕನ್ನಡ ಕೋಶ **ರೀವ್ ಮತ್ತು ಸಾಂಡರ್ಸ್.** ಕನ್ನಡ ಇಂಗ್ಲಿಷ್ ಕೋಶ **ಕೇರಿ.** ಕನ್ನಡ ವ್ಯಾಕರಣ **ಕೆಥಲ್.** ಕರ್ಣಾಟಕ ವ್ಯಾಕರಣ **ಜೀಗ್ಲರ್.** ಪ್ರಾಕ್ಟಿಕಲ್ ಕೀ, ಶಾಲಾನಿಘಂಟು, ಆಚಾರಶೀಲರು **ಬಿಚರ್.** ಶಾಲಾನಿಘಂಟು **ಮೋಬರ್.** ವ್ಯಾಕರಣ ಬೋಧಿನಿ. **ಕ್ಯಾಂಬಲ್.** ಕನ್ನಡವ್ಯಾಕರಣ ಸಾರ **ವಿತ್ F.** ಪ್ರಾಕ್ಕಾವ್ಯಮಾಲಿಕೆ. **ಕಿಟೆಲ್.** ಕನ್ನಡ ಇಂಗ್ಲಿಷ್ ಕೋಶ, ಕನ್ನಡವ್ಯಾಕರಣ, ಪರಮಾತ್ಮಜ್ಞಾನ. ಈತನು ಶಬ್ದಮಣಿದರ್ಪಣ, ಛಂದೋಂಬುಧಿ ಇವುಗಳನ್ನು ಮೊದಲು ಮುದ್ರಿಸಿ ಪ್ರಕಟಿಸಿದನು. **ಮೋಗ್ಲಿಂಗ್ ಮತ್ತು ವೀಗಲ್.** ಇವರ ಮೇಲ್ವಿಚಾರಣೆಯಲ್ಲಿ ಬಸವಪುರಾಣ, ಚೆನ್ನಬಸವಪುರಾಣ, ಜೈಮಿನಿಭಾರತ, ರಾಮಾಯಣ (೨ ಕಾಂಡಗಳು), ರಾವಣದಿಗ್ವಿಜಯ, ದಾಸರ ಪದಗಳು, ರಾಜೇಂದ್ರನಾಮೆ— ಈ ಗ್ರಂಥಗಳು ಮೊದಲು ಮಂಗಳೂರಲ್ಲಿ ಮುದ್ರಿತವಾದುವು.

ಈರೀತಿಯಾಗಿ ಗ್ರಂಥಕರ್ತೃಗಳ ಮತ್ತು ಗ್ರಂಥಗಳ ಹೆಸರುಗಳನ್ನು ನಮಗೆ ತಿಳಿದಮಟ್ಟಿಗೆ ಬರೆದಿದ್ದೇವೆ. ಈ ಪಟ್ಟಿಯಲ್ಲಿ ಅನೇಕ ಲೋಪಗಳಿವೆ ಎಂಬುದರಲ್ಲಿ ಸಂದೇಹವಿಲ್ಲ. ಈಗಿನ ಪಾಠಶಾಲೆಗಳಿಗೆ ಉಪಯೋಗವಾಗುವಂತೆ ಪುಸ್ತಕಗಳನ್ನೂ ಟೀಕೆಗಳನ್ನೂ ಬರೆದಿರುವವರ ಹೆಸರನ್ನು ಹೇಳಿಲ್ಲ. ಜೀವಂತರಾಗಿರುವ ಗ್ರಂಥಕರ್ತೃಗಳ ಮತ್ತು ಅವರ ಗ್ರಂಥಗಳ ಹೆಸರನ್ನು ಎತ್ತುವುದಿಲ್ಲವೆಂದು ಹಿಂದೆಯೇ ತಿಳಿಸಿದ್ದೇವೆ



# APPENDIX I.

## ಪರಿಶಿಷ್ಟ I.

### ಬಿಟ್ಟುಹೋಗಿರುವ ಕೆಲವರು ಕವಿಗಳ ವಿಷಯ.

### ಕರಸ್ಥಲದ ನಾಗಿದೇವ[1]. ಸು 1430.

ಈತನು ವಚನಗಳನ್ನು ಬರೆದಿದ್ದಾನೆ. ವಚನವೆಂಬ ಹೆಸರಿದ್ದರೂ ಇವು ವಾರ್ಧಕಷಟ್ಪದಿಯಲ್ಲಿವೆ. ಇವುಗಳ ಸಂಖ್ಯೆ ೧. ಇವುಗಳಲ್ಲಿ ಪಾರ್ವತಿಯ ಪ್ರಾರ್ಥನಾನುಸಾರ ಶಿವನು ಷಟ್ಸ್ಥಲಮಾರ್ಗವನ್ನು ಅವಳಿಗೆ ಬೋಧಿಸಿದಂತೆ ತಿಳಿಯುತ್ತದೆ. ಒಂದು ಪದ್ಯವನ್ನು ಉದಾಹರಿಸುತ್ತೇವೆ —

ಷಡ್ಬ್ರಹ್ಮದಿಂದೈದು ಭೂತಂಗಳುದಿಸಿದುವು |
ಷಡ್ಬ್ರಹ್ಮದಿಂದಂಡಕೋಟಿಗಳು ನಿರ್ಮಿತವು |
ಷಡ್ಬ್ರಹ್ಮದಿಂದೆ ಹರಿಯಜರಿಂದ್ರ ಮೇರು ಸಾಗರ ತಾರ ಶಶಿ ಭಾಸ್ಕರಂ ||
ಷಡ್ಬ್ರಹ್ಮದಿಂದೆ ಮನುಮುನಿಸಿದ್ಧಸಾಧಕರು |
ಷಡ್ಬ್ರಹ್ಮದಿಂದೆ ಸುರದನುಜರಮರರು ನರರು |
ಷಡ್ಬ್ರಹ್ಮದಿಂದೆ ಮಾಯಾಜನನಸ್ಥಿತಿಲಯವು ಸ್ವರ್ಗವಾದುದು ಶಂಕರೀ ||

---

### ಸಿದ್ಧಮಲ್ಲಾರ್ಯ. ಸು 1500

ಈತನು ದೇವಾಂಗಪುರಾಣವನ್ನು ಬರೆದಿದ್ದಾನೆ. ಇವನು ದೇವಾಂಗದವನು. ಇವನ ಸ್ಥಳ ಹಂಪೆಯಾಗಿರಬಹುದು. ಈತನು ಸುಮಾರು 1300ರಲ್ಲಿ ಇದ್ದಿರಬಹುದೆಂದು ಹೇಳುತ್ತಾರೆ[2]. ಸುಮಾರು 1500ರಲ್ಲಿ ಇದ್ದಿರಬಹುದೆಂದು ನಮಗೆ ತೋರುತ್ತದೆ.

---

1 Vol II, p 69.
2 ಕರ್ನಾಟಕಸಾಹಿತ್ಯಪರಿಷತ್ಪತ್ರಿಕೆ, ಅಕ್ಟೋಬರ್ 1920, ಪುಟ 175.

**ಇವನ ಗ್ರಂಥ**

**ದೇವಾಂಗಪುರಾಣ.**

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ ಇದರಲ್ಲಿ ಬ್ರಹ್ಮಾಂಡ ಸ್ಕಾಂದ ಪುರಾಣಗಳಲ್ಲಿ ಉಕ್ತವಾದ ದೇವಾಂಗಋಷಿಯ ಚರಿತೆ ಹೇಳಿದೆ ಒಂದೊಂದು ಅಧ್ಯಾಯದ ಆದಿಯಲ್ಲಿಯೂ ಪಂಪಾವಿರೂಪಾಕ್ಷಸ್ತುತಿ ಇದೆ ಒಂದು ಪದ್ಯವನ್ನು ಉದಾಹರಿಸುತ್ತೇವೆ :—

ತಿಂಗಳಣುಗೆಯ ಪತಿಯ ಬಾಣಕೆ | ಯಂಗವನು ಕೊಡದವನ ಜನಕನ |
ನುಂಗಿದಾತನ ಸುತೆಯುಳರಸನ ಪಿತನ ಸಮರದೊಳು ||
ಭಂಗಿಸಿದನತ್ತೆಯ ಕುಮಾರನ | ತುಂಗವಿಕ್ರಮದಿಂದ ಗೆಲಿದನ |
ತಂಗಿಪತಿಗಂಬಿತ್ತ ದೇವನೆ ಶ್ರೀವಿರೂಪಾಕ್ಷ ||

---

**ದಾನಪ್ಪಾರ್ಯ.** ಸು. 1550.

ಈತನು ಶಿವಸಂವಾದಿನಿ ಎಂಬ ಪುರಾಣವನ್ನು ಬರೆದಿದ್ದಾನೆ ಇವನು ದೇವಾಂಗದವನು. ಇವನ ಸ್ಥಳ ಗದಗು ತಾಲ್ಲೂಕು ಬೆಟಗೇರಿ. ಈತನ ಕಾಲವು ಸುಮಾರು 1550 ಆಗಿರಬಹುದು. ಇವನ ಗ್ರಂಥವು ದ್ವಿಪದೀರೂಪವಾಗಿದೆಯೆಂದೂ ಇದರಲ್ಲಿ ಶಿವಭಕ್ತರ ಅನೇಕ ಕಥೆಗಳು ಅಡಕವಾಗಿವೆಯೆಂದೂ ತಿಳಿಯುತ್ತದೆ[1].

---

**ನಾರಾಯಣ.** ಸು. 1600.

ಈತನು ಉತ್ತರರಾಮಕಥೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣ ಕವಿ; ಇವನ ತಂದೆ ತಾತಶಿರೋಮಣಿ; ವಿದ್ಯಾಗುರು ಭಾನುಕವಿಯ ಮಗ ತಿಮ್ಮಣಾರ್ಯ; ಇಷ್ಟದೇವತೆ ಅಹೋಬಳನಾರಸಿಂಹ "ರಂಗಯನಾರಸಿಂಹಂಗತಿಸಖನು" ಎಂದುಹೇಳಿಕೊಂಡಿದ್ದಾನೆ. ಈ ನಾರಸಿಂಹನಾರೋ ತಿಳಿಯದು.

ಈತನು **ಕುಮಾರವ್ಯಾಸನನ್ನು** (ಸು 1430) ಸ್ತುತಿಸುವುದರಿಂದ ಅವನ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗಿದೆ ಭಾನುದತ್ತ ಅಥವಾ ಭಾನು ಎಂಬ ಒಬ್ಬ ಕವಿ ಸಂಸ್ಕೃತದಲ್ಲಿ ರಸಮಂಜರಿ, ರಸತರಂಗಿಣಿ ಎಂಬ ಗ್ರಂಥಗಳನ್ನು

1 ಕರ್ನಾಟಕಸಾಹಿತ್ಯ ಪರಿಷತ್ಪತ್ರಿಕೆ ಅಕ್ಟೋಬರ್ 1920, ಪುಟ 175.

ಬರೆದಿದ್ದಾನೆ. ರಸಮಂಜರಿಗೆ ನಾಗೇಶಭಟ್ಟನು (ಸು. 175) ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ನಾರಾಯಣನ ವಿದ್ಯಾಗುರು ಈ ಭಾನುಕವಿಯ ಮಗನೇ ಆಗಿರಬಹುದೋ ಏನೋ ತಿಳಿಯದು ಕವಿಯ ಕಾಲವು ಸುಮಾರು 1600 ಆಗಿರಬಹುದೆಂದು ಊಹಿಸುತ್ತೇವೆ.

ಪೂರ್ವಕವಿಗಳಲ್ಲಿ ವಾಲ್ಮೀಕಿ, ವ್ಯಾಸ, ಕಾಳಿದಾಸ, ಕುಮಾರವ್ಯಾಸ ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

### ಉತ್ತರರಾಮಕಥೆ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 44, ಪದ್ಯ 2036. ಇದರಲ್ಲಿ ರಾಮಾಯಣದ ಉತ್ತರಕಾಂಡದ ಕಥೆ ಹೇಳಿದೆ. ಗ್ರಂಥಾವತಾರದಲ್ಲಿ ಕವಿ ರಾಮನನ್ನು ಸ್ತುತಿಸಿದ್ದಾನೆ, ಬಳಿಕ ಆಂಜನೇಯ, ಶಿವ, ಸರಸ್ವತಿ, ಗಣಪತಿ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

### ಸರಸ್ವತಿ.

ಮನದೊಳಗೆ ಬೇರ್ವರಿದು ಬುದ್ಧಿಯೊ|ಳನುನಯದಿ ಕುಡಿವರಿದು ಹಮ್ಮಿನ |
ಘನತೆಯೊಳು ಪಲ್ಲವಿತಕುಸುಮಿತವಾಗಿ ಚಿತ್ತದೊಳು ||
ಎನಗೆ ಕವಿತಾಕಲ್ಪಲತೆಯನು | ದಿನವು ಫಲಿಯಿಸುವಂತೆ ಸಲಹೌ |
ಜನನಿ ಶಾರದೆ ನಿನ್ನ ಕರುಣಾಮೃತದ ಮಳೆಗರೆದು ||

### ರಂಭೆಯನ್ನು ಕುರಿತು ರಾವಣನ ಉಕ್ತಿ.

ಮೊಲೆಯ ಮಠೆಯಿಚಿತದಲಿ ಕಡೆಗ | ಣ್ಣಲಗುಗಳ ದೆಸೆದೋಱಜಚಿತದ |
ಲೆಳನಗೆಯ ಸನ್ಮೋಹನಾಸ್ತ್ರದ ಮಾಯದಚಿತದಲಿ ||
ಮೆಲುನುಡಿಯ ಘನವೇಸಡಿಚಿತದ|ಲೊಲಿದು ಕಾಮುಕಿಜನದ ಹರಣಕೆ |
ಮುಳಿವ ಕೊಲೆಗಾತಿಯರಿಗೆಲ್ಲಿಯ ನಿಜವು ನಿಮಗೆಂದಾ ||
ನುಡಿಯ ಸಿಡಿವಲೆಯಲಿ ಕಟಾಕ್ಷದ | ಮಿಡುಕುವಲೆಯಲಿ ಬಾಹುಪಾಶದ |
ತೊಡಕುವಲೆಯಲಿ ತೋಱವೊಲೆಗಳ ಗುಂಡುವಲೆಗಳಲಿ ||
ಬಿಡದೆ ಖಗಮೃಗಮೀನತತಿಯನು | ಕೆಡಹುವಂತಿರೆ ಜಲ್ಲವರ ಧೃತಿ |
ಗೆಡಿಸಿ ಮೋಸದಲಿಱಿವ ನಿಮಗೆಲ್ಲಿಯದು ನಯಮೆಂದಾ ||

## ಬಸವೇಶ. ಸು. 1600

ಇವನು ಸುಜ್ಞಾನಚಿಂತಾಮಣಿಯನ್ನು ಬರೆದಿದ್ದಾನೆ. ಈತನು ವೀರಶೈವ ಕವಿ, ಇವನ ಪಿತಾಮಹ ಹೊಟ್ಟಿಯ ಈಶ್ವರಯ್ಯ, ತಂದೆ ಗಿರಿನಾಥ, ಗುರು ಅಘಹರದೇವ. ಈತನ ಕಾಲವನ್ನು ನಿರ್ಧರಿಸಲಿಕ್ಕೆ ಆವ ಆಧಾರವೂ ಇಲ್ಲ. ಇವನು ಸುಮಾರು 1600ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

### ಇವನ ಗ್ರಂಥ

### ಸುಜ್ಞಾನಚಿಂತಾಮಣಿ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಸಂಧಿ 9, ಪದ್ಯ 386 ಇದರಲ್ಲಿ ಗುರುಶಿಷ್ಯಸಂವಾದರೂಪವಾಗಿ ವೇದಾಂತವು ಬೋಧಿಸಲ್ಪಟ್ಟಿದೆ ಅಲ್ಲಲ್ಲಿ ಸಂಸ್ಕೃತಶ್ಲೋಕಗಳೂ ಅನುವಾದವು ಡಲ್ಪಟ್ಟಿವೆ. "ಶಿವನ ಸಂಬೋಧೆಯನು ಪೇಳುವೆನು" ಎಂದು ಕವಿ ಹೇಳುತ್ತಾನೆ ಗ್ರಂಥದ ಉದ್ದೇಶವು ಈ ಪದ್ಯಭಾಗದಿಂದ ಸ್ಪಕ್ತವಾಗುತ್ತದೆ.—

ಸತ್ಯವಳಿಯದ ಜನರು ಧರೆಯುಲಿ | ಸತ್ತು ಹುಟ್ಟುತ್ತಿರಲು ಪರಮಗು |
ರೂತ್ತಮನು ಬೋಧಿಸಿಯೆ ಮುಕ್ತಿಯ ಪದಕೆ ನಿಲ್ಲಿಸಿದ ||

ಗ್ರಂಥಾವತಾರದಲ್ಲಿ ಹಂಪೆಯ ವಿರೂಪಾಕ್ಷನ ಸ್ತುತಿಯಿದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ತುಷವಡೆದ ಧಾನ್ಯಗಳ ಬಿತ್ತಲು | ಸಸಿ ವೊಳೆತು ಫಲವಾದುದಲ್ಲದೆ |
ತುಷವಟೆದ ತಂಡುಲವು ಸಸಿದೊಳೆದುವೆ ಜಗದೊಳಗೆ ||
ಕಸವರದ ಕರ್ಮಗಳ ಪಿಡಿದವ | ರೊಸೆದು ಜನನಕೆ ಒಂದರಲ್ಲದೆ |
ಅಸಮರಮಳಾತ್ಮರಿಗೆ ಜನನಾದಿಗಳು ಹುಸಿಯೆಂದಾ ||
ಹಲವು ಹಡಿಕೆಯ ಹುಡುಕೆ ಕೇಳಿದು|ಹೊಲಸಿನಾಲಯ ಕ್ರಿಮಿಕುಲಂಗಳ |
ನೆಲೆಯಖೀಡಿದು ರೋಗದಾಲಯ ಮೃತ್ಯುವಿನ ತುತ್ತು ||
ಮಲದ ಭಾಂಡದಲುದಿಸಿ ನೀ ಸ | ತ್ಕುಲಜನೆಂಬುದು ನಾಸ್ತಿಮಾನವ |
ಕುಲವದೊಂದೇ ನಿನ್ನ ನೀನೇ ತಿಳಿದು ನೋಡೆಂದಾ ||

### ಜೀವರಾಯನ ಓಲಗ.

ಸೋಗೆಗಂಗಳ ಸೊಬಗೆಯರು ಸುಖ | ಸಾಗರದ ಸೌರಂಭೆಯರು ರತಿ |
ಭೋಗಿನಿಯರು ಮಿಗೆ ಸಕಲಕಲೆಗಳ ಬಲ್ಲ ಪ್ರೌಢೆಯರು ||
ಪೂಗಣೆಯ ಗಾಯಗಳಿಗಳುಕುವ | ಭೋಗಿಗಳು ಮುದದಳಿಗಳಂತಿಹ |
ಶ್ರೀಗಣಿಕೆಯರು ಸಂದಣಿಸಿದರು ಜೀವನೋಲಗಕೆ ||

---

### ರುದ್ರಮುನಿ. ಸು. 1600.

ಈತನು ಹಾಡುಗಳನ್ನು ಬರೆದಿದ್ದಾನೆ. ಇವನು ದೇವಾಂಗದವನು. ಇವನ ಸ್ಥಳ ಗದಗು ತಾಲ್ಲೂಕು ಬೆಟಿಗೇರಿ. ಅಲ್ಲಿ ಈತನು ಮಠಾಧಿಪತಿಯಾಗಿದ್ದಂತೆ ತೋರುತ್ತದೆ. ಇವನ ಕಾಲವು ಸುಮಾರು 1600 ಆಗಿರಬಹುದು. ಈತನ ಹಾಡುಗಳಲ್ಲಿ ಒಂದನ್ನು ಉದಾಹರಿಸುತ್ತೇವೆ —

ರಾಗ ಹಂಸಧ್ವನಿ ಆದಿತಾಳ

ಎಂಥ ಬಲವಂತ ನೋಡಮ್ಮ | ಮೂಜುಲೋಕದೊ |
ಳಿಂಥ ಸಿರಿವಂತನಾರಮ್ಮಾ ||ಪಲ್ಲವಿ||
ಪಂಥಗಾರರ ದೇವಾ | ನಂತಭಕುತಸಂಜೀವ|
ನಿಂತುವರಗಳನೀವ | ಶಾಂತ ಸದ್ಗುಣ ಹನುಮಂತ ||ಅನುಪಲ್ಲವಿ||
ಮಾರುತಾಂಜನೆಗೆ ಸುತನಾಗಿ | ಶ್ರೀರಾಮನಂಘ್ರಿ |
ಸೇರಿ ಸೇವೆಯೊಳನುವಾಗಿ | ಹಾರಿ ಲಂಕೆಯೊಳಿರ್ದ |
ಕ್ರೂರದೈತ್ಯರನೊದ್ದ | ವೀರಾಧಿವೀರ ಜಗಕೀತ | ಪೂರನಗೆಲಿದಾತ ||೧||
ಕಟ್ಟಿರ್ದ ಕಾಸೆ ಕೊನೆಮೀಸೆ | ಬಿಟ್ಟಿರುಳುಗಣ್ಣು |
ನಟ್ಟನಡು ಸೂರ್ಯನನು ಜಯಿಸಿ | ಬಿಟ್ಟಿರಕದರುಂಗಲಿಗಿ |
ಪಟ್ಟಪರಿಣಮಿಸಲಾಗಿ|ಬೆಟ್ಟಗೇರಿಯ ರಾಮ|ನಾಮಸ್ಮರಿಸುವ ಸೇಮ ||೨||

---

### ನಿಜಗುಣಾರ್ಯ. ಸು 1650.

ಈತನು ಅದ್ವೈತರಾಮಾಯಣವನ್ನು ಬರೆದಿದ್ದಾನೆ. ಇವನು ವೀರಶೈವ ಕವಿಯೆಂದು ತೋರುತ್ತದೆ. ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿಕೊಂಡಿಲ್ಲ.

1 ಕರ್ಣಾಟಕ ಸಾಹಿತ್ಯಪರಿಷತ್ಪತ್ರಿಕೆ, ಅಕ್ಟೋಬರ್ 1920, ಪುಟ 177.

ಗ್ರಂಥದ ಕೆಲವು ಭಾಗಗಳಲ್ಲಿ " ನಿಜಗುಣಾರ್ಯನ ವಚನದಮೃತ " ಎಂದು ದೊರೆವುದರಿಂದ ಗ್ರಂಥಕರ್ತನು ನಿಜಗುಣಾರ್ಯನಾಗಿರಬಹುದು ಎಂಬ ಊಹೆಗೆ ಅವಕಾಶವಿದೆ. ಇವನು ನಿಜಗುಣಶಿವಯೋಗಿಯೇ ಆಗಿರಬಹುದೋ ಎಂಬ ಸಂದೇಹವು ಹುಟ್ಟಬಹುದು ಆದರೆ ಅವನ ಗ್ರಂಥಗಳಲ್ಲಿ ದೊರೆವ ಶಂಭುಲಿಂಗನ ಅಂಕಿತವು ಈ ಗ್ರಂಥದಲ್ಲಿ ಇಲ್ಲದಿರುವುದರಿಂದ ಈ ಕವಿ ತದ್ಭಿನ್ನನೆಂದು ಹೇಳಬೇಕಾಗಿದೆ. ಇವನ ಕಾಲವು ಸುಮಾರು 1650 ಆಗಿರಬಹುದು.

ಇವನ ಗ್ರಂಥ

### ಅದ್ವೈತರಾಮಾಯಣ.

ಇದು ವಚನಗಳಲ್ಲಿ ಬರೆದಿದೆ ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ ಸಂಧಿ 24, ಪದ 933 ಇವೆ " ಅದ್ವೈತದಲಿ ರಾಮರಾವಣರ ನಿಜಪಥವನು ಪಾದವೈಭವವನು ಮಂಡೋದರಿಯು ರಾವಣನ ಪಾದವನು ಉಸಿರುವೆನು " ಎಂದು ಕವಿ ಹೇಳುತ್ತಾನೆ ಈ ಗ್ರಂಥದಲ್ಲಿ ರಾಮಾಯಣಕಥೆಗೆ ಅದ್ವೈತಬೋಧಕವಾದ ಗೂಢಾರ್ಥವು ಹೇಳಿರುವಂತೆ ತೋರುತ್ತದೆ. ಕೆಲವು ಕಡೆ " ಎಂದನಾಮುನಿಪ ", " ಕೇಳ್ಳೆ ಶಾಂತರಾಮನೆ " ಎಂದು ಬರುತ್ತದೆ ಇದರಿಂದ ಒಂದು ವಚನವನ್ನು ತೆಗೆದು ಬರೆಯುತ್ತೇವೆ :—

ದಶಶಿರೋತ್ತಮನು ದಶರಥೋತ್ತಮ ಎರಡು ಕಲೆತುದೆ ರಾಮಗುಣ ಭಕ್ತಿಭಾವವು ಎರಡು ಕಲೆತುದೆ ಲಕ್ಷ್ಮಣಗುಣ ಕಮಲ ಸೂರ್ಯನು ಕಲೆತುದೆ ಸೀತಾಗುಣ. ಮನಸ್ಥಿಧನವು ಕಲೆತುದೆ ಭರತಗುಣ. ಜೀವ ಭೂಮಿಯು ಕಲೆತುದೆ ಶತ್ರುಘ್ನಗುಣ. ಐದು ಗುಣ ಕಲೆತುದೇ ದೇಹಗುಣವೆಂದಾ.

---

### ಮಹೀಪತಿಸ್ವಾಮಿ. ಸು. 1650

ಈತನು ಅನುಭವಪದಗಳನ್ನೂ ಕೆಲವು ಇತರ ಗ್ರಂಥಗಳನ್ನೂ ಬರೆದಿರುವಂತೆ ತಿಳಿಯುತ್ತದೆ[1]. ಇವನು ಬ್ರಾಹ್ಮಣಕವಿಯೆಂದು ತೋರುತ್ತದೆ. ಮೊದಲು ಬಿಜಾಪುರದ ಆದಿಲ್‌ಷಾಹಿರಾಜರಲ್ಲಿ ದಿವಾನನಾಗಿದ್ದು ಆಮೇಲೆ ವಿರಕ್ತನಾಗಿ ಕಾಖಂಡಕಿಯಲ್ಲಿ ಸಮಾಧಿಸ್ಥನಾದನೆಂದು ಹೇಳುತ್ತಾರೆ ಇವನ ಕಾಲವು ಸುಮಾರು 1650 ಆಗಿರಬಹುದು

---

1 ಕರ್ಣಾಟಕವೈಭವ (1915).

## ವರ್ಧಮಾನ. ಸು 1650.

ಈತನು ಶ್ರೀಪಾಲಚರಿತೆಯನ್ನು ಬರೆದಿದ್ದಾನೆ. ಇವನು ಜೈನಕವಿ. ಇವನ ಕಾಲವು ಸುಮಾರು 1650 ಆಗಿರಬಹುದೆಂದು ತೋರುತ್ತದೆ

ಇವನ ಗ್ರಂಥ

### ಶ್ರೀಪಾಲಚರಿತೆ.

ಇದು ಸಾಂಗತ್ಯದಲ್ಲಿ ಬರೆದಿದೆ. , ಸಂಧಿ 22. ಸಂಧಿಗಳ ಕೊನೆಯಲ್ಲಿ ಈ ಪದ್ಯವಿದೆ—

ಮದನನಿಗುಪಮಾನ ತುಲಯಾದ್ರಿಪವಮಾನ | ವಿದಿತಸಜ್ಜನ ಸೇವ್ಯಮಾನ|
ಮೃದುಗುಣಬಾಭಾಸ್ವಮಾನನೂರ್ಜಿಸಿದನು | ಚದುರ ಶ್ರೀಕವಿವರ್ಧಮಾನ||

———

## ಬಸಪ್ಪಾರ್ಯ. ಸು. 1650.

ಈತನು ವರ್ಣನಾರೂಪವಾದ ಅನೇಕ ಪದ್ಯಗಳನ್ನು ಬರೆದಿದ್ದಾನೆ. ಇವನು ದೇವಾಂಗದವನು ಇವನ ಸ್ಥಳ ಗದಗು ತಾಲ್ಲೂಕು ಮುನಿವೃಂದ (ಮುಳುಗುಂದ). ಈತನು ಸುಮಾರು 1650ರಲ್ಲಿ ಇದ್ದಿರಬಹುದು " ಈ ಕವಿ ಪಂಪಾಕ್ಷೇತ್ರವನ್ನು ನೋಡಬಂದ ಕಾಲದಲ್ಲಿ ಅಲ್ಲಿಯ ದೇವಸ್ಥಾನಗಳನ್ನೂ ಕಟ್ಟಡಗಳನ್ನೂ ವಿಜಯನಗರದ ರಾಜನಾದ ರಾಮರಾಜನ ಬಾಲಕ್ರೀಡೆಗಳನ್ನೂ ಸೌಂದರ್ಯಾದಿಗಳನ್ನೂ ರತ್ನಾಜಿಯೆಂಬ ವೇಶ್ಯಾಸ್ತ್ರೀಯ ಸೌಭಾಗ್ಯವನ್ನೂ ಲಾವಣ್ಯವನ್ನೂ ಇನ್ನೂ ಅನೇಕ ವಿಷಯಗಳನ್ನೂ ಶೃಂಗಾರರಸಭರಿತವಾದ ಪದ್ಯಗಳಿಂದ ಸರಸವಾಗಿ ಬಣ್ಣಿಸಿರುತ್ತಾನೆ[1] "

———

## ಚಿದಾನಂದ. ಸು. 1675

ಈತನು ಹಾಡುಗಳನ್ನು ಬರೆದಿದ್ದಾನೆ ಇವಕ್ಕೆ ಚಿದಾನಂದರ ಕೋರಿಡೆ ಎಂಬ ಹೆಸರಿದೆ. ಇವನು ಬ್ರಾಹ್ಮಣ ಕವಿ. ಇವನ ಸ್ಥಳ ಉತ್ತರಕನ್ನಡಜಿಲ್ಲಾ ಹೊನ್ನಾವಾರದ ತಾಲ್ಲೂಕಿನಲ್ಲಿಯ ಬೈಲೂರು ಈತನ ಶಿಷ್ಯನಾದ **ವಿಮಲಾನಂದನು** ಕೃಷ್ಣಾರ್ಜುನಕಾಳಗವೆಂಬ ಯಕ್ಷಗಾನವನ್ನು 1685ರಲ್ಲಿ ಬರೆದು ತನ್ನ ಗುರುವಿಗೆ ಅರ್ಪಿಸಿದಂತೆ ಆ ಗ್ರಂಥದಿಂದ ತಿಳಿವುದರಿಂದ ಇವನ ಕಾಲವು ಸುಮಾರು 1675 ಆಗಿರಬಹುದು.

1 ಕರ್ನಾಟಕ ಸಾಹಿತ್ಯಪರಿಷತ್ಪತ್ರಿಕೆ, ಅಕ್ಟೋಬರ್ 1920, ಪುಟ 177.

## ವಿಮಲಾನಂದ ಸು. 1685

ಇವನು ಕೃಷ್ಣಾರ್ಜುನಕಾಳಗ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಈತನು ಬ್ರಾಹ್ಮಣಕವಿ, ಚಿದಾನಂದನ ಶಿಷ್ಯನು. ಇವನ ಸ್ಥಳ ಉತ್ತರಕನ್ನಡ ಜಿಲ್ಲಾ ಹೊನ್ನಾವಾರದ ತಾಲ್ಲೂಕಿನಲ್ಲಿಯ ಬೈಲೂರು ತನ್ನ ಗ್ರಂಥವನ್ನು ಶಕ 1606ನೆಯ ಕ್ರೋಧನದಲ್ಲಿ (1685) ಮುಗಿಸಿ ತನ್ನ ಗುರುವಾದ ಚಿದಾನಂದನ ಪಾದಕ್ಕೆ ಅರ್ಪಿಸಿದಂತೆ ಹೇಳುತ್ತಾನೆ. ಭಟಕಳದ ಅಪ್ಪಯ್ಯನು[1] ಈ ಕವಿಯ ಶಿಷ್ಯನು.

---

## ಗುರುವ ಸು 1700.

ಈತನು ಪ್ರಾಣಲಿಂಗಶತಕವನ್ನು ಬರೆದಿದ್ದಾನೆ ಇವನು ವೀರಶೈವಕವಿ; ಹಂಪೆಯ ದಾಸಪ್ಪನ ಮಗನು ಇವನ ಕಾಲವು ಸುಮಾರು 1700 ಆಗಿರಬಹುದೆಂದು ಊಹಿಸುತ್ತೇವೆ.

**ಇವನ ಗ್ರಂಥ**

### ಪ್ರಾಣಲಿಂಗಶತಕ

ಇದರಲ್ಲಿ 101 ವೃತ್ತಗಳಿವೆ, ಪ್ರತಿವೃತ್ತವೂ "ಮತ್ಪ್ರಾಣಲಿಂಗೇಶ್ವರ" ಎಂದು ಮುಗಿಯುತ್ತದೆ. ಗ್ರಂಥವು ವೀರಶೈವಸಿದ್ಧಾಂತವನ್ನೂ ಅಲ್ಲಲ್ಲಿ ಪುರಾತನರ ಚರಿತವನ್ನೂ ತಿಳಿಸುತ್ತದೆ. ಇದರಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಧನಮುಂಟಾದವರಿತ್ತ ವಸ್ತುತತಿಯಂ ಕೈಕೊಳ್ವ ಭೂಪಂಗೆ ಸು |
ಮ್ಮನೆ ತಾಂಬೂಲಫಲಂಗಳಂ ಬಡವನೀಯಲ್ಕೆಂತು ಯೋಗ್ಯಂ ಸದಾ ||
ಸನಕಂ ಮುಖ್ಯಸಮಸ್ತದೇವಋಷಿಗಳ್ ಸಂಕೀರ್ತನಂ ಮಾಡುವರ್ |
ನಿನಗೆಂತೊಪ್ಪುಗುಮೆನ್ನ ಬಾಲನುಡಿಗಳ್ ಮತ್ಪ್ರಾಣಲಿಂಗೇಶ್ವರಾ ||
ನಡೆಯಂ ಧರ್ಮವಿಹೀನವಾದ ನಡೆಯಂ ವಾರಾಶಿಮೇಲ್ಬಾಯ್ದಡಂ |
ನುಡಿಯಂ ಸತ್ಯಕೆ ಭಿನ್ನವಾದ ನುಡಿಯಂ ಪ್ರಾಣಾಂತಕಂ ಬಂದಡಂ ||
ಪಿಡಿಯಂ ಲೋಗರ ಸೊಮ್ಮನೊಮ್ಮೆ ಮನದೊಳ್ ದುಷ್ಕೃತ್ಯಮಂ ಮಾಡನೈ |
ಮೃಡ ನಿನ್ನುದ್ಧತಭಕ್ತಿಯುಕ್ತಚರಿತಂ ಮತ್ಪ್ರಾಣಲಿಂಗೇಶ್ವರಾ ||

---

1 ಪುಟ 1.

## ಮುಮ್ಮಡಿಕಾರ್ಯೇಂದ್ರ. ಸು. 1700

ಈತನು ವೇದಸಂಜೀವಿನಿಯನ್ನು ಬರೆದಿದ್ದಾನೆ ಇವನು ವೀರಶೈವಕವಿ, ಕಾರ್ಯ ಎಂಬ ಸ್ಥಳಕ್ಕೆ ಪ್ರಭುವಾಗಿದ್ದಂತೆ ತೋರುತ್ತದೆ. ಇವನ ತಂದೆ ಇಮ್ಮಡಿ ಕಾರ್ಯೇಂದ್ರ, ತಾಯಿ ಕುಪ್ಪಮಾಂಬೆ, ಗುರು ದೊಡ್ಡದೇಶಿಕಾರ್ಯ. "ಮಾಸ್ತಿಕುಲ ಪ್ರದೀಪ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1700 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ವೇದಸಂಜೀವಿನಿ.

ಇದು ವೀರಶೈವಸಿದ್ಧಾಂತವನ್ನು ಬೋಧಿಸುವ ವಚನಗ್ರಂಥ, ವಚನ 116. ಒಂದೊಂದು ವಚನವೂ "ಮಹಾಘನ ದೊಡ್ಡದೇಶಿಕಾರ್ಯ ಗುರುಪ್ರಭುವೇ" ಎಂದು ಮುಗಿಯುತ್ತದೆ. ಒಂದು ವಚನವನ್ನು ಉದಾಹರಿಸುತ್ತೇವೆ --

ಗೊಲ್ಲರಹಳ್ಳಿಯಲ್ಲಿ ಭೂವಲ್ಲಭನಿದ್ದರೆ ಅಲ್ಲಿಯ ಜನರು ಅವಂಗೆ ಕುಳಿಯ ಹಾಲಂ ಕರೆದುಕೊಟ್ಟು ನೀಚೋಚ್ಚವಳಿಯುದ ಮಾತುಗಳನಾಡಿ ನಗಿಸುವರಲ್ಲದೆ ರಾಜೋಪಚಾರವಂ ಮಾಡಬಲ್ಲರೇನಯ್ಯಾ, ಅಂತು ಜ್ಞಾನಿಯೆಂದೆನಿಸಿತು ನನ್ನ ಹೃದಯದಲ್ಲಿ ನೀಂ ನೆಲಸಿದಲ್ಲಿ ನನ್ನಲ್ಲಿಹ ತಮೋಗುಣಗಳಂ ಪೂಜಿಸಿ ಅಪಶಬ್ದಗಳಿಂ ಸ್ತುತಿಸುವೆನಲ್ಲದೆ ನಿಜಭಾವದಿಂದರ್ಚಿಸಿ ನೃಘಂಟುಕಶಬ್ದಗಳಿಂ ಸ್ತುತಿಸಬಲ್ಲೆನೇನಯ್ಯಾ, ಇಂತು ನಾನು ಮಾಡುತ್ತಿರ್ಪ ಅಪಚಾರಂಗಳಂ ನೀನುಪಚಾರಂಗಳಾಗಿ ಕೈಗೊಳ್ಳದಿರ್ದೊಡೆ ನಿನ್ನ ಪರಮದಯಾಮಹಿಮೆ ಪ್ರಕಟಮಪ್ಪುದೇನಯ್ಯಾ; ಮಹಾಘನದೊಡ್ಡದೇಶಿಕಾರ್ಯಗುರುಪ್ರಭುವೇ.

---

## ಹುಬ್ಬಳ್ಳಿಯ ಸಂಗಯ್ಯ ಸು 1700

ಇವನು ಶಿವಯೋಗರತ್ನಾಕರವನ್ನು ಬರೆದಿದ್ದಾನೆ. ಈತನು ವೀರಶೈವಕವಿ, ಸುಮಾರು 1700ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಇವನ ಗ್ರಂಥ

### ಶಿವಯೋಗರತ್ನಾಕರ.

ಇದು ವೇದಾಂತವನ್ನು ಬೋಧಿಸುವ ಗದ್ಯಗ್ರಂಥ; ಆಂಧ್ರಭಾಷೆಯಲ್ಲಿ ವರದರಾಜನೆಂಬ ಶಿವಯೋಗೀಶ್ವರನು ಬರೆದಿರುವ ಗ್ರಂಥದ ಭಾಷಾಂತರವು;

5 ಪ್ರಕರಣಗಳಾಗಿ ಭಾಗಿಸಲ್ಪಟ್ಟಿದೆ. ಅಲ್ಲಲ್ಲಿ ಸಂಸ್ಕೃತಶ್ಲೋಕಗಳು ಅನುವಾದ ಮಾಡಲ್ಪಟ್ಟಿವೆ. ಗ್ರಂಥಾಂತ್ಯದಲ್ಲಿ ಈ ಗದ್ಯವಿದೆ :—

ಇದು ಶಿವಾಗಮಪುರಾಣ ವೇದವೇದಾಂತರಹಸ್ಯ ರಹಸ್ಯಾರ್ಥಪ್ರತಿಪಾದಕ ವೀರಶೈವಸಮಯಾಬ್ಧಿಚಂದ್ರೋದಯ ಷಟ್ಸ್ಥಲ ಚಕ್ರವರ್ತಿಗಳಾದ, ಶ್ರೀಮತ್ಕಲ್ಯಾಣಪುರವರಾಧೀಶ ವೃಷಭೇಂದ್ರಮುಖ್ಯಪ್ರಮಥ ಪ್ರಮಥಪತ್ನಿಯರ ದಿವ್ಯ ಶ್ರೀಪಾದಪದ್ಮಮಕರಂದಪಾನಪೀನಮುದಿತ ಮಧುಕರಾಯಮಾನರಾದ ಹುಬ್ಬಳ್ಳಿಯ ಸಂಗಯ್ಯನವರಿಂದೆ ಪ್ರಣೀತವಾದ ಶಿವಯೋಗರತ್ನಾಕರವೆಂಬ ಶಾಸ್ತ್ರದೊಳ್.

---

## ಹಾಗಲವಾಡಿ ಸಿದ್ಧರಾಮಪ್ಪನಾಯಕ. ಸು. 1700.

ಇವನು ಮಹಾನುಭಾವಪ್ರಕಾಶಿಕೆಯನ್ನು ಬರೆದಿದ್ದಾನೆ ಈತನು ವೀರಶೈವಕವಿ, ಹಾಗಲವಾಡಿಯ ಪಾಳೆಯಗಾರರ ಸಂತತಿಗೆ ಸೇರಿದವನೆಂದು ತೋರುತ್ತದೆ. ಇವನ ಕಾಲವು ಸುಮಾರು 1700 ಆಗಿರಬಹುದೆಂದು ಊಹಿಸುತ್ತೇವೆ

ಇವನ ಗ್ರಂಥ

### ಮಹಾನುಭಾವಪ್ರಕಾಶಿಕೆ

ಇದು ಗದ್ಯಗ್ರಂಥ ಇದರಲ್ಲಿ ಕವಿ "ಪೂರ್ವಪುರಾತನರಿಂದ ಯುಕ್ತಮಾದ ನವಚಕ್ರದ ವಚನಂಗಳ ಅಭಿಪ್ರಾಯಮಂ ತಾತ್ಪರ್ಯಮಾತ್ರದಿಂ" ವಿಸ್ತರಿಸುವಂತೆ ಹೇಳುತ್ತಾನೆ ಇದನ್ನು ಪೂರ್ವದಲ್ಲಿ ಸಿದ್ಧಲಿಂಗೇಶ್ವರನು ಶೀಲವಂತ ಮುರಿಗಪ್ಪನೆಂಬ ಶಿವಶರಣನಿಗೆ ನಿರೂಪಿಸಿದಂತೆ ಹೇಳಿದೆ.

---

## ?ಹಾರುವ. ಸು. 1700.

ಇವನು ಬಸವಚಿಂತಾಮಣಿಯನ್ನು ಬರೆದಿದ್ದಾನೆ. ಗ್ರಂಥದಲ್ಲಿ ಈತನ ಹೆಸರು ವ್ಯಕ್ತವಾಗಿ ಹೇಳಿಲ್ಲ. ಆದರೆ ಒಂದು ಪದ್ಯದಲ್ಲಿ "ಹಾರುವ ಹೇಳಿಸಿದನೀಕೃತಿಯ" ಎಂದಿರುವುದರಿಂದ ಕವಿಯ ಹೆಸರು ಹೀಗಿರಬಹುದೋ ಎಂಬ ಸಂಶಯಕ್ಕೆ ಅವಕಾಶವಿದೆಯೇ ಹೊರತು ಖಂಡಿತವಾಗಿ ಹೇಳಲಾಗುವುದಿಲ್ಲ ಈತನು ವೀರಶೈವಕವಿ. ಪೂರ್ವಕವಿಗಳಲ್ಲಿ ಭೀಮಕವಿಯನ್ನು (1369) ಸ್ಮರಿಸುವುದರಿಂದ ಅವನ ಕಾಲಕ್ಕೆ ಈಚೆಯವನು ಎಂಬುದಂತೂ ಸ್ಪಷ್ಟವಾಗಿಯೇ ಇದೆ: ಸುಮಾರು 1700ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಹೊಗಳಿದ್ದಾನೆ :—

ಭೂಮಿಯೊಳ್ ಕಾಳಿದಾಸ ಪದ್ಮರಸರ | ಪ್ರೇಮದಿ ರಾಘವಾಂಕನನು |
ಭೀಮಕವಿಯು ಗುರುವರ ಪಾಲ್ಕುರಿಕೆಯು | ಸೋಮೇಶನ ಬಲಗೊಂಬೆ ||

ಇವನ ಗ್ರಂಥ

**ಬಸವಶಿಖಾಮಣಿ.**

ಇದು ಸಾಂಗತ್ಯದಲ್ಲಿ ಬರೆದಿದೆ , ಸಂಧಿ 11, ಪದ್ಯ 1270 ಇದರಲ್ಲಿ ಬಸವನ ಚರಿತೆ ಹೇಳಿದೆ ಇದರಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :—

**ಬಾಗವಾಡಿ.**

ಗಂಗೆಗೆ ತೆಂಕಣ ಭಾಗದೊಳೆಪ್ಪುವದು | ಹಿಂಗದೆ ಕರ್ಣಾಟದೇಶ |
ಕಂಗಳ ಬೆಳಗಿನ ಮಂಗಳವೆನಿಸುವು | ದಿಂಗಳೇಶ್ವರ ಬಾಗವಾಡಿ ||
ಕುಸುಮದ ಪಸರದೊಳೆಸೆದಿಹ ಜಾಜಿಯು | ಪೊಸವೊಲ್ಲೆ ಮಲ್ಲಿಗೆ ದವನ |
ಪಸರಿಪ ಕೇತಕಿ ಬಿಸರುಹ ಚಂಪಕ | ವೆಸೆದುವು ಕೇರಿಕೇರಿಯಲಿ ||

---

## ಇಮ್ಮಡಿ ಮುರಿಗೆಯಸ್ವಾಮಿ. 1720.

ಈತನು ಹಾಲಾಸ್ಯಪುರಾಣವನ್ನು ಬರೆದಿರುವುದಾಗಿ ಹಿಂದೆಯೇ ಹೇಳಿದ್ದೇವೆ[1]. ಈ ಗ್ರಂಥವು ಈಚೆಗೆ ದೊರೆಯಿತು. ಇದರಲ್ಲಿ ಗ್ರಂಥವು ಪೂರ್ತಿಯಾದ ಕಾಲವು ಶಕ 1642ನೆಯ ಶಾರ್ವರಿವರ್ಷವೆಂದು (1720) ಈ ಪದ್ಯದಲ್ಲಿ ಹೇಳಿದೆ :—

ಒಪ್ಪದ ಶಾಲಿವಾಹನ | ಸಾವಿರದರುನೂರಿಂದೆ ನಾಲ್ವತ್ತೆರಡನೆ |
ಯಾವರಿಸಿದ ಸುತಶಾರ್ವರಿ | ಭಾವಿತವರಸಿಂಹಲಗ್ನದೊಳಗತಿಶಯದಿಂ ||

ಈ ಕವಿಗೆ ನಾವು ಸುಮಾರಿನಮೇಲೆ ಕೊಟ್ಟಿರುವ ಕಾಲಕ್ಕೂ (ಸು. 1590)[2] ಇಲ್ಲಿ ಹೇಳಿರುವ ಕಾಲಕ್ಕೂ ಬಹಳ ವ್ಯತ್ಯಾಸವಿದೆ. ಇದರಿಂದ ಈತನು ಬೇರೆ ಒಬ್ಬ ಕವಿಯೋ ಎಂಬ ಸಂದೇಹವು ಹುಟ್ಟಬಹುದು. ಆದರೆ ಸೋಮಶೇಖರ ಕವಿಯ ಹೇಳಿಕೆಯಪ್ರಕಾರ[3] ಈ ಕವಿ ತೋಂಟದ ಸಿದ್ಧಲಿಂಗನ (ಸು. 1470) ಶಿಷ್ಯ ಪರಂಪರೆಯಲ್ಲಿ 7ನೆಯವನಾಗುವುದರಿಂದ ಇವನ ಕಾಲವು ಸುಮಾರು 1660 ಆಗಬಹುದು. ಈ ಶಿಷ್ಯಪರಂಪರೆಯಲ್ಲಿ ಇನ್ನೂ ಒಬ್ಬರಿಬ್ಬರ ಹೆಸರು ಬಿಟ್ಟುಹೋಗಿ

---

1 ದ್ವಿತೀಯಸಂಪುಟ, 575, 2 ಅದೇ, 313. 3 ಅದೇ, 527, 572

ದ್ದರೂ ಇರಬಹುದು ; ಅಥವಾ ಕೆಲವರು ಬಹುಕಾಲ ಜೀವಿಸಿರಬಹುದು. ಅದು ದರಿಂದ ಮೇಲೆಕೊಟ್ಟಿರುವ ಗ್ರಂಥನಿರ್ಮಾಣಕಾಲವು ಸರಿಯಾಗಿರಬಹುದೆಂದು ತೋರುತ್ತದೆ. ಇದರಿಂದ ಈ ಕವಿಯ ಗುರು ಮುರಿಗೆಯ ಶಾಂತವೀರ[1] ಮುಂತಾದವರ ಕಾಲವನ್ನೂ ಯುಕ್ತೋಚಿತವಾಗಿ ಈಚೆಗೆ ಹಾಕಬೇಕಾಗುತ್ತದೆ. ಈಗ ಈತನ ನಾಂದೀಪದ್ಯಗಳನ್ನು ಅನುಸರಿಸಿ ಷಡಕ್ಷರದೇವನು ತನ್ನ ನಾಂದೀಪದ್ಯಗಳನ್ನು ಬರೆದಿರಬಹುದು ಎಂಬ ನಮ್ಮ ಊಹೆಗೆ[2] ಅವಕಾಶವಿಲ್ಲ.

ಇವನ ಗ್ರಂಥ

## ಹಾಲಾಸ್ಯಪುರಾಣ

ಇದು ಚಂಪೂರೂಪವಾಗಿದೆ, ಕಾಂಡ 4, ಆಶ್ವಾಸ 66, ಪದ್ಯ 3637 ; ಅಲ್ಲಲ್ಲಿ ತ್ರಿಪದಿಗಳೂ ರಗಳೆಗಳೂ ಇವೆ "ಇದರಲ್ಲಿ ಮಧುರೆಯ ಸುಂದರೇಶ್ವರಂ ಚತುಷ್ಷಷ್ಟಿಲೀಲೆಗಳಂ ನಟಿಸಿದ ಕಥಾವೃತ್ತಾಂತಂ" ಹೇಳಿದೆ. ಈ ಕಥೆಯನ್ನು ಮೊದಲು ಶಿವನು ಪಾರ್ವತಿಗೂ ಒಳಿಕ ಅಗಸ್ತ್ಯನು ಋಷಿಗಳಿಗೂ ಹೇಳಿದಂತೆ ತಿಳಿಯುತ್ತದೆ ಹರೀಶ, ಚೆನ್ನವೀರೇಶ್ವರ, ಕರಿಬಸವ, ಮುಚ್ಚೆನ್ನಬಸವ ಇವರುಗಳ ಇಷ್ಟಾನುಸಾರವಾಗಿ ಈ ಗ್ರಂಥವನ್ನು ಬರೆದಂತೆ ಕವಿ ಹೇಳುತ್ತಾನೆ. ಅಲ್ಲದೆ ಪೂರ್ವದಲ್ಲಿ ಈ ಕಥೆಯನ್ನು ಸೋದೆಯ ಪ್ರಭುವಾದ ಸದಾಶಿವಭೂಪತಿ 'ವರ್ಣಕ'ವಾಗಿ ಬರೆದಿದ್ದಂತೆಯೂ ಅದನ್ನೇ ತಾನು 'ವಸ್ತುಕ'ವಾಗಿ ರಚಿಸಿದಂತೆಯೂ ಈ ಪದ್ಯದಲ್ಲಿ ಹೇಳಿದ್ದಾನೆ :—

> ಸಕಲಕಲಾವಿಶಾರದ ನರೇಂದ್ರಶಿರೋಮಣಿ ಲಿಂಗಜಂಗಮಾ |
> ರ್ಚಕನುರು ಸೋದೆಯಪ್ರಭು ಸದಾಶಿವಭೂಪತಿಯೊಲ್ದು ಪೂರ್ವದೊಳ್ |
> ಪ್ರಕಟಸುವರ್ಣವರ್ಣಕದೆ ಪೇೞ್ದುದನಾಂ ಪ್ರಮುದೋಕ್ತಿಯಿಂದೆ ವ |
> ಸ್ತುಕದಿನಿದಂ ನೆಗೞ್ಚಿದೆನುಮೇಶನ ಭಕ್ತರಪಾರರೊಲ್ದಿನಂ ||

ಪೂರ್ವಕವಿಗಳನ್ನು ಈ ಪದ್ಯಗಳಲ್ಲಿ ಸ್ಮರಿಸಿದ್ದಾನೆ.—

> ಹಂಪೆಯ ಹರಿಹರದೇವನ|ಲಂಪಿನ ರಾಘವನನಿಂದ್ಯ ಪಾಲ್ಕುಱಿಕೆಯ ಸೋ|
> ಮಂ ಪರಮಂ ಪಂಡಿತಯಂ|ಸೊಂಪಿನರಸಭಾವಮುಖ್ಯಮಂ ನೀಡುಗೆ ತಾಂ|

1 ದ್ವಿತೀಯಸಂಪುಟ, 212 2 ಅದೇ 575

ಗುರು ತೋಂಟದಾರ್ಯನಂ ಸು | ಸ್ಥಿರಕೊಟ್ಟೂರೇಶನಂ ಭುಜಂಗೇಶ್ವರನಂ |
ಕರತಳದ ನಾಗಿದೇವನ|ನಿರದಾಂ ನುತಿಗೆಯ್ದು ಪೇಳ್ವೆನೀ ಸತ್ಕೃತಿಯಂ ||

ಗ್ರಂಥಾವತಾರದಲ್ಲಿ ಸುಂದರೇಶನ ಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ ಇವರುಗಳನ್ನು ಸ್ತುತಿಸಿ ಅನಂತರ ನಂದಿ, ಭೃಂಗಿ, ರೇಣುಕ, ಬಸವ, ಮಡಿವಳಮಾಚಯ್ಯ ಮುಂತಾದ ಶಿವಶರಣರನ್ನು ಹೊಗಳಿದ್ದಾನೆ.

ಈ ಗ್ರಂಥದಿಂದ ಕೆಲವು ಪದ್ಯಗಳನ್ನ ತೆಗೆದು ಬರೆಯುತ್ತೇನೆ :—

## ಸಮುದ್ರ.

ಹರಿಗಂ ಶಂಖಮನಿತ್ತಂ | ಗಿರಿಶಂಗಂ ಶಶಿಯನಂದು ಕೊಟ್ಟಂ ವಿಧಿಯಂ |
ಸರಸಿಜಪೀಠದೊಳಿರಿಸಿದೆ | ನಿರದೆನಗೆಣೆಯಾವನೆಂದು ಮೊರೆದುದು ಶರಧಿ ||
ನವರತ್ನಾಕರನಾನೆಂ | ದವಿರತಮಿದೊ ನೋಡಿನೆಂದು ಮುಕ್ತಾವಳಿಯಂ |
ಸವಿಮಣಿಸಿಕರಮುಮಂ ತಾಂ | ತವೆ ತೆರೆದೋಳೆಂದೆ ಚೆಲ್ವವೋಲ್ ಪನಿ ಮೆರೆಗುಂ ||

## ಬನಸಂಪಗೆ

ಪಕ್ಷಿಯು ಬಟ್ಟುಗಳೊಳ್ ಮೆ | ಯ್ವೆಟ್ಟಿದ ವೈಡೂರ್ಯಮಣಿಕದಂಬಮೊ ತಾನೆನೆ |
ಚಿಟ್ಟಿಸಿಪ ಬನಸಂಪಗೆ | ಯುಟ್ಟೆಯುದ ಮುಲರ್ಗಳಿಂದೆ ಸೊಗಯಿಕು ಮನಿಶಂ ||

---

## ಕೆಂಪಯ್ಯ. ಸು. 1750.

ಈತನು ನಳಚಕ್ರವರ್ತಿ ಕಥೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನು ಒಕ್ಕಲಿಗ ಕವಿ ಇವನ ತಂದೆ ಕಂಪಣ್ಣ, ತಾಯಿ ತಿಮ್ಮಮ್ಮ. ಈತನು ಸುಮಾರು 1750ರಲ್ಲಿ ಇದ್ದಿರಬಹುದು ಬೃಹದಶ್ವಮುನಿ ಧರ್ಮರಾಯನಿಗೆ ಹೇಳಿದ ಕಥೆಯನ್ನು ಹಿಂದೆ ರಾಘವಯ್ಯನು ದ್ವಿಪದಕಾವ್ಯವಾಗಿ ಬರೆದಂತೆಯೂ ಅದನ್ನೇ ತಾನು ಯಕ್ಷಗಾನವಾಗಿ ರಚಿಸಿದಂತೆಯೂ ಕವಿ ಹೇಳುತ್ತಾನೆ. ಆರಂಭದಲ್ಲಿ ವಾಲ್ಮೀಕಿ, ವ್ಯಾಸ, ಸೂತ, ಕಾಳಿದಾಸ ಇವರುಗಳ ಸ್ತುತಿ ಇದೆ.

## ಶಿವಯೋಗೀಶ್ವರ. ಸು. 1750.

ಇವನು ವಾರ್ಧಕಷಟ್ಪದಿಯಲ್ಲಿ ಭಕ್ತಿಮಾರ್ಗವನ್ನನುಸರಿಸಿ ಕೆಲವು ಶತಕಗಳನ್ನು ರಚಿಸಿರುವಂತೆ ತಿಳಿಯುತ್ತದೆ[1]. ಈತನು ವೀರಶೈವಕವಿ. ಇವನ ಸ್ಥಳ ಸಾಲೋಟಗಿ; ಇವನ ಸಮಾಧಿಯೂ ಅಲ್ಲಿಯೇ ಇದೆ. ಈತನ ಕಾಲವು ಸುಮಾರು 1750 ಎಂದು ಹೇಳುತ್ತಾರೆ.

---

## ಕವಿಚೆನ್ನ. ಸು. 1750

ಈತನು ಶಿಬಿರಾಯಚರಿತೆಯನ್ನು ಬರೆದಿದ್ದಾನೆ ಇವನು ವೀರಶೈವಕವಿ 'ಹತ್ತರಕಿಯ ವೀರನ ನೆನೆವೆನು' ಎಂಬುದರಿಂದ ಈತನ ಸ್ಥಳವು ಹತ್ತರಕಿ[2]ಯಾಗಿರಬಹುದು. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

### ಶಿಬಿರಾಯಚರಿತೆ.

ಇದು ತ್ರಿಪದಿಯಲ್ಲಿ ಬರದಿದೆ, ಸಂಧಿ 5, ಪದ್ಯ 523 ಇದರಲ್ಲಿ "ಮಱೆಹೊಕ್ಕವರ ಕೊಡೆನೆಂಬ ಬಿರುದಿನ" ಶಿಬಿರಾಯನ ಕಥೆ ಹೇಳಿದೆ. ಆರಂಭದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಗಣಪತಿ, ಸರಸ್ವತಿ, ಹತ್ತರಕಿಯ ವೀರಭದ್ರ, ಏಳೂರ ಮಾಣಿಕೇಶ್ವರ ಇವರುಗಳನ್ನು ಸ್ಮರಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

**ಕುಸುಮಾಲಿ ಬಿಟ್ಟುಹೋಗುವಾಗ ಮಲೆಯಾಳಸೆಟ್ಟಿಯ ಪ್ರಲಾಪ.**

ಕಱಲಿತು ಮುಖವೆಲ್ಲ | ಬೞಲಿತು ದೇಹವು |
ಕೆಳದಿಯ ನುಡಿಗೆ ಮನನೊಂದು ಮಲೆಯಾಳ|ಕುಲಗೇಡಿತನವ ಮಾಡುವರೆ||
ಭೋಗವನುಂಡು ನಾ | ಹೇಗೆ ಸೈರಿಸಲಿನ್ನು |
ನೀಗುವೆನೆನ್ನ ಹರಣವ ಕುಸುಮಾಲಿ | ಹೀಗೆ ಮೋಸವನು ಮಾಡುವರೆ |
ನಂಬಿದೆ ನಾ ನಿನ್ನ | ಹಂಬಲವ ಬಿಡಲಾರೆ |

---

1 ಕರ್ನಾಟಕವೈಭವ (1915).

2 ಈ ಗ್ರಾಮವು ಬಿಜಾಪುರದ ಉತ್ತರಕ್ಕೆ ಸುಮಾರು 12 ಮೈಲಿಗಳ ದೂರದಲ್ಲಿದೆ ಇದಕ್ಕೆ ಅಥರ್ಗಾ ಎಂಬ ಹೆಸರೂ ಉಂಟು

ರಂಭೆಯರೊಳು ಶಿರೋಮಣಿಯೇ ಕುಸುಮಾಲೆ | ಹಂಬಲವನೆಂತು ಮಡೆವೆನು ||
ಕರವಿಡಿದು ಮುದ್ದಿಸಿ | ಶಿರವಿಡಿದು ಮುಂಡಾಡಿ |
ಶರಹರನಡಿ ಬಿಗಿದಪ್ಪಿ ಕುಸುಮಾಲೆ | ಗರುವೆ ನೀಬಿಟ್ಟು ಹೋಗುವರೆ ||

---

## ವಿರುಪಣಾಯ್ಯ. ಸು 1750.

ಈತನು ವೀರಭದ್ರವಿಜಯವನ್ನು ಬರೆದಿದ್ದಾನೆ. ಇವನು ವೀರಶೈವಕವಿ; ಕಾಶ್ಯಪಗೋತ್ರದವನು; ಆಶ್ವಲಾಯನಸೂತ್ರದವನು. ಇವನ ತಂದೆ ಪರ್ವತಯ್ಯ, ಕುಲದೈವ ವೀರಭದ್ರ, ಸ್ಥಳ ದ್ರೋಣನದೀತೀರದಲ್ಲಿರುವ ದಾಳಿಕೋಟೆ[1]. ಈತನ ಗುರು ವೀರಣಾಯ್ಯ[2] ಪೂರ್ವಕವಿಗಳಲ್ಲಿ ಕುಮಾರವ್ಯಾಸನನ್ನು (ಸು. 1430) ಸ್ತುತಿಸುವುದರಿಂದ ಕವಿ ಆವನ ಕಾಲಕ್ಕೆ ಈಚೆಯವನು ಎಂಬುದು ವ್ಯಕ್ತವಾಗಿದೆ ಸುಮಾರು 1750 ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ಮರಿಸಿದ್ದಾನೆ :—

ಮೆರೆವ ಕಾಳಿಯ ಭಕ್ತನಾತನು | ಹರಿಹರೇಶ್ವರ ರಾಘವಾಂಕನು |
ನಿರುತದಲಿ ಶುಕರೂಪವ್ಯಾಸನು ಮಲುಹಣನು ಸಹಿತ ||
ಹಿರಿಯರಿವರನು ನೆನೆದು ಕಾವ್ಯವ | ಸರಗೊಳಿಸುವೆನು

ಇವನ ಗ್ರಂಥ

### ವೀರಭದ್ರವಿಜಯ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ನಮಗೆ ದೊರೆತ ಅಸಮಗ್ರ ಪ್ರತಿಯಲ್ಲಿ 6 ಸಂಧಿಗಳಿವೆ. ಇದರಲ್ಲಿ ವೀರಭದ್ರನ ವಿವಾಹವು ವರ್ಣಿತವಾಗಿದೆ. ಈ ಕಥೆಯನ್ನು ಮೊದಲು ಶಿವನು ಷಣ್ಮುಖನಿಗೂ ಅನಂತರ ದಧಿಮುನಿ ಜೈಮಿನಿಗೂ ಹೇಳಿದಂತೆಯೂ ಅದನ್ನೇ ರಗಳೆಯರೂಪದಲ್ಲಿ ಹಂಪೆಯ ಹರೀಶ್ವರನು ರಚಿಸಿದಂತೆಯೂ ಕವಿ ಹೇಳುತ್ತಾನೆ ಆರಂಭದಲ್ಲಿ ವಿರೂಪಾಕ್ಷಸ್ತುತಿ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

---

1 ಇದು ಈಗಿನ ದೋಣಿಹೊಳೆಯ ತೀರದಲ್ಲಿರುವ ತಾಳಿಕೋಟೆ ಎಂದು ತೋರುತ್ತದೆ, ಈ ಸ್ಥಳವು ಬಿಜಾಪುರದ ಆಗ್ನೇಯಕ್ಕೆ ಸುಮಾರು 41 ಮೈಲಿಗಳ ದೂರದಲ್ಲಿದೆ.

2 ತನ್ನ ಗುರುವಿನ ಪೀಳಿಗೆಯಲ್ಲಿ 18 ಪಟ್ಟದವರ ಹೆಸರನ್ನು ಹೇಳಿದ್ದಾನೆ.

## ಕವಿಪ್ರಾರ್ಥನೆ.

ಮಾಣಿಕವು ನಸುಮಾಸಿಯಿದ್ದಡೆ | ಸಾಣೆಯಿಕ್ಕಿಯು ಕಾಂತಿಯೆಸಗುವ |
ಜಾಣರಂದದಿ ಸಕಲಕವಿಗಳು ನಿಪುಣಪಂಡಿತರು ||
ಮಾಣದಣುಗೊಳಿಸುವುದು ಪದಲಾ ' ಕ್ಷಣಕರೀಭದ್ರನ ಸುಲಗ್ನವ |
ಕೇಣವಿಡಿದವನಲ್ಲ ರಚಿಸುವುದೆಲ್ಲರೊಂದಾಗಿ ||

### ಪಾರ್ವತಿ ಚೇಡಿತಿಯಾಗಿ ಶಿವನನ್ನು ಹುಡುಕುವುದು.

ಕೂಗುತಿರೆ ಕೋಗಿಲೆಯು ಸ್ವರದಲಿ | ವಾಗಿ ಮದವೇರುತ್ತ ಬರುತಿರೆ |
ತಾಗುತಿರ್ದುವು ಫಲಗಳೋಳಿಯು ಚಂಚರಿಯ ಶಿರವ ||
ಬಾಗುತಲಿ ಬಳುಕುತಲಿ ಕಂಗಳ | ಲಾಗ ಜಲಕಣವಿಳಿಯುತಿರೆ ಶಿವೆ |
ಶ್ರೀಗುರುವೆ ದೊರಕಯ್ಯ ನಂಬಿದೆ ನಿನ್ನ ಚರಣವನು || (ಎನುತ್ತ ಅಲೆದಳು)

---

## ಚಿನ್ನಯ. ಸು 1750.

ಈತನು ತಾರಕನಿರಂಜನವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ಸಹಜಾನಂದ ಸದ್ಗುರು ಲಿಂಗಾರ್ಯನ ಶಿಷ್ಯನು. ಇವನ ಕಾಲವು ಸುಮಾರು 1750 ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ.

### ತಾರಕನಿರಂಜನ.

ಇದು ಸಾಂಗತ್ಯರೂಪವಾಗಿದೆ, ಅಧ್ಯಾಯ 7, ಪದ 204. ಇದರಲ್ಲಿ ಭಕ್ತಿಯೋಗ, ಸಾಂಖ್ಯಯೋಗ, ತಾರಕಯೋಗ, ಅಮನಸ್ಕಯೋಗ, ನಿರ್ಗುಣಯೋಗ, ಮೊದಲಾದ ವಿಷಯಗಳು ಹೇಳಿವೆ. ಆರಂಭದಲ್ಲಿ ಶ್ರೀರಂಗಪಟ್ಟಣದ ರಂಗನಾಥ, ರಾಮಚಂದ್ರ, ಪಾರ್ವತಿ, ಗಣೇಶ ಇವರ ಸ್ತುತಿ ಇದೆ.

---

## ವೆಂಕಟದಾಸ. ಸು. 1750.

ಈತನು ಅಖಂಡಾನಂದಸ್ವರೂಪವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; ತನ್ನ ಗುರುಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾನೆ—ಗೋಪಾಲಾರ್ಯಯತಿ; ಶಿಷ್ಯ ನಾರಾಯಣಸ್ವಾಮಿ; ಶಿಷ್ಯ ವಾಸುದೇವಯತಿ; ಶಿಷ್ಯ ದಾಸಾರ್ಯ;

ಶಿಷ್ಯ ಕವಿ ವೆಂಕಟದಾಸ. ಇವನ ಕಾಲವು ಸುಮಾರು 1750 ಆಗಿರಬಹುದೆಂದು ಊಹಿಸುತ್ತೇವೆ. ಗ್ರಂಥವು ಗದ್ಯರೂಪವಾಗಿದೆ ; ಬ್ರಹ್ಮಸ್ವರೂಪವನ್ನು ವಿವರಿಸುತ್ತದೆ, ಅಲ್ಲಲ್ಲಿ ಶ್ರುತಿ, ಸ್ಮೃತಿ, ಭಗವದ್ಗೀತೆ ಇವು ಅನುವಾದಮಾಡಲ್ಪಟ್ಟಿವೆ. ಕೆಲವು ಕನ್ನಡಪದ್ಯಗಳೂ ಇವೆ.

---

## ಪೂರ್ಣಾನಂತರಂಗಯೋಗಿ. ಸು. 1750.

ಈತನು ನಾನಾರ್ಥಗುರುಬೋಧಸಾರವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ, "ಶ್ರೀಮತ್ಪರಾಶರಪರಿವ್ರಾಜಕಾಚಾರ್ಯ ವ್ಯಾಸಭಟ್ಟಾರಮುಕುಂದಗುರುವರ್ಯ ಪಾದಕಮಲಭೃಂಗಾಯುಮಾನ" ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ಕಾಲವು ಸುಮಾರು 1750 ಆಗಿರಬಹುದು. ಗ್ರಂಥವು ಗದ್ಯರೂಪವಾಗಿದೆ, ಅಧ್ಯಾಯ 11, ಅದ್ವೈತವೇದಾಂತವನ್ನು ಬೋಧಿಸುತ್ತದೆ.

---

## ರುದ್ರಮುನಿ. ಸು 1750

ಈತನು ಕಾಲಜ್ಞಾನವನ್ನು ಬರೆದಿದ್ದಾನೆ ಇವನು ವೀರಶೈವಕವಿ; ಸುಮಾರು 1750 ರಲ್ಲಿ ಇದ್ದಿರಬಹುದು. ಇವನ ಕಾಲಜ್ಞಾನವು ಪದಗಳ ರೂಪವಾಗಿದೆ, ಚೆನ್ನಬಸವನ ಕಾಲಜ್ಞಾನದ ಆಧಾರದಮೇಲೆ ರಚಿತವಾಗಿರುವಂತೆ ತಿಳಿಯುತ್ತದೆ

---

## ನಿರಂಜನಮೂರ್ತಿ. 1760.

ಈತನು ಕಂಚಿಯ ಪುರಾಣವನ್ನು ಬರೆದಿದ್ದಾನೆ. ಇವನು ವೀರಶೈವಕವಿ. ತನ್ನ ಗುರುಪರಂಪರೆಯಲ್ಲಿ ಹತ್ತು ಪಟ್ಟದವರ ಹೆಸರನ್ನು ಹೇಳಿ ತನ್ನ ಗುರುವಿನ ಹೆಸರನ್ನು ಹೇಳದೆ ಹತ್ತನೆಯ ಪಟ್ಟದ ವಿರೂಪಾಕ್ಷನ "ಗರ್ಭದಲಿ | ಬಂದ ಪಟ್ಟದ ಗುರುಗಳಿಗೆ ತಾ | ಹೊಂದಿ ಜನಿಸಿದ ಗುರುವಿನಂಘ್ರಿಗೆ | ಚಂದದಿಂದಲಿ ಯೊಜಗಿ ಬೇಡುವೆ ಮತಿಗೆ ಮಂಗಳವ" ಎಂದು ಹೇಳುತ್ತಾನೆ. ಈ ಗ್ರಂಥವನ್ನು ಶಕ 1681ನೆಯ ವಿಕ್ರಮವರ್ಷದಲ್ಲಿ, ಎಂದರೆ 1760 ರಲ್ಲಿ, ಬರೆದಂತೆ ಹೇಳುತ್ತಾನೆ ಪೂರ್ವಕವಿಗಳಲ್ಲಿ ವ್ಯಾಸ, ಮಲುಹಣ, ಹರಿಹರ, ರಾಘವಾಂಕ, ಮಯೂರ, ಕಾಳಿದಾಸ, ಶುಕರೂಪ (ಕುಮಾರವ್ಯಾಸ) ಇವರುಗಳನ್ನು ಸ್ಮರಿಸಿದ್ದಾನೆ.

ಇವನ ಗ್ರಂಥ

ಕಂಚಿಯ ಪುರಾಣ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಗತಿ 16, ಪದ್ಯ 887. ಇದರಲ್ಲಿ " ಕಂಚಿಯಪುರದ ಭೂಪಾಲ | ಮಾರಹರನನು ಭಜಿಸಿ ಭಕ್ತಿಲಿ | ಭೋರೆನಿಪ ಹೆಮ್ಮಟೆಯ ಕಳಿಸಿದ | ವೀರಚೋಳನ ಗೆಲಿದ " ಕಥೆ ಹೇಳಿದೆ.

---

## ಅಭಿನವ ಜನಾರ್ದನದಾಸ. ಸು. 1800.

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವಕವಿ; ಜಗನ್ನಾಥದಾಸನ (ಸು. 1775) ಶಿಷ್ಯನೆಂದು ಪ್ರತೀತಿ ಇದೆ. ಇವನ ಕಾಲವು ಸುಮಾರು 1800 ಆಗಿರಬಹುದು

---

## ಮುದ್ದುಸಂಗಮುನಿ. ಸು 1800.

ಈತನು ದೇವಾಂಗಮತಪ್ರಕಾಶಿಕೆಯನ್ನು ಬರೆದಿದ್ದಾನೆ. ಇವನು ದೇವಾಂಗದವನು; ಹಂಪೆಯ ಹೇಮಕೂಟಮಠದಲ್ಲಿ ಸ್ವಾಮಿಯಾಗಿದ್ದನು. ಇವನ ಕಾಲವು ಸುಮಾರು 1800 ಆಗಿರಬಹುದು. ಇವನ ಗ್ರಂಥವು ಷಟ್ಪದಿ, ಸೀಸಪದ್ಯ ಇವುಗಳನ್ನು ಒಳಕೊಂಡಿದೆ. ಇದಕ್ಕೆ ಕಾಡಸಿದ್ದಪ್ಪ ಎಂಬವನು ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ.

---

## ಶಂಕರಾನಂದಯೋಗಿ. ಸು. 1800.

ಈತನು ಕೈವಲ್ಯನವನೀತವನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ; " ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪರಮಗುರುಸಾರ್ವಭೌಮ ಶ್ರೀದತ್ತಾತ್ರೇಯ ಕರಕಮಲಸಂಜಾತ ಶ್ರೀಸದಾನಂದಗುರು ಮಹಲಿಂಗರಂಗ ಯತಿವರೇಣ್ಯನ " ಶಿಷ್ಯನು. ಅನುಭವಾಮೃತವನ್ನು ಬರೆದ ಮಹಲಿಂಗರಂಗನು (ಸು. 1675) ಸಹಜಾನಂದನ ಶಿಷ್ಯನೆಂದು ತಿಳಿವುದರಿಂದ ಈ ಮಹಲಿಂಗರಂಗನು ತದ್ಭಿನ್ನನಾಗಿರಬೇಕು. ಕವಿಯ ಕಾಲವು ಸುಮಾರು 1800 ಆಗಿರಬಹುದೆಂದು ಊಹಿಸುತ್ತೇವೆ. ಇವನ ಗ್ರಂಥವು ಹಾಡಿನರೂಪವಾಗಿದೆ; ಅಲ್ಲಲ್ಲಿ ಕಂದಗಳೂ ಇವೆ.

## ಚಂದ್ರಸಾಗರವರ್ಣಿ¹. 1810.

ಈತನು ಬಿಜ್ಜಣರಾಯಪುರಾಣವನ್ನೂ ಬರೆದಿದ್ದಾನೆ. ಇದು ಭಾಮಿನೀ ಷಟ್ಪದಿಯಲ್ಲಿ ಬರೆದಿದೆ; ಆಶ್ವಾಸ 8, ಪದ್ಯ 498. ಬಿಜ್ಜಣನು ಬಸವನ ಸಹೋದರಿಯಾದ ಗುಣವತಿಯನ್ನು ಮದುವೆಯಾಗಿ ಅವಳ ಮಗನನ್ನು ದೊರೆಯನ್ನಾಗಿ ಮಾಡುವಂತೆ ಮಂತ್ರಿ ಬಸವ ಮುಂತಾದವರಿಗೆ ಹೇಳಿ ಸತ್ತನು. ಬಸವನು ಜೈನರಿಗೆ ಮಾಡುತ್ತಿದ್ದ ಹಿಂಸೆಯನ್ನು ತಿಳಿದು ರಾಜಕುಮಾರನು ಯುದ್ಧದಲ್ಲಿ ಆತನನ್ನು ಜಯಿಸಿ ಜೈನರಿಗೆ ಸುಖವನ್ನು ಉಂಟುಮಾಡಿದನು — ಎಂಬುದೇ ಕಥಾಸಾರ.

ಗ್ರಂಥಾವತಾರದಲ್ಲಿ ಚಂದ್ರಪ್ರಭಸ್ತುತಿ ಇದೆ. ಆಮೇಲೆ ಕವಿ ಚತುರ್ವಿಂಶತಿ ಜಿನರು, ಪಂಚಪರಮೇಷ್ಠಿಗಳು, ಸರಸ್ವತಿ, ಗಣಧರರು, (ಸ್ವಗುರು) ಲಕ್ಷ್ಮೀಸೇನ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ :—

**ಗುಣವತಿ.**

ದೇವಸತಿ ಗಡ ಈಕೆ ಕಿನ್ನರ | ಭಾವೆ ಗಡ ಮತ್ತೀಕೆ ಖಗಕುಲ |
ದೇವಿ ಗಡ ಮೇಣೀಕೆ ಭಾಸ್ಕರನಂಗನೆಯೊ ಶಶಿಯು ||
ದೇವಿಯೋ ಸುರಜ್ಯೇಷ್ಠನಂಗನೆ । ಕಾವನರಸಿಯೊ ಹರನ ಗೌರಿಯೊ |
ಭಾವಜನ ಪಿತನೊಲವಿನಾಕೆಯೊ ಆರೊ ಇವಳೆಂದ ||

---

## ಘನಮಠದಾರ್ಯ. ಸು. 1830.

ಈತನು ಅನುಭವಪದಗಳನ್ನೂ ಕೃಷಿಜ್ಞಾನಪ್ರದೀಪಿಕೆಯನ್ನೂ ರಚಿಸಿರುವಂತೆ ತಿಳಿಯುತ್ತದೆ². ಇವನು ವೀರಶೈವಕವಿ. ಇವನ ಜನ್ಮಸ್ಥಾನವು ಬಳ್ಳಾರಿಜಿಲ್ಲೆಯಾದರೂ ಈತನು ತನ್ನ ಆಯುಷ್ಯವನ್ನು ಹುನುಗುಂದದಲ್ಲಿ ಕಳೆದನು. ಇವನು ದೊಡ್ಡ ಪಂಡಿತನೆಂದೂ ಇವನ ಪದಗಳು ಭಕ್ತಿರಸದಿಂದ ಕೂಡಿ ಸೊಗಸಾಗಿವೆಯೆಂದೂ ಹೇಳುತ್ತಾರೆ. ಈತನ ಕಾಲವು ಸುಮಾರು 1830 ಆಗಿರಬಹುದು.

---

## ಬಸವಲಿಂಗ. ಸು 1830.

ಇವನು ಶರಣುಬಸವರಗಳೆ, ಶರಣಬ ವರಗಳೆ ಕಂದ ಎಂಬ ಗ್ರಂಥಗಳನ್ನು

1 ಕುಟಿ 164   1 ಕರ್ಣಾಟಕಕವಿಚರಿತೆ (1915)

ಬರೆದಿದ್ದಾನೆ[1] ಈತನು ವೀರಶೈವಕವಿ. ಇವನ ಕಾಲವು ಸುಮಾರು 1830 ಆಗಿರಬಹುದೆಂದು ತೋರುತ್ತದೆ. ಮೊದಲನೆಯ ಗ್ರಂಥದಲ್ಲಿ 100 ಪದ್ಯಗಳಿವೆ: ಒಂದೊಂದೂ "ಶರಣಬಸವ" ಎಂದು ಮುಗಿಯುತ್ತದೆ. ಎರಡನೆಯದನ್ನು ಯತಿಪುರದ ಸಿದ್ಧೇಶನ ಅನುಗ್ರಹದಿಂದ ಬರೆದಂತೆ ಹೇಳುತ್ತಾನೆ. ಈ ಗ್ರಂಥದಲ್ಲಿ ಬಸವನ ಚರಿತ್ರವು ಹೇಳಿದೆ. ಇದರ ವಿಷಯವಾಗಿ ಕವಿ "ಪೂರ್ವದಲ್ಲಿ ಪಾಲ್ಕುರಿಕೆ ಸೋಮನಾಥನು ಬಸವ ಪುರಾಣವನ್ನು ತೆಲುಗಿನಲ್ಲಿ ಬರೆದನು, ಅದನ್ನು ಭೀಮಕವಿ ಕನ್ನಡಷಟ್ಪದಿಯಲ್ಲಿ ರಚಿಸಿದನು, ಶಂಕರಾರಾಧ್ಯನು ಸಂಸ್ಕೃತದಲ್ಲಿ ಬರೆದನು, ಬಾಲಚಂದ್ರನಗರದ ಶಿವಕವಿ ವಸ್ತುಕರೂಪವಾಗಿ ರಚಿಸಿದನು. ಅದನ್ನೇ ನಾನು ಸುಲಲಿತವಾಗಿ ಬರೆಯುತ್ತೇನೆ" ಎನ್ನುತ್ತಾನೆ.

---

## ಕೃಷ್ಣಗಿರಿ ಕೃಷ್ಣಯ್ಯ. ಸು. 1860.

ಈತನು ಲಕ್ಷ್ಮಣಾವಿಲಾಸವನ್ನು ಬರೆದಿದ್ದಾನೆ ಇವನು ಬ್ರಾಹ್ಮಣಕವಿ; ಗಯೋಪಾಖ್ಯಾನವನ್ನು ಬರೆದ ವೆಂಕಟರಮಣಯ್ಯನ[2] (1857) ತಮ್ಮನು. ಇವನ ಗ್ರಂಥವು ಯಕ್ಷಗಾನರೂಪವಾಗಿದೆ.

---

## ಭಾಗವತಕೃಷ್ಣಸ್ವಾಮಿ. 1869

ಈತನು ಜ್ಞಾನಯೋಗತರಂಗಿಣಿಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣಕವಿ. ಇವನ ತಂದೆ ಭಾಗವತ ನಾರಾಯಣಪ್ಪ. ಮುಮ್ಮಡಿ ಕೃಷ್ಣರಾಜನ ಮಹಿಷಿಗಳಾದ ರಮಾವಿಲಾಸ ಸನ್ನಿಧಾನದ ಚೆಲುವಾಜಮ್ಮಣ್ಣಿ ಸೀತಾವಿಲಾಸ ಸನ್ನಿಧಾನದ ದೇವಾಜಮ್ಮಣ್ಣಿ ಇವರಿಬ್ಬರೂ ತಮ್ಮ ಆಜ್ಞೆಯನ್ನು ಬಾಲನಾದ ಶ್ರೀಚಾಮರಾಜನ ಮೂಲಕವಾಗಿ ತಿಳಿಸಲು ಬಾಲ್ಯದಿಂದಲೂ ಆ ಸನ್ನಿಧಾನಗಳಲ್ಲಿಯೇ ಪೋಷಿತನಾದ ತಾನು ಈ ಗ್ರಂಥವನ್ನು 1869 ರಲ್ಲಿ ಬರೆದಂತೆ ಕವಿ ಸ್ವಹೇಳುತ್ತಾನೆ ಗ್ರಂಥವು ವಾಸಿಷ್ಠರಾಮಾಯಣದ ಟೀಕಾರೂಪವಾಗಿದೆ.

---

1 Kittel "Nagavarma's Prosody", LXXX.
2 ಪುಟ 205.

# APPENDIX II.

## ಪರಿಶಿಷ್ಟ II.

## ಕವಿಗಳು ಗೊತ್ತಿಲ್ಲದ ಕೆಲವು ಗ್ರಂಥಗಳು.

### ತ್ರೈಲೋಕ್ಯರಕ್ಷಾಮಣಿಸ್ತೋತ್ರ (ವೃತ್ತ 12). ಸು. 1300.

ಎನಿತಾನುಂ ಭವಮುಂ ಚತುರ್ಗತಿಗಳೊಳ್ ದುಃಖಂಗಳಂ ಕಂಡೆನುಂ |
ಡೆನವರ್ಕಳ್ಕಿದೆನುಳ್ಕಿದೆಂ ಜಳಿತೆನಿಂ ಮೆಯ್ಯೊಡ್ಡಲಮ್ಮೆಂ ನಿರಂ ||
ಜನ ಸಂಸಾರಸಮುದ್ರದಿಂ ತೆಗೆದುಕೊಂಡೆನ್ನಂ ಜಿನಸ್ವಾಮಿ ಮು |
ಕ್ತಿನಿವಾಸಕ್ಕೆ ಮಮತ್ವದಿಂ ಕಳಿಪು ನೀಂ ತ್ರೈಲೋಕ್ಯರಕ್ಷಾಮಣೀ ||
ಶ್ರೀಯುಂ ಜವ್ವನಮುಂ ವಿಳಾಸದೊದವುಂ ಸೌಭಾಗ್ಯಮುಂ ವೈಮೆಯುಂ |
ಮಾಯಂ ಮಂಜಿನಪುಂಜಮಿಂದ್ರಧನು ವಿದ್ಯುಲ್ಲೇಖೆ ಸಂಧ್ಯಾರುಣಾ ||
ಶ್ರೀಯೆಂಬಂತಿರೆ ನಿಷ್ಠೆಯಾಗಿರವಿವರ್ಕಾರ್ಗಂ ಪ್ರಾರ್ಥಿಸೆಂ ಶಾಶ್ವತ |
ಶ್ರೀಯಂ ದೇವರದೇವ ಕೂರ್ತುದಯೆಗೆಯ್ ತ್ರೈಲೋಕ್ಯರಕ್ಷಾಮಣೀ ||

### ಜಿನೇಶ್ವರಾಷ್ಟಕ. ಸು. 1300

ಪ್ರತಿಪದ್ಯವೂ ಜಿನೇಶ್ವರ ಎಂದು ಮುಗಿಯುತ್ತದೆ.

ಶ್ರೀನಿಧಿ ನೀನೆ ಸೌಖ್ಯನಿಧಿ ನೀನೆ ಯಶೋನಿಧಿ ನೀನೆ ವಿಶ್ವವಿ |
ದ್ಯಾನಿಧಿ ನೀನೆ ತತ್ವನಿಧಿ ನೀನೆ ದಯಾನಿಧಿ ನೀನೆ ಸದ್ಗುಣಾಂ |
ಭೋನಿಧಿ ನೀನೆ ಧರ್ಮನಿಧಿ ನೀನೆ ಸುಧಾಂಬುಧಿ ನೀನೆ ಮುಕ್ತಿಲ
ಕ್ಷ್ಮೀನಿಧಿ ನೀನೆ ಭವ್ಯನಿಧಿ ನೀನೆ ಜಗತ್ರಯದೊಳ್ ಜಿನೇಶ್ವರಾ ||

### ಗುಮ್ಮಟಸ್ತುತಿ (ಪದ್ಯ 6). ಸು. 1300

ಕಂಡೆಂ ಕಣ್ಗಳ ಪುಣ್ಯಪುಂಜಮನೆ ಕಾಣ್ಬಂತೀಗಳಾನಂದದಿಂ |
ಕಂಡೆಂ ಕಣ್ಗಳ ಕೌತುಕಂ ಕೊನರುತಿರ್ಪಂತೀಗಳೊಂದಲ್ಕೆಯಿಂ ||

ಕಂಡೆಂ ಕಣ್ಬಡೆದಿರ್ದುದರ್ಕೆ ಫಲಮೆಂಬಂತೀಗಳೊಂದೇಶೆ ಯಿಂ |
ಕಂಡೆಂ ಕಣ್ ದಣಿವಂತು ಸಂತಸದೊಳಾಂ ಶ್ರೀಗುಮ್ಮಟಾಧೀಶನಂ ||

**ಜಿನಸ್ತುತಿ** (ಪದ್ಯ 12). ಸು. 1300.

ಅಱಿಯದ ದೇಶದೊಳ್ ತೊಳಲಿ ತಳ್ತ ಮಹಾವಿಪಿನಾಂಧಕಾರದೊಳ್ |
ಸಱಿಗಳ ನಿರ್ಝರೋದಕದ ಗಹ್ವರದೊಳ್ ಭಯಮಾದ ಬೆಟ್ಟದೊಳ್ ||
ತೆಱಪಱಿದೊಲ್ದು ನಿಂದು ಮಿಗೆ ನಿರ್ಮಲಪಂಚಪದಾಕ್ಷರಂಗಳಂ |
ಮಱೆಯದೆ ಭಾವಿಪೊಂದು ಪರಮೋತ್ಸವಸಂಪದಮೆಂದು ಸಾರ್ಗುವೋ ||

**ಧ್ಯಾನಲಕ್ಷಣ** (ಕಂದ 5) ಸು. 1300.

ತಾರಗೆಯುಂ ಕ್ಷೀರಾಬ್ಧಿಯು | ವಾರಿಯೊಳಿರದೊಱಸಿ ಕರ್ಚಿ ಕಳೆದವ್ರೊಲೆಸೆವಾ |
ಕಾರದ ಪಂಚಪದಂಗಳ | ನಾರಯ್ದತಿಶುದ್ಧಮನದೊಳಿರಿಸೆ ಪದಸ್ಥಂ ||

**ಪಂಚಪದಾಷ್ಟಕ**[1] (ಕಂದ 10) ಸು. 1300.

ಶ್ರೀಕರಮಭೀಷ್ಟಸಕಲಸು | ಖಾಕರಮಪವರ್ಗಕಾರಣಂ ಭವಹರಣಂ |
ಲೋಕಹಿತಂ ಮನ್ಮನದೊಳ | ಗೇಕಾಗ್ರದೆ ನಿಲ್ಕೆ ನಿರುಪಮಂ ಪಂಚಪದಂ ||
ಸಾರಂಗಳ್ ಪಂಚನಮ | ಸ್ಕಾರಂಗಳ್ ಸಕಲಭವ್ಯಜನಹೃದಯಾಲಂ |
ಕಾರಂಗಳ್ ಶ್ರುತಲಕ್ಷ್ಮೀ | ಹಾರಂಗಳ್ ನೆನೆವವರ್ಗೆ ಸುಖಸಾರಂಗಳ್ ||

**ಯೋಗಾಮೃತ** (ಪದ್ಯ 110) ಸು. 1300.

ಸಮಚಿತ್ತಮೆ ಪರಮಪದಂ | ಸಮಚಿತ್ತಮೆ ಸಕಳಸುಖದ ನಿಳಯಂ ಮತ್ತಂ |
ಸಮಚಿತ್ತಮೆ ಮುಕ್ತಿಪದಂ | ಸಮಚಿತ್ತದೆ ಕೂಡಿ ನೆಗಱ್ದ ತಪಮದು ಸಫಲಂ ||

1. 1ನೆಯ ಸಂಪುಟದ 304ನೆಯ ಪುಟವನ್ನು ನೋಡಿ.

ಅಱಿಯದವರಱಿವರೊಳ್ ತಾ | ನಱಿವುದು ಪರಮಾತ್ಮಗುಣಮನಱಿಎಂ ಕರ್ಮಂ |
ಪಱಿಪಡುಗುಮಱಿಯದಿರ್ದೊಡೆ | ನೆಱೆಯುಟ್ಟ ತಗುಳ್ದು ಸುತ್ತುತಿರ್ಕುಂ ಕರ್ಮಂ ||

ಕಾನಲ ಬಾನಲ ನೀರಂ | ಮಾನೊಲ್ಲ್ಗಂ ರಾಜಹಂಸನೊಲ್ಗುಮೆ ಮಿಥ್ಯಾ |
ಜ್ಞಾನಿ ಭವಸುಖಮನೊಲ್ವಂ|ತೇನೊಲ್ಗುಮೆ ಪರಮಪಾವನ ಜ್ಞಾನಪರಂ ||

## ವೈದ್ಯಶಾಸ್ತ್ರ. ಸು. 1300.

ನೇಱಿಲ ಬೀಜಮಂ ಮೊಲೆವಾಲಿನಲ್ಲಿ ತೇದು ಕಣ್ಗೆ ಎಚ್ಚೆ ಕಣ್ಣಬೇನೆ ಮಾಣ್ಗುಂ.

ಆರುಳಿಮೊಗರು ಅರಗು ಇವನರೆದು ಹುಳಿಮಜ್ಜಿಗೆಯಲ್ಲಿ ಕದಡಿ ಕುಡಿಯೆ ಸೂತಕಂ ನಿಲ್ಲುವುದು.

## ಜ್ವಾಲಿನೀಕಲ್ಪಾದಿಸಂಗ್ರಹ. ಸು. 1300.

ಗದ್ಯ ಪದ್ಯಾತ್ಮಕವಾಗಿದೆ.

ಕರಿಯೆಳ್ಳು, ಕರಿಯ ಕಡಲೆ, ಕರಿಯ ಕಾಕಿ, ಕರಿಯುಡಕೆ ಇನಿತುಮಂ ಸಮಂಗೊಂಡು ಎಳ್ಳೆಣ್ಣೆಯೊಳರೆದು ಮೆಯ್ಯಂ ಹೂಸೆ ಮೆಯ್ಯ ರೋಗಮಂ ಮೊದಲಾಗಿ ಏನುಂ ಬೇಯದು.

ಕನಕದ ಬೇರು ಗಿರಿಕರ್ಣಿಕೆಯ ಬೇರು ಸಹ ಕಪಿಲೆಯಾಪಿನ ಬೆಣ್ಣೆಯಿಂದರೆದು ಮೆಯ್ಯ ಮೊಗಮಂ ಪೂಸಿ ನೀರೊಳ್ ಪೊಕ್ಕು ಕುಳ್ಳಿರಲು ಮನೆಯೊಳಿರ್ದಂತಿರ್ಕುಂ.

ಕಡಲೆಯ ಬೇರಂ ಸಿದ್ಧದಿನದಲ್ಲಿ ತಂದು ಮಂಚದಲ್ಲಿ ಕಟ್ಟಲು ತಿಗುಣೆ ಹೊದ್ದಲಮ್ಮದು.

ಕರಮಿದು ಚೋದ್ಯಂ ತೆಂಗಿನ|ತಿರುಳಂ ಪಿಪ್ಪಲಿಯ ನೀರೊಳರೆದದನಿಂಬಾ |
ಗಿರೆ ಪಿಱಿದು ತಳಿಯೆ ದುಗ್ಧಂ | ಸ್ವರೂಪಮಂ ತಳೆದು ಕರಮೆ ರುಚಿಯಾಗಿರ್ಕುಂ ||

## ಕರ್ಮಪ್ರಕೃತಿ. ಸು. 1350.

ಕರ್ಮದ ಸ್ವರೂಪವನ್ನು ಹೇಳುವ ಗದ್ಯಗ್ರಂಥ.

ಕಿಚ್ಚಿಂದಂ ಬೆಂದೆರಡಾಗದ ನೀರಿಂದಂ ನನೆದೆರಡಾಗದ ಕಸಱಿಂದಂ ಕೊಳೆ

ದೆರಡಾಗದ ವಸ್ತ್ರಾದಿಗಳಿಂದೊಡನೆರಡಾಗದ ಕಡುಕಿಱಿದಪ್ಪ ಪುದ್ಗಲಮಂ ಪರಮಾಣುವೆಂಬುದು.

ಮೂಲಪ್ರಕೃತಿ ಜ್ಞಾನಾವರಣೀಯ ದರ್ಶನಾವರಣೀಯ ವೇದನೀಯ ಮೋಹನೀಯಾಯುಷ್ಯ ನಾಮಗೋತ್ರಾಂತರಾಯ ಭೇದದಿಂದೆಂಟುತೆಱಂ ಅವಱೊಳ್ ಜ್ಞಾನಾವರಣೀಯಕರ್ಮ ಮಱಿಯಲೀಯದು ಆದಿತ್ಯಂಗೆ ವಱೆಯಾದ ಮೇಘದಂತೆ ದರ್ಶನಾವರಣೀಯಕರ್ಮಂ ಕಾಣಲೀಯದು ಸೊಡರಂ ಮುಚ್ಚಿದ ಕುಂಭದಂತೆ ವೇದನೀಯಕರ್ಮಂ ಸುಖದುಃಖಂಗಳಂ ಮಾಳ್ಪುದು ಖಡ್ಗಧಾರೆಯ ಜೇನೆಯ್ಯಂ ನಕ್ಕುವಂತೆ ಮೋಹನೀಯಕರ್ಮಂ ಮರುಳ್ಮಾಳ್ಪುದು ಮದ್ಯದ ಸೊರ್ಕಿನಂತೆ. ಆಯುಷ್ಯಕರ್ಮಂ ಶರೀರಮಂ ಪಿಡಿದಿರ್ಪುದು ಸಂಕಲೆಯಂತೆ. ನಾಮಕರ್ಮಂ ಪೆಸರ್ಗಳಂ ಮಾಳ್ಪುದು ಚಿತ್ರಕನಂತೆ ಗೋತ್ರಕರ್ಮಂ ಕುಲಂಗಳಂ ಮಾಳ್ಪುದು ಕುಂಭಕಾರನಂತೆ. ಅಂತರಾಯಕರ್ಮಂ ವಿಘ್ನಮಂ ಮಾಳ್ಪುದು ಭಂಡಾರಿಯಂತೆ.

## ದ್ರವ್ಯಸಂಗ್ರಹಾಗಮಟೀಕೆ. ಸು 1350.

ಶ್ರೀಮನ್ನೇಮಿಚಂದ್ರಸಿದ್ಧಾಂತವೇದಿಗಳ್ ಸ್ವಾತ್ಮಾನುಭವಜನಿತಾನಶ್ವರಾನಂತ ಸುಖಸುಧಾರಸಪಿಪಾಸಿತರಪ್ಪ ಭವ್ಯಜನಂಗಳ್ಗೆ ತತ್ಸುಖಪ್ರಾಪ್ತಿಕಾರಣಭೂತ ಪಂಚಾಸ್ತಿಕಾಯ ಷಡ್ದ್ರವ್ಯ ಸಪ್ತತತ್ವ ನವಪದಾರ್ಥ ಸಂಸಾರಮೋಕ್ಷಕಾರಣ ಪರಿಜ್ಞಾನಾರ್ಥಮಾಗಿ ಸಕಲಾಗಮಂಗಳ ಸಾರಮಂ ಸಂಗ್ರಹಿಸಿ ದ್ರವ್ಯಸಂಗ್ರಹಮಂ ಪೇಳುತ್ತದಱಾದಿಯಲ್ಲಿ ನಿರ್ವಿಘ್ನತಾದಿ ಚತುರ್ವಿಧಫಲಮನಪೇಕ್ಷಿಸಿ ಇಷ್ಟದೇವತಾನಮಸ್ಕಾರಮಂ ಮಾಡಿದಪರ್

## ತ್ರಿಭುವನಕೋಶ (ಗದ್ಯ) ಸು. 1400.

ಗಾಥೆಗಳೂ ಶ್ಲೋಕಗಳೂ ಅನುವಾದಮಾಡಲ್ಪಟ್ಟಿವೆ. ಆದ್ಯಂತಗಳಲ್ಲಿ ಈ ಕಂದವೂ ಗದ್ಯವೂ ಇವೆ—

ತ್ರಿಭುವನಚೂಡಾಮಣಿಜಿನ।ಶುಭಪಾದಪಯೋಜಯುಗಳಮಂ ವಂದಿಸಿ ಮು।
ತ್ತಱಿಂ ಜಗದ್ಧಿತವನಿಸಿದ। ತ್ರಿಭುವನಕೋಶಸ್ವರೂಪಮಂ ವಿರಚಿಸುವೆಂ ॥

ಇಂತೀ ಶ್ರೀಮದರ್ಹತ್ಪರಮೇಶ್ವರಪ್ರಣೀತ ಪರಮಾಗಮಸಾರಾಮೃತಾಬ್ಧಿಯೊಳೊಗೆದ ತ್ರಿಭುವನಕೋಶಮೆಂಬ ಗ್ರಂಥಂ ಸಮಾಪ್ತಂ.

## ಶಬ್ದಸಾರ. ಸು. 1400.

ಗದ್ಯರೂಪವಾದ ಕರ್ಣಾಟಕನಿಘಂಟು, 676 ವಾಕ್ಯಗಳಿವೆ.

ಬಸ್ನವಗೆಯುಂ, ಎಂಟಡಿವಾಜಂ, ಬೀರಂ, ಬಿಸುಗಣ್ಣಾಣುಗಂ, ಅರೆವಾಣಿಸವಗೆಯುಂ— ಈ 5 ವೀರಭದ್ರಂಗೆ ಪೆಸರ್.

ಕಂದೆಂದುಂ ಕಱೆಯೆಂದುಂ ಕಳಂಕಂ ಬಸ್ತುಳಸೆಂದು ಫೇನಂ. ಕಾಚಿಬ್ಬರವೆಂದು ಕಾಡ ಹೊನಲ್

## ಕಬ್ಬಿಗನ ಕೈಪಿಡಿ. ಸು 1400.

ಹಳಗನ್ನಡಪದಗಳ ಅರ್ಥವನ್ನು ಕೊಡುವ ನಿಘಂಟು, ಕಂದವೃತ್ತಗಳಲ್ಲಿ ಬರೆದಿದೆ, ಪದ್ಯ ೧೧.

ಪಂಡಿತನಕ್ಕಂ ಕೀರನೊಳೆ ತಾರಗೆವಟ್ಟೆಯನಕ್ಕೆ ಪ್ರಸ್ತರಂ |
ಕಂಡವೆನಲ್ಕೆ ತುಂಡಿನೊಳೆ ಬಸ್ತಾವುರಂ ಬಿಗೆ ವರ್ಣಪೂರದೊಳ್ ||
ತಂಪವೆನಲ್ಕೆ ಹಿಂಡಿನೊಳೆ ದೂದವಿ ಕುಂಟಣಿಯೊಳ್ ಬೆಡಂಗೆ ಪೆಣ್ |
ದಂಡಿಕನಾಮಧೇಯದೊಳೆ ಕನ್ನವುರಂ ಸಲೆ ಕರ್ಣಪೂರದೊಳ್ ||
ಪುಱ್ಗಿಯೆನಲ್ ಮುದ್ಗಾನ್ನಂ | ಮಱ್ಗಿದನೆನೆ ಪಱ್ದನಱ್ದದಂ ಕಟ್ಟನೊಳೇಂ |
ಮೊಱ್ಗಿದನೆನೆ ಪೊದವಟ್ಟನೊ | ಉಱ್ಗಿದನೆನೆ ಪ್ರೀತಿವಟ್ಟನೊಳ್ ತಳೆದಿರ್ದಂ ||

## ಚಿಕ್ಕ ಶ್ರಾವಕಾಚಾರ. ಸು. 1400.

ಜೈನಶ್ರಾವಕರಿಗೆ ಉಪದೇಶರೂಪವಾದ ಗ್ರಂಥ, ಕಂದವೃತ್ತಗಳು 1?4. ಕೆಲವು ಪದ್ಯಗಳು ಅನ್ಯಗ್ರಂಥಗಳಿಂದ ಅನುವಾದಮಾಡಲ್ಪಟ್ಟಿವೆ.

ಹೆಣ್ಣಿಂಗಂ ಪೊನ್ನಿಂಗಂ ಮಣ್ಣಿಂಗಂ ಕಾಂಕ್ಷೆಯಿಂದಮೀಜಗದೆ ಲೋಕಂ |
ಬಣ್ಣಿಸೆ ಸಂಚಳನಾಗದೆ | ತಿಣ್ಣಂ ನಡೆವವನ ತಾಂ ತಪೋಧನನಕ್ಕುಂ ||
ಪೆಂಡಿರ್ ತಾಯು ಸಮಾನಂ | ಪೆಂಡದಸಮನರ್ಥವೆಂದು ತೊಱೆದ ಬಱಿಕ್ಕ |
ಪೆಂಡಿಗರ್ಗರ್ಥಕ್ಕಾಟಿಪ | ಭಂಡಂ ಸ್ವರ್ಗಾಪವರ್ಗಮಂ ಪಡೆದಪನೇ ||

ಮುಂದೆಯುಂ ಕಲಿಕಾಲ ಪ್ರಾಕಲಿ ಸಂಪೆಯುಂಬನೊಳಗಿಪರ್ |
ಸಂದ ಜ್ಞಾನದ ಯೋಗಿಯುಂ ಚಲಚಿತ್ತವೃತ್ತಿಯನೆಯ್ದಿಪರ್ ||
ನಿಂದೆಪೊರ್ದದವಗೇ ತರ್ಕ್ಕಣದಿಂದೆ ಸಂದೆಯಪೊರ್ದಿಪರ್ |
ಚಂದಿರಾನನೆಯುಕ್ತ್ರೀಂತೆರಡುಕ್ಕನೋಪಳಿ ಶಾರದಾಂ ||
ಮಿಸುನಿಗೆ ಕಂಪು ರತ್ನತತಿಗಿಂಪು ಸುರೂಪಕೆ ಸೊಂಪು ಕೋಮಲ |
ಪ್ರಸರಕೆ ನುಣ್ಪು ಸದ್ರಸಕೆ ತಣ್ಪು ಮಸತ್ವಕೆ ಗುಣ್ಪು ನಾಡ್ಪರಾ ||
ಬೆಸಲತಿರವ್ಯಮಾದನ್ನೊಲನಂತಗುಣಾನ್ವಿತಮಾದ ಜೀವನ |
ಕ್ಕಸಿಯುಳ ಬೇಟನೊಂದು ದೊರೆಕೊಂಡೊಡೆ ಸಂಪದಮಾಗಿ ತೋಱುಗುಂ ||

## ಲೋಕಸ್ವರೂಪ (ಗದ್ಯ). ಸು. 1400.

ಪರಮಜಿನಚರಣಕಮಳ | ಸ್ಮರಣಮುದದಿಂದೆಱಗಿ ಭವ್ಯಜನಹಿತಕರಮಂ |
ಪರಮುಕ್ತಿಕಾಂಕ್ಷಿಯಿಂದಂ | ಸುರುಚಿರಲೋಕಸ್ವರೂಪಮಂ ಪ್ರಕಟಿಸುವೆಂ ||

ದುಷ್ಷಮಸುಷಮಮೆಂಬ ಮೂಱನೆಯ ಕಾಲದೊಳ್ ಕರ್ಮಭೂಮಿ ವ್ಯವಸ್ಥೆಯುಕ್ಕುಂ. ಅಲ್ಲಿ ಮೊದಲ ತೀರ್ಥಕರ ವೃಷಭನಾಥಂ ನಾಭಿರಾಜಂಗಂ ಮರುದೇವಿಗಂ ತ್ರಿಜ್ಞಾನಧರಂ ಪುಟ್ಟಿದಪ್ಪನೆಂದಿಂದ್ರಾಸನಕಂಪದಿಂದಱಿದು ಶ್ರೀ ಹ್ರೀಧೃತಿಕೀರ್ತಿಬುದ್ಧಿಲಕ್ಷ್ಮಿ ಮೊದಲಾಗೊಡೆಯ ದೇವಿಯರಂ ಸ್ವಾಮಿಯ ತಾಯ್ಗೆ ಬೆಸಕೆಯ್ಯಲೆಂದು ಪೇೞ್ದಟ್ಟವರ್ ಬಂದು ಗರ್ಭಶೋಧನೆಯಂ ಮಾಡಿದ ನಂತರಂ ದೇವಿ ಶುಭಷೋಡಶಸ್ವಪ್ನಂಗಳಂ ಕಂಡಳ್ ಬೞಿಕ್ಕಂ ಸ್ವಾಮಿ ಸ್ವರ್ಗದಿಂ ಗರ್ಭಕ್ಕವತರಿಸೆಯುದನಿಂದ್ರನಱಿದು ಧನದಂಗೆ ನಿರೂಪಮಂ ಕುಡಲ್ ಪಿಂದೆಯಾಱು ತಿಂಗಳ್ ಮುಂದೆ ನವಮಾಸಪರ್ಯ್ಯಂತಂ ಮೂಱೂವರೆಕೋಟಿದ್ರವ್ಯಮಂ ಸುರಿವುದಱಿಂ ಹಿರಣ್ಯಗರ್ಭನೆಂಬ ಪೆಸರ್ ಭಟ್ಟಾರಕಂಗನ್ವರ್ಥಮಾದುದು. ಶುಭ ದಿನಶುಭಯೋಗ ಶುಭಮುಹೂರ್ತದೊಳು ಪುಟ್ಟಲೊಡಂ ಸೌಧರ್ಮೇಶಾನ ದೇವರ್ಕಳ್ ತಂತಮ್ಮ ವಿಭೂತಿಯಿಂ ಬಂದು ತಾಯಮುಂದೆ ಮಾಯಾಶಿಶುವ ನಿರಿಸಿ ಶಿಶುನಾಥನಂ ಮಂದರದ ಪಾಂಡುಶಿಲಾತಳದಮೇಲೆ ಪೂರ್ವಾಭಿಮುಖನಾಗಿರಿಸಿ ಕ್ಷೀರಾಬ್ಧಿಯ ನೀರಂ ತಂದಭಿಷೇಕಂಮಾಡಿ ಅರ್ಚಿಸಿಕೊಂಡು ಬಂದು ತಾಯ ಮುಂದಣ ಮಾಯಾಶಿಶುವಂ ತೆಗೆದು ಶಿಶುವನಿರಿಸಿ ಪೊಱಮಟ್ಟು ಪೋದರ್

ಶಿವಾಕ್ಷರಮಾಲೆ. (ಕಂದ 41) ಸು. 1400.

ಶಾಶ್ವತನಂತವಿರಾಜ | ದ್ವಿವರ್ಣಮನಾಂತು ಹಸ್ತದೊಳ್ ಬಾಜಿಸೆ ನೀಂ |
ದೇವಗಣಂಗಳ್ ಮನದೊಳ್ | ಭಾವಿಸಿ ವಿಸ್ಮಯಮನಾಂತರವನಿವಿನೂತಾ ||
ಭವದೂರನಾಗಿಯುಂ ನೀಂ | ಭವನಾದಪೆ ನಿನ್ನ ಭಕ್ತಜನತತಿಗೆಲ್ಲಂ |
ಭವಮಂ ಪಳಿದಿಟ್ಟು ಮಹೋ | ದ್ಭವಪದಮಂ ಕೊಟ್ಟು ಚರಣನತಸುತ್ರಾಮಾ ||

ಹರ್ಯಕ್ಷರಮಾಲೆ (ಕಂದ 49). ಸು. 1400.

ಪವನಹತಿಯಿಂದೆ ನೀರದ | ನಿವಹಂ ಪರಿವಂತೆ ದನುಜಬಲಮದು ರಾಮಾ |
ಹವದೊಳ್ ಪರೆದುದು ಪರನೃಪ | ಯುವತಿಗೆ ಕಣ್ಣೀರ್ಪ್ರವರ್ಗ್ಗ ಒಲವು ವಗುಂಫಂ ||
ತೊಬ್ಬಿನ ದನುಜನ ಬಿಲ್ಲಂ | ತಿಬ್ಬಂ ಮುರಿದಸುವನಂತಕಂಗಿತ್ತು ಸುರ |
ಗರ್ವಬ್ಬಿಸೆಸಗಿದನುದಾರಂ | ನಿಬ್ಬರದಿಂ ರಾಮದೇವಗಿವನೇನುಜಂ ? ||

ಶಿವಪ್ರಾರ್ಥನಾಶತಕ. ಸು. 1400.

ನೋಡಿ ನಲಿನಲಿದು ಭಕ್ತಿಯೊ | ಳಾಡಿ ಮನಂಬೆರಸು ಪಾಡಿ ಮೃಡನೊಳ್ ಚಿತ್ತಂ |
ಕೂಡಿ ಸುಖಜಲಧಿಯೊಳ್ ಮುಳು | ಗಾಡಿ ಕರಂ ಲೀಲೆಯಿಂದಮೆಂದಿರ್ಪೆನೋ ||
ಹರನ ದಯಾಮೃತವರ್ಷದ | ಸರಿವೊನಲಿಂ ನಾಂದುನಾಂದು ತನುಮನವುಂಬು |
ವರೆ ದಣಿದು ಭಕ್ತಿಬೀಜಾಂ | ಕುರಮುಮ ತಾನೆಂತು ಬೆಳೆದು ಫಲಮಾದಪುದೋ ||
ಬಾಲಂ ಜನನಿಯುಗಳ್ದ್ಗೆ | ನಾಲಗೆಗಿಚ್ಚಿತ್ತಿಜದಿನಿರುಳುಂ ಪಗಲುಂ |
ನೀಲಗ್ರೀವನ ಪದಯುಗ | ದೋಲಗದೊಳ್ ಬಾಲನಂತೆ ಮಱುಗಲ್ವೇಡಾ ||

ಶಾಂತಿಜಿನಾಷ್ಟಕ. ಸು. 1400.

ಫುಲ್ಲಶರನಿಕ್ಷುಚಾಪಮ | ನುಲ್ಲಂಘಿಸಿ ಕಳೆದು ಮೋಹಮಲ್ಲನ ಬೀರಂ |
ನಿಲ್ಲದೆ ಪಶ್ಚಾಧಿಪಾಡಿದ | ಮಲ್ಲ ಧನೀಂ ಕರುಣಿಸೆನಗೆ ಶಾಂತೀಶ್ವರಂದಾ ||

## ಪರಮಾಗಮಸಾರ. ಸು. 1400.

ಗದ್ಯರೂಪವಾಗಿದೆ. ಆರಂಭದಲ್ಲಿ ಮಾತ್ರ ವರ್ಧಮಾನಸ್ತುತಿರೂಪವಾದ ಒಂದು ಕಂದವಿದೆ.

ಶ್ರೀಯೆಂಬನಂತವಿದ್ಯಾ | ಶ್ರೀಯೆಂಬೀಯೆರಡು ಸೌಖ್ಯಹೇತುಗಳದಱಿಂ |
ಶ್ರೀಯುಮನನಂತವಿದ್ಯಾ|ಶ್ರೀಯುಮನೆಮಗೀಗೆ ವರ್ಧಮಾನಜಿನೇಂದ್ರಂ ||

ಆಗಮಾಭ್ಯಾಸಮಿಲ್ಲದ ಭವ್ಯಜನಂಗಳ್ಗೆ ಸಾಧುಸಂಬೋಧನಾರ್ಥಂ ಪರಮಾಗಮಸಾರಮನತಿಸಂಕ್ಷೇಪದಿಂ ಪೇೞ್ವೆಪೆಂ—ಇತ್ಯಾದಿ

## ವಿರೂಪಾಕ್ಷಶತಕ. ಸು. 1410.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ, ಪದ್ಯ 136 ಪದ್ಯಗಳು ಪ್ರಾಯಿಕವಾಗಿ "ವಿರೂಪಾಕ್ಷ" ಎಂದು ಮುಗಿಯುತ್ತವೆ. ಗ್ರಂಥವು ವಿಜಯನಗರದ ರಾಜನಾದ 1ನೆಯ ದೇವರಾಯನ (1406—1416) ಕಾಲದಲ್ಲಿ ಹುಟ್ಟಿದೆ. ಇವನ ಪರಂಪರೆ ಹೀಗೆ ಹೇಳಿದೆ — ಸಂಗಮ, ಮಗ ಹರಿಹರ, ತಮ್ಮ ಬುಕ್ಕ, ಮಗ ಹರಿಹರ, ತಮ್ಮ ವಿಕ್ರಮರಾಯ, ಮಗ ಬುಕ್ಕ, ಮಗ ದೇವರಾಯ. "ವಿದ್ಯಾನಗರವನಾಳುವ ದೇವರಾಯಂಗಾಯುವಿತ್ತು ಸಲಹು" ಎಂದು ಕವಿ ಹಲವು ಕಡೆ ಹೇಳುತ್ತಾನೆ. ಅಚ್ಚಾಗಿರುವ ಪರಂಪರೆಗೂ ಇಲ್ಲಿ ಕೊಟ್ಟಿರುವ ಪರಂಪರೆಗೂ ಸ್ವಲ್ಪ ವ್ಯತ್ಯಾಸವಿದೆ.

ಬಿಸುಜಡೆಯು ಸಿಡಿದಲೆಯು ಗಂಗೆಯು|ಕಿಡಿ ಸುರಿವ ನಡುನೊಸಲ ದೃಷ್ಟಿಯು|
ಬಿಡುವ ಕುಂಡಲಗಿವಿಯು ನಾಸಾಪುಟದ ಚೆಲುವಿಕೆಯು ||
ಸಿಡಿವ ದಂತಪಙ್ಕ್ತಿಯು ಕದಪುಗ | ಳೆಸೆಯು ಕಾಂತಿಯು ಮುಖದ ಮಾಟ ಬಗ
ದೊಡೆಯು ನೀನೆನ್ನೊಡನೆ ನುಡಿಯ್ವ ಶ್ರೀವಿರೂಪಾಕ್ಷ ||
ಉಸಿ ಮರುಳ್ಗಾರ ಕಂಡು ದುಃಖಿಸಿ | ಕೆಡುವೆ ಕೆಡುವರ ಕಂಡು ಸಂತಸ|
ಬಡುವೆನಕಟಿನ್ನಂತೆ ನೋಡೆಸಿದೇನು ದುಷ್ಕೃತವೋ ||
ಮೃಡನೆ ಕೇಳೆನ್ನೊಡಲ ಕ್ಷುದ್ರವ | ಬಿಡಿಸಿ ಪರರಿಗೆ ಚಿಂತಿಸುವ ನಿ |
ಮ್ಮಡಿಗಳನು ಬಿಡದಂತೆ ಮಾಡು ಮೃಡಾಣಿಯೊಡನಾಡಿ ||

## ರಾಮನಾಥಶತಕ. ಸು. 1500.

ವೃತ್ತ 101 ; ಪ್ರತಿವೃತ್ತವೂ ಪ್ರಾಯಿಕವಾಗಿ "ಗುರುಶಾಂತರಾಮನೇ" ಎಂದು ಮುಗಿಯುತ್ತದೆ. ಆರಂಭದಲ್ಲಿ ಬಸವ, ಚೆನ್ನಬಸವ, ಅಕ್ಕ, ಅಲ್ಲಮ ಇವರುಗಳ ಸ್ತುತಿ ಇದೆ. ಕವಿಯ ಗುರು ವೀರಭದ್ರ.

ಮದನನ ಬಲ್ಪುಮುಬ್ಬಟೆಯುಮೇನನುಸಿರ್ದಪನೆನ್ನ ಚಿತ್ತದೊಳ್ |
ಪುದಿದು ವಿವೇಕಮಂ ಜಡಿದು ಸತ್ಯಮನಿಕ್ಕಿ ಸುಶೌಚದೇಷ್ಟೆಯುಂ ‖
ಸದೆಬಡಿದೊತ್ತಿ ಮೆಟ್ಟಿ ಕೊಂಡಾಡುತುಮಿಂತಿರೆ ನಿನ್ನೊಳರ್ಪವಂ |
ಗಿದು ವಿಧಿಯೋ ಮಹಾತ್ಮ ಕರುಣಾಕರ ಸದ್ಗುರು ಶಾಂತರಾಮನೇ ‖
ಕಳವಳಿಸಿತ್ತು ಕಂಗೆಡಿಸಿದತ್ತು ಕರಂ ಕೊಂಡಾಡಿ ಕಾಡಿದ |
ತ್ತುಱಲಿಸಿದತ್ತು ಮುಂದುವರಿಸಿತ್ತು ಕರಂ ವಜಹಂಬ ಕೂಪದ ‖
ಲ್ಲಿಬೀಯಿಸಿದತ್ತು ಮನ್ಮನಮಸೀಯಳಿಪಿಂತಿದನೊತ್ತಿ ಭಕ್ತಸಂ |
ಕುಳವನಜಮಿತ್ರ ನೋಡಿ ನಡೆ ರಕ್ಷಿಸು ಸದ್ಗುರು ಶಾಂತರಾಮನೇ ‖
ಸೇತುವನೆಯ್ದು ಪರ್ವತಮನೇಱ ಮಹಾಪರವಾರಣಾಸಿಗಂ |
ತಾತುರದಿಂದ ಸಾರ್ದು ಹಿಮವಂತಕ ಪೋಗಿ ಸಮಸ್ತದೇಶದೊಳ್ ‖
ಧಾತುಗಿಡಲ್ಕೆ ಮುಕ್ತಿದೊರೆಕೊಳ್ವುದೆ ಚಿದ್ಘನಲಿಂಗಪೂಜೆಯೊಳ್ |
ಪ್ರೀತಿಯೊಳರ್ಪವರ್ಗ ಘಟಿಸಿರ್ಪವೊಲೀಂ ಗುರುಶಾಂತರಾಮನೇ ‖

## ಶ್ರೀಧರಕರರ ಉದಯರಾಗ. ಸು. 1500

ಪಕ್ಕಿಗಳ ಕದಱ ಪಂಜರದೊಳಿಹ ಪವಳವಾ |
ಯ್ವಕ್ಕಿಗಳು ಪಂಜಪರನೆಂಬ್ಬಗಳ ನಾಮಗಳ |
ನಕ್ಕಱಂ ವಿವರಿಸುತ್ತಿಪ ಕೇಳ್ವವರ ಕಿವಿಗೆ ಚಿಕ್ಕುಲಿಸುವಂತೆ ಮುದದಿ ‖
ದಿಕ್ಕನ್ನೆಯರ ಸುಪ್ರಭಾತ ಸ್ವಪ್ನಾವಳಿಯು |
ಸಕ್ಕರೆಯು ಸಿಹಿಯು ಮಿಕ್ಕಿಸೆವ ಸಂಗೀತರಸ |
ವುಕ್ಕಿ ಶೋಭಿಸುತಿಹುದು ಧರಣಾರಾಜನ ಕೋಲ ತೆಕ್ಕಯಿಂದುಪ್ಪವಡಿಸಾ ‖

## ವೈದ್ಯಶಾಸ್ತ್ರ. ಸು. 1500.

ಸಂಸ್ಕೃತಶ್ಲೋಕಗಳಿಗೆ ಕನ್ನಡ ಟೀಕೆ. ಅಲ್ಲಲ್ಲಿ ಪದ್ಯಗಳೂ ಇವೆ

ಬಿಡದೆಯೆನ್ನ ಪುಣ್ಯಪಾಪವೊಡಲಸುತ್ತಿ ಒದ್ದಿರ್ಪುದೇ |
ಕಡಲ ತಡಿಗನೆಯ್ದಿಸೆನ್ನ ದೇವರಾಜವಲ್ಲಭಾ ||

ಚಂದ್ರನಾಥಸ್ತುತಿ (ಪದ್ಯ 8). ಸು 1500.

ಸಾವ ಪುಟ್ಟುವ ಚಿಂತೆಯಿಲ್ಲದೆ ಜೀವಸಂ ನಿನಗೇಕಹಾ |
ಜೀವ ಗೇಹದೊಳಿರ್ದು ಸೌಖ್ಯವ ಭಾವಿಸುತ್ತಿಹ ಸಾಪೇಕ್ಷೆಯಿಂ ||
ಜಾವಜಾವಕೆ ನಿನ್ನಯಾಯುವ ನೀಂಟುವಂ ಜವನೆಂಬವಂ |
ಭಾವಿಸೈ ಜಡನಿದ್ರೆಯುಂ ಬಿಡು ಭಾವಜಾರಿಜಿನಾಂಘ್ರಿಯಿಂ ||

ಅನಂತಜಿನೇಶ್ವರಾಷ್ಟಕ. ಸು 1500.

ಫುಲ್ಲಬಾಣನ ಬಾಣಪುಷ್ಪಗಳೆಲ್ಲ ತುಂಬಿಗಳೆಂಬಲೆಂ |
ದೊಲ್ಲದೇಳಿಸಿ ಒಲ್ಲರೆಲ್ಲರು ನಿಚ್ಚ ಪೂಜಿಸುವಂತೆ ನಾಂ ||
ಸಿಲ್ಲದೇ ಸ್ತುತಿಯೆಂಬ ಸೌರಭ ಪೋರ್ದಿದೀ ವರವಲ್ಲಿಕಾ |
ಮಾಲೆಯಿಂದದಿ ಪೂಜಿಪೆಂ ಶರಣಾಗನಂತಜಿನೇಶ್ವರಾ ||

ಸಿದ್ಧಸ್ತೋತ್ರಟೀಕೆ. ಸು 1500.

ಆಶಾಧರರ್ ಸಿದ್ಧಪರಮೇಷ್ಠಿಗಳ ಅಷ್ಟಗುಣಂಗಳಂ ಸ್ತುತಿಯಿಸುತ್ತು || ವೊದಲೊಳ್ ಸಂಯುಕ್ತ್ವಗುಣಮುಂ ಸ್ತುತಿಯಿಸಿದಪರ್.

ಪಂಚಕಲ್ಯಾಣಸ್ತೋತ್ರಟೀಕೆ. ಸು. 15 0.

ಅರ್ಹತ್ಪರಮೇಶ್ವರನ ಪಂಚಕಲ್ಯಾಣಂಗಳಂ ಸ್ತುತಿಯಿಸಲಿಚ್ಛೈಯಿಸುಳ್ಳ ಆಶಾಧರಸೂರಿಗಳ್ ವೊದಲೊಳ್ ಗರ್ಭಾವತರಣಕಲ್ಯಾಣವಂ ಸ್ತುತಿಯಿಸಿದಪರ್. ಅಥವಾ ಪ್ರತಿಮೆಯೊಳ್ ಪಂಚಕಲ್ಯಾಣಂಗಳನಾರೋಪಿಸಲಿಚ್ಛೈಸುವ ಆಶಾಧರರ್ ವೊದಲೊಳ್ ಗರ್ಭಾವತರಣಕಲ್ಯಾಣಮನಾರೋಪಿಸಿದಪರ್.

ಅನ್ವಯಾರ್ಥಂ ಪೇಳಲ್ಪಡುಗುಂ, ಪದಚ್ಛೇದಮುಮಂ ಪದಾರ್ಥಮುಮನನ್ವಯಾರ್ಥದ ಸಾಮರ್ಥ್ಯದಿಂದಮೆ ಅಱಿವುದು.

ದ್ವಾದಶಾನುಪ್ರೇಕ್ಷೆ (ಗದ್ಯ) ಸು. 1500.

ನಗರಾದಿಸ್ಥಾನಂಗಳುಂ ಪದವಿಗಳುಂ ಸಿಂಹಾಸನಾದಿಗಳುಂ ಪುತ್ರಕಳತ್ರಮಿತ್ರಾದಿಗಳೊಳಪ್ಪ ಪ್ರೀತಿ—ಇವು ಮೊದಲಾದುವು ಜೀವಕ್ಕೆ ನಿತ್ಯವಲ್ಲೆಂದು ಚಿಂತಿಸುವುದು ಅಧ್ರುವಾನುಪ್ರೇಕ್ಷೆ—ಇತ್ಯಾದಿ.

### ವೀರಜಿನೇಶ್ವರಸ್ತುತಿ (ಪದ್ಯ 9). ಸು. 1500.

ನಿನ್ನ ನಾಮಮರೀಚಿಮಂಜರಿ ಕರ್ಣಭೂಷಣಮಾಗಿರೆ।
ನನ್ನ ಚಿದ್ಗೃಹದಿಂ ನ ಕತ್ತಲೆ ಹೋಗಲಾಕ್ಷಣಮಾಕ್ಷಣಂ ॥

ನಿನ್ನ ಸದ್ಗುಣರತ್ನರಾಶಿಯ ಕಂಡು ಸೋಲ್ತುದೆ ಮುಕ್ತಿಯುಂ।
ಮನ್ನಿಸಯ್ಯ ಮಹಾನುಭಾವನೆ ಸಂದ ವೀರಜಿನೇಶ್ವರಾ ॥

### ಜ್ಞಾನಸಾರ. ಸು. 1500.

ಪಲಪಲವನೋದಿ ಮನಮಂ । ಪೊಲೆಗೆಡಿಸದೆ ಕಿಱಿದಱಿಂದೆ ನಿಜತತ್ತ್ವಮುಮಂ।
ನೆಲೆಗೊಳಿಸಿದೊಡದೆ ಸಾಲದೆ । ಪಲಬೆಳಗುವ ಗಗನದಗಲಮೇ ರವಿಬಿಂಬಂ ॥

ಒರ್ವನೆ ನಿಜಶುದ್ಧಾತ್ಮನ । ನಿರ್ವಾಣಸುಖಕ್ಕೆ ಹೇತುವೆಂದಱಿಯದವಂ।
ನಿರ್ವಂದದೆ ಮಾೞ್ಪ ತಪಂ । ಕರ್ಬಿರೆ ಹೆಬ್ಬಿದಿರನಡಸಿ ತಿಂಬವೊಲಕ್ಕುಂ ॥

ಜೀವಕ್ಕೆ ಬಂಧಮೋಕ್ಷಂ । ಭಾವಂಗಳಿನಕ್ಕುಮಲ್ಲಿ ಸಹಜಮೆ ಸಾರಂ ।
ಭಾವಿಸು ನಿನ್ನೊಳ್ ನೀಂ ಯ । ದ್ಭಾವಂ ತದ್ಭವತಿಯೆಂಬ ನುಡಿ ತಪ್ಪುವುದೇ ॥

ಪರಮಜ್ಞಾನಾನಂದ । ಸ್ವರೂಪನಾನೆಂದು ತನ್ನನಱಿವನಬಱಿಕ್ಕಂ ।
ಪರವಸ್ತುವಿಗೆಱಗುವುದೇ । ಪಿರಿದುಂ ನಿಧಿಗಂಡು ಜತಗಗರ್ಜವನೊಳನೇ ॥

### ವೃಷಭಜಿನಸ್ತುತಿ (ಪದ್ಯ 8). ಸು. 1500.

ಮರದ ಮಡಕೆಯೊಳು ಪಾಕಮು । ನುರವಣೆಯಿಂ ಮಾೞ್ಪುದಿಂತು ಸಂಸಾರಸುಖ।
ಕ್ಕಿರದಳಿಪಿ ಕೆಟ್ಟೆನಿನ್ನೆಗ । ಪರಮೇಶ್ವರ ರಕ್ಷಿಸೆನ್ನ ನೀಂ ಪರಮಜಿನಾ ॥

### ಪಾರ್ಶ್ವನಾಥಾಷ್ಟಕ. ಸು. 1500.

ಮುನ್ನ ಮಾಡಿದ ದುಶ್ಚರಿತ್ರದ ಹಿಂಡೆ ಕೆಟ್ಟುದೆ ಸಾಲದೇ ।
ನಿನ್ನ ಭಕ್ತಿಯ ಪರುಷ ಮುಟ್ಟಿದ ಲೋಹದಂದದಿ ಶುದ್ಧನಾಂ ॥

ನಿನ್ನ ಪಾದಸರೋಜಯುಗ್ಮದ ಸೇವೆಯಂ ಬಿಡದಿರ್ಪೆನಾಂ ।
ನಿನ್ನ ರೂಪನೆ ಮಾಡು ಬೇಗದಿ ಪಾರ್ಶ್ವನಾಥ ಜಿನೇಶ್ವರಾ ॥

### ನಿರ್ಮಲರೂಪಸ್ತುತಿ (ಪದ್ಯ 25). ಸು. 1500.

ವಾತದ ಪಿತ್ತದ ಶ್ಲೇಷ್ಮದ । ಘಾತಿಯೊಳತಿಭೀತಿಯಾದ ದೇಹಕೆ ನೀನುಂ ।
ಓತು ನಿಜಗುಣಮನೊಲ್ಲದೆ । ಕಾತರಮತಿಯಾಗಬೇಡ ನಿರ್ಮಲರೂಪಾ ॥

ಸುಂಬುಳಿನ ಸಳಿಗೆ ನಾಸಿಕ । ಬಿಂಬಾಧರ ತೊಗಲ ಸುರುಳಿಯಲಗೇಣಾದಕಂ ।
ಬಂಬಲ್ಗುರುಳ್ಗಳು ಕಿಸುನಱಿ । ಹಂಬಲನುಳಿ ಪೆಣ್ಣನೆಂದ ನಿರ್ಮಲರೂಪಾ ॥

### ನೋಂಪಿಗಳು. ಸು. 1500.

ಜೈನರ ವ್ರತಗಳನ್ನು ನಿರೂಪಿಸುವ ಗ್ರಂಥ; ಚಂಪೂರೂಪವಾಗಿದೆ.

ಕುವಲಯತತಿಹಿತಕರನಂ । ಸವಿವಿಲ್ಲನಕಣೆಯುಮುಱಿದ ವೀರಾಗ್ರಣಿಯಂ ।
ಭವಭಯಹರನಂ ಸನ್ಮತಿ । ದಿವಿಜಾರ್ಚಿತಪಾದಪದ್ಮನಂ ವಂದಿಸುವೆಂ ॥

ಇಲಿಯುಂ ಕಪ್ಪೆಯುಮೊಲವಿಂ । ದುಲಿದಟ್ಟಿ ತಗುಳ್ದು ತಿಂಬ ಪುತ್ತಿನ ಪುಱುವಂ
ಸಲೆ ನಾಗರೆಂದು ಪೂಜಿಪ । ರೊಲವಿಂ ಜನಮರುಳೊ ಜಾತ್ರಮರುಳೋ ಎನೆ ತಾಂ ॥

### ನಿರ್ದುಃಖಸಪ್ತಮೀಕಥೆ (ಗದ್ಯ). ಸು. 1500.

ಆರಂಭದಲ್ಲಿ ಈ ಕಂದವಿದೆ:—

ಜಿನಗೆಱಗಿ ಪೇೞ್ವೆನೊಲವಿಂ । ದನುಪಮನಿರ್ದುಃಖಸಪ್ತಮಿಯ ಸತ್ಕಥೆಯಂ ।

ಜನತತಿಹಿತಮುಂ ನುತಮುಂ । ಜನನಜರಾಮರಣಹರಣಕಾರಣಮುದಱಂ॥

## ಧನ್ವಂತರೀಯ ನಿಘಂಟು. ಸು. 1500.

ಸಂಸ್ಕೃತ ಮೂಲಗ್ರಂಥದಲ್ಲಿ ಉಕ್ತವಾದ ಮೂಲಿಕಾದಿಗಳಿಗೆ ಕನ್ನಡದಲ್ಲಿ ಪ್ರತಿಪದಗಳು ಹೇಳಿವೆ.

## ಚಂದನೆಯ ಕಥೆ. ಸು. 1500.

ತ್ರಿಪದಿಯಲ್ಲಿ ಬರೆದಿದೆ; ಸಂಧಿ 4, ಪದ್ಯ 460. ಈ ಕಥೆ ಗುಣಭದ್ರಕೃತವಾದ ಉತ್ತರಪುರಾಣದಲ್ಲಿ ಉಕ್ತವಾಗಿದೆ ಆದಿಯಲ್ಲಿ ಆದಿನಾಥ, ಸಿದ್ಧಾದಿಗಳು, ಸರಸ್ವತಿ ಇವರುಗಳ ಸ್ತುತಿ ಇದೆ

ಕೆಡೆದಿರ್ಪ ಸರ್ಪನ ಒಡಲ ಮೆಟ್ಟಲಿ ಹಸಿ।ದಡರುವ ಹುಲಿಯ ಹಿಡಿಯಲ್
ಪರರನು।ಕೆಡಲಾಡಬಹುದೆ ಕೆಳೆಯಳೇ ॥

ಅಂಜೆನು ಸಿಂಹಕ್ಕೆ ಅಂಜೆ ಮಾತಂಗಕ್ಕೆ।ಅಂಜೆನಂಜಿಸುವ ಸಿಡಿಲಿಗೆ।
ಕೆಳೆಯಳೆ।ಅಂಜುವೆ ಪರರ ನಿಂದೆಗೆ ॥

ಪರಧನ ಪರಸತಿ ಪರನಿಂದೆಗೆಣಿಸದಾ।ನರಮಣಿಯಿಂದ ಮತ್ತೊಬ್ಬ।
ಪರಲೋಕಕೆ।ಗುರುವಿಲ್ಲವಿದು ಸಂಶಯವಲ್ಲ ॥

## ಶೃಂಗಾರಶಿವಸ್ತುತಿ. ಸು. 1500.

ನಾಲ್ದೆಸೆಗಳಂ ಬೆಳಪ ಮೆಲ್ದೊಡಿಗೆಯಂ ತೊಡುತ
ರಲ್ದುಱುಬಿನಲ್ಲರೆಯ ರಲ್ದ ಪೊಸ ಪೂವಂ ।
ಜೋಲ್ದುಗುವವೋಲ್ ಮುಡಿದು ಪಾಲ್ದೆರೆಗಳಂತೆಸೆವ
ಪೊಲ್ದುಗುಲಮಂ ಧರಿಸಿ ಕಾಲ್ದೆಗೆದು ಮುಂಬಾ ॥

ಗಿಲ್ದೆರೆಯ ಚಾವಡಿಗೆಯೋಲ್ದು ನಿಮ್ಮತಿ ಸೊಬಗ
ನೊಲ್ದು ಬಿಡದೀಕ್ಷಿಸುತೆ ಸೋಲ್ದವಳನೇ ಕಂ ।
ಡಾಲ್ದು ಮದನಂ ಕೆದರ್ದ ಬಿಲ್ದನಿಯನುಬಿರ್ಸೆ ಬ
ಬಿಲ್ದವಳ್ಗೆ ಬಾಯ್ಗೊಡು ಕುಶಿಲ್ದ ನೆರೆ ಶಂಭೂ ॥

ತುಂಬುರುಸುನಾರದಡುಂಬಿತಸುಗಾನರಸ
ದಿಂ ಬಿಡದೆ ಬಣ್ಣಿಸುವ ತುಂಬಿದ ತಪಃ ಪ್ರಾ |
ಡಂಬರ ಮಹಾಮುನಿಕದಂಬನೆನೆ ಸಹಸ್ರದಳ
ದಂಬುಜದ ಮಧ್ಯದೊಳಗಿಂಬಿಡುವ ಭಾಸ್ವ ||

ದ್ಬಿಂಬಸುಫಲೋತ್ಕರವೆನಿಸೆವಂಬಿಕೆ ನೆಗಳ್ದಿ ಮುದ
ದಿಂ ಬಿಗಿದು ತಬ್ಬಿಕೃಪ ಕಂಬೆಳಗ ಧೀವಾ? |
ಸಾಂಬಶಿವನಂ ನೆನೆಯೆ ಬೆಂಬಿಡದೆ ಬಪ್ಪುದು ಸು
ಖಂ ಬಯಸಿದರ್ಥಮುಮವಘಂ ಬಯಲಹುದಲ್ತೇ ||

ಲಿಂಗಸ್ತೋತ್ರಷಟ್ಪದಿ. (ಪದ್ಯ 111). ಸು. 1500

ತಿಂಗಳ ತಣ್ಗದಿರ್ಗೊಂಗಳ್ ತೀವಿದ | ಪಿಂಗಳವರ್ಣಜಟಾಕೋಟೀರದ |
ಮಂಗಳಮೂರ್ತಿ ಭುಜಂಗಾಭರಣ ವಿಹಂಗಗಮನವಿನುತ ||

ಗಂಗಾಧರ ಮಾತಂಗಾಸುರಹರ | ಪುಂಗವವಾಹ ಸಿತಾಂಗ ಸಮಸ್ತಜ |
ಗಂಗಳರಸ ಕೃಪೆಯಿಂ ಸಲಹೆಮ್ಮಂ ಸಂಗಮನಾಥ ಶಿವಾ ||

ಹುಟ್ಟಂ ಹಜೀರಂ ವಿನತಜನದ ದೆಸೆಯುಟ್ಟಂ ನಿಟಿಲ್ಪಡಲೆಲರಂ ಗೆವಚ್ಚು |
ದೊಟ್ಟಂ ಬಾನೊಳ್ ತಿರ್ರನೆ ತಿರ್ರನೆ ತಿರುಗುವ ಮುಪ್ಪೊಟಿಲಂ ||

ಸುಟ್ಟಂ ಕಟ್ಟುರಿಗಣ್ಣಿಂದಜನಿ ಕುಳಿರ್ವೆಟ್ಟಿನಣುಗಿಗೊಲ್ದರಮೆಯ್ಯಂ ಸಲೆ |
ಕೊಟ್ಟಂ ದೇವರ ಹಿಂಡೊಳ್ ತನಗೆಣೆಗೆಟ್ಟಂ ಪಾಲಿಸುಗೆ ||

ಆಚರಣಾಸಂಬಂಧಷಟ್ಪದಿ (ಪದ್ಯ 165) ಸು 1500

ಹುರುಳಿಲ್ಲದ ವಿಷಯಂಗಳ ಬೆನ್ನೊಳು | ಹರಿಹರಿದೆಳತಟಗೊಳ್ಳುತಿಹ ರವರೇಂ |
ಬರರವರಾತ್ಮಜರಲ್ಲವೆ ದಿಟ ಸತ್ಪುರುಷರೆ ಲೋಕದೊಳು ||

ಉರಗನ ಹೆಬಿಗೆಯನು ಕದ್ದೋಡಿಗ | ಮುರುಳುವನಾಕಸತೆಯಿಂ ಹೊಳ್ಳನು |
ಹುರಿದರಳನು ಕಡಿ ಕುಪಸಂತಿಗನಬಿಯೆಂದನು ದೇಶಿಕನು |

ವಾಗದ್ವೈತನಿರಸನ ತ್ರಿಪದಿ ಸು. 1500

ಪದ್ಯ 127 ಅಲ್ಲಲ್ಲಿ ಸಂಸ್ಕೃತಶ್ಲೋಕಗಳೂ ಅನುವಾದಮಾಡಲ್ಪಟ್ಟಿವೆ.

ಕರಿಯುಂಡಕಪಿತ್ಥ। ಎರಲುಂಟುನೋಡುವರೆ । ತಿರುಳಿಲ್ಲವೆಂಬ ಮಾಟ್ಕ
ಯಿಂ। ಭಕ್ತರೊಳ । ಗಿರಲುಂಟೆ ಕರ್ಮಫಲ ಶೇಷ ॥

ಧೀಯೆಂದು ಪರಧನವ। ಧೀಯೆಂದು ಪರಸತಿಯ। ಧೀಯೆಂದು ಹಿಂಸೆ ಪಾಪ।
ಪೈಶುನ್ಯವನು । ಧೀಯೆಂದು ಕಳೆಯುವ ಬ್ರಹ್ಮ ॥

ಬಸವೇಶ್ವರಸ್ತೋತ್ರ (ಕಂದ 16). ಸು. 1500.

ಪ್ರಣವದ ಬಳಿ ಬಕಾರಂ । ಪ್ರಣವದ ನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ । ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ॥

ಬಸವಂ ಭಕ್ತಿಗೆ ಮೂಲಂ । ಬಸವಂ ಕಾಲಂಗೆ ಕಾಲನನುಪಮಶೀಲಂ ।
ಬಸವಂ ಜಂಗಮಲೋಲಂ । ಬಸವಾ ರಕ್ಷಿಸುವುದೆನ್ನ ಸಂಗನ ಬಸವಾ ॥

ಪಂಚಾಶಿಕೆ. ? 1528 (ಸರ್ವಧಾರಿ).

ಭಾಮಿನೀಷಟ್ಪದಿ; ಸಂಧಿ 13, ಪದ್ಯ 673. "ರಚಿಸುವೆನು ಸುರಪಗೆ ಪರಮಶಿವನುಪದೇಶಿಸಿದ ಪಂಚಾಶಿಕಾಗಮವ" ಎಂದು ಕವಿ ಹೇಳುತ್ತಾನೆ. ಆರಂಭದಲ್ಲಿ ಶಿವ, ಗೌರಿ, ತೋಂಟದ ಸಿದ್ಧಲಿಂಗ, ಗಣಪತಿ, ನಂದಿ, ವೀರೇಶ್ವರ, ಕುಮಾರ ಇವರುಗಳ ಸ್ತುತಿ ಇದೆ

ಪೊಕ್ಕ ಪೊಸಬಾಂಬೊಚ್ಚದಲೆಯುಂ । ಗಚ್ಚಯಿಯುದೆನ್ಮಾಯ್ಯುಂಪಂಗುಕ್ಕು ।
ಮಚ್ಚರವನೊಂದದ ಸಿರಿಗಳಿರ್ದಿಯುಂಗೆ ಬಗೆಯೊಳಗೆ ॥
ಬಿಚ್ಚಟಾಪ ಮುಟಿರದ ಜಪಂದಳೆ । ದೆಚ್ಚಿಡಗದ ದೇಸಿಗಂಗಾ ।
ನೊಚ್ಚತಂ ತುಟಿರ್ಗ್ಲಿಯ್ಯನೊಡಲಿಚನೊಡಲ ಚುಚಿರದಗೆ ॥
ಎನುತ ಭೇದಾಭೇದವಹ ಚಿತಿ । ಯನುಪರದೆ ಚಿಕಿಯನಾತ್ಮಕವಿಸೆಂ ।
ದೆನಿಪ ಜಗವಾ ಚಿತ್ರ ಚಿತ್ತು ಜ್ಞಾನರದೆ ಧರ್ಮ ॥
ತನುಜ ಧರ್ಮಗೆ ಧರ್ಮಕಂ ಕೇ । ಳೆನಿಸುಮುಗಳಿಗೆ ತೋರಿದನುವೆಂ ।
ತೆನಲು ಶರಧಿತರಂಗನೀತಿಯೊಳಿಲ್ಲವೇಕತೆಯು ॥

ಬಸವೇಶ್ವರನ ಪಂಚಸ್ತೋತ್ರ. ಸು. 1550.

ಕುವಲಯಪರಾಜಿತಂ ಕಂಜಾತರಂಜಿತಂ ।
ತವೆ ಕಾರಕಾಲಂಕೃತಂ ನಾಡೆ ಸಂತತಂ ।
ರವಿಯಂತೆ ಪುರದಂತೆ ವನದಂತೆ ದಿವದಂತೆ ಶಿವನಂತೆ ದನುಜರಂತೆ ॥

ವಿವಿಧಾನಿವಿಷಭಂಗವರ್ಧನಂ ಶ್ರುತಿಯುತಂ ।
ವಿವರಿಸಲ್ಕಂ ಜನೋದ್ಭಾಸಿತಂ ಬಕ ಸರಸಿ ।
ನವಗಾನ ವಿಪ್ರಕುಲ ಗಿರಿ ವರುಣದೆಸೆಯಂತೆ ಗಿರಿಜೆಯಂಬಕವೆಸೆದುವು ॥

ಪಲಗಣ್ಣ ಕಾರೊಡಲ ಮಾತುವೆಣ್ಣುಡಿಯರುಂ ।
ತುಟಿಲ್ಗೈವ ಮೆಲ್ಲಡಿಯ ಜತಿಗಳೆದೆವಕ್ಕಿಗನು ।
ನುಲರಂಬವಗೆಯ ವಿಗಗ್ಗೆಯ ಜೊನ್ನೊಡಲ ಮರಗೊಬಾನ್ಮಣಿ ಗಣ್ಣನು ॥

ಎಲವರ್ಟ್ಟಿದಲೆಯನಬುವೊಗನಯ್ಯ ಸಬ್ಬುಡಿಯ ॥
ನೆಲರುಣಿಸಗಂಕಣಂ ಪೊಂದಿಟ್ಟಬಿಲ್ಗೈಯ
ನೆಲದಳಿದನಣುಗಿಯಾಣ್ಮಂ ಸಿದ್ಧನಂಜೇಶ ರಕ್ಷಿಸುಗೆ ಬಿಡದೆಮ್ಮನು ॥

ಭುವನಭವಭವವಿನುತ ಭುವನಭವನಯನನತ ।
ಭುವನಭವಭವನಭವ ಭುವನಧರದಳನಸವ ।
ಭುವನಭವನಖಭುವನಭವರಿಪುವನಲನಯನ ಗಗನಭುವನಾವತಂಸ ॥

ಭುವನಧರಧರ ಕನಕಭುವನಧರಧರ ವರದ ।
ಭುವನಧರಗಜಶರದ ಭುವನಭವಶಿರ ಭುವನ ।
ಭುವನೇಶ್ವರಿಯ ವದನಭುವನೇಜ ಭುವನನಯನ ಜಯ ಜಯ ಸಿದ್ಧನಂಜಾ ॥

ನೀಲಮ್ಮನ ತ್ರಿಪದಿ (ಪದ್ಯ 55). ಸು. 1550.

ಶ್ರೀ ಪರಮೇಶ್ವರನ । ಅಪಾರಮಹಿಮೆಯನು । ರೂಪುಗೊಂಡಂತೆ ನಿಂದ
ನೀಲಮ್ಮ । ನೀನೇಪೊತ್ತು ಎನಗೆ ಕೃಪೆಯಾಗು ॥
ಕರಗಿದಗೆ ಕಾಮದಲಿ । ಕೊರಗಿದಗೆ ಕ್ರೋಧದಲಿ । ಬೆರೆದವಗನೇಕ ಭವದೊಳಗೆ ।
ನೀಲಮ್ಮ । ಪರಿಪೂರ್ಣರೂಪೆ ಕೃಪೆಯಾಗು ॥

ಮುರಿಗೆ ಶಾಂತವೀರೇಶ್ವರನ ಕಂದ [ಪದ್ಯ 24] ಸು. 1550.

ನಿನ್ನನೆ ಪಾಡುವೆ ಸಂತತ । ನಿನ್ನನೆ ಪೊಗಳುವೆನು ನಿತ್ಯವೆಡೆ ಬಿಡದಾವಗ।
ನಿನ್ನನೆ ಬೇಡುವೆನಲ್ಲದೆ । ಯನ್ಯರ ನಾನಱಿಯೆನೀಶ ಶಾಂತವಿರೇಶಾ ॥

ಶಿವಭಕ್ತಸ್ತುತಿ [ಕಂದ ಸುಮಾರು 800). ಸು. 1550).

ಭಕ್ತರನಳವಿಯೊಳೀಕ್ಷಿಸಿ । ಭಕ್ತರ್ ಬಂದಪರೆನುತ್ತೆ ಬರ್ದುಕಿದೆನೆನುತುಂ ।
ಭಕ್ತರ್ಗಿದಿರೆೞ್ದು ಯಥಾ । ಶಕ್ತಿ ಸ್ಥಿತಿಯಿಂದೆ ಪೂಜಿಸಲ್ವೇೞ್ಕುಭವಾ ॥

ಕುಲಜಕುಲಹೀನರಿರ್ವರ್ । ನೆಲೆಗೊಳೆ ಭವದಚಲಭಕ್ತಿನಿಷ್ಠಾಗತಿಯಿಂ।
ಬೆಲೆಗೆಯ್ವೊಡವರ್ ಸದೃಶರ್ । ಕುಲಜರ್ ಕುಲಹೀನರೆಂಬುದಘಟಿತಮವರೊಳ್ ॥

ಕೊಱೆದ ಶಿರಂಗಳ್ ಬೆರೆಗುಂ । ಪಱಿದಾಜಿಕ್ವೆಗಳುಱಿಯದೆ ಬರ್ಕುಂ ।
ಕಱೆಗೊರಲನ ಭಕ್ತರ್ಗ್ಗಂ । ದಱಿಯಿರೆ ಸದ್ಯಃ ಪ್ರಸಾದರೀಶನ ಭಕ್ತರ್ ॥

ಮಿಶ್ರಸ್ತೋತ್ರ. ಸು. 1550.

ಕುಸುಮಷಟ್ಪದಿ; ಪದ್ಯ 110. ಕೊನೆಯ ಪದ್ಯದಲ್ಲಿ ಗುರುಸೋಮನಾಥನ ಅಂಕಿತವಿದೆ.

ನಂದಿಕೇಶ್ವರ ಭೃಂಗಿ । ಸ್ಕಂದ ಮುಖ್ಯಸುರಾಳಿ ।
ಬಂದೆನ್ನ ಹೃತ್ಕಮಲದೊಳಗೆ ॥
ನಿಂದು ನಿಮ್ಮಯ ಭೃತ್ಯ । ನೆಂದೀ ಕೃತಿಯೊಳು ತ ।
ಪ್ಪೊಂದಿಲ್ಲವೆನೆ ನಡೆಯಿಸುವುದು ॥
ಒಡಲ ಬೞಿಯಲಿ ಛಾಯೆ । ನುಡಿಯ ಬೞಿಯೊಳಗರ್ಥ
ದೃಢಭಕ್ತಿಜ್ಞಾನಂ ವಿರಕ್ತಿ ॥
ಒಡನೆ ಸನ್ಮುಕ್ತಿ ಬೆಂ । ಬಿಡದವೋಲ್ ಮಹದೇವಿ
ನಡೆದಳಾ ಭೈರವನ ಕೂಡೆ ॥

## ಸುಗ್ರೀವನಿಮಿತ್ತ. ಸು. 1550.

ಮಂದನೊಡನಸುರಗುರುವುಂ । ಮಂದನಿರಲ್ ಸಿಂಹ ನೆಲೆಯೊಳಿರೆ ಶುಭಮಕ್ಕುಂ ।
ಕುಂದದೆ ಪೊಱಮಡೆ ಕಲಹಂ । ಸಂಧಿಸುಗುಂ ಕೇಡು ರುಜೆಗಳುಂ ಪೀಡಿಸುಗುಂ ॥

ಭೌಮನೊಡನಮರಗುರುವುಂ । ಸೋಮಜನುಮಿರಲ್ಕೆ ವೈರಿಬಲಮಂ ಗೆಲ್ಗುಂ ।
ಕ್ಷೇಮಾರ್ಥಲಾಭಮಕ್ಕುಂ । ಭೂಮೀಶ್ವರಪೂಜೆ ಸಂತತಂ ಪಿರಿದಕ್ಕುಂ ।

## ಸಾಮುದ್ರಿಕಲಕ್ಷಣ (ಗದ್ಯ). ಸು. 1600.

ಕಿಱುಬೆರಳಿನ ಅಡಿಯು ಅಡ್ಡಲಾಗಿರ್ದುದು ಆಯುಷ್ಯರೇಖೆ. ಹೆಬ್ಬೆರಳಿನ ಒತ್ತಿನ ತರ್ಜನಿಯೆಂಬ ಬೆರಳ ಮುಟ್ಟಿದೊಡೆ ತೊಂಬತ್ತು ವರ್ಷದಾಯುಷ್ಯವೆಂದಱಿವುದು ; ತರ್ಜನಿಯುಂ ಸುತ್ತಿದೊಡೆ ನೂರುವರ್ಷದಾಯುಷ್ಯವೆಂದಱಿವುದು ; ಕಿಱುಬೆರಳಿಂದ ಮಧ್ಯಬೆರಳಲ್ಲಿ ನಡೆದು ನಿಂದೊಡೆ ಎಪ್ಪತ್ತು ವರ್ಷವೆಂದಱಿವುದು ; ಕಿಱುಬೆರಳಿಂದ ಅನಾಮಿಕ ಮಧ್ಯಬೆರಳಲ್ಲಿ ನಿಂದೊಡೆ ಅಱುವತ್ತು ವರ್ಷಕೆ ಕೊಱತೆಯಿಲ್ಲದೆ ಬಾಳ್ವರು

## ಶಕುನಗಳು. ಸು. 1600.

ಈ ಗ್ರಂಥದಲ್ಲಿ ಹಲ್ಲಿಯ ಶಕುನ, ಹಸುಬನ ಶಕುನ, ಗಾರ್ದಭಶಕುನ, ಸರ್ಪಶಕುನ, ಸೀನಿನ ಫಲ, ಕಣ್ಣುಹಾರಿದ ಫಲ, ಗೌಳಿ ಬಿದ್ದ ಫಲ, ಜೇನು ಇಕ್ಕಿದ ಫಲ, ಸ್ವರ ಮುಂತಾದ ಅನೇಕ ವಿಷಯಗಳು ಗದ್ಯಪದ್ಯಗಳಲ್ಲಿ ಹೇಳಿವೆ. ಕೆಲವು ಪದ್ಯಗಳು ವರಕವಿಚಂದ್ರ, ಅಲ್ಲಚಮೂಪ, ಆಚಳಿಶವಚನ ಎಂದು ಮುಗಿಯುತ್ತವೆ.

ಕಾಗೆ ನರಿ ಪಲ್ಲಿ ಪಿಂಗಳೆ । ಗೂಗೆ ಹಯಂ ಖರದ ಶಕುನ ವೃಷಭದ ಧ್ವನಿಯುಂ ।
ಪೋಗಲೆಡಬಲದೊಳಾಗಲು । ವೇಗೆ ಕರಂ ಕಾರ್ಯಸಿದ್ಧಿಯುಚಳಿತ ವಚನಾ ॥
ಆಪತ್ತು ಪುಟ್ಟಿ ಮನದೊಳ್ । ತಾಪಿಸಿ ನಷ್ಟಕ್ಕೆ ಬಂದು ಬೆಸಗೊಳುತಿರಲುಂ ।

ಪಾಪಗ್ರಹದೊಳಗುಳಿಯಲು|ಆಪತ್ತುಗಳಡಗಿ ಮುಂದೆ ಸಂಪದಮಕ್ಕುಂ ||
ಗಂದವ ನೀಡುವ ಪದದೊಳ್ | ಮುಂದದೆ ಕನ್ನಡಿಯ ಪಿಡಿದು ನೋಡುವ ಪದದೊಳ್ |
ಚಂದವಲಿ ಪಲ್ಲಿ ಕರೆಯಲ್ | ಸಂದೇಹಮೆ ಶುಭದಮೆಂದನಲ್ಲಜಮುಖಿವಾ||
ಚಿಂತೆಗೆಯಿದಿರುಂ ಬಲನುಂ | ಸಂತೋಷಕೆಯೆಡನು ಬೆನ್ನ ಮಾಟೊಗೆ ಶುಭದಂ |
ಚಿಂತೆಗೆ ಬ್ರಹ್ಮಸ್ಥಾನಂ | ಸಿಬ್ಬಂತೆಗೆ ನೊಸಲಪಲ್ಲಿಯೊಸಗೆಯ ಪೇೞ್ಗುಂ ||
ಹರ ಮುನಿದಂಬಂ ತೊಟ್ಟೊಡೆ | ಶರಧಿಯ ನಡುಮಧ್ಯದೊಳಗೆ ಬಿದ್ದೊಡೆ ಮತ್ತಾ |
ಮುರರಿಪು ಚಕ್ರದೊಳಿಟ್ಟೊಡೆ|ಪರಿಹರಿಪುದು ಬಲದಪಲ್ಲಿಯುಲ್ಲಜಮುಖಿವಾ ||
ನಾಡಟಿ'ವಲ್ಲಿ ದಾಟಿ'ಯಿಡುವಲ್ಲಿ ಕಣಂಗುಡುವಲ್ಲಿ ಚಿಂತೆಯಿಂ |
ಮೂಡಿ ಮುಳುಂಗುವಲ್ಲಿ ಸಪ್ಪೆಯೊಳ್ ಸಿಲುಕಿರ್ದೆಡೆಯಲ್ಲ ಭೀತಿಯಿಂ ||
ದೋಡುವ ತಾಣದಲ್ಲಿ ಸಲೆ ಪಕ್ಕ್ರಯುದೊಂದೆಡೆಯಲ್ಲಿ ಕಲ್ಲಿಗಳ್ |
ನಾಡೆ ಗೃಹಂಗಳಿಂ ಪೊಱಗೆ ದಕ್ಷಿಣದೊಳ್ ಸ್ವರಮೇಯಲುತ್ತಮಂ ||
ಬಡತನದಿಂ ಪೋಪಾತಗೆ | ಯೆಡದಿಂ ಬಲಗಡೆಗೆ ಬಂದು ಪನ್ನಗರಾಜಂ |
ಪೆಡೆಯೆತ್ತಿ ಮುಂದೆ ನಿಲ್ಲಲ್ | ಪೊಡವಿಗೆ ತಾನೊಡೆಯನಕ್ಕುಮಿದೆ ಸಿದ್ಧಾಂತಂ ||
ಅಂಬಲದ ಕೂಱ ಮಡಕೆಯು | ತುಂಬದ ನಡುಮನೆಯು ಕಡೆವ ಕಂಬಗಳೆಡೆಯೊಳ್ |
ಹೊಂಬಣ್ಣದಿಱುಪೆ ನೆಗಟ್ದೊಡೆ | ತುಂಬಿದ ಧನಧಾನ್ಯಮಕ್ಕುಮಾತನ ಮನೆಯೊಳ್ ||

ಗೌಳಿ ಬಿದ್ದ ಫಲ—ನೆತ್ತಿಯಮೇಲೆ ಬೀಳೆ ಕಲಹ, ನಡುನೆತ್ತಿಯಮೇಲೆ ಬೀಳೆ ತಂದೆತಾಯಿಗೆ ಹೊಲ್ಲ, ಇತ್ಯಾದಿ.

ಅಂಗಸ್ಪರ್ಶಫಲ—ಮೂಗ ಹಿಡಿದಡೆ ಹಾನಿ; ಮುಖವ ಹಿಡಿದಡೆ ಲಾಭ; ಮೀಸೆಯ ಹಿಡಿದಡೆ ಪುರುಷಾರ್ಥ, ತುಟಿಯ ಮುಟ್ಟಲು ಜಗಳ, ಗಲ್ಲವ ಮುಟ್ಟಲು ದುಃಖ; ಮುಂಗೈಯ ಹಿಡಿದಡೆ ರೋಗ, ಇತ್ಯಾದಿ.

ಅವಯವ ಹಾಱಿದ ಫಲ—ಎಡದ ಹುಬ್ಬು ಹಾಱಲು ಕಷ್ಟ; ಬಲದ

ಹುಬ್ಬು ಹಾಱಲು ಲಾಭ, ಬಲದ ಆಳ್ಳೆ ಹಾಱಲು ಸಂಪತ್ತು, ಎಡದ ಆಳ್ಳೆ ಹಾಱಲು ವಿಪತ್ತು, ಇತ್ಯಾದಿ.

ಹಾಗೆ ಹೆಚ್ಚೆಯಿಕ್ಕಿದ ಫಲ—ಶಿರದೊಳು ಮೃತ್ಯು, ಲಲಾಟದೊಳು ಕನಕಪಟ್ಟ, ಉರದೊಳು ಭೋಜನ, ಕರ್ಣದೊಳು ಸುವರ್ಣಲಾಭ, ಇತ್ಯಾದಿ

## ನೀಲಾಂಬಿಕಾಸ್ತುತಿ. ಸು. 1600.

ಬಸವನ ಹಂಡತಿ ನೀಲಮ್ಮನ ಸ್ತುತಿರೂಪವಾದ ಗ್ರಂಥ, 25 ಷಟ್ಪದಿಗಳಿವೆ.

ಮಂಜುಮಣಿಗಣಖಚಿತನೂಪುರ | ರಂಜಿತಾಮಳಚರಣಸರಸಿಜೆ |
ಕಂಜಮುಖಿ ಕಮನೀಯಮಂತ್ರಾಲಾಪೆ ಜಿತತಾಪೆ ||
ಕಂಜರಿಪುನಿಭನಖನಿಚಯೆ ಮದ | ಕುಂಜರಾಧಿಕಯಾನೆ ದುರ್ಗುಣ |
ಭಂಜೆ ಪಾಲಿಸು ಭಕ್ತಜಗವನು ವೃಜಿನಸಂಹಾರೆ ||
ನೋಡಿ ನಿನ್ನಯ ದಂತಚಯಮಂ | ದಾಡಿಮಂಗಳು ನಾಚಿ ವನದೊಳು |
ಕೂಡಿ ಸ್ವೈರಗಾಗಿ ಬಾಯಂ ತೆಱೆದು ಪಲ್ಗಿರಿದು ||
ಬೇಡಿದವುವಾವಾಗ ನಿನ್ನೊಳು | ಗಾಡಿಯಂ ಬಹುಮಾನಿ ದಯೆಯಿಂ |
ನೂಡಿ ಪಾಲಿಸು ನೀಲಲೋಚನೆಯೆಮ್ಮನನವರತ ||

## ಮಣ್ಣೇಶ್ವರಕಾವ್ಯದ ನಾಂದ್ಯ. ಸು. 1600.

ಇವು ಈ ಕಾವ್ಯದ ಸಂಧಿಗಳ ಆದಿಯಲ್ಲಿರುವ ನಾಂದೀಪದ್ಯಗಳಾಗಿರಬಹುದು. ಒಗಟಿಗಳಂತಿರುವ 13 ಪದ್ಯಗಳಿವೆ ಇವಕ್ಕೆ ಒಂದು ವ್ಯಾಖ್ಯಾನವೂ ಇದೆ.

ನಾಸಿಕದುಂಬನ | ಗಾಸಿಗೈದವನ ಛೇ | ದಿಸಿದನಂಗನೆಯ ಪಿತನಾ |
ಸೂಸದುಂಡವಗೆ ವಂ | ದಿಸಿದಾತಗೆಯಾದಿ | ವಾಸವಾಗಿಹ ಮಣ್ಣೇಶ
ಮಾಂ ತ್ರಾಹಿ[1] ||

1 ನಾಸಿಕದುಂಬನ - ಆನೆಯ, ಗಾಸಿಗೈದವನ - ಮೊಸಳೆಯ, ಛೇದಿಸಿದನ - ವಿಷ್ಣುವಿನ, ಅಂಗನೆಯ - ಲಕ್ಷ್ಮಿಯ, ಪಿತನ - ಸಮುದ್ರನ, ಸೂಸದುಂಡವಗೆ - ಅಗಸ್ತ್ಯನಿಗೆ, ವಂದಿಸಿದಾತಗೆ - ವಿಂಧ್ಯಕ್ಕೆ, ಆದಿ - ಮೇರು.

ಸರಸಿಯ ಪೊಕ್ಕನ ತಾಯ | ವರನಣುಗನ ರಕ್ತ | ಸುರಿದನಯ್ಯನ ವಾಜಿ
ಯುರದನಿಗೆ |
ಅರಿಸುತೆಯರಸನ | ವರಭಾವನ ಸೊಸೆಯ ಮೂ | ಗರಿದನಯ್ಯನೆ ವಕ್ಷ್ಮೀ
ಶ ಮಹಾಂ ತಾ‍ಹಿ[1] ||

ಮನೋವಿಕಾರ ನಿರಸನ ರಗಳೆ. ಸು. 1600.

ನುಡಿ 127, ಒಂದೊಂದೂ "ಶಂಕರಲಿಂಗ" ಎಂದು ಮುಗಿಯುತ್ತದೆ.

ಎರಿ ನೀರುಣ್ಬೊಡಂ ಬೇಲಿ ಕೆಯ್ಮೇವೊಡಂ |
ಜರದಿಂ ಮಾಣಿಸುವರಯ್ಯ ಶಂಕರಲಿಂಗ ||
ಅಟ್ಟುಡಿಗೆಯಂ ಮಡಕೆ ಕದ್ದುಣ್ಬೊಡಂತದಕೆ |
ಕಟ್ಟಣೆಯ ಮಾಟ ಪ್ರರರಯ್ಯ ಶಂಕರಲಿಂಗ ||
ಪಶು ಕಣ್ಣಿಯೊಳು ಕಟ್ಟುವಡದಂತೆ ನಿಮ್ಮ ಪದ |
ಬಿಸರುಹದೊಳೆನ್ನ ಕಟ್ಟಯ್ಯ ಶಂಕರಲಿಂಗ ||
ಕೋಟಿಹುಲುಮೊಜಡಿಗಳು ಕೂಡಿ ಮೇರುವಗೆ ಸಮ |
ಸಾಟಿಯುಹುವೇ ನುಡಿಯಲಮ್ಮ ಶಂಕರಲಿಂಗ ||

ಪುನರ್ದೀಕ್ಷೆ ರಗಳೆ, ಪುಷ್ಪದಷ್ಟಕ ಇವುಗಳಲ್ಲಿಯೂ ಶಂಕರಲಿಂಗ ಎಂಬ ಅಂಕಿತವಿರುವುದರಿಂದ ಇವೆಲ್ಲವೂ ಏಕಕವಿರಚಿತವೆಂದು ತೋರುತ್ತದೆ.

## ಪುನರ್ದೀಕ್ಷೆ ರಗಳೆ

ಗುರುವ ಲಘುವೆನಬಹುದೆ ಲಘುವ ಗುರುವೆನಬಹುದೆ |
ಗುರುವೆ ಗುರು ಲಘುವೆ ಲಘುವೆನುತಿಹ ಪುನರ್ದೀಕ್ಷೆ ||

---

1 ಸರಿಸಿಯುಪೊಕ್ಕನ - ಕೌರವನ, ತಾಯ ಗಾಂಧಾರಿಯ, ವರನ - ಧೃತರಾಷ್ಟ್ರನ, ಅಣುಗನ - ದುಶ್ಶಾಸನನ, ರಕ್ತಸುರಿದನ - ಭೀಮನ, ಅಯ್ಯನ - ವಾಯುವಿನ, ವಾಜಿಯುರನಿಗೆ - ಹುಲ್ಲೆಯ ಎದೆಯಲ್ಲಿ ಉಳ್ಳ ಚಂದ್ರನಿಗೆ, ಅರಿಸುತೆಯ - ಸರ್ಪದಮಗಳ, ಅರಸನ - ಅರ್ಜುನನ, ವರಭಾವನ - ಕೃಷ್ಣನ, ಸೊಸೆಯ - ಸರಸ್ವತಿಯ, ಮೂಗರಿದನ - ವೀರಭದ್ರನ, ಅಯ್ಯನೆ - ಶಿವನೆ.

ಪುಷ್ಪದಷ್ಟಕ (ಪದ್ಯ 17).

ಕರಿಯ ಮರುಗಂ ಬಿಳಿಯ | ಮರುಗ ಮುಡಿವಾಳದಿಂ |
ಪರಿಮಳದ ಪಾದರಿಯ ಪುಷ್ಪದಿಂದ ||
ಸುರಗಿ ಸುರಹೊನ್ನೆ ಹೊಂ | ಗೇದಗೆಯ ಪುಷ್ಪದಿಂ |
ಕರುಣಾಸಾಗರನ ಪೂಜಿಸುತಿರ್ಪೆನು ||

ಘೋರಾಸುರಯುದ್ಧ ಸು. 1600

ವಾರ್ಧಕಷಟ್ಪದಿ; ಸುಮಾರು 1000 ಪದ್ಯಗಳಿರುವಂತೆ ತೋರುತ್ತದೆ ಸಂಧಿಗಳ ಕೊನೆಯಲ್ಲಿ ಅವಿರಳಸಿದ್ಧಲಿಂಗೇಶನ ಅಂಕಿತವಿದೆ

ಭರದಿಂದೆ ತೋಱುವಾವರ್ತದಿಂ ವೃತ್ತದಿಂ |
ದಿರದೆ ನಭಕೇಱ್ವ ಸೀರ್ಪನಿಗಳಿಂ ದನಿಗಳಿಂ |
ಹರುಷದಿಂ ತಿರುಗುತಿಹ ನಕ್ರದಿಂ ಚಕ್ರದಿಂ ಘನತರದ ಮತ್ಸ್ಯಂಗಳ ||
ಪರಿಪರಿಯ ನಟನೆಗಳ ಚಂದದಿಂದಂದದಿಂ |
ಸ್ಫುರಿಸುತಿಹ ಮೌಕ್ತಿಕದ ಮಣಿಗಳಿಂ ಗಣಿಗಳಿಂ |
ದೊರೆಯಲೇಂ ವಿದ್ರುಮದ ಗುಂಪಿನಿಂ ಸೊಂಪಿನಿಂದಂ ಪಯೋನಿಧಿಯೆಸೆದುದು ||

ಅಸಂಖ್ಯಾತರಗಳೆ ಸು. 1600.

ಪುರಾತನರ ಸ್ತುತಿರೂಪವಾದ ಗ್ರಂಥ, ನುಡಿ 138. ಕೊನೆಯ ಕಂದದಲ್ಲಿ ಗುರುಪುರದ ಮಲ್ಲಿನಾಥಪ್ರಭುವಿನ ಅಂಕಿತವಿದೆ.

ಒತ್ತಿ ಸಂಸಾರಮುಂ ಕಿತ್ತು ಸದ್ಭಕ್ತಿಯುಂ |
ಬಿತ್ತರದಿ ವೆಚ್ಚದ ಮೊಲ್ಲೆಯ ಬೊಮ್ಮನಾಳಯ್ಯ ||

ಬಸವಪವಾಡದ ರಗಳೆ ಸು. 1600.

ಬಸವನ 88 ಪವಾಡಗಳ ವರ್ಣನೆ, ನುಡಿ 112 ಆದ್ಯಂತಗಳಲ್ಲಿ ಹಂಪೆಯ ವಿರೂಪಾಕ್ಷನ ಅಂಕಿತದ ಕಂದಗಳಿವೆ.

ವೃಷಭನ ಶರಣ ಬೊಮ್ಮಿತಂದೆ ಕನ್ನವಿಕ್ಕಿ ನೃಪನು ಸೆಱೆಸೆ |
ಒಡನೆ ಮಣ್ಣಾರಾಸಿಗಳನು ಚಿನ್ನಮಾಡಿ ನೆಱೆದ ಬಸವ ||

## ಎಲ್ಲಾ ಪುರಾತನರ ತ್ರಿಪದಿ. ಸು. 1600.

ಇದರಲ್ಲಿ ಶಿವಭಕ್ತರಾದ ಪುರಾತನರ ಸ್ತುತಿರೂಪವಾದ 62 ಪದ್ಯಗಳಿವೆ.

ಏಕೋದೇವ ಘನವೆಂದು | ಕಾಕುಬಸ್ತಿಯನೊಡೆದು | ಲೋಕಕಾಣಿಯಲ್ಕೆ ಸಿರವರಿದು |
ಎಳುದಿನ ಮೆರೆದ ಏಕಾಂತರಾಮಯ್ಯ ಶರಣಾಗು ||
ಸೂಲ ತಲೆಯಾಣಿ ಮಾಡಿ | ಮೇಲೆ ಮರ ಪಲ್ಲೈಸಿ | ಲೋಲ ಬಸವೇಶ ಕರಸಲು |
ಮರಸಹಿತ್ತೈದಿದ ಸೂಲದ ಬ್ರಹ್ಮಯ್ಯ ಶರಣಾಗು ||
ಅಲ್ಲಿ ಮಾಯೆಯನಾಡಿಸಿ | ನಿಲ್ಲದೆ ಮರ್ತ್ಯಕೆ ಬಂದು | ಎಲ್ಲಾ ಪುರಾತನರನು |
ಸಲಹಿ ಕದಳಿಯ ಪೊಕ್ಕ ಅಲ್ಲಮ ಪ್ರಭುವೆ ಶರಣಾಗು ||

## ಗುರುರಗಳೆ. ಸು. 1600.

ಗುರುಸ್ತುತಿರೂಪವಾದ ಗ್ರಂಥ. ಆದ್ಯಂತಗಳಲ್ಲಿ ಗುರುವಿಶ್ವೇಶ ಎಂದು ಮುಗಿವ ಒಂದೊಂದು ಕಂದವಿದೆ. ಮಹಾದೇವ ರಗಳೆಯಲ್ಲಿಯೂ ಹೀಗೆಯೇ ಕಂದವಿರುವುದರಿಂದ ಅದನ್ನೂ ಈ ಗ್ರಂಥಕರ್ತನೇ ರಚಿಸಿರಬಹುದು.

ವಿಭವದಿಂ ಭವದ ಪಾಶವ ಹರಿದ ಗುರು ಶರಣು | ಅಭವನಾಚಾರದಾಜ್ಞೆಯನಿತ್ತ ಗುರು ಶರಣು |
ನಿತ್ಯಪದವಿಂತುಟೆಂದೊರೆದ ಶ್ರೀಗುರು ಶರಣು | ಮುಕ್ತಿಪೂಜೆಯ ಮಾಣಿ ತೋರುತಿಹ ಗುರುಶರಣು ||
ಆದಿಯನಾದಿಗಳೆಂಬಿವ|ಭೇದಿಸಿ ತಾಂ ತಂದು ಯೋಗಸಾಧ್ಯದೊಳಿರಿಸಿಯೆ |
ಬೋಧಿಸಿ ಗುರುಸುಜ್ಞಾನದ|ಹಾದಿಯ ತೋರಿಸಿದನೆಮ್ಮ ಗುರುವಿಶ್ವೇಶಂ ||

## ಮಹಾದೇವ ರಗಳೆ.

ಶ್ರೀಸಮಸ್ತಲೋಕಜೀವಭಾವಭರಿತಮಹಾದೇವ | ಈಶ ನೀನೆ ಭಕ್ತಿಲತೆಯ ಬೆಳಸಿ ಮೆರೆದೆ ಮಹಾದೇವ ||
ನರಜನ್ಮವೆಂಬುದತಿಶಯ | ಹರಭಕ್ತಿಯೆ ಅಧಿಕವದರೊಳರಿದಾಗ

ಕರ ಭ್ರಾಂತನಾಗಿ ತೊಳಲದೆ । ಪರಮನ ಕೀರ್ತಿಯನು ಮೆರೆದ ಗುರು
ವಿಶ್ವೇಶಂ ||

## ಬಸವೇಶ್ವರ ರಗಳೆ. ಸು. 1600.

ರಗಳೆ ಎಂಬ ಹೆಸರಿದ್ದರೂ ಇದರಲ್ಲಿ 46 ಕಂದಗಳಿವೆ.

ಪ್ರಣವದ ಬಳ್ಳಿ ಒಕಾರಂ । ಪ್ರಣವದನಾದಾನುಸಾರಸಾರ ಸಕಾರಂ ।
ಪ್ರಣವದ ಬಿಂದು ವಕಾರಂ । ಪ್ರಣವಂ ಬಸವಾಕ್ಷರತ್ರಯಂ ಬಸವೇಶಾ ||

## ಪುರಾತನ ಶರಣೆಯರ ತ್ರಿಪದಿ ಸು. 1600.

ಇದರಲ್ಲಿ 54 ಪದ್ಯಗಳಿವೆ, ನೀಲಲೋಚನೆ, ಮಹಾದೇವಿಯಕ್ಕ ಮೊದಲಾದ ಪುರಾತನದೇವಿಯರ ಸ್ತುತಿರೂಪವಾದ ಗ್ರಂಥ

ಗುರುಭಕ್ತಿಯೊಳು ಸಂದು । ಹರಭಕ್ತಿಯೊಳು ನಿಂದು ।
ಚರಭಕ್ತಿಯಿಂದ ಪರಮೇಶ್ವರನನೊಲಿಸಿದಾ ।
ಶರಣೆಯರಿಗಾನು ನತನಪ್ಪೆಂ ||

## ಬಸವೇಶ್ವರನ ತಾರಾವಳಿ. ಸು. 1600

ವಾರ್ಧಕಷಟ್ಪದಿಯಲ್ಲಿ ಬರೆದಿದೆ, ಪದ್ಯ 33 ಲಕ್ಕಣ್ಣದಂಡೇಶನ ಶಿವತತ್ವಚಿಂತಾಮಣಿಯಲ್ಲಿರುವಂತೆ ಪ್ರತಿಪದ್ಯವೂ ಚರಣಾಂಬುಜಕ್ಕೆ ಶರಣು ಎಂದು ಮುಗಿಯುತ್ತದೆ

ರವಿಯುದಯುವಂ ಬಯಸಿ ಬಳಲುವಂಬುಜದಂತೆ ।
ಶಿವಪದದ ಮಾರ್ಗದಲಿಯೆಡೆವಿಡದೆ ಸಂಚರಿಪ ।
ರವರ ದರುಶನವೆಂದಿಗೆನಗೆ ದೊರಕುವುದೆಂದು ಮನದೊಳಗೆ ತೊಳಲಿ
ಬಳಲಿ ||
ದಿವರಾತ್ರಿ ಹಲುಬಿ ಕಂಪಿಸುವವನಾವನವ ।
ನವನ ಪದಕಮಲಕೆಱಗುವ ಮಧುಕರನ ಮಾಡು ।
ಶಿವ ನಿಮ್ಮ ಬೇಡುತಿಹೆನೆಂಬ ಬಸವೇಶ್ವರನ ಚರಣಾಂಬುಜಕ್ಕೆ ಶರಣು ||

## ವಿರೂಪಾಕ್ಷಸ್ತುತಿ (ಪದ್ಯ 20) ಸು 1600.

ಅಂಗಭವನತುಳಿಸರ್ವಾಂಗವಹ ನಿಗರ್ಗಣೋ |
ತ್ತುಂಗಶಮನಾಗ್ನಿಸ್ಫುಲಿಂಗ ಹಿಮಶೈಲಜಾ |
ಧಾರ್ಂಗ ನತಜನಕಮಲಭೃಂಗ ಶಂಕರ ಕೃಪಾಪಾಂಗ ನಿರ್ಮಲಶುಭಾಂಗ ||
ಗಂಗಾತರಂಗಪ್ರಸಂಗತಜಟಾಪಟಲ |
ಮಂಗಳಾತ್ಮಕ ಭಕ್ತಸಂಗಮುಂ ರಕ್ಷಿಪುದು |
ಹಿಂಗದನುದಿನಮೆಸವ ಪಂಪಾವಿರೂಪಾಕ್ಷಲಿಂಗ ಸತ್ಕೀರ್ತಿಸಂಗ ||

## ಮೂಲಕ ರಾಮಾಯಣ. ಸು. 1600.

ಭಾಮಿನೀಷಟ್ಪದಿ, ಸಂಧಿ 1. ಮೂಲಕಾಸುರನು ಲಂಕೆಗೆ ಮುತ್ತಿಗೆ ಹಾಕಿ ವಿಭೀಷಣನನು ಸೋಲಿಸಿ ಒಳಕೆ ಅಯೋಧ್ಯೆಗೆ ಹೋಗಿ ಭರತ ಶತ್ರುಘ್ನ ಲಕ್ಷ್ಮಣರ ರಾಮರನ್ನು ಸೋಲಿಸಿ ಕೂನಗ ಕಾಣಿಸಿದ ಸತ್ತನು.

ಹಲ್ಲುಗಿರಿಯುತ ಹಣುಕಿ ನೋಡುತ | ಮಿಳ್ಳಿಸುತ ಬಾಲವನು ತೆಗೆದರು |
ಮಲ್ಲಸುಭಟರು ಖಳನ ಇದಿರಿಗೆ ಪಿಂಗರಾಗಿರಲು ||
ಅಲ್ಲಿ ಚೀರುತ ಚಿರುಕುಗುಟ್ಟುತ | ಚೆಲ್ಲಿ ನೆರವುತ ಪಿಡಿಸುತ ಹರಿ |
ದಲ್ಲಿಗಲ್ಲಿಗೆ ನೆರವುತಿರ್ದರು ಮಾಣಿಮರ್ಕಟರು |

## ಕಕ್ಕೋಕಶಾಸ್ತ್ರ ಟೀಕೆ ಸು. 1600.

ಕಾಮಶಾಸ್ತ್ರವಿವರಣ. ಈ ಶಾಸ್ತ್ರಪ್ರವರ್ತಕರಾದ ನಂದಿಕೇಶ್ವರ, ಗೋಣಿಕಾಪುತ್ರ, ದತ್ತಕ, ವಾತ್ಸ್ಯಾಯನ ಮುಂತಾದವರ ಹೆಸರುಗಳೂ ಈ ಶಾಸ್ತ್ರಕ್ಕೆ ಸಂಬಂಧಪಟ್ಟ ಗುಣಪತಾಕೆ, ಶಬ್ದಾರ್ಣವ ಎಂಬ ಗ್ರಂಥಗಳ ಹೆಸರುಗಳೂ ಹೇಳಿವೆ

ಕಲ್ಪದಾದಿಯೊಳು ಬ್ರಹ್ಮದೇವನು ಪ್ರಜಾಸೃಷ್ಟಿಯಂ ಮಾಡಿ ಅವರ್ಗೆ ತ್ರಿವರ್ಗಸಾಧನೋಪಾಯಶಾಸ್ತ್ರಂಗಳಂ ಒಂದು ಲಕ್ಷ ಅಧ್ಯಾಯದಿಂ ಪೇಳ್ದಂ. ಅವನ ಅಪ್ಪಣೆಯಿಂ ಶಾಸ್ತ್ರದೊಳೇಕದೇಶವಂ ತೆಗೆದುಕೊಂಡು ಸ್ವಾಯಂಭುವ ಮನು ಧರ್ಮಾಧಿಕಾರವಂ ಮಾಡಿದಂ. ಬೃಹಸ್ಪತಿ ಅರ್ಥಾಧಿಕಾರವಂ ಮಾಡಿದಂ.

ಪರಮೇಶ್ವರನ ಅನುಚರನಾದ ನಂದಿಕೇಶ್ವರನು ಪುರುಷಾರ್ಥಸಂತತಿವೃದ್ಧಿಗೆ ಕಾರಣವಾದುದರಿಂದ ಕಾಮಶಾಸ್ತ್ರಮಂ ಸಾವಿರ ಅಧ್ಯಾಯ ಸೂತ್ರರೂಪವಾಗಿ ಪೇಳ್ದಂ. ಅದಂ ಐನೂರು ಅಧ್ಯಾಯದಿಂದ ಶ್ವೇತಕೇತು ಪೇಳ್ದಂ. ಅದಂ ನೂರು ಅಧ್ಯಾಯದಿಂದ ಸಾಧಾರಣ ಸಾಂಪ್ರಯೋಗಿಕ ಕನ್ಯಾಸಂಪ್ರಯುಕ್ತಕ ಭಾರ್ಯಾಧಿಕಾರಿಕ ಪಾರದಾರಿಕ ವೈಶಿಕೌಪನಿಷದಿಕಂಗಳೆಂಬ ಏಳು ಅಧಿಕರಣಂಗಳಂ ಬಾಭ್ರವ್ಯ ಪಾಂಚಾಲನು ಪೇಳ್ದಂ ಮತ್ತಂ ಆರನೆಯ ಅಧಿಕರಣವಾದ ವೈಶಿಕವಂ ಪಾಟಲಿಪುರವೆಂಬ ಪಟ್ಟಣದ ವೇಶ್ಯಾಸ್ತ್ರೀಯರ ಪ್ರಾರ್ಥನೆಯಿಂದ ದತ್ತಕನೆಂಬವಂ ಪೇಳ್ದಂ ಔಪನಿಷದಿಕವೆಂಬ ಅಧಿಕರಣಮಂ ವಾತ್ಸ್ಯಾಯನನೆಂಬ ಋಷಿ ಏಳು ಅಧಿಕರಣಂಗಳಿಂ ಅನೇಕವಿಧವಾಗಿ ಈ ಕಾಮಶಾಸ್ತ್ರವಂ ಸರ್ವಜನ ಸಂತೋಷಕರವಾಗಿ ಸೂತ್ರರೂಪವಾಗಿ ಪೇಳ್ದುದರಿಂದ ಇದು ಋಷಿಸಮ್ಮತವೆಂದು ಪೇಳಲ್ಪಟ್ಟುದು. ಕಕ್ಕೋಕನೆಂಬ ಮಹಾಕವಿ ಋಷಿಪ್ರೋಕ್ತವಾದ ಈ ಕಾಮಶಾಸ್ತ್ರಮಂ ಪಂಡಿತಪಾಮರರ್ಗಂ ಆಬಾಲವೃದ್ಧರ್ಗಂ ರಂಜನೆಯಾಗುವಂತೆ ಪೇಳ್ದಂ.

## ಸರ್ವಾಗಮಶಿಖಾಮಣಿ. ಸು. 1600.

ವಚನ 590, ಅಪ್ರಮಾಣ ಕೂಡಲಸಂಗಮದೇವ ಎಂಬ ಅಂಕಿತವಿದೆ

## ಶಾಂಭವೀ ಚಕ್ರೋದ್ಧರಣ. ಸು. 1600

ಇದು ಪ್ರಾಯಿಕವಾಗಿ ಗದ್ಯಗ್ರಂಥ ಅಲ್ಲಲ್ಲಿ ಪುರಾತನರ ವಚನಗಳು ಉದಾಹೃತವಾಗಿವೆ. ಕೊನೆಯಲ್ಲಿ 'ನಿಜಗುರು ಸ್ವತಂತ್ರಸಿದ್ಧಲಿಂಗೇಶ್ವರ ನಿಮ್ಮ ಶರಣರಾದ ಯೋಗಿಗಳೆ ಬಲ್ಲರು " ಎಂದು ಹೇಳಿವೆ ಇದರಲ್ಲಿ 10 ಪದಗಳೂ ಇವೆ. ಒಂದನ್ನು ಉದಾಹರಿಸುತ್ತೇವೆ :—

ಹತ್ತುದಳ ಕಮಲಮಣಿಪೂರಕದ ಚಕ್ರದಲಿ |
ವಿಸ್ತಾರಶಿಖಾಗ್ರ ಪ್ರಣವಮವನೆ ಧ್ಯಾನಿಪುದು ||
ವಸ್ತುಸಕಲವನೀವ ರುದ್ರನೇ ಗತಿಯೆಂದು |
ಹತ್ತು ಅಕ್ಷರವ ಭಕ್ತಿಯಲಿ ಭಾವಿಪುದು ||

ಇಷ್ಟಲಿಂಗಚಾರಿತ್ರ (ಪದ್ಯ 47). ಸು. 1600.

ನಿಧಿಯಿದೆ ನಿಧಾನವಿದೆ ಸುಧೆಯಿದೆ ಸುವರ್ಣಗಿರಿ |
ಯಿದೆ ಸಿದ್ಧರಸದ ಮಡುವಿದೆ ಮರುಜೆವಣಿಯ ಗಿಡು |
ವಿದೆ ಸುರರ ಭೂಜವಿದೆ ಸುರಭಿಯಿದೆ ಚಕಿತಮಭಿಧತ್ತೆ ಶ್ರುತಿರಪಿ ಎನಿಪ್ಪ ||
ಅಧಿಕನಿತ್ಯನಿರಾಳವಿದೆ ತತ್ತ್ವಮಸಿ ಪದಾ |
ರ್ಥದ ತುಟ್ಟತುದಿಯ ನಿರ್ವಯಲ ನಿಶ್ಶೂನ್ಯ ಬಂ |
ದಿದೆ ಕರಸ್ಥಳದೊಳಾಹಾ ಮಹಾದೇವ ನಾನೇಂ ಭಾಗ್ಯನೋ ಯೋಗ್ಯನೋ ||

ಗುರುಶಿಷ್ಯವಾದ (ಪದ 31). ಸು. 1600.

ಪಲ್ಲವಿ|| ಚೆನ್ನಶ್ರೀಗುರುರಾಯ ನಿಮ್ಮ ಪಾದಂಗಳನು |
ಮುನ್ನ ಲಜಿಸುತ ಬಂದೆಯೆನ್ನ ಭವಬಾಧೆಗಳ |
ಚೆನ್ನಾಗಿ ಪರಿಹರಿಸಿ ಮನ್ನಿಸನ್ನಯ ಗುರುವೆ ನಿಮ್ಮ ಮತೆಹೊಕ್ಕೆನಭವಾ ||
ನೆಲೆದಪ್ಪಿ ಕುಲಗೆಟ್ಟು ಚಲವಟಿ'ದು ತಲೆಯೆತ್ತಿ |
ಒಲು ಭಂಗದೊಳು ನಿಂದು ಪುಲಿಪೊವಲನುಟ್ಟಂಗೆ |
ಸಲಹೆಂದು ಕಾಡುವರೆ ಪರಮಮೂರ್ಖರ ಮೂರ್ಖ ನಾಚಿಕಿಲ್ಲೇನು ನಿನಗೆ ||

ಶಬ್ದಾಗಮ. ಸು. 1600.

ಕನ್ನಡನಿಘಂಟು, ಕಂದರೂಪವಾಗಿದೆ ಪ್ರತಿಪದ್ಯವೂ ಶಬ್ದಾಗಮದೊಳ್ ಎಂದು ಮುಗಿಯುತ್ತದೆ

ಶ್ರೀಧರಮೆನೆ ಗಿರಿಯಕ್ಕುಂ | ಶ್ರೀಧರಮೆನೆ ಸಿಂಹಮಕ್ಕು ಸಿಂಗರಮಕ್ಕುಂ |
ಶ್ರೀಧರಮನೆ ಜಲಮಕ್ಕುಂ | ಶ್ರೀಧರನೆನೆ ವಿಷ್ಣುವಕ್ಕು ಶಬ್ದಾಗಮದೊಳ್ ||
ಶ್ರೀಧರಮೆನೆ ಕೊಳಮಕ್ಕುಂ | ಶ್ರೀಧರಮೆನೆ ಕೋಟೆಯಕ್ಕು ಕುಮುದಮದಕ್ಕುಂ |
ಶ್ರೀಧರಮೆನೆಯಜನಕ್ಕುಂ | ಶ್ರೀಧರನೆನೆ ಶಿವನದಕ್ಕು ಶಬ್ದಾಗಮದೊಳ್ ||
ಅರಡಿಯೆನೆ ಮುಡಿಯಕ್ಕುಂ | ಅರಡಿಯೆನೆ ತುಂಬಿಯಕ್ಕು ಮಾರಡಿ ತುರಗಂ |
ಅರಡಿಯೆನೆ ಗಿರಿಯಕ್ಕುಂ | ಅರಡಿಯೆನೆಯುಹಿಮಕರಕ್ಕು ಶಬ್ದಾಗಮದೊಳ್ ||

ಭಾರತನಿಘಂಟು. ಸು. 1600.

ಕಂದ 67. ಆದಿಯಲ್ಲಿ ಸರಸ್ವತೀಸ್ತುತಿ ಇದೆ. ಇದರಲ್ಲಿ ಕುಮಾರ ವ್ಯಾಸನು ಪ್ರಯೋಗಿಸಿರುವ ದೇಶ್ಯಶಬ್ದಗಳಿಗೆ ಅರ್ಥವು ಹೇಳಿದೆ.

ತಲ್ಲಣವೆನೆ ಭಯಮಕ್ಕುಂ | ಹಲ್ಲಣಿಸಿತೆನಲ್ಕೆ ನಿಲ್ಲದೈದಿದುದಕ್ಕುಂ |
ಭುಲ್ಲವಣೆಯೆನಲು ಪೆರ್ಚುಗೆ | ಘಲ್ಲಣೆಯೆನೆ ಘಾತಿಯೆಂದು ತಿಳಿಗೆ ವಿದಗ್ಧರ್ ||
ಕೊಳುಗುಳಮೆಂದೆನೆ ಕಾಳೆಗ | ಮಳವೆಂದೆನೆ ಸತ್ವಮುಂ ಸಮಾಪಮು ಮಕ್ಕುಂ |
ತಳಪಟಮೆಂದೊಡೆ ಬಯಲು | ಮ್ಮಳಮೆಂದೊಡೆ ದುಗುಡವೆಂದು ತಿಳಿಗೆ ವಿದಗ್ಧರ್ ||

ಸಿದ್ಧೇಶ್ವರತ್ರಿಪದಿ. ಸು. 1600.

ಪ್ರತಿಪದ್ಯವೂ " ಸಿದ್ಧೇಶಾ ದಯವಾಗೋ " ಎಂದು ಮುಗಿಯುತ್ತದೆ. ಪದ್ಯ 40.

ಆಸೆಯ ದಾಸನಿಗೆ | ವೇಷದ ಚೋರನಿಗೆ | ಭಾಷೆಹೀನನಿಗೆ ದೋಷ |
ಕ್ಕೀಡಾದವಗೆ | ಸೋಸಲ ಸಿದ್ಧೇಶಾ ದಯವಾಗೋ ||

ಲೋಕಸ್ವರೂಪ (ಕಂದ 81). ಸು. 1600

ಶ್ರೀವರ್ಧಮಾನಜಿನರಂ | ಭಾವನಮಸ್ಕಾರದಿಂದೆ ವಂದಿಸಿ ಮುದದಿಂ |
ಭಾವಕರಿಗಱಿಯೆ ಪೇಳ್ವೆಂ| ಪಾವನಲೋಕಸ್ವರೂಪಮಂ ಬುಧನುತಮಂ||

ಉಪವಾಸಗಳು (ಗದ್ಯ). ಸು. 1600

ಭಾದ್ರಪದಮಾಸದ ಶುಕ್ಲಪಕ್ಷದ ಸಪ್ತಮಿಯ ದಿನದಲು ಉಪವಾಸ ಮಂ ಮಾಡುವುದು—ಇತ್ಯಾದಿ.

ನೀತಿಕಂದಶತಕ. ಸು. 1600.

ಮುದದೆಡೆಗೆ ದುಃಖದೆಡೆಗಂ | ಸುದತಿಯರ ವಿಯೋಗದೆಡೆಗೆ ಕೂಡಿ ದೆಡೆಗಂ |

ಕದಡಿರ್ದ ಚಿತ್ರದೆಡೆಗಂ | ಪದಪಿಂದಂ ಬಂಧುವಲ್ತೆ ಸಾಹಿತ್ಯರಸಂ ||
ಮಾನಿತಪದಮಂ ಪದನಂ | ಧಾನಮನರ್ಥಪ್ರತೀತಿಯಂ ಕವಿಹೃದಯ |
ಸ್ಥಾನಮನಱಿದೋದದೆ ಕ | ಣ್ಬೇನೆಯ ಕರಡಿಯವೊಲಱಿಚುವಂ ವಾಚಕನೇ ||

## ನೀತಿಪದ್ಯಗಳು. ಸು. 1600.

ಪರಿಜನಫಲವತ್ಕ್ಷೇತ್ರೋತ್ಕರಬಂಧುಜನಾಳಿ ಭವನಮಹಿಳಾವಳಿಯಂ |
ಬರುತರಪವರ್ಗಚಿಂತಾ | ತುರನಪವರ್ಗಪ್ರಚಿಂತೆಯಂ ಮಾಡುಗುಮೇ ||
ಯಸ್ಮಾತ್ತಸ್ಮಾತೆಂಬೀ | ಕಶ್ಮಲದಿಂದಾದ ನುಡಿಯ ಜಾಣ್ಮೆಗಳೆಲ್ಲಂ |
ವಿಸ್ಮಯಕರ್ಣಾಟಕಳಾ | ರಶ್ಮಿಯ ರಚನೆಗಳ ಮುಂದದೇಂ ಸೊಗಯಿಸುವೋ ||

ಹೆಣ್ಣಂ ತಲೆಗೇಱಿಸಿ ತಿರಿ | ದುಣ್ಣನೆ ಮುನ್ನೊರ್ವ ಮೂಱುಕಣ್ಣನಿವಂ ಮು |
ಕ್ಕಣ್ಣಂಗಾವಿದಿಯುಳಿದಾ | ದಣ್ಣಂಗಳನೆಣಿಕಲ್ಲನಾಡರೆ ನಿತಿಯರ್ ||
ಸುರಗಿ ಸುರಹೊನ್ನೆ ಸಂಪಗೆ | ಸರಸಿಜಮಿರೆ ಮದ್ದುಗುಣಿಕೆಗೀಶ್ವರನೊಲಿವಂ |
ಅರಸುಗಳುಂ ಕಾಂತೆಯರುಂ | ಹುರುಳಿಲ್ಲದವರ್ಗೆ ಕೂರ್ಪರಿದು ಸಿದ್ಧಾಂತಂ ||
ಧನಮದು ನಗುವುದು ಲೋಭಿಯ | ತನಯನ ಮುದ್ದಿಸುವ ಸತಿಯನಸತಿಯ ನಗುವಳ್ |
ಅನುವರವಂ ಕಂಡಂಜುವ | ಜನಪತಿಯಂ ವ್ಯತ್ಯದೇವಿ ನಗುವಳ್ ರಾಮಾ ||

## ಸಿದ್ಧೇಶ್ವರನ ತ್ರಿಪದಿ (ಪದ್ಯ 56). ಸು. 1600.

ವರಗುರುಸಿದ್ಧೇಶ್ವರ | ನುರುತರ ಸ್ತೋತ್ರವನು | ಬರೆದರ್ಥವನು ಪೇಳಿ |
ಕೇಳಿದವರಿಗೆ | ಪರಶಿವನೊಳೈಕ್ಯವಿದು ಸಿದ್ಧಾಂತ ||

## ತುರಂಗಧಾಟಿ. ಸು. 1600

ದುಃಶಕ. ಕೊನೆಯಲ್ಲಿ "ಶಾಂತವೀರೇಶದೇವ ಜಯಜಯಾ" ಎಂದಿದೆ.

## ಸಕಲಸಾರ ಸಂಗ್ರಹ. ಸು. 1600.

ಪಳಿಕಿನ ಕೊಡನೊಳ್ ಸಹಜಂ|ಬೆಳಗುವ ಶಶಿಕಾಂತದೆಸೆವ ಬಿಂಬಾಕೃತಿ ತ|
ನ್ನೊಳಗೊಳಗೆ ತೊಳಗಿ ಬೆಳಗುವ | ಬೆಳಗಂ ನಿಜವಾಗಿ ಕಂಡೊಡದು
ಸಿಂಡಸ್ಥಂ ||

## ಜಿನೇಂದ್ರಮಾಲೆ. ಸು. 1600

ಜ್ಯೋತಿಷಗ್ರಂಥ; 150 ಕಂದಗಳಿವೆ. ಹಲವು ಕಂದಗಳು "ಜಿನಪದ ಭೃಂಗ" ಎಂದು ಮುಗಿಯುತ್ತವೆ.

ಮೂಡಣದೆಸೆಯೊಳ್ ದಿನಪಂ|ನೈಋಡಿರೆ ತಾನಗ್ನಿಯಲ್ಲಿ ಮಂಗಳನಿರ್ಕುಂ|
ಕೂಡೆ ಬೃಹಸ್ಪತಿ ತೆಂಕಲ್ | ರೂಢಿಗೆ ನೈಋತ್ಯದಲ್ಲಿ ಬುಧ ಪರ್ತಿಸುಗಂ||
ನಿಂದಿರ್ದು ನಡೆದು ಮಲಗಿದ|ನೆಂದುದಕಾಯೋಜಿಬಲ್ಲಿ ನೆಲಸಿದ ಗ್ರಹದಿಂ |
ಸಂದಿರ್ದ ಪೂರ್ಣದೃಷ್ಟಿಯೊ | ಳಂದಱಿವುದು ಪಯಣಾಗತಿಯ ಜಿನಪದ
ಭೃಂಗಾ ||

## ರಾಜನೃಪಚರಿತೆ. ಸು. 1610.

ಸೂಜಿಯ ಮೊನೆಯ ತಾಗಿದ ಪಂಚರತ್ನ ಪ | ರಾಜಿಸಿತಬಲೆಯರೆದೆಗ |
ಆಜಿರಂಗದೊಳಲಗಿನ ಮೊನೆ ತಾಗಿದ | ರಾಜನಿಗವನಿ ಪೋಷಿಪುರು ||
ಅಳುಕದಟ'ದೊಡೆ ಸಂಗರದೊಳು ಸಗ್ಗ|ಲಲನೆಯರುಗಳು ಪೋಷಿಪರು|
ಉಟ'ದನಾದೊಡೆ ನರಲೋಕಸಂಪದ ಬಂದು|ನೆಲಸುವುದಾತನಿಗೊಲಿದು ||
ಧರೆಯ ವೈರಿಗಳ ಗರ್ವವ ಸುಟ್ಟು ಮೇಲಣ|ತರಣಿಬಿಂಬಕೆ ದಾಟ'ಯಿಡುವ|
ನರಪತಿವಿಕ್ರಮಶಿಖಿಯೆನೆ ಪದರೇಣು | ಪರಿದುದಾಕಾಶಮಂಡಲಕೆ ||
ಜಡಿವ ಖಡುಗ ಮಿಂಚು ಮೊರೆವ ವಾದ್ಯದ ರವ | ಗುಡುಗು ಕೂರ್ವಾಳ
ಹೊಯ್ಲುಗಳು |
ಸಿಡಿಲು ನೆತ್ತರು ಮಳೆವನಿಯಾಗೆ ರಣಭೂಮಿ|ಪಡೆದುದು ಕಾರ್ಗಾಲವನು||
ಪರಮೊಗುರುಳ ಕಿಱುವೆಱೆನೊಸಲಿನ ಮಿಗ | ವಱಿಗಣ್ಣಾತೊಳಪ ಕದಪಿನ |
ನಱೆವೆಱೆಮೊಗದೇಱುಂಜವ್ವನೆಯರು ಬಂದು | ತುಱುಗಿಹರೋಲಗ
ದೊಳಗೆ ||

ಬಟ್ಟವೊಗದ ಬಡನಡುವಿನ ಸೈದಿಲ । ನಿಟ್ಟಿಸಳ್ಗಣ್ಣ ವೋಹಿಸುವ ।
ಇಟ್ಟೆಡೆಮೊಲೆಯ ತೆಳ್ವಸಿಱಿನ ನೀರೆಯು । ರಿಟ್ಟಣಿಸಿದರು ಚೆಲ್ವಿಂದ ॥

## ಜಗದೇವರಾಯನ ಕಾವ್ಯ. ಸು. 1620.

ಚೆನ್ನಪಟ್ಟಣದ ದೊರೆಯಾದ ಜಗದೇವರಾಯನ ಸ್ತುತಿರೂಪವಾದ ಗ್ರಂಥ; ವೃತ್ತ 120. ಆರಂಭದಲ್ಲಿ ವಿಷ್ಣು, ಶಿವ ಇವರುಗಳ ಸ್ತುತಿ ಇದೆ.

ಭೂನಾಥಂ ಮಣಿಕಂಠಸದ್ವರದರಾಜಂ ನೋಡೆ ಚಿಂತಾಮಣಿ ।
ಸ್ಥಾನಂ ಶಾರ್ಙಕರಕ್ಷಣಂ ಶಶಧರಾಸ್ಯಂ ನಾಡೆ ಸತ್ಪಾರ್ಥಭಾ ॥
ಷಾನಂದಂ ಕಿರಣಾವಲೀಕ್ಷಣಪರಂ ಸದ್ವರ್ಧಮಾನೋದಯಂ ।
ತಾನಾದಂ ಜಗದೇವರಾಯನೃಪಂ ಸತ್ಕರ್ಣಶಾಸ್ತ್ರೋದಯಂ ॥
ತಾಂ ಮೂಱಾಱಡಿಯೆಯ್ದೆ ತನ್ನ ರಿಪುಗಳ್ ಭೂಲಂಘನಂ ಗೆಯ್ದಪರ್ ।
ತಾನೊಂದಂಬನೆ ಜಟ್ಟಿಡಂದು ರಿಪುಗಳ್ ಸರ್ವಾಸ್ತ್ರಮಂ ಬಿಟ್ಟಪರ್ ॥
ಪ್ರೇಮಂಬೆತ್ತು ವಸುಂಧರಾಪತಿಗೆ ತಾಂ ಪ್ರಾಣೇಶನಾಗಲ್ ರಿಪು ।
ಸ್ತೋಮಂ ನಾಕನಿವಾಸಿನೀಪತಿಗಳಾದರ್ ಭೂಪನೇಂ ವೀರನೋ ॥
ಧುರದೊಳ್ ಶ್ರೀಜಗದೇವ ನಿನ್ನ ವಿಜಯಪ್ರಸ್ಥಾನದೊಳ್ ವಾಜಿಸ ।
ತ್ಖುರಘಾತೋತ್ಥಿತಧೂಳಿಯಿಂ ಜಲಧಿಯೆಲ್ಲಂ ಬತ್ತಿ ಪೋಗಲ್ ದಟಂ ॥
ಹರಿ ನಿನ್ನೀಮನದೊಳ್ ಕಟಾಕ್ಷರುಚಿಯೊಳ್ ಶ್ರೀಕಾಂತೆ ಹಸ್ತಾಗ್ರದೊಳ್।
ಸುರವೃಕ್ಷಂ ಖರಖಡ್ಗದೊಳ್ ವಿಷಮರಿಸ್ತ್ರೀಯೊಳ್ ತದೌರ್ವಾನಳಂ ॥

## ಮಡಿವಾಳಯ್ಯಗಳ ತಾರಾವಳಿ ಸು. 1650.

ಹಾಡಿನಂತಿದೆ, ನುಡಿ 27. ಆದ್ಯಂತಗಳಲ್ಲಿ ಒಂದೊಂದು ಕಂದವಿದೆ. ಮಡಿವಳಮಾಚಯ್ಯನ ಸ್ತುತಿರೂಪವಾದ ಗ್ರಂಥ. ಈತನು ವೀರಭದ್ರಾವತಾರವೆಂದು ಹೇಳಿದೆ.

ವರವೀರಭದ್ರನುದ್ಭವಿಸಲತ್ತವರಿಗೆ ।
ದುರಿತ ದುಷ್ಕೃತದ ಸೂಚನೆಯು ಸ್ವಪ್ನಗಳಾಗೆ ।
ಅರುಣಕೋಟಿಗಳೊಗೆದಂತೆ ಪ್ರಜ್ವಲವಾಗೆ ।
ಸುರಸತಿಯರ ಕರ್ಣಪತ್ರವೋಸರಿಸುಗೆ ।
ಶರಧಿ ಘೂರ್ಮಿಸುವಂತೆ ಸಂಜೆ ಬೊಬ್ಬೆಗಳಾಗೆ ।

ಉರಿವ ನಗಾನುಗತವಾಗಿ ಕಾರ್ಬೋಗೆಯಾಗೆ |
ಸುರಮನುಮುನಿಗಳು ಶವದಂತಾಗಲು ಮಿಗೆ |
ಹರಿವಿರಿಂಚಿಗಳಿಗೆ ಹಮ್ಮು ಪಲ್ಲಟವಾಗೆ |
ಹರುಷಗುಂದಲು ದಕ್ಷನಿಂತೆಂದನವರಿಗೆ |
ಮರುಳೊಡನಾಡುವ ಮತಿಹೀನಗೊರವಂಗೆ |
ಪೆಱತಂಜುವೆನೆ ಎಂದನು | ಆ ಸಮಯದಿ ಧುರಧೀರನೈತಂದನು |
ದಕ್ಷನ ಸಿರವರಿದು ಹೋಮದೊಳಿಟ್ಟನು |
ಪದ್ಮಾಕ್ಷನ ಸಿರವನು ಹಱಿಯಲೆಚ್ಚನು |
ಭಾರತಿಯ ಮೂಗನರಿದು ಕರದೊಳಿತ್ತನು |
ಪೂವಡಿಗನುರವ ತುಱಿದು ಕುಲಿಲೆಂದು ಬೊಬ್ಬಿಱಿದನು ||

ಗುರುಸ್ತೋತ್ರ. ಸು. 1650.

ಭಾಮಿನೀಷಟ್ಪದಿಯಲ್ಲಿ ಬರೆದಿದೆ ; ಪದ್ಯ 25.

ಲಿಂಗದೊಳು ನಡೆ ಲಿಂಗದೊಳು ನುಡಿ|ಲಿಂಗದೊಳು ಸಕಲಾಂಗಸಮರಸ
ಲಿಂಗದೊಳು ತನುಭಾವಕರಣಗಳೊಂದು ಹುರಿಯಾಗಿ ||
ಲಿಂಗದೊಳು ಕೀಲಿಸಿದ ಕಂಗಳು | ಹಿಂಗದಿರೆ ನಿಜಮುಕ್ತಿಯೆನುತದ |
ಱಂಗಿತವನೆನ್ನೊಳಗೆ ತೋಱಿದ ಗುರುವೆ ಶರಣಾರ್ತಿ ||

ಉದ್ಧರಣೆಯವಾಕ್ಯ. ಸು. 1650.

ಶ್ರೀವೀರಶೈವಸಿದ್ಧಾಂತಸ್ಥಾಪನಾಚಾರ್ಯರಪ್ಪ ಆದ್ಯರ ಅನುಮತದಿಂದುದ್ಧರಿಸಿದ ಶಿವಲಿಂಗಾಂಗಸಂಬಂಧಪ್ರತಿಪಾದಕಾಗಮಗ್ರಂಥವಾಕ್ಯಂಗಳಿಂ ಕೆಲವು ವಚನಂಗಳಂ ಸಂಗ್ರಹಿಸಿದ ಉದ್ಧರಣೆಯ ಸಂಬಂಧ.

ಬಸವಲಿಂಗನಾಮಾಷ್ಟೋತ್ತರ (ನುಡಿ 108). ಸು. 1650.

ಘೋರಪಾಪದೋಷಪುಂಜಕುಜಕುಠಾರ ಬಸವಲಿಂಗ |
ಸಾರವೀರಶೈವಸಮಯಚಕ್ರವರ್ತಿ ಬಸವಲಿಂಗ ||

ಮಾಯೆಯೆಂಬ ಬಲೆಗೆ ಸಿಲುಕಿ ಮರುಳನಾದೆ ಬಸವಲಿಂಗ |
ಕಾಯೊ ಎನ್ನ ಕರ್ಮಗಳನು ಕಡೆಗೆ ಮೆಟ್ಟಿ ಬಸವಲಿಂಗ ||

## ಪಾರ್ವತೀಸ್ತುತಿ (ವಾರ್ಧಕಷಟ್ಪದಿ). ಸು. 1650.

ಪರಮೇಶ್ವರಿಯು ಪುಣ್ಯನಾಮವನು ಪಗಲಿರುಳು |
ಸರಸಾನುರಾಗದಿಂದೋದಿ ಕೇಳಿದವರ್ಗೆ |
ದುರಿತಕಂಟಕವಟಿದು ಕೈಸಾರುತಿಹುವಮಳತರಭೋಗಮೋಕ್ಷಂಗಳು ||

## ಬಸವಸ್ತುತಿ (ನುಡಿ 31). ಸು. 1650.

ಧರಣಿಪತಿಯು ಓಲಗದೊಳು | ಶರಣನಾಗಮಯ್ಯ ಬರಲು |
ಬೆರಳಿನಲ್ಲಿ ಹಾಲ ಕಡೆದ ಬಸವ ಪಾಹಿ ಮಾಂ ||
ಏಷಮರೂಪುತಾಳಿ ಬಂದ | ಏಷಮಧಾರಿ ಜಂಗಮಕ್ಕೆ |
ಲೇಸಿನಿಂದ ಬಸವನೆದ್ದು ಶರಣುಮಾಡಿದ ||
ಚಿತ್ರರೂಪು ಜಂಗಮರ | ಪ್ರತಿಮೆಗಳಿಗೆ ಪ್ರಾಣವಿತ್ತು |
ಅತಿಶಯಿಂದ ಬಸವ ಮನೆಗೆ ಕರೆದು ತಂದನು ||

## ಅಂಗಜಬೋಧೆ. ಸು. 1650.

ಕಾಮಶಾಸ್ತ್ರ, ಭಾಮಿನೀಷಟ್ಪದಿ, ಸಂಧಿ 9, ಪದ್ಯ 288. ಆದಿಯಲ್ಲಿ ಗಣೇಶ, ಶಿವ, ಮನ್ಮಥ, ಇವರುಗಳ ಸ್ತುತಿ ಇದೆ ಹರ, ಗಿರಿಜೆ, ನಂದಿಕೇಶ್ವರ, ಭರತಾಚಾರ್ಯ, ಸೋಮೇಶ್ವರ, ಜಯಮಂಗಳ, ವಾಸವ, ವ್ಯಾಸಬೋಧ, ಸರಸಿಜಾಕ್ಷ, ಪುಷ್ಪದಂತ, ಹರಿಹಯ, ರತಿಗುಣಪತಾಕೆ, ಕಕ್ಕೋಕ, ಪಾಂಚಾಲ, ನಾರಾಯಣ, ಸಿರಿಸುತ, ಸುರರು, ಮನುಗಳು, ಭೋಜರಾಜ, ಸೌಮ್ಯನರ, ದತ್ತಕ, ಕೂಚಿಮಾರ, ಶಶಭದ್ರ ಮೊದಲಾದ ಪ್ರಮಾಣಗಳನ್ನು ಅನುಸರಿಸಿರುವಂತೆ ಕವಿ ಹೇಳುತ್ತಾನೆ.

ಚಿತ್ತವಿಂಗಿತವರಿದು ಹರುಷವ | ನಿತ್ತು ಕರುಣಕಟಾಕ್ಷದಿಂದಲಿ |
ಸತ್ಯಸಂತೋಷದಲಿಯಭಯವನಿತ್ತು ನಿಜಪತಿಗೆ ||

ನಿತ್ಯಕೃತ್ಯದ ನಿಯಮದಲಿಯನು । ರಕ್ತಿಶಕ್ತಿಯನಿತ್ತು ಮನವೊ ।
ಪ್ಪಿತ್ತುಗೊಂಡನುಕೂಲೆಯಾಗಿಹ ಬಾಲೆ ಕುಲಯುವತಿ ॥

## ನೀತಿವಾರ್ಧಕ. ಸು. 1(5).

ತನ್ನ ಕಾರ್ಯಕ್ಕಾಗಿ ಪರರ ಕೆಡಿಸುವರೊಳಂ ।
ಭಿನ್ನವಿಲ್ಲಗೆ ಭಾಷೆಕೊಟ್ಟು ತಪ್ಪುವರೊಳಂ ।
ಹೊನ್ನಾಸೆಗಾಗಿ ಮನೆಹೊಕ್ಕವರ ಕಡಿಪರೊಳು ವಿಶ್ವಾಸ ಸಲ್ಲ ಕೇಳ್ಳೆ ॥
ಕಣ್ಣಿಡೊಳಗಣ ಗಂಟ ಕೈನೀಡಿ ತೆಗೆವಂತೆ ।
ಸುಣ್ಣ ಪಾಯಸನೆಂದು ಸುರಿದುಂಬ ಮರುಳಂತೆ ।
ಯಿನ್ನಿವರೊಳೇನುಫಲ ದೊರೆಕೊಳ್ಳದೆಲೆ ಕುವರ ಕೇಳೆಂದ ಗುರುವರೇಣ್ಯ ॥

## ಶ್ರಾವಕಾಚಾರ. ಸು 1650.

ಸಾಂಗತ್ಯ ಪದ್ಯ 93 ಆರಂಭದಲ್ಲಿ ಶಾಂತೀಶ, ಸಿದ್ಧಾದಿಗಳು, ಸರಸ್ವತಿ ಇವರುಗಳ ಸ್ತುತಿ ಇದೆ ಸ್ತ್ರೀಯರಿಗೆ ಉಪದೇಶರೂಪವಾದ ಗ್ರಂಥ.

ಕೊಲೆ ಹುಸಿ ಕಳವು ಪರಾಂಗನೆ ಬಹುಕಾಂಕ್ಷೆ । ಪಲ ಮದ್ಯ ಜೇನ ತುಪ್ಪವನು ।
ಸಲೆ ಜೀವರಾಶಿ ಪಾಲ್ಕರದ ಫಲಂಗಳ । ನೊಲಿದು ಜೈನರು ಬಿಡಬೇಕು ॥
ಕಟ್ಟಿದ ಕರ್ಮದಿ ಹುಟ್ಟಿದ ದೇಹಕೆ । ತೊಟ್ಟನೆ ವ್ಯಾಧಿ ತೋಱಿದೊಡೆ ।
ಹೆಟ್ಟುಗೆ ಕಣಿಯರ ಮನೆಗೈದಿ ಸೇಸೆಯ।ನಿಟ್ಟು ಕೈಮುಗಿದು ಕೇಳುವುದೇ ॥
ಉತ್ತಮಕುಲಸತಿಯರು ಸೀಹಕಣಿಯರ । ಗೆತ್ತಿ ಕೈಮುಗಿದಾಗ ತಮ್ಮ ।
ಉತ್ತಮವ್ರತಕತಿಚಾರ ಮತ್ತಾವುದು । ಮತ್ತೆ ದುರ್ಗತಿಗೆ ಕಾರಣವು ॥
ಗಟ್ಟಿಪಾವಡೆಯಲ್ಲಿ ಶೋಧಿಸಿದುದಕವ । ನೆಟ್ಟನೆ ತಂದು ಶುಚಿಯಾಗಿ ।
ಬಿಟ್ಟು ಜೀವಾಳಿಯ ಶುದ್ಧೋದಕದಿಂದ । ಹೆಟ್ಟುಗೆಯಡುಗೆಮಾಡುವುದು ॥
ಮಕ್ಕಳಿಗೆಂಜಲಿಲ್ಲೆಂಬ ಮಾತನು ಮಾಡಿ । ಮಕ್ಕಳ ಬಳಲೆ ಕಟ್ಟಿಗಳ ।
ಮಿಕ್ಕ ಹಾಲೆಂಬಿವ ಮುಟ್ಟದೆ ಮಡಕೆಯ।ನಕ್ಕ ಕೈದೊಳೆದು ಮುಟ್ಟುವುದು ॥
ಮಕ್ಕಳ ತೊಡೆಯಮೇಲಿಟ್ಟು ಬೀಸಲು ಸತಿ । ಮಕ್ಕಳ ಕೈಕಾಲುಗಳು ।
ದೊಕ್ಕನೆ ಮುಟ್ಟುವುವೆಂದವ ಸಂತೈಸಿ । ಯಕ್ಕ ಸುದ್ದದಲಿ ಬೀಸುವುದು ॥

ಶುಕಸಪ್ತತಿ ಸು. 1650.

ಭಾಮಿನೀಷಟ್ಪದಿ, ಪದ್ಯ ಸುಮಾರು 3000. ಕೆಳದಿಯರಸರ ಕಾಲದಲ್ಲಿ ಹುಟ್ಟಿದ ಗ್ರಂಥ. "ಶುಕನಗ್ನಿಭೂಭುಜಗಱುಹಿದತಿಕೌಶಲ್ಯಕಥೆಯನು ವಿರಚಿಸುವೆನು" ಎಂದು ಕವಿ ಹೇಳುತ್ತಾನೆ.

ಜಡೆಮುಡಿಯ ನಡುವೆಡೆಯೊಳಡಗಿಹ | ಮಡದಿಯನು ಬಿಡದಡಿಗಡಿಗೆ ಘುಡು |
ಘುಡಿಸಿ ಸಿಡಿಮಿಡಿಗುಟ್ಟುತೆದೆತೊಡೆಗಡರಿ ಜಡಿಯುತ್ತ ||
ಮಿಡುಕಿ ಜಡಿಬಿಡಿಯಾಗಲಾ ಬಡ | ನಡುವಿನಬಳಿಯಮೃದುನುಡಿಯಲೊಡ|
ಬಡಿಸಿ ಕಡುಸೊಗಸಿತ್ತ ಮೃಡ ನಿಮ್ಮಡಿಗೆ ಪೊಡಮಡುವೆ ||

ಗಂಧಸಿಂಧುರವಂದು ದಂದುಗ | ದಿಂದ ನೊಂದು ಮುಕುಂದ ಹರಿ ಗೋ |
ವಿಂದ ರಕ್ಷಿಪುದೆಂದು ಮೊರೆಯಿಡಲೊಂದು ನಿಮಿಷದಲಿ ||
ಬಂದು ನೆಗಳಿನ ಕೊಂದು ಪರಮಾ | ನಂದದಿಂದುದ್ಧರಿಸಿ ಭಕುತರ |
ತಂದೆಯೆನಿಸುವ ದೇವ ನಿಮ್ಮಂಘ್ರಿಗೆ ನಮೋ ಎಂಬೆ ||

ಯಶೋಧರಸಾಂಗತ್ಯ ಸು. 1650.

ಸಂಧಿ 3, ಪದ್ಯ 3,38. ಇದರ ಕಥಾಸಾರವು ಪ್ರಥಮಸಂಪುಟದ (ತಿದ್ದಿದ ಮುದ್ರಣ) 332ನೆಯ ಪುಟದಲ್ಲಿ ಕೊಟ್ಟಿರುವಂತೆಯೇ

ಸುರಪನ ವಜ್ರದ ಹತಿಗಂಜಿ ಗಿರಿಗಳು | ಪಿರಿದು ಬೇಗದೊಳೋಡಿಬಂದು |
ಶರಣುಹೊಕ್ಕವು ಮಾರಿದತ್ತನನೆಂಬಂತೆ | ಕರಿಗಳೊಪ್ಪಿದುವು ಪಾಜಸಲಿ ||

ಜ್ಯೋತಿಷ (ಚಂಪು) ಸು. 1650.

ಪಶ್ಚಿಮದಿಶೆಯೊಳ್ ಕಂಪಿಸೆ | ನಿಶ್ಚಯ ಧರ್ಮಂಗಳೆಲ್ಲ ಕೆಡುವುದು ಲೋಕಂ |
ಅಶ್ಚರಿ ಡಾಮಂ ಬರ್ಕುಂ| ದುಶ್ಚರದೊಳ್ನಗರದುರ್ಗಕೆಡುವುದುನಿಜದಿಂ||
ಬಿಲ್ಲುಪರಿವೇಷಪಡುವಲ್ | ಸಿಲ್ಲದೆಪೂರ್ವಾದ್ರಿಯೊಳಗೆಪಡಿಸೂರ್ಯಂಗಳ್|
ಬಲ್ಲಿತ್ತಗ್ನಿಯ ಮಿಂಚದು | ಮುಲ್ಲಸದಿಂ ತೋರ್ಪೆದಿವಸ ಮಡೆಸಂಪೂರ್ಣಂ||

ನರಪಿಂಗಲಿಯ ನಿಮಿತ್ತ (ಗದ್ಯ) ಸು. 1650.

ಆನೆಮುಟ್ಟಲು ಅಮೃತಾನ್ನವನುಣ್ಬರು. ಕಾಗೆ ಮುಟ್ಟಲು ಯಮಲೋಕಕ್ಕೆ ಹೋಗುವರು—ಇತ್ಯಾದಿ.

ಸಂವತ್ಸರಫಲ ಸು. 1650.

ಕಾಳಯುಕ್ತಿಸಂವತ್ಸರಕ್ಕೆ ಮಳೆಬೆಳೆ ಘನಮಕ್ಕು, ಸೈರಣೆ ಸಂತೋಷಮಕ್ಕು; ಬಡಗಲು....ತೆಲಗು ರಾಜ್ಯಕ್ಕೆ ರಾಜಭಯದಿಂದ ಕೇಡಕ್ಕು, ಮಿಕ್ಕ ದೇಶಕ್ಕೆ ಲೇಸಕ್ಕು.

ಮೂರೇಳು ದೀಕ್ಷೆಯ ಪದ ಸು. 1650.

ವಾರ್ಧಕಷಟ್ಪದಿ, ಪದ್ಯ 21. ಆರಂಭದಲ್ಲಿ "ಗುರುಶಾಂತಮೂರ್ತಿ ಮೂರೇಳು ದೀಕ್ಷೆಯನಿತ್ತ ತೆಱನ ಪೇೞ್ವೆನು" ಎಂದಿದೆ. ಒಂದೊಂದು ಪದ್ಯದಲ್ಲಿಯೂ ಒಂದೊಂದು ವಿಧವಾದ ದೀಕ್ಷೆ ವಿವರಿಸಿದೆ.

ಭಿಕ್ಷಾಟನ ಚರಿತೆಯ ಟೀಕೆ. ಸು. 1650.

"ಭೂಮೀಶ್ವರನಾದ ಸತ್ಯಭಾಷಾಭೂಷಣನಾದ ಪ್ರತಾಪರಂಜಿತನಾದ ಭೂಲೋಕದೇವೇಂದ್ರ ಬಲ್ಲಾಳಪುರವರಾಧೀಶ್ವರ ಭೈರವಭೂಪಾಲನ ಭುಜಾದಂಡ ಶಿವಭಕ್ತಿಚಾರ್ಧಿವರ್ಧನಪೂರ್ಣಚಂದ್ರ ಸೇನಾಧಿನಾಥ ಚಿಕ್ಕವೀರಭದ್ರಯ್ಯನು ಹೇೞಿಸಿದ ಭಿಕ್ಷಾಟನ ಚರಿತ್ರದ ವ್ಯಾಖ್ಯಾನ".

ಭುವನಕೋಶ (ಗದ್ಯ) ಸು. 1650.

ಗುರುಬಸವಧರ್ಮರೂಪನ | ಪರಮೇಶ್ವರನಾದಿಯಲ್ಲಿ ತ್ರಿಜಗತ್ಸೃಷ್ಟಿಯ |
ವಿರಚಿಸಿದ ವಿಧವ ಕೇಳ್ದನು | ನೆಱೆಮುದದಿ ಸನತ್ಕುಮಾರ ನಂದೀಶ್ವರನಂ ||

ಇಮ್ಮಡಿ ತಮ್ಮರಾಯ ಕೆಂಪರಾಯರ ಪದ. ಸು. 1650.

ಮಂಡಲಪತಿವೆಂಕಟರಾಯರ ಭುಜ | ದಂಡ ಸ್ವಾಮಿದ್ರೋಹರ ಗಂಡನೆನಿಪಕಾ |
ಟ್ಪಂಡೆಯವಸಿಟ್ಟು ಚಿಕರಾಯನೆನಿಸಿಯೆ | ಕೊಂಡು ಇಮ್ಮಡಿತಮ್ಮ ಭೂಪ ಸುಖದೊಳಿರ್ದ |

ಖಂಡೇಂದುಧರನೆಡೆಗೈದಲಾತನ ರಾಜ್ಯ | ಭಂಡಾರ ಬೊಕ್ಕಸವಧಿಕಾರಕುದುರೆಯ |
ತಂಡ ಮುಂತಾಗಿ ಎಲ್ಲವನು ಆ ಈ ಯಮಗೌಡ | ಲಂಡತನದೆ ಗ್ರಹಿಸಿದುರ್ಗಗಳ ಪ್ರ |
ಚಂಡತೆಯಿಂ ಬಲಿಸಿ ತಾನಲ್ಲದೆ | ಗಂಡುಗಲಿ ಇಲ್ಲೆನಿಸಿ ಇರಲದ |
ಕಂಡು ಕಡುಹುವೆರಸಿ ಅಕ್ಷಣದೆ ಮುಂ | ಕೊಂಡೆ ನೀ ರಾಜಕಾರ್ಯಕೆ ಮನವೆಳಸಿ |
ಎಲಹಂಕನಾಡಪ್ರಭು ಕೆಂಪರಾಯಾ ||

## ಭೋಜನರಗಳೆ ಸು. 1650.

ಅನ್ನವನಿಕ್ಕುವ ಪುಣ್ಯಾತ್ಮಕರನು | ವನ್ನಿಪುರದ ರಘುರಾಮ ರಕ್ಷಿಸಲಿ ||

## ಭಾರತ ಸಾವಿತ್ರಿ (ಗದ್ಯ) ಸು. 1650.

ಆರಂಭ—

ವೇದಾಂತದಲ್ಲಿ ನಿರ್ಣಯ | ವಾದಂತಾನಂದಸುಗುಣನಿರ್ಗುಣದೊಳ್ಸಂ |
ಪಾದಿಸಿದ ವಿಮಲಹರಿಮುಖಿ | ವೇದಧಿಯಿಂ ಭೀಷ್ಮನರ್ಥಿಯಿಂ ಕೀರ್ತಿಸಿದಂ ||

## ಭಾಗವಂತಿಗೆ ಹಾಡು ಸು. 1650.

ಕ್ಷಿತಿಯೊಳು ಕುಂತಣವಿಷಯದೊಳೊಪ್ಪುವ | ಪ್ರತಿಕೊಪಣದ ಚಂದ್ರಪ್ರಭರ |
ಕೀರ್ತಿಯ ಕೀರ್ತನೆಯಭಿಷೇಕಕೆ ಮಾನಿನಿಯರೆ ಕೇಳಿ ಜಿನವಚನವನು ||

## ಶುಕಸಪ್ತತಿ ಸು. 1680.

ಭಾಮಿನೀಷಟ್ಪದಿ. ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 38 ಸಂಧಿಗಳು (ಪದ್ಯ 1080) ಇವೆ. ಆರಂಭದಲ್ಲಿ ಗಣೇಶ, ಶಿವ, ವಿಷ್ಣು, ಬ್ರಹ್ಮ, ಪಾರ್ವತಿ, ಲಕ್ಷ್ಮೀ, ಸರಸ್ವತಿ, ಷಣ್ಮುಖ, ವೀರಭದ್ರ, ಸೂರ್ಯ ಇವರುಗಳ ಸ್ತುತಿ ಇದೆ.

ಉರಿಗೆ ತುಪ್ಪವ ಹಾಕಿದಷ್ಟಕೆ | ಮರಳಿ ಹೇಗೆ ವಿಶೇಷವಹುದೋ |
ಹುರುಳುಗೆಡಿಸುವ ಕಾಮದೊಡನೆ ಮನಸ್ಸು ಮಿಶ್ರಿಸಲು ||

ಭರದಿ ಪೆಚ್ಚುತ ಪೋಪುದಲ್ಲದೆ | ಪರಿಹರಕ್ಕವಕಾಶವಾವುದು |
ಪರಮವೈರಾಗ್ಯದಲಿ ಮನವನು ನಿಲಿಸಬೇಕೆಂದ ||
ಮನುಮಥನ ಸಿಂಗಾಡಿಯಂದದಿ | ಮಿನುಗುತಿರ್ಪುದು ಪುಬ್ಬ ಕರ್ಣಗ |
ಳನುಪಮಶ್ರೀಕಾರಕೆಣೆ ತುಟಿ ಹವಳವೆನಿಸುವುದು ||
ವನಜನೇತ್ರೆಯ ಕೊರಳು ಶಂಖದ | ನೆನಹಿಗೀಡಾಗಿಹುದು ಮಿಗೆ ಕಂ |
ಪಿನ ಹೊಳಹ ಬೀಜಾವುವು ಪೊಳೆಗೊಂಡಿರ್ಪ ದಂತಗಳು ||

267ನೆಯ ಪುಟದಲ್ಲಿ ಹೇಳಿರುವ ಶುಕಸಪ್ತತಿಯೂ ಇದೂ ಒಂದೇ ಗ್ರಂಥವಾಗಿದ್ದರೂ ಇರಬಹುದು

## ಶ್ರೀರಂಗಮಾಹಾತ್ಮ್ಯ (ಚಂಪು) ಸು. 1680.

ಶ್ರೀರಮಣೀಯಕಾಯನತಿಶೀತಳಶೀಲಕೃಪಾಕಟಾಕ್ಷನಂ |
ಭೋರುಹಸಂಭವಾನನಚತುಷ್ಟಯನಿಸ್ಸೃತಸನ್ನುತಿಪ್ರಿಯಂ ||
ಚಾರುಫಣೀಂದ್ರಭೋಗಶಯನಂ ಗರುಡಧ್ವಜನತ್ಯಪೂರ್ವಶ್ಯಂ |
ಗಾರರಸಾಕರಂ ಸಲಹುಗೆಮ್ಮನತಿಪ್ರಿಯರಂಗನಾಯಕಂ ||

## ಚಿಕ್ಕದೇವರಾಯಚೌಪದ ಸು. 1680.

ಮೈಸೂರು ದೊರೆಯಾದ ಚಿಕ್ಕದೇವರಾಯನ ಸ್ತುತಿರೂಪವಾಗಿದೆ.

ಅರಿರಾಯಗಿರಿವಜ್ರದಂಡನೆನಿಸುವನು |
ಗರುವನಹ ದೇವರಾಜೇಂದ್ರನಾತ್ಮಜನು |
ದೊರ ಚಿಕ್ಕದೇವರಾಜೇಂದ್ರಪಿಸ್ಟವನು |
ವರವಿತ್ತು ಲಕ್ಷ್ಮಿಯಾರಮಣ ರಕ್ಷಿಸನು ||

## ಕೃಷ್ಣಾರ್ಜುನರ ಕಾಳಗ. 1685.

ಭಾಮಿನೀಷಟ್ಪದಿ, ಸಂಧಿ 30, ಪದ್ಯ 1825.

ಅರಜಿನಿಂದೀಕೃತಿಯನಜುಹುವ | ಹದನ ಭವಪುರನಗನಲಕ್ಷ್ಮೀ |
ವದನಚಂದಿರನೆನಿಪ ಗೋಪೀನಾಥನೊಲವಿಂದ ||
"ಗುರುಚಿದಾನಂದಾತ್ಮನಂಘ್ರಿಯುಲಿ" ಎಂದು ಒಂದು ಕಡೆ ಹೇಳಿದೆ.

## ಮೌನೇಶ್ವರಬಾಲಲೀಲೆ ಸು. 1700.

ಭಾಮಿನೀಷಟ್ಪದಿ; ಅಧ್ಯಾಯ 6, ಪದ 30. ಆರಂಭದಲ್ಲಿ ಕಾಳಿ, ವಿಷ್ಣು, ಬ್ರಹ್ಮ, ಗಣೇಶ, ಸರಸ್ವತಿ ಇವರುಗಳ ಸ್ತುತಿ ಇದೆ. ವ್ಯಾಸ, ಮಲು

ಹಣ, ಹರಿಹರ, ನಿರಂಜನ, ಮಯೂರ, ಕಾಳಿದಾಸ, ಶುಕ ಈ ಕವಿಗಳ ಹೆಸರುಗಳು ಹೇಳಿವೆ. ಗ್ರಂಥದಲ್ಲಿ ಷೇಕ್, ಸೈಯುದ್, ಪಟಾಣ ಎಂಬ ಹೆಸರುಗಳೂ ತುರುಕರ ಸಮಾಚಾರವೂ ಬರುತ್ತವೆ.

ಅಣುವಿನೊಳಗಣುವೆನಿಸಿ ತೋರ್ಪನೆ । ಗುಣನಿಧಿಯು ತನುವಿನೊಳು ತನುವಿನ ।
ಒಣೆಶೆಯುಲಿ ಕಾಣಿಸುತಲಿಹನೆ ಮಹಾಪ್ರಮಾಣದಲಿ ‖
ಗಣಿಸಿ ನೋಡೆ ಮಹತ್ತಿನಿಸಿ ಸ ! ನ್ಮಣಿಯೊಳಿಹ ಗುಣದಂತೆ ಪೊಳೆಯು ।
ತ್ತೆಣಿಕೆಗಾಣದನಂತವೇ ಕೇಳ್ಪೈಕ್ಯಪರಬ್ರಹ್ಮ ‖

ಘಟ್ಟಿವಾಳಯ್ಯನ ಚರಿತೆ ಸು. 1700.

ವಾರ್ಧಕಷಟ್ಪದಿ, ನಮಗೆ ದೊರೆತ ಅಸಮಗ್ರಪ್ರತಿಯಲ್ಲಿ 3 ಸಂಧಿಗಳಿವೆ. ಆರಂಭದಲ್ಲಿ ಶಿವ, ಪಾರ್ವತಿ, ಗಣೇಶ, ವೀರಭದ್ರ ಷಣ್ಮುಖ, ನಂದಿ, ಭೃಂಗಿ, ಚಂಡೇಶ್ವರ, ಮಹಾಕಾಳ ಇವರುಗಳ ಸ್ತುತಿ ಇದೆ ಕವಿಯ ಗುರು ಚೆನ್ನಮಲ್ಲೇಶ.

ನಂಬಿದವರಂ ಸಿಂಬಿಯೆಂಬುವರ್ ಮನವೆಚ್ಚೆ ।
ಹಂಬಲಿಸುವರ್ ಬಾಯೊಳಾತ್ಮದೊಳ್ ನಿಷ್ಕರುಣ ।
ವುಂಬ ಉ ವವಂಬರಕ್ಕಿಂಬು ತಪ್ಪಲ್ ಸುಯ್ಯು ಕಂಬನಿಯುಕಪೆಯುತ್ತಲಿ ‖
ಗುಂಭನೆಲ್ಲಂ ನೀಗಿ ಜೃಂಭಣದಿ ಸ್ವಾತ್ಮಪತಿ ।
ಯೆಂಬ ಭಾವನೆಬಿಟ್ಟು ಎಲೊಪಾಪಿ ಮೂಢಸಂ ।
ನಂಬ ಈತೆಜನಾದ ನೆರೆಹೊರೆಯ ಪುರುಷರಾ ತಂಬುಲವ ತಿನ್ನೆಂಬರೈ ‖
ವಿಜಯನೆಂಬರ್ ಪ್ರಾಣವಿರ್ಪನ್ನೆಗಂ ಪತಿಯು ।
ಭಜನೆಗೈವರ್ ಉಣಿಸಿಯುಡಿಸಿಭೂಷಣಮಿಡಲ್ ।
ಸುಜನನೆಂಬರ್ ತಮ್ಮ ವರ್ತನೆಯ ಭಾವಿಸದೆ ಸುಮ್ಮನಿರ್ದೊಡೆ ಹಿಗ್ಗುತೆ ‖
ಮುಜರಿಯೆಂಬರ್ ಮಾಜುವುತ್ತರಕೆ ಕನಲದಿರೆ ।
ಕುಜನನೆಂಬರ್ ಸ್ವೈವ ಕೈವಾಡಲ್ ಮುಪ್ಪು ।
ರುಜೆಯೊಂದೆ ಮುದಿಪಾಪಿಯು ಜನೇಕೆಸಿಲಿಸಿಹನೊತ್ಯಜಿಸೊಕಾಲನೆ ಎಂಬರೈ ‖
ದುರ್ಭವದ ಬಿತ್ತುಗಳ್ ಕೊರ್ಬುಗಳ್ಳ ಕತ್ತೆಗಳ್ ।
ಅರ್ಭಟದ ತೊತ್ತುಗಳ್ ನಿರ್ಭರದ ಕುತ್ತಗಳ್ ।

ಪರ್ಭಿದಘುಸುತ್ತುಗಳ ತಬ್ಬಿರುವ ಪುತ್ತುಗಳ್ ಸರ್ಬದುರ್ಗುಣ ಗೊತ್ತುಗಳ್ ||

ಉಬ್ಬಸದ ತಿತ್ತಿಗಳ್ ಹೆಬ್ಬುಳ್ಳ ತತ್ತಿಗಳ್ |
ಮರ್ಬಿಡಿದ ಮೂರ್ತಿಯರ್ ಪರ್ಬಿದಪಕೀರ್ತಿಯರ್ |
ಪೆರ್ಬೇಟೆಕಾರ್ತಿಯರ್ ಗರ್ಭಸುಖಪೂರ್ತಿಯರ್ ಒಬ್ಬರೊಳಿಶವಲ್ಲ ಕೇಳ್ವೆ ||

## ನಿರಾಳ ಗುರುಸ್ತೋತ್ರ. ಸು. 1700.

ಭಾಮಿನೀಷಟ್ಪದಿ, ಪದ್ಯ 25 ಕಲವು ಪದ್ಯಗಳು "ಗುರುವೆ ಶರಣಾರ್ತಿ" ಎಂದು ಮುಗಿಯುತ್ತವೆ.

ಒಡವನೆಡೆಯಾಡುತ್ತೆ ಭಾಗ್ಯವ | ನೆಡವುತಂ ಕಂಡಂತೆ ರೋಗಿಯು |
ತಡಕುತಿರ್ಪೊಸಧಿಯು ಒತೆ ಕಾಲ್ತೊಡರಿ ಕಾಣ್ಬಂತೆ ||
ಒಡಲ ಪಸಿವಂಡಲೆವವನು ಪಾ | ಲ್ಗಡಲನಿದಿರೊಳು ಕಂಡವೋಲೆ |
ನ್ನೊಡೆಯ ಶ್ರೀಗುರುದೇವರಂಘ್ರಿಯ ಕಂಡು ಒದುಕಿದೆನು ||
ಮನವೆ ಕ್ಷಣ ಪಾತಾಳಕೈದುಗು | ಮನವೆ ಕ್ಷಣದೊಳು ಗಗನಕೈದುಗು |
ಮನವೆ ಕ್ಷಣದೊಳಗಷ್ಟದೆಸೆಗಳ ಬಳಸಿ ಬಂದಿಹುದು ||
ಮನವನೊಬ್ಬುಳಿಮಾಡಿ ನಿಂದಡೆ | ಘನಕ ಘನ ಮಹಲಿಂಗವೆನುತದ |
ಜನವನೆನ್ನೊಳು ತೋರಿ ಸಲಹಿದ ಗುರುವೆ ಶರಣಾರ್ತಿ ||

## ಮುಕ್ತಿರಾಮೇಶ್ವರಶತಕ ಸು. 1700.

'ಮುಕ್ತಿರಾಮೇಶ್ವರನೇ' ಎಂದು ಮುಗಿವ ಕೆಲವು ಕಂದಗಳು ದೊರೆಯುತ್ತವೆ ಇವು ಅವುದಾದರೂ ಒಂದು ಶತಕಕ್ಕೆ ಸೇರಿದ್ದರೂ ಇರಬಹುದು

ಹಾವಿನ ಮೊಗದೊಳ್ ಸುಧೆಯುಂ | ಭಾವೆಯುರದೊಳ್ ಜೀವನೇಹಮುಂ ನಂಬುಗೆಯುಂ |
ಸೇವೆಯಲಿ ಸುಖವನಜುಸವ | ಜೀವರು ಮರುಳುಗಳು ಮುಕ್ತಿರಾಮೇಶ್ವರನೇ ||
ಜೀವದಟೆವೆಂಬುದದನೇ | ಸಾವೆಂದಾಡುವರು ಮನುಜರದು ಸಾವಲ್ಲಂ |
ಸಾವೆಂಬುದಾವುದೈ ಪರ | ಸೇವೆಯು ನಿಮ್ಮಾಣೆ ಮುಕ್ತಿರಾಮೇಶ್ವರನೇ ||

## ಶಿವಾಷ್ಟಕ ಸು 1700

ಆಕಾಶಕೇಶಂ ಶಿವಪಾತ್ರಗೇಯಂ ಲೋಕಾದಿವಂದ್ಯಂ ನಿಜಭಕ್ತಕಾಯಂ |
ಏಕಾಕ್ಷರಂ ಪೀರಧರಾಬ್ಜದೇಹಂ ಸಾಕಾರದಿಂದೆನ್ನ ಕರಕ್ಕೆಬಂದಂ ||

## ಮಹಿಮಾಷ್ಟಕ ಸು 1700.

ಆವಂಗೆ ವಿಷ್ಣು ಭಕ್ತನು | ಆವಂ ತಾನಿಂದ್ರವಂದ್ಯ ಬ್ರಹ್ಮಸ್ತುತನುಂ |
ಆವಂಗೆ ಸುರರ ಓಲಗ | ದೇವವಿರೂಪಾಕ್ಷಗಲ್ಲದುಳಿದಗ್ಗಳಿಕೆ ||

## ಅಕ್ಷರಮಾಲಿಕೆ. ಸು. 1700.

ಕಂದ 56, ಪ್ರತಿಕಂದವೂ "ಗರಳಪುರೀಶಾ" ಎಂದು ಮುಗಿಯುತ್ತದೆ. ಅಕಾರದಿಂದ ಹಕಾರದವರೆಗೆ ಇವೆ.

ನಾನೆಂಬ ಹಮ್ಮಿನಿಂದವೆ | ನಾನಾಸುಕೃತಗಳ ನೀಗಿ ದುಷ್ಕರ್ಮಗಳಂ |
ತಾನಾರ್ಜಿಸುತ್ತೆ ಕೆಡುವರು | ದೀನರು ತ್ರೈಜಗದಧೀಶ ಗರಳಪುರೀಶಾ ||

## ಅಲ್ಲಮಪ್ರಭುವಿನಷ್ಟಕ ಸು. 1700.

ಶ್ರೀರಮಣನಿಂದ್ರಾದಿವಂದಿತಚರಣನಂ ಶುಭಕರಣನಂ |
ಮಾರಮದಸಂಹಾರ ನಿರ್ಮಲಮಾರನಂ ಸುಶರೀರನಂ ||
ಕಾರುಣಿಕಮಾಹಾತ್ಮ್ಯನು ಜಗಪಾಲನಂ ದಯಶೀಲನಂ |
ಧೀರಗುಣ ಗಂಭೀರನಲ್ಲಮದೇವನಂ ಸುಭಾವನಂ ||

## ನರಹರಿಭಕ್ತಿಸಾರ ಸು. 1700.

ಭಾಮಿನೀಷಟ್ಪದಿ, ಪದ್ಯ 10. ಕರಿಗಿರಿಯ (ದೇವರಾಯದುರ್ಗದ) ನರಹರಿಯ ಅಂಕಿತವಿದೆ. ಪ್ರಾಣೇಶಶತಕದಲ್ಲಿಯೂ ಇದೇ ಅಂಕಿತವಿರುವುದರಿಂದ ಆ ಗ್ರಂಥವನ್ನೂ ಈ ಗ್ರಂಥಕರ್ತನೇ ಮಾಡಿರಬಹುದು

ಬಿಲ್ಲಹಬ್ಬಕೆ ನಲ್ಲಕೃಷ್ಣನ | ಖುಲ್ಲಕಂಸನು ಕರಸೆ ಗೋಕುಲ |
ದಲ್ಲಿ ಬಳಿಕೆಲ್ಲರನು ಸಂತೈಸಗ್ರಜನು ಸಹಿತ ||
ಸಲ್ಲಲಿತಪುರದೊಳು ಕುಬುಜೆಯ | ಚೆಲ್ವ ರಕ್ಷಿಸಿ ಬಿಲ್ಲಬಳಿಕೈ |
ದಲ್ಲಿ ಮಲ್ಲರ ಕೊಂದ ನರಹರಿ ರಕ್ಷಿಸನವರತ ||

### ಪ್ರಾಣೇಶಶತಕ.

ಧರೆಯ ಸುರುಳಿಯ ಸುತ್ತಿ ಕಕ್ಷದೊಳ್ | ಭರದಿ ಪಾರುವ ದುರುಳದೈತ್ಯನ |
ಶರಣಿಸಾಸಿರಕಿರಣಲಹರಿಯ ನಿಶಿತದಾಡೆಯೊಳು ||
ಇಱಿದು ಧರಣಿಯ ತಂದು ಹರಹಿದ | ಸುರರ ಪಾಲಕ ರಿಪುಕುಲಾಂತಕ |
ದುರಿತದೂರ ವರಾಹಮೂರ್ತಿಯ ತೋಱೊ ಪ್ರಾಣೇಶಾ||

### ಧರ್ಮವ್ಯಾಧೋಪಾಖ್ಯಾನ ಸು 1700.

ಭಾಮಿನೀಷಟ್ಪದಿಯಲ್ಲಿ ಬರೆದಿದೆ. ಆರಂಭದಲ್ಲಿ ಗಣೇಶ, ಸರಸ್ವತಿ, ಕೃಷ್ಣ, ಈಶ್ವರ, ಪಾರ್ವತಿ, ವ್ಯಾಸ ಇವರುಗಳ ಸ್ತುತಿ ಇದೆ

ಸರಸಕಲ್ಪನವೀಚಿವಿಸರದೆ | ಮೆಱೆವ ನಿಜಹೃದಯಾಂಬುನಿಧಿಯೊಳ್ |
ವರಿಯೊಳು ವಿಜ್ಞಾನವೆಂಬ ಗಭೀರಮಂಥನದೆ ||
ಪರಮಭಾರತವೆಂಬ ಸುಧೆಯಂ | ಭರದೆ ತೆಗೆದೀಜಗತಿಗರ್ಪಿಸಿ |
ಹರಿಸವೊಂದಿಸಿ ಜಸದಿನೆಸೆವಾವ್ಯಾಸಮುನಿ ಪೊರೆಗೆ ||
ನೆಲದೆ ಪಾತಿವ್ರತ್ಯಮಹಿಮೆಯ | ನಲಘುಜನನೀಜನಕಸೇವಾ |
ಫಲಮನಱಿಯಿಪ ಧರ್ಮಸಾರದ ಮಹಾಭಾರತದ ||
ಲಲಿತಧರ್ಮವ್ಯಾಧಕಥೆಯನು | ಸುಲಭವೆನೆ ಕನ್ನಡದ ನುಡಿಗಳಿ |
ನೊಲಿದು ನುಡಿವೆಂ ಭಾಮಿನೀಷಟ್ಪದಿಯ ವೃತ್ತದೊಳು ||

### ಆಸ್ಥಾನಜ್ಯೋತಿ (ಕಂದ 130) ಸು. 1700.

ಖುಲ್ಲರಕುಹಕರಕದನಕೆ | ನಿಲ್ಲದೆಹರಿವವರಕೊಂಡೆಯರ ದುರ್ಜನರಂ |
ಒಳ್ಳಿದರೆಂದುಂ ಸಲಹಲು | ಹಲ್ಲಂಹದಿನಾಱುಹೋಹುದೆಂಬುದನಱಿಯಾ ||
ಬಡತನದಲಿಬಂಧುಗಳಿ | ಪ್ಪೆಡೆಯಂ ಹೊಕ್ಕಿರ್ದು ಅಲ್ಲಿ ನಗೆಗೆಡೆಯಾಗದೆ |
ಅಡವಿಯ ಸೊಪ್ಪಂ ತಿನ್ನು | ತ್ತೊಡಲಂಹೊರೆದಿಪ್ಪಸುಖಕೆಕಡೆಮೊದಲಿಲ್ಲಂ||

### ಶಾಂತವರ ಚರಿತ್ರೆ ಸು. 1700.

ಹಾಡಿನಂತೆ ಕಾಣುತ್ತದೆ ಸಂಧಿ 5, ಪದ 571. ಒಂದೊಂದು ನುಡಿಯೂ "ಶ್ರೀ ಜಾನಕೀವಲ್ಲಭಾ" ಎಂದು ಮುಗಿಯುತ್ತದೆ. ಕಟ್ಟಿಯಕೆರೆಯ ರಂಗನ ಅಂಕಿತವಿದೆ. ಆರಂಭದಲ್ಲಿ ವಿಷ್ಣು, ಶಿವ, ಸರಸ್ವತಿ, ಗಣೇಶ ಇವರುಗಳ ಸ್ತುತಿ ಇದೆ.

ಕೇಳು ಕೇಳೆಲೊ ಕುಹಕ ಖಳ ಎನ್ನ ವಲ್ಲಭರು |
ಕೇಳಿದರೆ ಬಿಡರು ನಿನ್ನ | ಮುನ್ನ |
ಸದೆದುಸೀಳಬಿಡುವರುಬೇಡಕಾಣೊ| ಸಾರಿಹೇಳಿದೆನುಕೆಡಬೇಡಮೂಢನೊ |
ಅಂತ್ಯಕಾಲಕೊದಗಿದ ಬುದ್ಧಿಯೇನೊ |
ಪಾಪಿಬಯಲಾಸೆಗಾಗಸುವಳಿಯದಿರೆಂದೆಂಬ |
ಬಾಲಕಿಯೊಳಿಂತೆಂದನು | ತಾನು | ಶ್ರೀಜಾನಕೀವಲ್ಲಭಾ ||
ಬಡಪಾಂಡವರನಡವಿಗೋಡಿಸಿದೆನೆಂದು ಎ |
ನ್ನೊಡನೆ ಕೆಣಕಿದನೆ ಬಂದು | ಇಂದು |
ಅಯ್ಯ ತೊಡೆವೆನಾತನ ಹಣೆಯಲಿಪಿಯ | ನೃಪನಪಡೆಯನಿಕ್ಕುವೆನು ರಣ ಬಲಿಯ |
ಅವನ ಮಡದಿಮಕ್ಕಳ ತಹೆನು ಸೆರೆಯ |
ನೆಂದು ಕೆಡುಗವನು ಜಡಿದು ಕಮಲಾಕ್ಷಿಯರ ಮುಖನೋಡಿ |
ಕುಡಿಮೀಸೆಯನು ತಿರುಹಿದ | ಉತ್ತರ | ಶ್ರೀಜಾನಕೀವಲ್ಲಭಾ ||

ಕಾವ್ಯಸಾರ (ಪದ್ಯ ೨೨೫) ಸು. 1700.

ಇಂಬಿಂ ನಾಟ್ಯಮನಾಡೆ ಕಾಂತೆಯುಮೊಗಂ ತತ್ಕಾಲದೊಳ್ ತೋರ್ಪುದಾ|
ಜಂಬೂವಜ್ಜುಲಬಿಂದುವಜ್ಜುಲಜವಜ್ಜುಂಬಾಳವಜ್ಜಾಲವತ್ ||
ಇಂಬಾಗಿರ್ದ ಸುವೇಣಿಗಾನರವದಿಂ ಮಧ್ಯಸ್ತನಾಪಾಂಗದಿಂ |
ಜಂಬೂವಜ್ಜುಲಬಿಂದುವಜ್ಜುಲಜವಜ್ಜುಂಬಾಳವಜ್ಜಾಲವತ್ ||
ಕೈಸನ್ನೆದೋಱೆ ಚೆಲ್ವಿನ | ವೈಸಿರಿಯಂ ಪೇಱೆ ವೈಸಿಕದೆ ವಿಟರಸುವಂ |
ಕೈಸೆಱೆಗೊಳುತ್ತೆರಂಜಿಪು | ದ್ವೈಸರಳನ ಪಿಡಿಯ ತೆಜರೆ ಗಣಿಕಾನಿಕರಂ ||
ತಿಱಿಕಲ್ಲಾಡುವಳಷ್ಟಶೈಲಕುಲಮಂ ದಿಗ್ದಂತಿದಂತಂಗಳಂ |
ನಿಱಿಕೈಯಿಕ್ಕಲೆದಾಡುವಳ್ ಮುಗಿಲಪೂವಂ ಸೂಡುವಳ್ ತಾರೆಯಂ ||
ತಿಱಿವಳ್ ತುತ್ತುಗಳೆಂದು ಚಂದ್ರರವಿಯಂ ಕಂದೋಲೆಯೆಂದಿಕ್ಕುವಳ್ |
ನಿಱಿಯಂ ಸುತ್ತುವಳೇಱುವಾರ್ಧಿಚಯಮಂ ಶ್ರೀಕೀರ್ತಿರೇಖಾಂಕನಾ ||
ನಂಬಿದವನಿವಂ ತನ್ನಂ | ನಂಬದೆ ಹಿಂಗಿರುವ ಮನುಜನಿವನೆಂದಱಿದುಂ |
ಇಂಬಱಿದು ಸಲಹದರಸಿನ | ಡೊಂಬಾಟಕೆ ಮನವನಿತ್ತು ಕೆಡದಿರು ಮನುಜಾ ||

ಲೆಕ್ಕದ ಚೌಪದ. ಸು. 1700.

ಗಣಿ ಗಿಡುಗ ಗಿಡವೊಂದರೊಳಿಂ ಪಾರುವಾಗ |
ಗಣಿ ಕ್ಷಣಕೆ ಶತಕೋಶವನು ಪೋಗೆ ಬೇಗ |
ಕ್ಷಣಕೆಯೊಂದೊಂದ ಹೆಚ್ಚುತ ಪೋಗಿ ಗಿಡುಗ |
ಗಣಿವಿಡಿವುದೆನಿತುದಿನಕೆಂದು ನುಡಿ ಬೆಡಗ ||

ಹಡಗು ಮೂಱನು ಕೊಂಡು ಹೋಹ ಮಾರ್ಗದಲಿ |
ಯೊಡಲೊಳಿದಿದೊಡವೆ ಭರವಾಯ್ತೊಂದಕಲ್ಲಿ |
ಮಡಿದೆರಡಕವರನಿತ ಕೊಸುತ ಬರಲಲ್ಲಿ |
ಕಡೆಗೆ ಮೂಹಸುಗೆಯುಳಿ ಸಮುಮೂಱು ಸೊಲ್ಲಿ ||

ಕಾಲಾಱು ಕಣ್ಣೊಱು ಬಾಲವೆರಡೇನು |
ಜೋಲುವಾಕಿವಿ ನಾಲ್ಕು ತಲೆಮೂಱದೇನು |
ನಾಲಗೆಯು ನಾಲ್ಕು ಕೈ ನಾಲ್ಕಂತದೇನು |
ಬಾಲಭಾಷೆಗಳಲ್ಲ ನುಡಿ ನಿಜವದೇನು ||
(ಹೊಟ್ಟೆಗೆ ಹಾವಸುತ್ತಿ ಮೂಷಕವನೇರಿದ ವಿಘ್ನೇಶ)

ಮರದಿಂದ ಮುಱಿದು ಬಿದ್ದನ ಹಿಡಿದು ತಂದು |
ಧರದಿಂದಲಾಕ್ಷಣದ ಚರ್ಮವನು ಸುಲಿದು |
ಅರೆಬೆಂದು ನೊಂದವನನಂಗಡಿಗೆ ತಂದು |
ಸರಸಜನರಾ ಕೈಗೆ ಬಾಯ್ಗೆ ಬರಲೆಂದು ||
(ಅಡಕೆ)

ಬಿಳಿಗಿಯರಸರ ವಂಶಾವಳಿ (ಚಂಪು) ಸು 17೦೦.

ವಸೂರುಪಟ್ಟಣವನಾಳಿದ ಅಂಡಣ್ಣನಿಂದ ಬಸವಭೂಪಾಲನವರೆಗೆ ದೊರೆಗಳ ಚರಿತೆ ಹೇಳಿದೆ.

ಪರಮಬಲವಂತಧರಣೀ | ಶ್ವರಚೂಡಾರತ್ನ ಬಸವಭೂಪನಕೊರಲೊಳ್ |
ಮಿಱುಗಲ್ ಮುಕ್ತಾಹಾರಂ| ಪರನರಪಗರ್ಗಾಯ್ತು ನಿತ್ಯಮುಕ್ತಾಹಾರಂ ||
ಕಂದನ ವಾದ್ಧಿನಂತೆ ಕಡುಪೂತಿಹ ಚಂಪಕವೃಕ್ಷದಂತೆ ಮಾ |
ಕಂದದ ಪಣ್ಗಳಂತೆ ವಾಧುವಿ ಶ್ರೀಕಶರ್ಕರೆಯೂಟದಂತೆ ಪೊ ||

ರ್ಶೇಂದುಗಭಸ್ತಿಯಂತೆ ಯೆಳದೆಂಗಿನ ಪಾಲ್ಗುಡಿದಂತೆ ರಂಜಿಸುಂ |
ಮಂದರ ಸುಸ್ವರೋಕ್ತ ಬಸವವೇಂದ್ರ ಸುಧಾಮಯ ವಾಕ್ಯದೀಪ್ತಿ ಶಾಂ||

ರಾತ್ರಿಯ ನಲ್ಲನ ಪದ್ಯ (ಕಂದ 120) ಸು. 1700.

ಮೃಗಧರನ ಹಗೆಯ ವೈರಿಯ | ಹೆಗಲೇಱಿರ್ಪವನ ಮಗನ ವೈರಿಯ
ಗಿರಿಯಂ ||
ನೆಗಪಿದನ ಪಗೆಯ ಭೃತ್ಯನ | ನಗೆಮೊಗಮಂ ಪೋಲ್ತನಕ್ಕ ರಾತ್ರಿಯ
ನಲ್ಲಂ |
(ಹನುಮಂತ)
ಒಂದೆರಡು ಪಥದಿ ನಡೆವಾ | ಸುಂದರಿಯಾತ್ಮಜನ ಪಿತನ ಮೋಹದ ಸುತ
ನಂ |
ಎಂದೆಂದಿಗಗಲದಿರ್ಪವ | ನಂದವ ನೆಱೆ ಪೋಲ್ತನಕ್ಕ ರಾತ್ರಿಯ ನಲ್ಲಂ ||
(ಇಲಿ)

ಪಾರ್ಶ್ವತೀರ್ಥಂಕರರ ಪಂಚಕಲ್ಯಾಣ. ಸು. 1700.

ಭಾಮಿನೀಷಟ್ಪದಿ, ವಚನ ಇವುಗಳನ್ನು ಒಳಕೊಂಡಿದೆ. ಪ್ರಥಮಪದ್ಯ—
ಸರ್ವಗುಣದೊಳು ಜಿನನು ಹಿಡಿವುದು | ಸರ್ವರೊಳು ರತ್ನತ್ರಯಂಗಳು |
ಉರ್ವಿಯೊಳು ಒಱಿಕುಂಟೆ ಗುಣಿಗಳು ಪಿಡಿವ ವಸ್ತುಗಳು ||
. . ತಿರಲದು ವನದೊಳುಯ್ಯಲ | ಪರ್ವತಾಗ್ರತ್ರಿಕಸನೋತದಿ |
ಸುರ್ವಿಫತಿ ಜಿನದತ್ತನಾಡಿದ ಸರ್ವರೋಲೈಸೆ ||
ಕೊನೆಯ ವಚನ—ಈ ಪಥಿವೆ. ಹೆದು ಮುಕ್ತಿಗೆ ಸಂದ ಶ್ರೀಪಾರ್ಶ್ವದೇವರ ಯಕ್ಷಧರಣೇಂದ್ರನರಸಿ ದೇವಿಪದ್ಮಾವತಿಯ ವರಪುತ್ರ ಜಿನದತ್ತ ತ್ರಿವಿಧೈಶ್ವರ್ಯದಿಂ ಸುಖಮಿರ್ದನೆಂದು.

ಲೋಕಸ್ವರೂಪ (ಕಂದ 21) ಸು. 1700.

ಆಕಾಶಮಧ್ಯದಲ್ಲಿಹ | ಲೋಕಂ ಪದಿನಾಲ್ಕು ರಜ್ಜುವಗಲಮದೇಱಿಂ |
ಏಕಂ ಪಂಚಕಮೊಂದೆನೆ | ಯಾಕಾರಂ ವಾಯುತ್ರಯದಿನೊಪ್ಪುಗೆ ಲೋ
ಕಂ ||

ಹರಿಶ್ಚಂದ್ರ ಸಾಂಗತ್ಯ. ಸು. 1700.

ಸಂಧಿ 4, ಪದ್ಯ 549. ಆರಂಭದಲ್ಲಿ ವಿರೂಪಾಕ್ಷ, ಗಣೇಶ, ಶಾರದೆ ಇವರುಗಳ ಸ್ತುತಿ ಇದೆ.

ಉತ್ತಮವಾದ ಕುಲದ ಹರಿಶ್ಚಂದ್ರನ | ಭಕ್ತಿಯ ಕೃತಿಯ ಪೇಳುವೆನು ||

ಭಾವಾರ್ಥಶತಕ ಸು. 1700.

ಒಗಟೆಯ ರೂಪವಾದ ಕಂದಗಳು. ಚೆನ್ನಕೇಶವಸ್ತುತಿ ಇವೆ

ಧರ್ಮಗುಪ್ತ ಚರಿತೆ ಸು. 1700.

ಹಾಡುಗಳು, ಆಶ್ವಾಸ 11 ಪಂಚಾಕ್ಷರಿ, ಶಿವರಾತ್ರಿ ಮುಂತಾದುವುಗಳ ಮಹಿಮೆ ಹೇಳಿದೆ. ಕವಿ ಷಡಕ್ಷರ ದೇವನನ್ನು ಸ್ಮರಿಸುತ್ತಾನೆ.

ಸುಗಂಧಪಾರಿಜಾತ (ಕಂದ 64) ಸು. 1700.

ಪರಿಪಕ್ವಮಾತುಲುಂಗೋ | ತ್ಕರಮಂ ಪೋಳಿಗಾಗಿ ಮಾಡಿ ಪುಟದಿಂಸುಡಿ ಒಂ |
ಧುರಗಂಧಂ ಮೆರೆಡೆ ಕ | ಪ್ಪುರಮೂಸುವಡೆದು ಲೇಸೆನಿಸಿ ತಾನಿರ್ಕುಂ (?) ||

ಪ್ರಶ್ನಚಿಂತಾಮಣಿ (ಗದ್ಯ) ಸು. 1700.

ಈ ಗಂಡಹೆಂಡಿರು ಸುಖದಲ್ಲಿ ಇದ್ದಾರು. ಈ ಭೂಮಿ ನಾಲಾವಳಿಯುಂಟು ಲೇಸು — ಇತ್ಯಾದಿ.

ಪಂಚಾಕ್ಷರಿಯ ಪ್ರಣವಂಗಳು (ಗದ್ಯ) ಸು. 1700.

ಪಂಚಾಕ್ಷರಿಯೆ ಪರಮೇಶ್ವರನು, ಪಂಚಾಕ್ಷರಿಯೆ ಪರತತ್ವವು; ಪಂಚಾಕ್ಷರಿಯೆ ಪರಮಯೋಗವು, ಪಂಚಾಕ್ಷರಿಯೆ ಪರಂಜ್ಯೋತಿ, ಪಂಚಾಕ್ಷರಿಯೆ ಪಾಪಾಂತಕನು. ನ ಎಂಬ ಅಕ್ಷರವೆ ದೇವರ ಚರಣ, ಮ ಎಂಬ ಅಕ್ಷರವೆ ದೇವರ ಒಡಲು—ಇತ್ಯಾದಿ. ಮತ್ತೆ ನ ಎಂಬ ಅಕ್ಷರವೆ ಪೃಥ್ವಿ; ಮ ಎಂಬ ಅಕ್ಷರವೆ ಅಪ್ಪು—ಇತ್ಯಾದಿ.

## ರುದ್ರಭಾರತ (ಗದ್ಯ) ಸು. 1700.

ರುದ್ರ ನಂದಿಕೇಶ್ವರ ಸಂವಾದ ರೂಪವಾಗಿದೆ. ಮೂಲತತ್ವವು ಹೇಗೆ ನಿರ್ಮಿತವಾಯಿತು ? ಪಂಚಪ್ರಾಣವಗಳು ಹೇಗೆ ಉದ್ಭವಿಸಿದುವು ? ಚರಾಚರಗಳು ಹೇಗೆ ಜನ್ಮಿಸಿದುವು ? ಇತ್ಯಾದಿ ಪ್ರಶ್ನೆಗಳಿಗೆ ಶಿವನ ಉತ್ತರಗಳು ಹೇಳಿವೆ.

ಇಂದ್ರರು ಆದಿರುದ್ರನ ಹೆಬ್ಬೆರಳಿನಲ್ಲಿ ಹುಟ್ಟಿದರು. ಅವರ ನಾಮ ಮಘವಾನ್, ಹರಿಹಯ ಇತ್ಯಾದಿ. ಇಂದ್ರಂಗೆ ಐರಾವತ ಬಿಳಿಯಾನೆ ವಾಹನ, ಪರುಷವಣ್ಣದ ಕಲ್ಲು, ಸಿದ್ಧರಸವೆ ಜಲನಿಧಿ, ವಜ್ರವೆ ಆಯುಧ, ಕಾಮಧೇನು ಏವ ಹಿಂಡು, ಕಲ್ಪವೃಕ್ಷದ ವನ, ತವನಿಧಿ, ಚಿಂತಾಮಣಿಯು ಮೋಹಡಿ, ರಂಭೆ, ಊರ್ವಶಿ ಚಿತ್ರಾಂಗಿ ಮೇನಕೆ ತಿಲೋತ್ತಮೆ ಇಂತು ಪಂಚ ನೃತ್ಯದ ಸ್ತ್ರೀಯರ ಮಿಂಡ ಶಚಿಯು ಗಂಡ, ಅಮೃತದ ಬಾವಿ, ಬೃಹಸ್ಪತಿ ಪ್ರಧಾನಿ, ವಿರಿಂಚಾದಿಗಳ ಮೇಳ.

## ಸಹಸ್ರಗಣ ನಾಮಸ್ತೋತ್ರಾವಳಿ (ಹಾಡು) ಸು. 1700.

ಪಾಡಿ ಶರಣರು ಪಾಲ್ಕುರಿಕೆಸೋಮೇಶನತ್ಯಾ | ಡಂಬರದ ಗಣಸಹಸ್ರನಾ
ಮವಂ ||

## ಆಹ್ನಿಕ (ಗದ್ಯ) ಸು. 1700.

" ನಿತ್ಯದಲ್ಲಿಯೂ ಅರುಣೋದಯಾರಭ್ಯವಾಗಿ ರಾತ್ರಿಯಲ್ಲಿ ನಿದ್ರೆಮಾಡುವ ಪರ್ಯಂತ ಮಾಡಬೇಕಾದ ಕಾರ್ಯಗಳು " ಹೇಳಿವೆ.

## ಧ್ರುವ ಚರಿತ್ರೆ ಸು. 1700.

ಉದಯರಾಗ ವಾರ್ಧಕಷಟ್ಪದಿ, ಪದ್ಯ 18.

ಗಳದ ರೇಖೆಯು ಕಂಬುಕಂಧರದ ಚಂದಿರನ |
ತೆಱದ ಮೊಗದೋಜೆಯುಂ ಸಸಿಜಸಿರಾಜಿಯುಂ |
ಕಿಱುನಗೆಯು ವದನವುಂ ನಿಗಮಾದಿಸದನವುಂ ಎವೆಯಿಕ್ಕದೀಕ್ಷಿಸಿದನು ||
ಕಿಱುಡೊಳ್ಳಿನುದರಸುೞಿನಾಭಿಯುಂ ಶೋಭೆಯುಂ |
ಧರದೊಳೊಪ್ಪುವ ತಿವಳಿಯುಂದವುಂ ಚೆಂದವುಂ |
ಶರದಭ್ರದಂತೆಸೆವುರಸ್ಥಲದೊಳಿಹ ಸಿರಿಯ ಶೋಭೆಯುಂ ಕಂಡನಂದು ||

ಗುಂಡಬ್ರಹ್ಮಯ್ಯನ ಸುವ್ವಿ ಸು. 1700.

ಹರನು ನಾರದನು | ಧರೆಗೆ ಕಳ್ಳರಾಗಿ | ಪುರವೋರಗಲ್ಲ ಗಣಪತಿರಾಯನ ||
ಸಿರಿಯ ಕದ್ದೊಯ್ದ ಕಥೆಕೇಳಿ ||

ಕೃಷ್ಣಕಥೆ ಸು. 1700.

ವಾರ್ಧಕಷಟ್ಪದಿ, ಸುಮಾರು 2500 ಪದ್ಯಗಳಿರುವಂತೆ ತೋರುತ್ತದೆ ಸಂಧಿಗಳ ಕೊನೆಯಲ್ಲಿ ವೆಂಕಟಶೌರಿ ಎಂಬ ಅಂಕಿತವಿದೆ

ಕರವೀರನಗರದಿಂ ಬರ್ಪ ಪಥದಲ್ಲಿ ಸಂ |
ಹರಿಸಿ ಮಗಧನ ಸೈನ್ಯಮಂ ದ್ವಾರವತಿಯು ನೆಱೆ |
ವಿರಚಿಸಿ ಯಶೋದೆಜಂ ಮುಚುಕುಂದನಿಂ ಕಾಲಯುವನನಂ ಕೊಲಿಸಿ ಮೆಱೆದಂ ||

ವಿರೂಪಾಕ್ಷಸೀತಿ (ಕಂದ 56) ಸು. 1700.

ರುಜೆಯಂ ಪಱಿವನೆ ವೈದ್ಯಂ | ಗಜಗಮನದಿ ರಣವ ಪೊಕ್ಕು ಜಯಿಪನೆ ವೀರಂ
ಭುಜಗಾಭರಣನೆ ದೈವಂ| ಪ್ರಜೆಗಳ ಪಾಲಿಪನೆ ಅರಸು ಶ್ರೀವಿರುಪಾಕ್ಷ ||

ವಿನಾಯಕ ಸ್ತೋತ್ರರಗಳೆ ಸು. 1700.

ಮೋದಕವುಂಡಲಿಗೆ ಹೂರಣಗಡುಬು | ಸೇವಗೆ ಸೊಸಲು ದೋಸೆ ಹೊಯ್ಗಡುಬು |
ಹಾಲು ಮೊಸರು ಪಾನಕ ಪನ್ನೀರು | ಫಾಲನಯನಸುತಗರ್ಪಿಸುತಿಹರು ||

ಕಪೋತಪಕ್ಷಿಚಾರಿತ್ರ ಸು. 1700.

ಸಾಂಗತ್ಯ; ಪದ್ಯ 120. "ಗುರುಸಿದ್ಧವೀರನ ಚರಣವ ಬಲಗೊಂಬೆ" ಎಂದು ಹೇಳಿದೆ.

ಗಂಗಾಗೌರೀ ಸಂವಾದ ಸು. 1700.

ಯಕ್ಷಗಾನದಂತಿದೆ. ಆರಂಭದಲ್ಲಿ ಹೀಗೆ ಹೇಳಿದೆ.

ಕಲ್ಯಾಣವೆಂಬ ಪಟ್ಟಣದಲ್ಲಿ ಪರಮಜ್ಞಾನಶಕ್ತಿಯುತ ನೀಲಲೋಚನೆ ತನ್ನ ಪುರುಷ ಬಸವೇಶ್ವರದೇವರಿಗೆ ಬಿನ್ನಹಂಮಾಡಿ ಪೇಳ್ದ ಗಂಗಾಗೌರೀ ಸಂವಾದದ ಪ್ರವರ್ಣದ ಸಾಂಗತ್ಯ-

## ಸಪ್ತರ್ಷಿವಾಕ್ಯ ಸು. 1700.

ಅಂತ್ಯದಲ್ಲಿ " ಮಹಾಭಾರತ ಅನುಶಾಸನಿಕಪರ್ವದ ಇತಿಹಾಸ ಸಮುಚ್ಚಯದೊಳ್ ಸಪ್ತರ್ಷಿಸಂವಾದ ಸಮಾಪ್ತ " ಎಂದಿದೆ.

## ಚೂಡಿಕ್ಕೊಡುತ್ತ ನಾಚ್ಚಾರ್ ವಿವಾಹ ಸು. 1700.

ಯಕ್ಷಗಾನ

ರಾಜಗೋಪಾಲಮುನಿಪದರಾಜೀ ಕೆ ಭೃಂಗನಾಗಿ ರಂಜಿಪ ಕೃ . . .
. . . ದೊಳರ್ಚಿಸಿದನು ಕವಿರಾಜರಹುದೆನಲು ರಂಗರಾಜನ ಭಜಕಂ ||

## ಗಂಗಾಗೌರೀ ಸಂವಾದ. ಸು 1700.

ಕೊನೆಯಲ್ಲಿ

ಗುರುರೇವಣಾಚಾರ್ಯನೊರೆದು ನೂರೊಂದನಿಗೆ |
ಹರ ಮೆಚ್ಚಿಯಿತ್ತಾರ್ಥವನೀವ | ತಿರಿಕೆಕಲಹ ಬೇಡವೆಲೆ ಗರ್ವ ನಿನಗೆ ||

## ಅಲ್ಲಮಪ್ರಭು ಸಂಗೀತಪದ. ಸು. 1700

ಅಲ್ಲಮಪ್ರಭುಲಿಂಗನ ಅನುಪಮದಿಂದಿರ್ಪ ವಿದುಲೀಲೆಯ |
ಬಲ್ಲಷ್ಟು ಪೇಳುವೆನಧಿಕಹರ್ಷದಿಂದ ಕೇಳಿ ನೀವು ||

## ಸೂಳೆಯ ಕೆರೆಯ ಸಾಂಗತ್ಯ ಸು. 1700.

ಸಂಧಿ 3, ಪದ್ಯ 350. ಆರಂಭದಲ್ಲಿ ಹೊನ್ನಾಳಿ ಚೆನ್ನಬಸವನ ಸ್ತುತಿ. ಇದೆ.

ಬಲ್ಲಿದ ಕಂತೆಯ ಸಿದ್ದನ ಕೃತಿಯನು | ಸೊಲ್ಲಿಸಿದೆನು ಬಲುನೀತ ||

## ವೈದ್ಯಸಾರ ಸು. 1700.

ಕುಂಬಳದ ಬೇರನರೆದು ನಿಂಬೆಯ ಕಾಯಷ್ಟು ಸಕ್ಕರೆಯ ಹಾಕಿ ಹಸಿಯ ಹಾಲೊಳಗೆ ಹನ್ನೊಂದು ದಿನಂ ತೆಗೆದುಕೊಳೆ ಮೊಲೆಹಾಲು ಒಡವುದು.

## ಕುಶಲವೋಪಾಖ್ಯಾನ (ಗದ್ಯ) ಸು. 1700.

ಸಂಸ್ಕೃತ ಜೈಮಿನಿಭಾರತದಲ್ಲಿರುವ ಕುಶಲವರ ಕಥೆ ಕನ್ನಡದಲ್ಲಿ ಬರೆದಿದೆ.

## ಉತ್ತರಗೀತಾಟೀಕೆ ಸು. 1700.

ಕೊನೆಯಲ್ಲಿ—ಇತಿ ಉತ್ತರಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಕರ್ಣಾಟಕಭಾಷಾವಿರಚಿತೇ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ — ಎಂದಿದೆ. ಅಧ್ಯಾಯ 3.

ಆರಂಭ—ಭಗವದ್ಗೀತೆಯಲ್ಲಿ ತತ್ಪದಾರ್ಥವಾದಂಥ ವಾಚ್ಯಾರ್ಥವನು ಮನೋವಿಕ್ಷೇಪದಿಂದ ಮಾಡಿ ಅರ್ಜುನನು ಶ್ರೀಕೃಷ್ಣದೇವರ ಕುರಿತು ಬಿನ್ನಹಂಮಾಡಲಾಗಿ ಉತ್ತರಗೀತೆಯಿಂದ ನಿರೂಪಿಸಿದ ಅರ್ಥವನು ಕನ್ನಡಿಸಿ ನಿರೂಪಿಸಿದರು.

## ಶಂಕರ ರಾಮಾಯಣ ಸು 1700.

ಭಾಮಿನೀಷಟ್ಪದಿ, ಸಂಧಿ 47, ಪದ್ಯ 3300. ಬ್ರಹ್ಮನು ನಾರದನಿಗೆ ಉಪದೇಶಮಾಡಿದ ರಾಮನ ಚರಿತೆಯನ್ನು ಈಶ್ವರನು ಪಾರ್ವತಿಗೆ ರಾಮತಾರಕ ಮಂತ್ರದ ಮಾಹಾತ್ಮ್ಯವನ್ನು ತಿಳಿಸುವುದಕ್ಕಾಗಿ ಹೇಳಿದಂತೆ ತಿಳಿಯುತ್ತದೆ. ಆರಂಭದಲ್ಲಿ ರಾಮ, ಶಿವ, ಬ್ರಹ್ಮ, ವಿನಾಯಕ, ಸರಸ್ವತಿ ಇವರ ಸ್ತುತಿ ಇದೆ. ಪೂರ್ವಕವಿಗಳಲ್ಲಿ ವ್ಯಾಸ, ಕಾಳಿದಾಸ, ವಾಲ್ಮೀಕಿ, ದಂಡಿ, ಮಯೂರ, ಬಾಣ, ಧನಂಜಯ ಇವರುಗಳ ಹೆಸರು ಹೇಳಿದೆ.

### ಪಟ್ಟಣ

ಪುರದ ಭಾಗ್ಯಶ್ರೀಯು ಒನಪ್ಪಂ | ಬರವುತೀಹದು ಚರಣಕಮಲವ |
ಸಿರದೊಳಾಂತಿಹನೆಂದು ತನ್ನಿಷ್ಟಾರ್ಥದೇವತೆಯ ||
ಹರಕೆಗಾಗಿಯೆ ಸೊಪ್ಪಿನುಡುಗೆಯ | ಧರಿಸದಳೊ ಎಂಬಂತೆ ಪಟ್ಟಣ |
ಪರಿವಿಡಿಯೊಳುದ್ಯಾನ ಪರಿವೇಷ್ಟಿಯಲಿ ಮೆರೆದಿಹುದು ||

## ವಿಷ್ಣುವಿನ ಹಡಪಿಗ.

ಪೂಗಫಲವನು ಹೆಚ್ಚುತುಂದುಗ | ಳಾಗದಂದದಿ ಛೇದದೆಂಟಱ |
ಭಾಗವನು ಸರಿಮಾಡಿಯುದ್ದಿಯ ಪರಿಮಳಂಗಳಲಿ ||
ಭೋಗಿಭರಣೆಯುತುಂಬಿಕಪ್ಪುರ | ನಾಗವಲ್ಲಿಯ ಹಿಂದುಮುಂದನು |
ನೀಗಿಯಿದ್ದೆಸೆಯೆತ್ತಿ ಸಂಬಳಿಗೆಯಲಿ ಅಳವಡಿಸಿ ||
ಒಡೆಯತನ್ನಯ ನೀರಜಾಕ್ಷನ | ಕಡೆಯಸೀಕ್ಷಿಸಿಯೆಲೆಯ ಘಳಿಗೆಯ |
ಮಡಿದು ನೀಡುತ ಹಿಂದುಹಿಂದಕೆ ಒಯ್ಯನೋಸರಿಸಿ ||
ಕಡೆಗಿರಿದು ಕಂಗಳಲಿ ಒಡೆಯನ | ಬಿಡದನೋಡುತ ಸನ್ನೆಯಱಿದಿಹ |
ಹಡಪದೂಳಿಗ ವರದನೆಂಬನಗಾಯ್ತು ಕೈವಶವು ||

## ಮದುವೆಯಾಗೆಂದು ಹೇಳಿದ ಶಿವನಿಗೆ ಗಂಗೆಯ ಉತ್ತರ.

ಗಿರಿಯ ತುದಿಯಿಂ ಬೀಳಲಾಪರು | ಉರಿಯ ತೃಣಕೆಸಮಾನವೆಂಬರು |
ಹರಿವ ಹೊಟೆಯನು ಲೆಕ್ಕಿಸರು ಶಾರ್ದೂಲಸಿಂಹಗಳ ||
ಭರವಸಕೆ ಕಂಗೆಡರು ನವತಿಯ | ಸ್ಮರಣೆಯೆಂದರೆ ಜ್ವಾಲೆ ಮೈಗಾ |
ವರಿಸಿದಂದದಿ ತಾವಲಾಱರು ಭಾನೆಯರು ಜಗದಿ ||

## ರಾಜಸಂಗೀತ. ಸು 1710.

ಮೈಸೂರು ದೊರೆಯಾದ ಚಿಕ್ಕದೇವರಾಜನ ಮಗ ಕಂಠೀರವರಾಜನ (1704-1713) ಸ್ತುತಿರೂಪವಾದ ಹಾಡುಗಳು.

ಪಂಡಿತೋತ್ತಮಜನಮನೋಮತಿ ಪುಂಡರೀಕವಿಕಾಸವಿಕಸಿತ |
ಚಂಡಕರ ರಿಪುಶರಭತತಿಭೇರುಂಡ ಬಿರುದೆಂತೆಂಬ ದೊರೆಗಳ |
ಗಂಡ ನಿನ್ನುರುಮಹಿಮೆಯನು ನೆಲೆಗಂಡು ಬಣ್ಣಿಸಲಳವೆ ಧರಣೀ |
ಮಂಡಲಸ್ತುತಮಹಿಮ ಕದನೋದ್ದಂಡ ಕಂಠೀರವಮಹೀಧವ |
ಚಾರುಚಂದ್ರ | ಚೆಲ್ವಿನೊಳಾರತೀಂದ್ರ | ಶ್ರೀಕಂಠೀರವೇಂದ್ರಾ ||
ಪಲ್ಲವಿ|| ಸೊಹೆಗೊಳಲೆಸೆವಾ | ಚೆಲುವಿಕೆ ಚತುರಕಲಾಕುಶಲತೆಯೊ |
ನೆಲಸಿದುವಮಮ ಕಂಠೀರವನೃಪಗೆ ||

ಅಲರಂಬಿಗೆ ನಗೆಗಣ್ ತುಱುಗೆವೆಯಾ ವಲಿಮುಱಿದುಂಬಿವೆದೆಗೆವುರ್ಬು |
ಪೊಳೆವಿನಿವಲ್ಗೆ ಡೆಯಾಗಲಿವಂಗೀಕಂಗೊಳಿಪಘನವಮನಸಿಜನೆನಿಪಂಗೆ ||

## ಕರ್ಣಾಟಕಕೌರವಂಶ. ಸು. 1710.

ಮೈಸೂರು ದೊರೆಯಾದ ಕಂಠೀರವರಾಜನ ಸ್ತುತಿರೂಪವಾಗಿದೆ.

....ಶ್ರೀಕಂಠೀರವ | ನೃಪತಿಗೆ ಸೌಖ್ಯಮನೊಡರ್ಚುಗೀರಂಗೇಶಂ ||

## ಲಕ್ಷ್ಮೀಸ್ವಯಂವರ ಸೋಬಾನೆ. ಸು. 1715.

ರಾಜವಂಶದ ಸೋಮರಾಜನಂದನ ವೀರರಾಜೇಂದ್ರನ ಆಜ್ಞಾನುಸಾರವಾಗಿ ಬರೆದಂತೆ ಹೇಳಿದೆ; ಕವಿ ಆತನ ಆಶ್ರಿತನಾಗಿರಬೇಕು.

ಸುರರನೆಲ್ಲರ ಸಲಹಿ | ನರರನೆಲ್ಲರ ಪೊರೆಯೆ |
ಸಿರಿಸಹಿತ ನರಸಿಂಹಪುರವರದಲಿ |
ಪಿರಿದಾಗಿ ಮೂಗೂರ ವೀರರಾಜೇಂದ್ರಗೊಲಿ |
ದಿರುವ ಗುಂಜಾಕರದ ನರಸಿಂಹಗೆ ||
ನರಸಿಂಹಪುರದಗುಂಜಾ | ನರಸಿಂಹನು ವೀರರಾಜನೃಪಕುಲಮಣಿಗಂ |
ವರಪುತ್ರಪೌತ್ರರೇಳ್ಗೆಯು | ಭರದಿಂದೈಶ್ವರ್ಯವಿತ್ತು ಸಲಹಲಿ ನಿರತಂ ||

## ಕೆಳದಿನೃಪ ವಿಜಯ. ಸು. 1750

ಚಂಪು, ಆಶ್ವಾಸ 11.

ಹರನ ನಿಷಂಗವಚ್ಯುತನ ಪಾಸು ಜಲೇಶನ ರಾಜಮಂದಿರಂ |
ನಿರುಪಮಮಪ್ಪ ಲಕ್ಷ್ಮಿಯ ತವರ್ಮನೆ ಚಂದ್ರನ ಜನ್ಮಭೂಮಿ ಭೂ ||
ಧರವರಪುತ್ರನುದ್ಧ ಕವಚಂ ಬಡಬಾನಲಪಾನಪಾತ್ರನು |
ತ್ಯುರುತರಮಪ್ಪ ಸನ್ಮಣಿಗಳಾಗರಮೊಪ್ಪಿದುದ್ದೈದೆ ಸಾಗರಂ ||
ಅಮರರ್ಗಮೃತಾಶನರೆಂ | ದುಮೆಯಾಣ್ಮಗೆ ನೀಲಕಂಠನೆಂದಚ್ಯುತಗಂ |
ಕ್ರಮದಿಂ ಕಮಲಾಪತಿಯೆಂ | ದಮರ್ದಿರೆ ಪೆಸರಿತ್ತ ಜಲಧಿಯೇಂ
ರಂಜಿಸಿತೋ ||

ಪೊಡೆಯೆಂಬರ್ ಶಾಲಿಯುನಾ | ರಡಿಯೆಂಬರ್ ಷಟ್ಪದಾಳಿಯುಂ ಕರಿಣಿಯುಮಂ |
ಸಿಡಿಯೆಂಬರಲ್ಲದೀಪರಿ | ನುಡಿಯಾಲಿಪೊಡಿಲ್ಲ ಜನರೊಳಂತಾ ನಾಡೊಳ್ ||
ಕಡೆಯೆಂಬರ್ ದಧಿಮಥನದೊ | ಳೊಡೆಯೆಂಬರ್ ಭಕ್ಷ್ಯಭೇದದೊಳ್ ಕಬರಿಗಳೊಳ್ |
ಮುಡಿಯೆಂಬರಲ್ಲದೀಬಿಜು | ನುಡಿಕನಸಿನೊಳಾದೊಡಂ ವಿಚಾರಿಪೊಡಿಲ್ಲಂ||

## ಶಂಕರಸಂಹಿತೆ. ಸು. 1750

ಭಾಮಿನೀಷಟ್ಪದಿ, ಸಂಧಿ 89, ಪದ್ಯ 2981. ಆರಂಭದಲ್ಲಿ ಗಣಪತಿ, ಸರಸ್ವತಿ, ವಿಷ್ಣು, ಶಿವ, ಮೂಕಾಂಬಿಕೆ, ಕುಮಾರ ಇವರುಗಳ ಸ್ತುತಿ ಇದೆ. ಸಂಧಿಗಳ ಕೊನೆಯಲ್ಲಿ ಮೂಕಾಂಬಿಕೆಯ ಅಂಕಿತವಿದೆ.

ಶರಧಿ ಶರಧಿ ನವಾಂಬರಾಂಬರ | ವರಕುಮಾರ ಕುಮಾರನಘಹರ |
ಹರವಿನಾಯಕ ಜನವಿನಾಯಕ ರಾಜರಾಜಸಖಾ ||
ಪರಮಭೂತಿಭೂತಿದಿನಕರ | ಕರರುಚಿಯ ಕುಂಡಲಿಯ ಕುಂಡಲಿ |
ಕರುಣ ಕರುಣಿಸು ಮಾರಮಾರ ಸುರಾಸುರಾಧೀಶ ||
ಅರಳುಮಲ್ಲಿಗೆ ಜಾಜಿಸಂಪಗೆ | ಪರಿಪರಿಯಕುಸುಮಗಳಮಾಲೆಯು |
ಸಿರಿವಿಡಿಗೆ ಮುಡಿಸಿದರು ಕುಂಕುಮವಗಿಲುಗಂಧಗಳ ||
ಪರಿಮಳದ ಮೃಗಮದವ ಲೇಪಿಸಿ | ಮೆಱೆವ ಕಸ್ತುರಿತಿಲಕವಿಟ್ಟರು |
ಸ್ಮರನಸಾಣೆಯಖಡ್ಗದಂದದಿ ಕಾಂತಿಯೊಪ್ಪಿದುದು ||

## ವೈಕುಂಠನಾರಾಯಣಶತಕ. ಸು. 1750.

ಶ್ರುತಿಸಂಪತ್ತುವನೆಯ್ದು ದುಷ್ಟಖಳನಂ ಬೆಂಬತ್ತಿ ಕೋಪೋಗ್ರದಿಂ |
ರ್ತುಳಂ ಸಾಹಸಿಯೆಂಬ ದೈತ್ಯಶಿರಮಂ ಚೆಂಡಾಡಿ ನಾಲ್ವೇದಮಂ ||
ಚತುರಾಸ್ಯಂಗಿಱೆ ಕೊಟ್ಟು ಮೂಜಗತಲಕ್ಕಂ ಸಾಕ್ಷಿರೂಪಾದ ಗೋ |
ಪತಿ ತಾಂ ಮತ್ಸ್ಯವತಾರನಾದನಿವನ್ಶೈ ವೈಕುಂಠನಾರಾಯಣಾ ||

ಮೈಸೂರು ದೊರೆಗಳ ಚೌಪದ. ಸು. 1750.

ಫುಟನೆಗೆದು ಗಟ್ಟಬೆಟ್ಟಗಳೊಡೆದು ಬಹಳ |
ಚಟಿಲು ಪಟಪಟಲು ಗುಗುರ್ಳಿರೆಂಬ ದನಿಗಳ |
ನಿಟಿಲಲೋಚನ . . |
. . . . . . |
ಟಿಂಬಿಡದೆ ತೆರೆನೊರೆಯು ಗುಂಬಿ ಘುಳಿರೆನುತ |
ಇಂಬಿನಲಿ ದಡವನಾಭ್ರಟಿಸಿ ಘಳಿರೆನುತ |
ತುಂಬಿ ಘುಡುಘುಡಿಸಿಯಾರ್ಭಟಿಸಿ ನೊರೆಯುತ್ತ |
ನಂಬಿರ್ದ ಕೂರ್ಮದಲ್ಲೆಣಿಸಿ ಶಿವ ಎನುತ |
ಸಾರಿ ನೊರೆಯುತ್ತ ಭೋರೆಂದು ಹರಿಯುತ್ತ |
ಧಾರಿಣಿಯುನಿಬ್ಬಗಿಯುಮಾಡಿ ಹರಿಯುತ್ತ |
ಆರೈದು ಮನುಜರಿಗೆ ಅಭಯಗಳ ಕೊಡುತ |
ಕಾರುಣ್ಯನಿಧಿ ಕಾವೇರಿ ಜನರ ರಕ್ಷಿಸುತ ||

ಅರುವತ್ತು ಮೂವರು ಪ್ರಮಥಗಣಾಧೀಶ್ವರರ ತ್ರಿಪದಿ ಸು. 1750.

ನಂಜನಗೂಡಿನಲ್ಲಿ ಕಳಲೆನಂಜರಾಜನು ಪ್ರತಿಷ್ಠೆಮಾಡಿದ ಅರುವತ್ತುಮೂವರ ಸ್ತುತಿರೂಪವಾಗಿದೆ, ಪದ್ಯ 61. ಪ್ರತಿಪದ್ಯವೂ "ಪೊಡಮಡುವೆಮನದಣಿಯಲು." ಎಂದು ಮುಗಿಯುತ್ತದೆ.

ಪೊಡಮಡುವೆ ಮನದಣಿಯಲು ||
ಪೊಡುಮಡುವೆ ನಾನವರ ಪೊಗಳ್ದು ಸಂತಸವಡುವೆ |
ಮೃಡನೊಲಿಸಿದಱುವತ್ತುಮೂಱು | ಭಕ್ತರಿಗಾನು |
ಪೊಡಮಡುವೆ ಮನದಣಿಯಲು ||
ಧರೆಯೊಳಗೆ ಜಸವಡೆದ ಧಾರ್ಮಿಕಾಗ್ರಣಿ ವೀರ |
ನರವರಾತ್ಮಜ ಕಳುಲೆನಂಜೇಂದ್ರ | ಗಾವಗಂ |
ವರವೀವ ಗರಳಪುರದೊಡೆಯ ||

ವರವೀವ ಗರಳಪುರದೆಡೆಯೊಳಂ ಬಿಡದೊಲಿಸಿ |
ದಖಿಳವತ್ಸುಮಾಜಭಕ್ತರ | ಶರಣಗಳಿಗಾನು |
ಪೊಡಮಡುವೆ ಮನದಣಿಯಲು ||

ಚೌಪದ. ಸು. 1750

ಮಾತೆಚೆನ್ನಮ್ಮನ ದರಾಬ್ಧಿಚಂದ್ರಮನು |
ಪ್ರೀತಿಯುತ ಜವನಯ್ಯನಾತ್ಮಸಂಭವನು |
ಖ್ಯಾತಿಯುತ ಚೆಲುವಯ್ಯ ಜನಿಸಿ ಸುಖವಿಹನು |
ಪ್ರೀತಿಯಿಂ ಶ್ರೀಕೃಷ್ಣನೊಲಿದು ರಕ್ಷಿಪನು ||

ದಶಕಂಠರಾಮಾಯಣ (ಗದ್ಯ) ಸು. 1750.

ವಾಲ್ಮೀಕಿರಾಮಾಯಣವನ್ನು ಭಾಸ್ಕರಕವಿ ತೆಲುಗಿನಲ್ಲಿ ಬರೆದನು. ಅದನ್ನೇ ಕುಮಾರವಾಲ್ಮೀಕಿ ಕನ್ನಡಿಸಿದನು ಅದನ್ನು ಸರ್ವರಿಗೂ ತಿಳಿವಂತೆ ಗದ್ಯರೂಪವಾಗಿ ಒರೆದಿದೆ. (ಯುದ್ಧಕಾಂಡಮಾತ್ರ).

ನಂಜುಂಡೇಶಚರಿತ್ರೆ. ಸು. 1750.

ನಂಜನಗೂಡುಮಾಹಾತ್ಮ್ಯ; ಭಾಮಿನೀಷಟ್ಪದಿ, ಸಂಧಿ 5, ಪದ್ಯ 200. ಆರಂಭದಲ್ಲಿ ನಂಜುಂಡ, ವಿಷ್ಣು, ಬ್ರಹ್ಮ, ಗಣೇಶ, ಸರಸ್ವತಿ, ಬಸವ ಇವರುಗಳ ಸ್ತುತಿ ಇದೆ.

ಮಾತೆಯೇ ವರಸತ್ಯ ತಾತನೆ | ಪ್ರೀತಿಮಯಸುಜ್ಞಾನ ಧರ್ಮವೆ |
ಭ್ರಾತನಾಗೆ ದಯಾ ಸಖೀ ಎಂದೆನಿಪ ಪೆರ್ಮೆಯೊಳು ||
ಖ್ಯಾತಿಪಸರಿಸೆ ಶಾಂತಪತ್ನಿಯು | ನೂತನರಕ್ಕೈಕೊಂಡು ಕ್ಷಮೆಯೇ |
ಜಾತನಾಗಿರೆ ಬಾಟ್ಬ್ರರಾಕ್ಕೈಲಾಸದೊಳು ಜನರು ||
ಪರಮಮಯದಾನಂದ ಬೀದಿಗ | ಳುರುತರದ ಬೇಹಾರ ನವವಿಧ |
ಭರಿತಭಕ್ತಿವಿಶೇಷವಸ್ತುಯ ನೋಡೆ ಗೃಹನಿಚಯು ||

ಏಳುಂಪ ಪ್ರೋಕ್ಷಾಸಕ್ತಿಯೋ ವರ | ತರುಣಿಯರ ರೂಪಾಗಿ ರಾಜಿಸೆ |
ಹರನೆಸೆವ ಕೈಲಾಸ ರಾಜಿಪುದೇನಜಣ್ಣೈಪೆನು ||

## ಅಕ್ಷರಕೇವಲಿಸಿಮಿತ್ತ (ಗದ್ಯ) ಸು. 1750

ಅದಿಯಲ್ಲಿ ವರ್ಧಮಾನಸ್ತುತಿ ಇದೆ.

ಪರದ—ಎಲೆ ಪಸಗೊಂಬಾತನೆ ಕೇಳು. ನಿನ್ನ ಬಂಧುಗಳು ನಿನ್ನಮೇಲೆ ವಿರುದ್ಧವ ಚಿಂತಿಸುತಿದ್ದಾರು. ನಿನ್ನ ಸ್ವಭಾವವ ಬಿಡದೆ ನಿನ್ನ ಚಿತ್ತದಲ್ಲಿ ಕ್ಲೇಶವ ಮಾಡಿಕೊಂಡು ಇರುತಿದೆ. ನೀನು ಹಿಂದಕ್ಕೆ ಬಹಳ ದುಃಖನನನುಭವಿಸಿದೆ. ಮುಂದಕ್ಕೆ ಪುಣ್ಯವುಳ್ಳವನಾದೆ. ಮುಂದಕ್ಕೆಲೇಸಾದುದು. ವಿಘ್ನನಾಶವಾದೀತು. ನೀನು ಚಿಂತಿಸಿದ ಕಾರ‍್ಯವು ಪ್ರಯಾಸವಿಲ್ಲದೆ ಶೀಘ್ರದಲ್ಲಿ ಸಿದ್ಧಿಯಾಗುವುದು. ನಿನ್ನಮೇಲೆ ಕ್ರೂರಗ್ರಹಂಗಳು ಶತ್ರುಗಳು ಕಷ್ಟವನೆಣಿಸುತಿದ್ದಾರು. ಅವರ ಶಾಂತಿನಿಮಿತ್ತವಾಗಿ ಇಷ್ಟದೇವರ ಪೂಜೆಯನುಮಾಡಿದರೆ ಆ ಪುಣ್ಯದಿಂದ ಎಲ್ಲಾ ನಿನಗೆ ಸಿದ್ಧಿಯಾದೀತು. ಇಲ್ಲಿ ಸಂದೇಹಂಮಾಡಬೇಡ.

## ಮಹಾನವಮಿಯ ಪದ ಸು. 1750

ಅಳಿಯನುಡುಗೊರೆಯಲ್ಲ ಮರಳಿ ಬೇಡುವರೆ |
ಒಲಿಯ ಸಂಬಳವಲ್ಲ ನಿಂತು ಕೇಳುವರ |
ಹಲಿಸಾಲವಲ್ಲ ಹಗಲಿರುಳು ಕಾಡುವರೆ |
ಅತಿ ಮನಸುಮಾಡದೇ ಕೊಡು ಕೀರ್ತಿ ಬಹರೆ ||
ಧನಕನಕವಸ್ತುವಾಹನವಾಗಲೆಂದು |
ಕನಕದಂಡಿಗೆ ಪದವಿ ನಿಮಗಾಗಲೆಂದು |
ದಿನದಿನಕೆ ರಾಜಮನ್ನಣೆ ಹೆಚ್ಚಲೆಂದು |
ಅನುನಯದಿ ಹರಸಿದೆವು ಬಾಲಕರು ಬಂದು ||

## ಭಾಗವತಟೀಕೆ ಸು 1750

ಏಕಾಕಾರಟೀಕೆ ಎಂಬ ಹೆಸರುಳ್ಳ ಹಾಡಿನರೂಪವಾದ ವ್ಯಾಖ್ಯಾನ.

ಅಗಜ ಪಕ್ವಾನ್ನ ಚೊಕ್ಕಡಿ | ಪ್ರಾಕೃತದ ಪದ ನೋಡಿ |

ಏಕೋಜನಾರ್ದನ ಮಾಡಿದ ಪದಪದಿ |
ಆದ ರುಚಿನೋಡಿ ಬೋಗಿಸುವ ನಿಜಾತ್ಮಭೋಕ್ತಾ ||

ವೇದಾಂತವಿವೇಕಸಾರ ಸು. 1750

ಅದ್ವೈತ ವೇದಾಂತವನ್ನು ಬೋಧಿಸುವ ಗದ್ಯಗ್ರಂಥ. ಇದರ ಮಾತೃಕೆ ವಾಸುದೇವ ಯತಿಕೃತ ಸಂಸ್ಕೃತಗ್ರಂಥ.

ಗಜೇಂದ್ರಮೋಕ್ಷ. ಸು. 1750.

ಉದಯರಾಗ. ದ್ವಿಪದಿ, ಪದ್ಯ 91. ಆರಂಭದಲ್ಲಿ ವಿಷ್ಣು, ಶಿವ, ಬ್ರಹ್ಮ, ಗಣಪತಿ ಇವರುಗಳ ಸ್ತುತಿ ಇದೆ.

ಕಮಲರೇಣುಗಳಿಂದೆ ಪರಿಮಳವನಾಂತ | ವಿಮಲಜಲವನು ಕೂಕ್ಕು ದೊಡನೆಯಾದಂತಿ ||
ತಣಿವನ್ನೆಗಂ ನೀರನೀಂಟಿ ಕರದಿಂದೆ | ಕ್ಷಣದೆ ಜಲವನು ಕೊಂಡುಕೊಂಡು ಮುದದಿಂದೆ ||
ಸುರಿದು ತನುವಿನಮೇಲೆ ತನ್ನ ಡಗೆಯಾಕೆ | ಕರಿಣಿಗಳಮೇಲೆ ಸುರಿದುದು ಒಟ್ಟಿಕನೀರ ||
ಜಳಕವಾಡಿಸಿ ನೀರನೂಡಿಮಣಿಗಳಿಗೆ | ನಲವಡಿಸಿ ಸೊಗವಿರ್ದುದಂತುಟರೆ ಗಟಿಗೆ ||

ಕುಶಲವರ ಕಾಳಗ ಸು. 1750.

ಸೋಲೂರ.ಸ್ಥಳದ ಕರಣಿಕ ಚಿಕ್ಕಣ್ಣ, ಚೆನ್ನಮ್ಮ ಇವರ ಮಗ ಹುಚ್ಚಾನಿ ಗೋಸ್ಕರ ಹಿಂದೆ ಷಟ್ಪದಿಯಲ್ಲಿದ್ದ ಈ ಕಥೆಯನ್ನು ಯಕ್ಷಗಾನ ರೂಪವಾಗಿ ಒರೆ ದಂತೆ ಕವಿ ಹೇಳುತ್ತಾನೆ ಆರಂಭದಲ್ಲಿ ಕಕುದ್ಗಿರಿಯ (ಶಿವಗಂಗೆ) ಈಶ್ವರ, ಸ್ವರ್ಣಾಂಬಿಕೆ, ಕವಿಯ ಕುಲಸ್ವಾಮಿಯಾದ ತಟ್ಟೆಯ ಕೆರೆ ರಂಗನಾಥ, ಲಕ್ಷ್ಮಿ, ಶಂಕರಾಚಾರ್ಯ, ಸರಸ್ವತಿ ಇವರುಗಳ ಸ್ತುತಿ ಇದೆ. ಈ ಕವಿ ಬಭ್ರುವಾಹನ ಕಾಳಗ, ಯಾಗಚರಿತ್ರೆ ಎಂಬ ಯಕ್ಷಗಾನಗಳನ್ನೂ ಒರೆದಿದ್ದಾನೆ ಯಾಗಚರಿತ್ರೆ ಯಲ್ಲಿ ಧರ್ಮರಾಜನು ಅಶ್ವಮೇಧಯಾಗವನ್ನು ಮಾಡಿದ ಕಥೆ ಹೇಳಿದೆ. ಪೂರ್ವ ಕವಿಗಳಲ್ಲಿ ಕನಕ, ಪುರಂದರ ಇವರುಗಳನ್ನು ಸ್ಮರಿಸಿದ್ದಾನೆ.

ವಿನಾಯಕಾಷ್ಟಕ ಸು. 1750

ಕಟಿವೆಯೋಗರ ಸೂಪಘೃತದಿಂ ಕಲಸುವೇಲೋಗರಗಳ |
ಬಿಳಿಯಹೋಳಿಗೆಯೆಣ್ಣೆ ಹೂರಿಗೆ ಬಗಬಗೆಯಪಾಯಸಗಳ |
ಒಳ್ಳೆಹೂರಣಗಡುಬುಚಕ್ಕುಲಿಯ ಂಡಲಿಗೆವೋದಕಗಳ |
ಒಳ್ಳಮಜ್ಜಿಗೆಪಾಯಸಂಗಳನರ್ಪಿಸುವೆ ಗಣನಾಯಕ ||

ಗಯಚರಿತ್ರ ಸು. 1750

ಯಕ್ಷಗಾನ, ಕುಕ್ಕೆಯ ಸುಬ್ಬರಾಯ, ಮೂಕಾಂಬಿಕೆ, ಶಂಕರಾಚಾರ್ಯ ವಿದ್ಯಾರಣ್ಯ ಇವರುಗಳ ಸ್ತುತಿಇದೆ. "ಪೇಳ್ದ ಕೃತಿಯನುಡುಪಿಯಕೃಷ್ಣಗೆ".

ಶಂಕರವಿಜಯ (ಗದ್ಯ) ಸು. 1750

"ಗೀರ್ವಾಣದಲ್ಲಿ ಹೇಳಿದಪ್ರಕಾರ ಕನ್ನಡಭಾಷೆಯಿಂದ ವಿಸ್ತರಿಸಿ ಬರೆದೆನು"

ರಾಮಚರಿತೆ ಸು. 1750

ಯಕ್ಷಗಾನ ಆರಂಭದಲ್ಲಿ ಶೃಂಗೇರಿ ಶಾರದೆಯ ಸ್ತುತಿಯೂ ಅಂತ್ಯದಲ್ಲಿ ಚುಂಚನಕಟ್ಟೆ ರಾಮನ ಸ್ತುತಿಯೂ ಇವೆ.

ವೃತ್ತರತ್ನಾಕರಟೀಕೆ. ಸು. 1775

ಆರಂಭದಲ್ಲಿ ಈ ಪದ್ಯವಿದೆ—

ಆವನ ಬೋಧರತ್ನಮಯದರ್ಪಣದೊಳ್ ಸಚರಾಚರಂ ಜಗಂ |
ಭಾವಿಸಲಂತರಿಕ್ಷತಲದೊಳ್ ಪರಿಶೋಭಿಪ ತಾರೆಯಂತಿರಾ ||
ದೇವನ ಪಾವನಾಂಘ್ರಿಗಭಿವಂದಿಸಿ ವೃತ್ತಸಮುದ್ರಮೆಂಬ ಭಂ |
ದೋವಿಸರಕ್ಕೆ ವೃತ್ತಿಯನಿಳಾಂಚಿತಕನ್ನಡದಿಂದೆ ಪೇಳ್ದಪೆಂ ||

ರಾಜೇಂದ್ರನಾಮೆ 1796

ಇದರಲ್ಲಿ 1632ರಿಂದ 1796ರವರೆಗೆ ಕೊಡಗುದೊರೆಗಳ ಚರಿತ್ರವು ಹೇಳಿದೆ ಕೊಡಗು ದೊರೆಯಾದ ವೀರರಾಜೇಂದ್ರನು ಈ ಗ್ರಂಥವನ್ನು ಬರೆಯಿಸಿದನು.

## ಮುಟ್ಟದಕಾಂಡ ಸು 1800

ಅಸ್ತಮಯಮಾಯಿತಯ್ಯಾ | ಪುಸ್ತಕಮಂ ಕಟ್ಟಿ ಮನೆಗೆ ಪೋದಪೆವಯ್ಯಾ |
ಹೊತ್ತಾತೆಯೆದ್ದು ಬಾರದೊ| ಡುತ್ತಮ ಕಶಿರಾಜ ನೋಡಿ ಶಿಕ್ಷಿಪನೊಡೆಯಂ ||
ಕಶಿರಾಜನೊಡನೆ ಹುಟ್ಟಿದ | ನೆಸೆವಂ ಕಿಱಿಯಾತನೊಬ್ಬ ಕೊ ದಂಡರಸಂ |
ಸಸಿವಿರದಾಡುವ ದುಸ್ಸ್ವರ | ಬೆಸಗೈದವನಿಂದ ಜಡಿವ ಕಶಿಯಹ ರಾಜಂ ||
ಕಶಿಗೆ ಕಿಱುಗೆಜ್ಜೆ ತೊಂಗಲು | ಪೊಸಬಣ್ಣದ ಠಾಣೆಗೊಳು ಮುಪ್ಪುರಿದಾರಂ |
ವಶವಲ್ಲದಿರ್ಪ ಕುವರರ | ಹೊಸಕೋರಿಯ ತದೆವತೆಣೆ ತದೆವಂ ಬೆನ್ನಂ ||
ಗಱಗೆಗೆ ಪದಪದವೊಪ್ಪಿಸಿ | ತಳುವಿಲ್ಲದೆ ಬಣ್ಣದೋಲೆ ಕಂರವು ಬೇಯಾ |
ಹಲಗೆಯು ದಟ್ಟಿಪೆ ಬೇಯಾ | ಬಳಹಂಗಳ ಮೊನಡುಮಾಡಿ ಬರೆವೆವು ಬೇಯಾ ||
ನಡುನೀಳವಾಗಿ ಬೆನ್ನಂ | ಕಡುಬಿಟ್ಟಿತ್ತಾಗಿ ಜಘನಮಂ ಹೊಕ್ಕುೞುಮಂ |
ನಡುವಿಂಗೆ ಸರಿಸವಾಗಿಯೆ | ಕೊಡುವುದು ತಲೆಕಟ್ಟನರ್ಧಚಂದ್ರಾಕೃತಿಯಂ ||

## ಗಯಚರಿತ್ರೆ ಸು. 1800

ಯಜ್ಞಗಾನ; ಗೋಕರ್ಣಗಣನಾಥ, ಕಾರಕಳದವೆಂಕಟೇಶ್ವರ ಇವರುಗಳಿಗೆ ಮಂಗಳವು ಹೇಳಿದೆ.

## ಗಿರಿಜಾಕಲ್ಯಾಣ (ತ್ರಿಪದಿ 108) ಸು. 1800.

ಮರುಗಮಲ್ಲಿಗೆಜಾಜಿ | ಸುರಗಿಸೇವಂತಿಗೆ | ಮುಡಿವಾಳಪಚ್ಚೆದವನವು |
ಸಂಪಗೆಯು | ಸರವ ಹಾಕಿದಳಳಿಯನಿಗೆ ||

## ನಂದಿಛಂದಸ್ಸು ಸು. 1800.

ಪ್ರಾಸಗಳು, ವೃತ್ತಗಳು ಇವುಗಳ ಲಕ್ಷಣವನ್ನು ಹೇಳುವ ಗ್ರಂಥ.
ಪ್ರಾಸವೆನಲ್ಕೆರಡನೆಯದು | ಭಾಸುರತರದಾದಿವರ್ಣ ವಡಿ ಮೇದಿನಿಯೊಳ್ |
ಪ್ರಾಸವೆರಡು ಚರಣಕೆಲ್ಲಕೆ | ಲಾಸವು ಕೇಳ್ ವಡಿಯು ಪಾದಪಾದಕೆ ಸಲಿಯೇ ||

## ಕಾವೇರೀಪುರಾಣ ಸು. 1800.

ಭಾಮಿನೀಷಟ್ಪದಿ, ಸಂಧಿ 11, ಪದ್ಯ 354.

ಮೆರೆವ ಸಹ್ಯಾಚಲದ ಪಾರ್ಶ್ವದ | ಲಿರುವ ಪುಣ್ಯಕ್ಷೇತ್ರನದಿಗಳ |
ಹರಿಹರಬ್ರಹ್ಮಾದಿದೇವರ ದಿವ್ಯಮಹಿಮೆಗಳ ||
ವಿರಚಿಸಿದ ಸಹ್ಯಾದ್ರಿಕಾಂಡದ | ಪರಮಪಾವನ ಕಥೆಯ ಕೇಳಿದ |
ನರರ ಸಲಹುವಳೊಲಿದು ಮೂಕಾಂಬಿಕೆಯು ಕರುಣದಲಿ ||

---

## ಶಂಕರಸಂಹಿತೆ ಸು. 1800.

ಭಾಮಿನೀಷಟ್ಪದಿ, ಸಂಧಿ 89, ಪದ್ಯ 298. ಆರಂಭದಲ್ಲಿ ಗಣಪತಿ, ಸರಸ್ವತಿ, ವಿಷ್ಣು, ಈಶ್ವರ, ಮೂಕಾಂಬಿಕೆ, ಸುಬ್ರಹ್ಮಣ್ಯ ಇವರುಗಳ ಸ್ತುತಿಇದೆ. ಪ್ರತಿಸಂಧಿಯ ಕೊನೆಯಲ್ಲಿಯೂ ಮೂಕಾಂಬಿಕೆಯ ಅಂಕಿತವಿದೆ. ನೈಮಿಶಾರಣ್ಯದಲ್ಲಿ ಋಷಿಗಳು ಸೂತನನ್ನು ಕುರಿತು

ಹರನಸುತ ಷಣ್ಮುಖನ ಪಾವನ | ಚರಿತವನು ನೀನೆಮಗೆ ಕರುಣದ |
ಲರುಹು ತಜ್ಜನ್ಮವನು ಬಾಲಕತನದ ಕೇಳಿಗಳ ||
ಸುರರ ಸೇನಾಪತ್ಯವಾದುದು | ಧುರದಿ ಬಹುರಾಕ್ಷಸರ ಕೆಡಹಿದ |
ಪರಿಯನೆಲ್ಲವನೆಮಗೆ ವಿಸ್ತರವಾಗಿ ತಿಳುಹುವುದು ||
ಎಂದು ಕೇಳಲು ಅವನು ವಿವರಿಸಿದನು.

### ರತಿಯ ಪ್ರಲಾಪ

ತಂದೆತಾಯಿಗಳಿಲ್ಲ ರಕ್ಷಿಪ | ಬಂಧುಬಳಗಗಳಿಲ್ಲ ಸಂಗಡ |
ಬಂದ ಸೋದರರಕ್ಕತಂಗಿಯರಿಲ್ಲ ನೋಡಲ್ಕೆ ||
ಒಂದುಗೂಡಿನೊಳೆರಡುಪಕ್ಷಿಗ | ಳಂದದೊಳು ನಿನ್ನಂಗಸಂಗದಿ |
ಚಂದದೊಳಗಿರೆ ಮೃತ್ಯು ಒಂದುದೆನುತ್ತ ಹಲುಬಿದಳು ||

ಐರಾವತ ಸು. 1800.

ಯಕ್ಷಗಾನ, ಕಣ್ವಪುರದ ಗೋಪಾಲಕೃಷ್ಣನ ಅಂಕಿತವಿದೆ.

ಲವಕುಶರ ಕಾಳಗ ಸು. 1800.

ಯಕ್ಷಗಾನ; "ಶಂಕರಾಚಾರ್ಯರಿಗೆ ಶರಣೆಂದು" ಗ್ರಂಥವು ಆರಂಭವಾಗಿದೆ.

ಭಸ್ಮಾಸುರನಕಾಳಗ ಸು. 1807.

ಯಕ್ಷಗಾನ. ವೇಲಾಪುರದ ಚೆನ್ನಕೇಶವನ ಅಂಕಿತವಿದೆ.

ವೆಂಕಟಾಚಲರಾಮನ ಹಸೆಗೆ ಕರೆಯುವ ಹಾಡು ಸು. 1820.

ಪಿರಿಯಪುರದ ಚೆನ್ನಕೇಶವನ ಅಂಕಿತವಿದೆ.

ಬಭ್ರುವಾಹನಕಾಳಗ ಸು. 1820.

ಯಕ್ಷಗಾನ; ಉಡುಪಿಯ ಕೃಷ್ಣನ ಅಂಕಿತವಿದೆ

ಹುಲಿಕಲ್ಲು ಸಂಸ್ಥಾನಿಕರ ಚರಿತ್ರೆ ಸು. 1820,

ಗದ್ಯಗ್ರಂಥ. ಇದರಲ್ಲಿ ಮಾಗಡಿತಾಲ್ಲೂಕು ಹುಲ್ಲಿಕಲ್ಲಿನಲ್ಲಿ ಆಳಿದ ಎಲಹಂಕ ಪ್ರಭುಗಳ ಚರಿತ್ರೆ ಹೊನ್ನಪ್ಪಗೌಡನಿಂದ ಗಿರಿಯಪ್ಪಗೌಡನವರೆಗೆ ಹೇಳಿದೆ.

ಕೃಷ್ಣರಾಜಸ್ವಾರಿ ವರ್ಣನೆ ಸು. 1825.

ರಾಗತಾಳಗಳೊಡನೆ ಹಾಡಬಹುದಾದ ದಂಡಕದಂತಿರುವ 22 ನುಡಿಗಳಿವೆ. ಇವಕ್ಕೆ ಖಡಕ್ ಎಂಬ ಹೆಸರಿರುವಂತೆ ತೋರುತ್ತದೆ. ಮೈಸೂರು ಮುಮ್ಮಡಿ ಕೃಷ್ಣರಾಜನ ಸ್ತುತಿರೂಪವಾದ ಗ್ರಂಥ. ಕೊನೆಯಲ್ಲಿ ವೆಂಕಟಾಚಲೇಶ ಎಂಬ ಅಂಕಿತವಿದೆ,

ಇದುಂ ಎನ್ನವಂಶದ ಧರಣೀಪತಿ ಕುಂದರದನ ಅರವಿಂದನಯನ ಬಲು ಸುಂದರಾಂಗ ಗೋವಿಂದನ ಸೇವಕ ಒಂದಿಹ ಸ್ವಾಮಿಯನಿಂದು ನೋಡಬೇಕೆಂದು ಒಲಿಕೆ ಆಯಿತೆಂದು ಧರೆಗೆ ತಾ ಬಂದಪನೊ ಎಂದೆಂಬುತೇಜದ ವ್ಯಗ್ರದಿಂದ ತಾರೆಗಳ ಹೊಂದಿ ಶಶಿಯು ಉದಯಿಸೆ ಬರುತಿರಲು,

ಕೃಷ್ಣರಾಜಸೋಬಾನೆ ಸು. 1825.

ಕೆಂಪಿನಕೊಡಿಗೆಯ ಸೊಂಪುಗಾತಿಯರು |
ಸಂಪಗೆಯೆಸಳಿನ ನಾಸಿಕದವರು |
ಚಂಚಲಾಕ್ಷಿಯರು ತಾವರೆಯ ಪೋಲ್ವ ನಯನದ |
ಪಂಚನಾರಿಯರ್ವರು ಕುಶಲದಿ ಸೋಬಾನೆ ||

ರುಕ್ಮಿಣೀಸ್ವಯಂವರ ಸು. 1825.

ಹಾಡು 22; ಮುಮ್ಮಡಿ ಕೃಷ್ಣರಾಜನ ಕಾಲ

ಪಾರ್ವತೀಕಲ್ಯಾಣ ಸು. 1825.

ಹಾಡು 47; ಮುಮ್ಮಡಿ ಕೃಷ್ಣರಾಜನ ಕಾಲ

ಪಾರ್ವತಿಯ ಹಸೆಗೆ ಕರೆದಸೋಬಾನೆ ಸು. 1825.

11 ಪದ; ಕೊನೆಯಲ್ಲಿ ಈ ಪದವಿದೆ—
ಮಿತ್ರ ದೇವಾಜಮ್ಮಣ್ಣಿಯವರಿಗೆ |
ಪುತ್ರಸಂತಾನವಿತ್ತು ಮುತ್ತೈದೆತನ ಸ್ಥಿರವಿತ್ತು |
ಸ್ಥಿರವಿತ್ತಾಪಾರ್ವತಾದೇವಿಗೆ ಮುತ್ತಿನಾರತಿಯಬೆಳಗೆಸೋಬಾನೆ ||

ಹರಕೆಸೋಬಾನೆ ಸು. 1825.

ಪದ 10; ಕೊನೆಯಲ್ಲಿ ನರಹರಿಪುರದ ಗಿರಿಜಾಧವನ ಸ್ತುತಿ ಇದೆ.

ಬ್ರಹ್ಮಾಂಡದ ವಿವರ ಸು. 1825

ಭಾಗವತಪುರಾಣದಲ್ಲಿರುವ ಪ್ರಕಾರಕ್ಕೆ ಪಂಚಾಶತ್ಕೋಟಿ ಭೂಮಂಡಲದ ವಿವರಂಗಳನು ಸಕಲರಿಗೂ ತಿಳಿವಹಾಗೆ ನನ್ನ ಬುದ್ಧಿಗೆ ತಿಳಿದಷ್ಟು ಶಾಸ್ತ್ರಗಳಲ್ಲಿರುವಪ್ರಕಾರಕ್ಕೆ ಸಂಗಡಿಸಿ ಬರೆದಿದ್ದೇನೆ.

ಪ್ರಸನ್ನ ಕೃಷ್ಣ ಕೊರವಂಜಿ ಸು. 1830.

ನರಪತಿಕೃಷ್ಣಧರಾಧಿಪ | ಪರಚಿತನವಪಾರಿಜಾತವಿಮಲಸುಕಥೆಯೊಳ್ |
ಮುರರಿಪುಧರಿಸಿದ ವೇಷದ | ಕೊರವಂಜಿಯ ಕಥೆಯ ನಾನು ಕುಶಲದಿ ಪೇಳ್ವೆಂ ||

ಅಮೃತ್ಯ ಪಾರಿಜಾತ ಸು. 1830.

ಯಕ್ಷಗಾನ; ಮಧ್ವಾಚಾರ್ಯ, ಸಿರಿಗುಪ್ಪಿ ಆಂಜನೇಯ ಇವರುಗಳ ಸ್ತುತಿ ಇದೆ.

ರುಕ್ಮಾಂಗದಚರಿತ್ರೆ ಸು. 1830

ಯಕ್ಷಗಾನ; ನಾಮಾಂತರ ಕೃಷ್ಣರಾಜ ಮುಖೋಲ್ಲಾಸ.

ಸಿರಿಯಾಳಚರಿತ್ರೆ ಸು 1830

"ಶಿವಲೀಲಾಮೃತಗ್ರಂಥಾಂತರ್ಗತವಾದ ಜ್ಞಾನಭಕ್ತಿವೈರಾಗ್ಯ ಸತ್ಯ ಶಿವ ಮಹಿಮೆ ಇವುಗಳಿಂದ ಕೂಡಿರತಕ್ಕ ಸಿರಿಯಾಳರಾಜನ ಚರಿತ್ರೆ ನೂತನವಾಗಿ ಮಾಡಲ್ಪಟ್ಟಿದೆ."

ಮೈಸೂರು ಮುಮ್ಮಡಿ ಕೃಷ್ಣರಾಜನ ಕಾಲ. "ಚಾಮೇಂದ್ರಾತ್ಮಜನಂಜರಾಜವಿಭುವಂ ಪಾಲಿಕ್ಕೆ ನಾರಾಯಣಂ" ಎಂದಿದೆ.

ಭಾಗವತಸೋಬಾನೆ ಸು. 1830

ಪದ 17, ಕೊನೆಯಲ್ಲಿ "ಕೃಷ್ಣರಾಜನಿಗೆ ಮಂಗಳವಾಗಲಿ" ಎಂದಿದೆ.

ವೆಂಕಟೇಶಜೋಗುಳಪದ ಸು. 1830.

ಪದ 17. ಕೊನೆಯಲ್ಲಿ "ಕೃಷ್ಣರಾಜನಿಗೆ ಮಂಗಳವಾಗಲಿ" ಎಂದಿದೆ.

ಸುಭದ್ರಾಕಲ್ಯಾಣ ಸು. 1830.

ಯಕ್ಷಗಾನ, ಗೋಷ್ಠೀಪುರದ ಲೋಕನಾಥನ ಅಂಕಿತವಿದೆ.

ಸುಧನ್ವನಕಾಳಗ ಸು. 1830.

ಯಕ್ಷಗಾನ; ಕ್ಷೇಮಪುರದ ವೆಂಕಟರಮಣನಿಗೆ ಮಂಗಳವು ಹೇಳಿದೆ.

ಪುತ್ರಕಾಮೇಷ್ಟಿ ಸು 18 ೦

ಯಕ್ಷಗಾನ; ಸಂಧಿ 10. ಶರಪುರದ ವಿಘ್ನೇಶನ ಅಂಕಿತವಿದೆ.

ದೀನಪಾಲಶತಕ ಸು. 1850.

ಇದರಲ್ಲಿ 109 ವೃತ್ತಗಳಿವೆ, ಒಂದೊಂದೂ "ದೀನಪಾಲನಾ" ಎಂದು ಮುಗಿಯುತ್ತದೆ.

ಎಂದಿಗು ನಿನ್ನ ನಂಬಿಹೆನು ಬಂಧುವೆ ನೀ ದಯಮಾಡಿಯೆನ್ನನುಂ |
ಕಂದನ ಕಾದವೋಲ್ ಸತತ ಚಂದದಿಯೆನ್ನನು ಕಾದು ರಕ್ಷಿಸೈ ||
ಮಂದರಪರ್ವತೋತ್ತಮವನಂದದೊಳೆತ್ತಿದ ಧೀರನೇ ಸದಾ |
ನಿಂದು ಮದೀಯಗೇಹದಲಿಯೆಂದಿಗು ರಕ್ಷಿಸೊ ದೀನಪಾಲನಾ ||

---

ಭಕ್ತಿವಿಜಯ (ಗದ್ಯ) 1884.

ಮಹೀಪತಿಯ ಮಹಾರಾಷ್ಟ್ರಗ್ರಂಥದ ಭಾಷಾಂತರ. "ಸೀತಾವಿಲಾಸದ ಸನ್ನಿಧಾನದ ಅಪ್ಪಣೆಯಿಂದ ಭಕ್ತಿಜ್ಞಾನವೈರಾಗ್ಯಗಳಿಗೆ ನಿಧಿಸ್ವರೂಪವಾದ ಭಕ್ತಿವಿಜಯವೆಂಬ ಗ್ರಂಥಾರಂಭ"

---

# APPENDIX III

## ಪರಿಶಿಷ್ಟ III

### ಗ್ರಂಥ ಶುದ್ಧಿ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 1 | 10 | ಕುಶಸಲದ | ಕುಶಸ್ಥಲದ |
| 4 | 14 | ಪಾಲ್ಗುಣ | ಫಾಲ್ಗುಣ |
| 9 | 4 | ಲೆನೆಯ | ಲೆವೆಯ |
| ,, | 23 | ಏೀರರಾಜ | ವೀರರಾಜ |
| 11 | 20 | ಸಕಲಕಲ | ಸಕಲಕಲಾ |
| 13 | 7 | ಭಾವನ್ನ | ಬಾವನ್ನ |
| 14 | 3 | ಬೆಟ್ಟದ | ಬೆಟ್ಟದ |
| 15 | 19 | ಈಪದ | ಈಪದ |
| 24 | 9 | ಸಂವದ | ಸಂವಾದ |
| 26 | 6 | ಕವಿಕುಲರಸ | ಕವಿಕುಲರನ್ನ |
| ,, | 25 | ಪುಂಗವವ | ಪುಂಗವ |

28 ನಿರ್ವಾಣಮಂತ್ರಿ. ಈತನು ಸಂಸ್ಕೃತದಲ್ಲಿ ಕ್ರಿಯಾಸಾರದ ಕೆಲವು ಭಾಗಗಳಿಗೆ ವ್ಯಾಖ್ಯಾನವನ್ನು ಬರೆದಿದ್ದಾನೆ. ಅಲ್ಲದೆ ನಿಜಗುಣ ಶಿವಯೋಗಿಯ ವಿವೇಕಚಿಂತಾಮಣಿಯ ಸ್ವಲ್ಪ ಭಾಗವನ್ನು ಸಂಸ್ಕೃತಕ್ಕೆ ಪರಿವರ್ತಿಸಿದ್ದಾನೆ.

| | | | |
|---|---|---|---|
| 32 | 3 | ನೆಗಱಿದಂ | ನೆಗೞ್ದಂ |
| 35 | 16 | ಹೆದಱಿ | ಹೆದಱಿ |

39 ಜಾಯೋಂದ್ರನು ಸ್ತುತಿಸುವ ಕಾಡಸಿದ್ಧೇಶನೂ ಇಷ್ಟಲಿಂಗಶತಕವನ್ನು ಬರೆದವನೂ (ಪುಟ 28) ಒಬ್ಬನೇ ಆಗಿರಬಹುದೋ ಏನೋ ತಿಳಿಯದು.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 40 | 25 | ಶೀವಗೀತೆ | ಶಿವಗೀತೆ |
| 47 | 11 | ಕೃಷರಾಜ | ಕೃಷ್ಣರಾಜ |
| 49 | 9 | ಿದೇಶ್ವರ | ಸಿದ್ಧೇಶ್ವರ |
| 50 | 10 | ಬ್ರಾಹ | ಬ್ರಾಹ್ಮ |
| 52 | 8 | ವಿಷು | ವಿಷ್ಣು |
| 55 | 13 | ಗತ್ತೆವಜ | ಗತ್ತೆವ |
| 59 | 3 | ಸಳ | ಸ್ಥಳ |
| 62 | 18 | ಕೊಂಡಿದಾನೆ | ಕೊಂಡಿದ್ದಾನೆ |
| 66 | 10 | ಪಬ್ಬಿರ | ಪಬ್ಬಿರಲ್ |
| 69 | 13 | ಹರಿಸರದ | ಮಲೆಬೆನ್ನೂರ |
| 71 | 7 | ಖುಷಿಕ | ಖುಷಿಕ್ |
| 73 | 7 | ಗೆರಿಯ | ಪೆರಿಯ |
| 75 | 16 | ಸುದುತಿ | ಸ ತಿದು |
| 78 | 5 | ಸದ್ಗುರ | ಸದ್ಗುರು |
| ,, | 6 | '" ದು | ಉದಾ |
| 79 | 16 | ತೂಟಿದಳು | ತಡೆಟಿದಳು |
| ,, | ,, | ದಂಶೆ | ದಂತೆ |
| 81 | ಮಹಾಲಕ್ಷ್ಮಿ. 219 ನೆಯ ಪುಟವನ್ನು ನೋಡಿ. | | |
| ,, | 17 | ಹೇಳ | ಹೇಳು |
| 84 | ಮುದ್ದಣ್ಣ. 219 ನೆಯ ಪುಟವನ್ನು ನೋಡಿ. | | |
| 86 | 6 | ಪದ | ಪದ್ಮ |
| 87 | ಹೆಡ್ಡಿಂಗ್ | ಷಡಕ್ಷರಯ್ಯ | ಷಡಕ್ಷರಯ್ಯ |
| ,, | 1 | ರಂಗ, | ರಂಗ. |
| 89 | 24 | ಜಳಿಸುವ | ಜ್ವಳಿಸುವ |
| 90 | 13 | ಹೇಳಿದಾನೆ | ಹೇಳಿದ್ದಾನೆ |
| 97 | 10 | ಬಾಹ್ಮಣ | ಬ್ರಾಹ್ಮಣ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
| --- | --- | --- | --- |
| 99 | 17 | ದೊರೆಯು | ಸೇವಂತರಾಜನ |
| 100 | ತಿಪ್ಪಯಾರ್ಯ. ಈತನು ಕಾಳೀಯಮರ್ದನ, ಕುಚೇಲೋಪಾಖ್ಯಾನ ಎಂಬ ಯಕ್ಷಗಾನಗಳನ್ನೂ ಬರೆದಿದ್ದಾನೆ.<br>ನಂಜಯ್ಯ. ಇವನು ಮೂಗೂರು ಅರಸುಗಳ ವಂಶಕ್ಕೆ ಸೇರಿದವನು. ಕಾಶ್ಯಪಗೋತ್ರದವನು. ಈತನು ಶಬರಧನಂಜಯವಿಲಾಸಮಂಜರಿ ಎಂಬ ಯಕ್ಷಗಾನವನ್ನೂ ಬರೆದಿದ್ದಾನೆ. | | |
| ,, | 15 | ಜಿನಸು | ಜಿನಸ್ತು |
| ,, | 2 | ವೇಶ | ದೇಶ |
| 104 | 16 | 53, | 53 |
| 105 | 13 | ಗಂಥ | ಗ್ರಂಥ |
| 107 | 13 | ಮುಗಿಯುತದೆ | ಮುಗಿಯುತ್ತದೆ. |
| 108 | 5 | ಪಟ್ಪದಿ | ಷಟ್ಪದಿ |
| ,, | 12 | ಉದ್ದರಿಸಿ | ಉದ್ಧರಿಸಿ |
| 115 | 17 | ಪದಾವತಿ | ಪದ್ಮಾವತಿ |
| 122 | 4 | ದೃವಿಲ್ಲೆಂದ | ದ್ವೈವಿಲ್ಲೆಂದ |
| ,, | 5 | 1748 | 1748—1775 |
| 129 | 5 | ಇಂದಿರಾಭ್ಯುದಯ | ರಮಾಭ್ಯುದಯ |
| 130 | 25 | ದು ದೇಶ | ದುಪದೇಶ |
| 134 | 4 | ಮಾಹಾತ್ಮ | ಮಾಹಾತ್ಮ್ಯ |
| 135 | 15 | ಉದರಿಸಿ | ಉದ್ಧರಿಸಿ |
| 137 | ಜಗನ್ನಾಥದಾಸ. ಇವನ ತಾಯಿ ಲಕ್ಷ್ಮೀಬಕ್ಕ. ಇವನಿಗೆ ಮೊದಲು ಶ್ರೀನಿವಾಸಪ್ಪ ಎಂಬ ಹೆಸರಿದ್ದಿತು. ಈತನು ಶಕ 1649 ಕೀಲಕದಲ್ಲಿ (1728) ಹುಟ್ಟಿ ಶಕ 1731 ಶುಕ್ಲದಲ್ಲಿ (1809) ಸತ್ತನೆಂದೂ ದೇಂದ್ರನಲ್ಲಿ ತರ್ಕ ಮುಂತಾದ ಶಾಸ್ತ್ರಗಳನ್ನು ಕಲಿತನೆಂದೂ ಹೇಳುತ್ತಾರೆ. | | |
| 141 | 12 | ತೆಗೆದ | ತೆಗೆದು |

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| 142 | 7 | ನವರತ | ನನವರತ |
| 145 | 15 | ಕಸು | ಕುಸು |
| 148 | 3 | ಜಗೆ | ಬಂ |
| 150 | 11 | ಯುಪ | ಯುಪ್ಪ |
| ,, | 15 | ಕೂಗಿ | ಕೂಚಿ |
| 151 | 4 | ಸಿದ್ಧಾ | ಸಿದ್ಧಾದಿ |
| ,, | ಶ್ರೀದವಿಠಲದಾಸ. ಇವನ ಸ್ಥಳ ಕರ್ಜಗಿ. | | |
| 152 | 7 | ಶ್ರೀಧ | ಶ್ರೀದ |
| ,, | 18 | ದೊಟಿಲ | ತೊಟಿಲಿ |
| 156 | 5 | ದ | ದಲ್ಲಿ |
| 160 | 25 | ಮೇರೀ | ಮೇರಿ |
| 161 | 20 | ಊದ | ಉದ್ಧ |
| 164 | 1 | ಸು. 1808 | 1808 |
| ,, | 13 | ಸು. 1810 | 1810 |
| 165 | 3 | ಭವಾ | ಭವಾ |
| ,, | 26 | ಮುಣ | ಮುಣಿ |
| 168 | 12 | ಸರ್ವಸತೀ | ಸರಸ್ವತಿ |
| 170 | 16 | ಸು. 1812 | 1812 |
| 172 | ಮುಮ್ಮಡಿ ಕೃಷ್ಣರಾಜ. ಈತನು ದಕ್ಷಾಧ್ವರಕಥೆ ಎಂಬ ಯಕ್ಷಗಾನವನ್ನೂ ಬರೆದಿರುವಂತೆ ತೋರುತ್ತದೆ. | | |
| 173 | 12 | ಪ್ರಕಟಿಸಿರುವನ್ನು | ಪ್ರಕಟಿಸಿರುವನು. |
| ,, | 21 | ಸಂಖ್ಯಾತ | ಸಂಖ್ಯಾ |
| 174 | 12 | ವಂಡ | ಮಂಡಲ |
| 175 | 10 | ಅಧ್ಯಾತ | ಅಧ್ಯಾತ್ಮ |
| ,, | 20 | ಇದರ | ಇದರಲ್ಲಿ |
| 180 | 16 | ಸಿದಾ | ಸಿದ್ಧಾ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 184 | 20 | ವಿಠೋಬ | ವಿಠೋಬ |
| ,, | 26 | ಬಳಿಕೊಡ | ಬಳಿಕೊಡಬೇಕೆಂದಿದ್ದ ಒಬ್ಬ ಬಾಲಕನನ್ನು ಪಂಢರಿಪುರದ ವಿಠಲದೇವರು ಕಾಪಾಡಿದ ಕಥೆ ಹೇಳಿದೆ. |
| 185 | 3 | ಅಣುಪ್ರಸ | ಅಣುಪ್ರಸ್ಥ |
| ,, | 19 | ದೇವರು | ದೇವರ |
| 192 | 25 | ನೆವಜ್ಞ | ದೈವಜ್ಞ |
| 193 | 13 | ಸುಧಾಸರ | ಸುಧಾರಸ |
| 96 | 17 | ಷಷಿ | ಷಷ್ಟ್ಯಾ |
| 206 | ನಂಜಯ್ಯ. ಇವನು ಮೋಹವಿವೇಕಕಾಳಗ, ಹರಿಶ್ಚಂದ್ರೋಪಾಖ್ಯಾನ, ಬಲಿಚಕ್ರವರ್ತಿಯ ಚರಿತೆ, ಸಾರಂಗಧರನ ಕಥೆ, ಚಂದ್ರಹಾಸನ ಕಥೆ ಈ ಗ್ರಂಥಗಳನ್ನೂ ಬರೆದಿರುವಂತೆ ತೋರುತ್ತದೆ. | | |
| 208 | ನಂಜುಂಡಶಿವಯೋಗಿ. ಈತನು ಅಟವೀಶ್ವರಚರಿತೆ, ಸುರಭಾಂಡೇಶ್ವರೋಪಾಖ್ಯಾನ ಎಂಬ ಯಕ್ಷಗಾನಗಳನ್ನು ಬರೆದಿದ್ದಾನೆ. | | |
| 120 | 11 | 1886 | 1866 |
| 219 | 14 | ಕೊಟ್ಟವು | ಕೊಟ್ಟವು (ಪುಟ 81, 84). |
| 223 | ಸರಗೂರು ವೆಂಕಟವರದಾಚಾರ್ಯ. ಈತನ ಚರಿತವು 219ನೆಯ ಪುಟದಲ್ಲಿಯೂ ಸಂಗ್ರಹವಾಗಿ ಕೊಟ್ಟಿದೆ. | | |
| 224 | 15 | ಟಾನ್ಸ್ | ಟ್ರಾನ್ಸ್ |
| 233 | 10 | ಸೇಂಟ್ ಜೇವಿಯರ್ | ಅಲೋಸಿಯಸ್ |
| ,, | ಸಜೀಪರಾಮಕೃಷ್ಣಯ್ಯ ಇವನು ಶ್ರೀರಾಮಚರಿತ್ರವನ್ನು ಬರೆದಿದ್ದಾನೆ. | | |
| 234 | 14 | ಸಾರಸ್ವತ | ಕೊಂಕಣ |
| 243 | 1 | 175 | 1715 |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 256 | 4 | ಮಾಣದಣು | ಮಾಣದನ್ನು |
| 218 | 18 | ಮ-ನ | ಮನ |
| 272 | 14 | ಸ್ತುತಿಯಿಸುತ್ತು॥ | ಸ್ತುತಿಯಿಸುತ್ತುಂ |

275 ಇದು 273 ಎಂದಿರಬೇಕು. ಹೀಗೆ 282 ರ ವರೆಗೆ ೯ ಪುಟಗಳಿಗೆ ಸಂಖ್ಯೆ ತಪ್ಪು ಬಿದ್ದಿದೆ 282 ಎಂಬುದು 280 ಎಂದಿರಬೇಕು.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 279 (277) | 3 | ನೋಡುವರೆ | ನೋೞುವರೆ |
| 281 (279) | 13 | ಕುಸುಮಷಟ್ಪದಿ | ಸಾಂಗತ್ಯ |
| 285 | 5 | ಎಱು | ಏಱು |
| ,, | 25 | ದಾಗ | ದಾಗಳೆನುತ |

286 ಬಸವೇಶ್ವರರಗಳೆ. ಇದೂ 279 (277) ರಲ್ಲಿ ಕೊಟ್ಟಿರುವ ಬಸವೇಶ್ವರಸ್ತೋತ್ರವೂ ಒಂದೇ ಗ್ರಂಥವಾಗಿದ್ದರೂ ಇರಬಹುದು.

288 ಸನಾಗಮಶಿಖಾಮಣಿ. ಇದರಿಂದ ಒಂದು ವಚನವನ್ನು ತೆಗೆದು ಬರೆಯುತ್ತೇವೆ —

ಆದಿ ಅನಾದಿ ಇಲ್ಲದಂದು ಅಜಾಂಡಬ್ರಹ್ಮಾಂಡವಿಲ್ಲದಂದು ತಾನೆ ನಾದಬಿಂದುಕಳಾತೀತನು. ಜನಪದವುಇಲ್ಲದಂದು ತಾನೆ ನಾಮರೂಪಕ್ರಿಯಾತೀತನ ಸಚರಾಚರಂಗಳೆಲ್ಲ ರಚನೆಗೆ ಬಾರದಂದು ತಾನೆ ಅಖಂಡಪರಿಪೂರ್ಣನು. ಅಪ್ರಮಾಣ ಅಗಮ್ಯ ಅಗೋಚರದತ್ತಲಾದ ಮಹಾಘನಚೈತನ್ಯಲಿಂಗ ನೋಡಾ ಅಪ್ರಮಾಣ ಕೂಡಲಸಂಗಮದೇವಾ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 299 | 13 | ಪಾದಂ | ವಾದಂ |
| 300 | 26 | ಪದ 30 | ಪದ 300 |
| 302 | 1 | ಪರ್ಘ | ಪರ್ವ |
| 304 | 14 | ನಱಯಿಪ | ನಱಿಯಿಪ |
| 307 | 11 | ಬಸವವೇಂದ್ರ | ಬಸವೇಂದ್ರ |
| 308 | 11 | ಪರಿಪಕ್ಶ | ಪರಿಪಕ್ವ |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 309 | ಹೆಡ್ಡಿಂಗ್ | ಧ್ಯೃವ | ಧ್ರುವ |
| ,, | 6 | ಹುಬ್ಬರಳಿನಲ್ಲಿ | ಹೆಬ್ಬೆರಳಿನಲ್ಲಿ |
| ,, | 6 | ಮುಪದಾರ್ | ಮುಫವಾರ್ |
| ,, | 14 | ಆಹಿಕ | ಆಹ್ನಿಕ |
| 10 | 9 | ನೆಟಿ | ಸೆಪ್ಟೆಂ |
| ,, | 10 11 | ಮುಟಿಪಂ | ಮೆಪ್ಟೆಪಂ |
| ,, | 21 | ಪದ್ಯ | ಪದ್ಯ |
| 311 | 2 | ಇತಿಪಸ | ಇತಿಹಾಸ |
| 316 | 10 | ನಾಲಿ | ಸಾಕ್ಷಿ |
| 320 | 10 | ಪೇಳದ | ಹೇಳಿ'ದ |
| 322 | 8 | ಸರ್ರ | ಸರ |
| ,, | 10 | ಸ್ವೈಉಕಾರಣಾ | ಸ್ವೈಎಕಾರಣ್ಯ |
| 323 | 12 | ಹುಲ್ಲಿ | ಹುಲಿ |
| 324 | 3 | ಮುಕದಿಂದ | ಮುಕದಿಂದ |
| ,, | ,, | ತಾರೆಗದ | ತಾರೆಗಳ |

— o —

# APPENDIX IV.

## ಪರಿಶಿಷ್ಟ IV.

### ಪ್ರಥಮದ್ವಿತೀಯಸಂಪುಟಗಳಿಗೆ ಸೇರಬೇಕಾದ ಕೆಲವು ವಿಷಯಗಳು.

ಶ್ರೀಮಾನ್ ರಾವ್ ಸಾಹೇಬ್ ಹಳಕಟ್ಟಿಯವರು ಮುದ್ರಿಸಿರುವ "ವಚನಶಾಸ್ತ್ರಸಾರ" ದಿಂದ ನಾವು ಪ್ರಥಮಸಂಪುಟದ (ತಿದ್ದಿದ ಮುದ್ರಣ) 211ನೆಯ ಪುಟದಲ್ಲಿ ಕೊಟ್ಟಿರುವ ಅಂಕಿತಗಳಲ್ಲಿ ಕೆಲವನ್ನು ಉಪಯೋಗಿಸಿರುವ ವಚನಕಾರರ ಹೆಸರುಗಳು ತಿಳಿದುದು ಮಾತ್ರವಲ್ಲದೆ ನಮಗೆ ತಿಳಿಯದೆ ಇದ್ದ ಹಲವರು ವಚನಕಾರರ ಹೆಸರುಗಳೂ ಅಂಕಿತಗಳೂ ತಿಳಿದುವು. ಅಲ್ಲದೆ ಈ ಪುಸ್ತಕದಲ್ಲಿ

---

1 ನಾವು ಹಿಂದೆ ಕೊಟ್ಟಿರುವ ವಚನಕಾರರ ಅಂಕಿತನಾಮಗಳಿಗೂ ವಚನಶಾಸ್ತ್ರಸಾರದಲ್ಲಿ ಕೊಟ್ಟಿರುವ ಅಂಕಿತನಾಮಗಳಿಗೂ ಕೆಲವು ಕಡೆ ವ್ಯತ್ಯಾಸವು ಕಂಡುಬರುತ್ತದೆ. ಈ ಪುಸ್ತಕದಲ್ಲಿ ಅರ್ಕೇಶ್ವರಲಿಂಗ, ಅಖಂಡೇಶ್ವರ, ಅಜಗಣ್ಣ, ಅಮರಗುಂಡದ ಮಲ್ಲಿಕಾರ್ಜುನ, ಅಮುಗೇಶ್ವರಲಿಂಗ, ಕಲಿದೇವರದೇವ, ರಾಮನಾಥ, ಸಿಮ್ಮಲಿಗೆಯ ಚೆನ್ನರಾಮ ಎಂಬ ಅಂಕಿತಗಳು ಕ್ರಮವಾಗಿ ಮಧುವಯ್ಯ, ಷಣ್ಮುಖಸ್ವಾಮಿ, ಮುಕ್ತಾಯಕ್ಕ, ಪುರದನಾಗಣ್ಣ, ರಾಯಸದ ಮಂಚಣ್ಣನ ಹೆಂಡತಿ ರಾಯಮ್ಮ, ಮಡಿವಳ ಮಾಚಯ್ಯ, ದೇವರದಾಸಿಮಯ್ಯ, ಚಂದಿಮರಸ ಇವರಿಗೆ ಅನ್ವಯಿಸುತ್ತವೆ ಎಂದು ಹೇಳಿದೆ. ನಮ್ಮ ಪುಸ್ತಕದಲ್ಲಾದರೋ ಈ ಅಂಕಿತಗಳು ಕ್ರಮವಾಗಿ ಮಡಿವಳ ಮಾಚಯ್ಯ, ನಿರಾಲಂಬಶರಣ, ಅಜಗಣ್ಣ, ಮಲ್ಲಿಕಾರ್ಜುನಪಂಡಿತಾರಾಧ್ಯ, ಅಮುಗಿದೇವಯ್ಯ, ಕಲಿದೇವಯ್ಯ, ಜೇಡರದಾಸಿಮಯ್ಯ, ಸಿಮ್ಮಲಿಗೆಯ ಚೆನ್ನಯ್ಯ ಇವರಿಗೆ ಸೇರಿಸಿವೆ. ನಾವು ಬರೆದಿರುವುದಕ್ಕೂ ಅವುಗಳಿಗೂ ಆಧಾರವಿದ್ದಿರಬೇಕು. ಈ ವಿಷಯವನ್ನು ಪುರಾತನವಾದ ಕೈಬರಹದ ಪುಸ್ತಕಗಳಿಂದ ನಿರ್ಧರಿಸಬೇಕಾಗಿದೆ. ಕಲಿದೇವ ಎಂಬ ಅಂಕಿತವುಳ್ಳ ಒಂದು ವಚನದಲ್ಲಿ (ವಚನಶಾಸ್ತ್ರಸಾರ, ಪುಟ 267) ಮಡಿವಾಳಯ್ಯನು ಚಂದ್ರಮೌಳಿಯನ್ನು ಸಂಬೋಧಿಸುವಂತೆ ಕಂಡುಬರುತ್ತದೆ. ಇದರಿಂದ ಈತನ

ನಮಗೆ ತಿಳಿಯದ ಹಲವು ಅಂಕಿತಗಳೂ ಅವುಗಳನ್ನು ಒಳಕೊಂಡಿರುವ ಅನೇಕ ವಚನಗಳೂ ಕೊಟ್ಟನೆ. ನಾವು ಹಿಂದೆ ಒಂದೂಂದರವೇರೆಗ ವಚನಗಳನ್ನು ಉದಾಹರಿಸಿರುವ ಕೆಲವರು ವಚನಕಾರರ ಮತ್ತೊಂದು ವಚನವನ್ನೂ, ಇನ್ನು ಕೆಲವರು ಹೊಸ ವಚನಕಾರರ ವಚನಗಳನ್ನೂ, ವಚನಗಳು ಸದ್ಯಃ ಸಿಕ್ಕದೆ ಇರುವ ಕೆಲವರು ವಚನಕಾರರ ನಾಮಾಂಕಿತಗಳನ್ನೂ, ಕೆಲವು ಹೊಸ ಅಂಕಿತಗಳನ್ನೂ ಇಲ್ಲಿ ಕೊಡುತ್ತೇವೆ —

(ಪ್ರ. ಸಂಪುಟ 190) ಮಹಾದೇವಿ ಸು. 1160.

ಸಂಸಾರಸಾಗರದಿಂದುದಿಸಿದ ಸುಖವ ದುಃಖವಂದಜ'ಯದೆ ಆ ಸುಖವನೆ ಮೆಚ್ಚಿ ಭವದುಃಖನೆಂಬ ಕ್ರೂರಜನ್ಮಚಕ್ರಕ್ಕೀಡಾಗಿ ಅಲ್ಲಿ ತನ್ನ ಮಜೆದು ತನಗಿಲ್ಲದ ಭ್ರಮೆಯ ತನ್ನದೆಂದು ಅಂತಪ್ಪ ಘೋರದೊಳಗೊಲಾಡುತಿಪ್ಪ ಮುಟುಗಾಡುತಿಪ್ಪ ಅಜ್ಞಾನಜೀವಿಗಳು ನಿಮ್ಮನೆತ್ತ ಬಲ್ಲರಯ್ಯ ಎನ್ನಯ್ಯಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನಾ.

(ಪ್ರ. ಸಂಪುಟ 193) ನಿಜಗುಣದೇವ. ಸು. 1160.

ಅಂಗಲಿಂಗಸಂಬಂಧನಕ ಯೋಗಪೂಜೆ ಪುಣ್ಯಕ್ಕೆ ಬೀಜ. ಆತ್ಮನನಜ'ದಿಹೆನೆಂಬನಕ ಉಭಯ ಮಾಡಲಾಯಿತ್ತು. ಉಭಯದ ಗಮಿಜೆಯಲ್ಲಿ ನಿಲುಕದೆ ನಿಂದ ನಿಜಗುಣಯೋಗಿ

(ಪ್ರ. ಸಂಪುಟ 194) ಕಲಿದೇವಯ್ಯ. ಸು. 1160.

ಈತನ ವಚನಗಳಲ್ಲಿ ಕಲಿದೇವಯ್ಯ, ಕಲಿದೇವರ ದೇವಯ್ಯ ಎಂಬ ಅಂಕಿತಗಳೂ ದೊರೆಯುತ್ತವ.

---

ಅಂಕಿತವು ಕಲಿದೇವ ಎಂದಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿದೆ. ಆದರೆ ನಮಗೆ ದೊರೆತ ಒಂದು ಪ್ರಾಚೀನಪುಸ್ತಕದಲ್ಲಿ ಈತನ ಅಂಕಿತವು ಅಕೇಶ್ವರಲಿಂಗ ಎಂದು ಸ್ಪಷ್ಟವಾಗಿ ಹೇಳಿದ. ಸುಗ್ಗಲದೇವಿಯ ಗುರು ದೇವರದಾಸಿಮಯ್ಯನೆಂದು ಬಸವಪುರಾಣ ಚೆನ್ನಬಸವಪುರಾಣಗಳಲ್ಲಿ ಹೇಳಿದೆ. ಆದರೆ ವೃಷಭೇಂದ್ರವಿಜಯದಲ್ಲಿ ಆವನು ಜೇಡರದಾಸಿಮಯ್ಯನೆಂದು ಉಕ್ತನಾಗಿದೆ.

ಸಿಂಹದಮುಂದೆ ಜಿಗಿದಾಟವೆ ? ಪ್ರಳಯಾಗ್ನಿಯ ಮುಂದೆ ಪತಂಗದಾಟವೇ? ಸೂರ್ಯನಮುಂದೆ ಕೀಟದಾಟವೆ ? ನಿಮ್ಮ ಮುಂದೆ ಎನ್ನಾಟವೆ ಕಲಿದೇವರದೇವ.

(ಪ್ರ. ಸಂಪುಟ 195) ನಿಮ್ಮಲಿಗೆಯ ಚೆನ್ನಯ್ಯ ಸು. 1160.

ಸಾವು ತಡವಿಲ್ಲ , ನರಕ ದೂರವಿಲ್ಲ ದೇಹದಿಚ್ಛೆಗೆ ಹರಿದು ಕೆಮ್ಮನೆ ಕೆಡಬೇಡ. ದುರ್ವಿಷಯುವ ಬಿಸು ಬೇಗ ಗುರುಪದವ ನಂಬು. ನಮ್ಮ ನಿಮ್ಮಲಿಗೆಯ ಚೆನ್ನರಾಮನಲ್ಲಿ ನೀನು ಸುಖಿಯಪ್ಪೆ ಮರುಳೆ

(ಪ್ರ. ಸಂಪುಟ 205) ಬಾಹೂರಬೊಮ್ಮಣ್ಣ. ಸು. 1160.

ಚಂದ್ರಕಾಂತಶಿಲೆಯಲ್ಲಿ ಬಿಂದುವಿದ್ದಡೆ ಹಿಂಡಿ ಹಿಳಿದಹೆನೆಂದಡೆ ಬಂದುದುಂಟೆ? ಆ ಬಿಂದುವರುಣಶಿಲೆಯಲ್ಲಿ ಉರುಹಿ ನೋಡಲಿಕ್ಕೆ ಉರಿದುದುಂಟೆ ಅನಲ ? ಅವು ತಮ್ಮ ಬಲವಿಲ್ಲದ ಸಾಧ್ಯಕ್ಕಲ್ಲದೆ ಫಲಿಸುವುದಿಲ್ಲ. ಇಂತೀತೆರನಂತೆ ಕ್ರಿಯಾ ಜ್ಞಾನವೆಲ್ಲವ ಬಲ್ಲೆವೆಂದು ಅಡ್ಡವಾಯ್ತು ಅಲ್ಲಲ್ಲಿ ನುಡಿದಡೆ ನಿಜವಸ್ತು ಸಲ್ಲೀಲೆಯುಳ್ಳಿಪ್ಪನೆ? ಶ್ರದ್ಧೆ ಸನ್ಮಾರ್ಗಗಳಲ್ಲಿಲ್ಲದೆ ಗೆಲ್ಲಗೂಳಿಗರಲ್ಲಿಲ್ಲ, ಸಂಗನಬಸವಣ್ಣ ಸಾಕ್ಷಿಯಾಗಿ ಬ್ರಹ್ಮೇಶ್ವರಲಿಂಗವು ಅವರಲ್ಲಿ ಇಲ್ಲವಾಗಿ.

(ಪ್ರ. ಸಂಪುಟ 206) ಪ್ರಸಾದಿಭೋಗಣ್ಣ. ಸು 1160,

ಭಕ್ತಿಯೆಂಬುದು ಬೇರು ; ವಿರಕ್ತಿಯೆಂಬುದು ಮರ , ಫಲವೆಂಬುದು ಜ್ಞಾನ, ಪಕ್ವಕ್ಕೆ ಬಂದಿತೆಂಬುದು ಅವಧಿಜ್ಞಾನ , ತೊಟ್ಟು ಬಿದ್ದಲ್ಲಿ ಪರಮಜ್ಞಾನ; ಸವಿದಲ್ಲಿ ಅಂತರ್ಯಜ್ಞಾನ ; ಸುಖ ತನ್ಮಯವಾದಲ್ಲಿ ದಿವ್ಯಜ್ಞಾನ ; ದಿವ್ಯತೇಜಸ್ಸು ಹಿಂಗಿದಲ್ಲಿ ಪರಿಪೂರ್ಣ , ಅದು ಮಹದಾಶ್ರಯಲೆಂಬುದಕ್ಕೆ ಎಡೆಯಿಲ್ಲ, ಚೆನ್ನಬಸವಣ್ಣಪ್ರಿಯ ಭೋಗಮಲ್ಲಿಕಾರ್ಜುನಲಿಂಗವು ಅಪ್ರಮಾಣವಾದ ಕಾರಣ.

(ಪ್ರ. ಸಂಪುಟ 208) ಡಕ್ಕೆಯಬೊಮ್ಮಣ್ಣ. ಸು. 1160.

ತಾನೊಲಿಯದೆ ಮಾಡಿದ ದೋಷಕ್ಕೆ ಘೋರವಿಲ್ಲ ಅದು ಜಗದ ಹುದುಗು. ತಾನೊಲಿದು ಅಲ್ಲ ಅಹುದೆಂದು ಎಲ್ಲರಿಗೆ ಹೇಳಿ ಪರಧನದಲ್ಲಿ ಪರಸ್ತ್ರೀ

ಯರಲ್ಲಿ ಅನ್ಯರ ನಿಂದೆಯಲ್ಲಿ ವ್ರತಾಚಾರಭಂಗಿತರಲ್ಲಿ ಇದನರಿತು ಅನುಸರಣೆಯ ಮಾಡಿದಡೆ ಕುಂಭಿನೀನರಕದಲ್ಲಿ ಹಿಂಗದಿರ್ಪನು. ಕಾಲಾಂತಕ ಭೀಮೇಶ್ವರಲಿಂಗಕ್ಕೆ ಸ್ವಪ್ನದಲ್ಲಿಯುಂ ಸೂರಸ್ಥನು.

(ಪ್ರ. ಸಂಪುಟ ೨೦೮) ಸಗರದ ಬೊಮ್ಮಣ್ಣ. ಸು. 1160.

ಸಕಲಾಗಮಂಗಳ ಕಲಿತು ಸರ್ವಂಗೆ ಹೇಳಿ ತಾ ನಿಃಕರುಣಿಯಾಗಿ ತ್ರಿವಿಧವುಲಕ್ಕೆ ಹೋರಾಗಾಗೆಂದು ತಾನೂಳಗಾಗಿ ಬಳಿಯುವಾತಿನ ಭಟನಂತೆ ಅದೇತಕಿಕೆ? ಸಗರದಬೊಮ್ಮನೊಡೆಯ ತನುಮನಸಂಗನೇಶ್ವರಾ.

(ಪ್ರ. ಸಂಪುಟ 208) ಅವಸರದ ಕೇತರಣ್ಣ. ಸು. 1160

ಮರನನೇರದೆ ಹಣ್ಣು ಕೊಯ್ಯಬಹುದೆ? ಕುಸುಮವಿಲ್ಲದೆ ಗಂಧವ ಮುಡಿಯಬಹುದೆ? ಉಪದೃಷ್ಟವಿಲ್ಲದೆ ನಿಜದೃಷ್ಟವ ಕಾಣಬಹುದೆ? ಕ್ರಿಯಾಶುದ್ಧಿಯಿಲ್ಲದೆ ತ್ರಿವಿಧಕರ್ಮ ತನಗೆ ಸಾಧ್ಯನಪ್ಪನೆ? ಇದುಕಾರಣ ಗುರುವಿನಲ್ಲಿ ಸದ್ಭಾವ, ಲಿಂಗದಲ್ಲಿ ಮತಿ, ಜಂಗಮದಲ್ಲಿ ತ್ರಿವಿಧಮಲದೂರಸ್ಥನಾಗಿಪ್ಪುದು ಸದ್ಭಕ್ತನಂಗ, ಚಿದ್ಘನವಸ್ತುವಿನ ಸಂಗ. ಸದ್ಯೋಜಾತಲಿಂಗಕ್ಕೆ ಸುಸಂಗ.

(ಪ್ರ. ಸಂಪುಟ 209) ದಾಸೋಹದ ಸಂಗಣ್ಣ. ಸು. 1160.

ತನಗುಂಟಾಗಿ ಶಿಷ್ಯನ ಮನೆಗೆ ಹೋಗಿ ಕಟ್ಟಳೆಯ ವರುಷಕ್ಕೆ ತಪ್ಪದೆ ಅಂಗವಸ್ತ್ರವೆಂದು ಲಿಂಗವಸ್ತ್ರವೆಂದು ಕನಕಪರಿಮಳವೆಂದು ಅಂದಣಛತ್ರಚಾಮರ ಕರಿತುರಗಂಗಳೆಂದು ಇವು ಬಂದುದಿಲ್ಲ ಎಂದು ಸಂದಣಿಯಲಂದಣಕಾಣದ ಕೈಯಲ್ಲಿ ಹೇಳಿಸಿ ಅವು ಬಾರದಿರೆ ಬಂಧಿಸುವ ಲಿಂಗವಾಗೆ ಗುರುಸ್ಥಲವೆಂದಿಗೂ ಇಲ್ಲ. ಶಂಭುಗಿಂದಿತ್ತ ಸ್ವಯಂಭುಗಿಂದತ್ತ ಅತಿಬಳ ನೋಡಾ ಮಾತುಳಾಂಗಮಧುಕೇಶ್ವರನು.

(ಪ್ರ. ಸಂಪುಟ 275) ಉರಿಲಿಂಗಪೆದ್ದಿ. ಸು. 1180.

(1) ಆಸೆಯುಳ್ಳನಕ ಒಬ್ಬರನಾಶ್ರಯಿಸುವುದು. ಆಶ್ರಯದಾಸೆ ಕಷ್ಟಕಾಣಿರಯ್ಯಾ. ಆಸೆಯೇ ದಾಸತ್ವ ನಿರಾಶೆಯೇ ಈಶತ್ವ. ದಾಸತ್ವದ ಈಶತ್ವದ ಆಯುಸುವ ವಿಚಾರಿಸಿ ನಿರಾಶೆಯಾಗಿಪ್ಪುದೆ ಈಶಪದವಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

(೨) ಶಿವನೇ ದೈವ, ಕೊಲ್ಲದಿರ್ಪುದೇ ಧರ್ಮ, ಅಧರ್ಮದಿಂದ ಬಂದುದನೊಲ್ಲ. ದಿರ್ಪುದೇ ನೇಮ, ಆಶೆಯಿಲ್ಲದಿರ್ಪುದೇ ತಪ, ರೋಷವಿಲ್ಲದಿರ್ಪುದೇ ಜಪ, ವಂಚನೆಯಿಲ್ಲದಿರ್ಪುದೇ ಭಕ್ತಿ, ಹೆಚ್ಚು ಕುಂದಿಲ್ಲದಿರ್ಪುದೇ ಸಮಯಾಚಾರ. ಇದು ಸತ್ಯ. ಶಿವ ಬಲ್ಲ. ಶಿವನಾಣೆ, ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ

---

## ಇನ್ನು ಕೆಲವರು ವಚನಕಾರರು

ಇವರೆಲ್ಲರೂ ವೀರಶೈವರು. ಇವರಲ್ಲಿ ಕೆಲವರು ಬಸವನಕಾಲದಲ್ಲಿಯೂ ಕೆಲವರು ಈಚೆಯೂ ಇದ್ದಂತೆ ತೋರುತ್ತದೆ.

### ಕಿನ್ನರಿ ಬ್ರಹ್ಮಯ್ಯ. ಸು. 1160

ಈತನ ವಚನಗಳಲ್ಲಿ ಮಹಾಲಿಂಗತ್ರಿಪುರಾಂತಕದೇವ (ದ್ವಿ. ಸಂಪುಟ 117) ಎಂಬ ಅಂಕಿತವಿದೆ.

ನಿನ್ನ ಹರೆಯದ ರೂಹಿನ ಚೆಲುವಿನ ನುಡಿಯ ಜಾಣಿನ ಸಿರಿಯ ಸಂತೋಷದ ಕರಿತುರಗರಥಪದಾತಿಯ ನೆರವಿಯ ಸತಿಸುತರ ಬಂಧುಗಳ ಸಮೂಹದ ನಿನ್ನ ಕುಲದಭಿಮಾನದ ಗರ್ವವ ಬಿಡು. ಮರುಳಾಗದಿರು. ಅಕಟಕಟ! ರೋಮಜನಿಂದ ಹಿರಿಯನೆ? ಮದನನಿಂ ಚೆಲುವನೆ? ಸುರಪತಿಯಿಂದ ಸಂಪನ್ನನೆ? ವಾಮದೇವ ವಸಿಷ್ಠರಿಂದ ಕುಲಜನೆ? ಅಂತಕನ ದೂತರು ಬಂದು ಕೈವಿಡಿದೆಳೆದೊಯ್ವಾಗ ನುಡಿ ತಡವಿಲ್ಲ ಕೇಳೊ ನಗನೆ. ಎನ್ನ ಮಹಾಲಿಂಗತ್ರಿಪುರಾಂತಕದೇವರ ಪೂಜಿಸಿದೆಯಾದಡೆ ಕೇಡಿಲ್ಲದ ಪದ ದೊರಕೊಂಬುದು ಮರುಳೆ.

### ಚಿಕ್ಕಯ್ಯ. ಸು. 1160.

ಇವನ ವಚನಗಳಲ್ಲಿ ಉಳಿಯುಮೇಶ್ವರ (ದ್ವಿ. ಸಂಪುಟ 117) ಎಂಬ ಅಂಕಿತವು ಉಪಯೋಗಿಸಿದೆ.

(1) ಅಸ್ಥಿಚರ್ಮ ಮಾಂಸರಕ್ತ ಖಂಡದ ಚೀಲ ಲೆಕ್ಕಕ್ಕೆ ಬರುವುದೆ ? ಹುರುಳಿಲ್ಲ ಸಂಸಾರ. ಎಂದಿಗೆ ಪಾಸೀ ಹೊತ್ತ ಹೊಡೆಯನಿಱುಹುವೆನೋ ? ಎಂದಿಗೆ ನಾನಿದ ಬಳಸಿ ಕಳೆವೆನಯ್ಯಾ. ಎಡಹಿ ಕೊಡನುದಕವ ನಡುನೀರಲ್ಲೊಡೆವಂತೆ ಎನ್ನೊಡಲೊಡೆದು ನಿಮ್ಮಸಂದಿಗೆ ಬೆರಸುವೆನು ಉಳಿಯುಮೇಶ್ವರಾ.

(2) ಭವಪಾಶಬಂಧದಿಂ ಬಿಗಿದು ಕವಿಲೆಯ ಹುಲಿಯ ।
ಗವಿಯೊಳಗೆ ಕಟ್ಟಿದಂತಾದೆ ಸಂಸಾರವೆಂ ।
ಬವಿಚಾರಸರ್ಪ ಸರ್ವಗ್ರಾಸಗೊಂಡುದಿದನೊಮ್ಮೆ ಪರಿಹರಿಸಿ ನಿಮ್ಮ ॥
ಅವಿರಳಶ್ರೀಪಾದದೊಳು ಮಗ್ನನಾಗಿ ಮ ।
ತ್ತವಿಕಲ್ಪಸಮಸುಖಾನಂದದೊಳಗೆಂದಿಹೆನೊ ।
ಭವರಹಿತ ಪರಮೇಶ ಪಾಲಿಸೈ ಸದ್ಗುರುವೆ ಉಳಿಯುಮೇಶ್ವರಲಿಂಗವೇ ॥

## ಸತ್ಯಕ್ಕ ಸು. 1160·

ಈಕೆಯ ವಚನಗಳಲ್ಲಿ ಶಂಭುಜಕ್ಕೇಶ್ವರ (ದ್ವಿ. ಸಂಪುಟ 118) ಎಂಬ ಅಂಕಿತವಿದೆ.

(1) ಅರ್ಚನೆ ಪೂಜನೆ ನೇಮವಲ್ಲ, ಮಂತ್ರ ತಂತ್ರ ನೇಮವಲ್ಲ; ಧೂಪ ದೀಪಾರತಿ ನೇಮವಲ್ಲ, ಪರಧನ ಪರಸ್ತ್ರೀ ಪರದೈವಂಗಳಿಗೆಱಗದಿರ್ಪುದೇ ನೇಮ. ಶಂಭುಜಕ್ಕೇಶ್ವರದೇವರಲ್ಲಿ ಇದು ಕಾಣಾ ನಿಚ್ಚನೇಮ.

(2) ಇನಿಯಂಗೆ ತವಕವಿಲ್ಲ ಎನಗೆ ಸೈರಣೆಯಿಲ್ಲ ಮನದಿಚ್ಛೆಯನಱಿವ ಸಖಿಯರಿಲ್ಲ. ಮನ್ಮಥವೈರಿಯನುಭಾವದಲ್ಲಿ ಮನ ಸಿಲುಕಿ ಬಿಡದು. ಇನ್ನೇವೆನಿನ್ನೇವೆ. ದಿನ ವೃಥಾ ಹೋಯಿತು ಯವ್ವನ ಬೀಸರವೋಗದಮುನ್ನ ಪಿನಾಕಿಯ ತಂದು ನೆರಹವ್ವಾ ಶಂಭುಜಕ್ಕೇಶ್ವರನ.

## ಒಕ್ಕಲುಮುದ್ದಯ್ಯ. ಸು. 1160·

ಇವನ ಅಂಕಿತ ಕಾಮಭೀಮಜೀವಧನದೊಡೆಯ (ದ್ವಿ ಸಂಪುಟ 118)

(1) ವೇದಶಾಸ್ತ್ರವನೋದುವುದಕ್ಕೆ ಹಾರುವನಲ್ಲ; ಇಱಿದು ಮೆಱೆವ

ದಕ್ಕೆ ಕ್ರೀಡೆಯುನ್ನಲ್ಲ; ವ್ಯವಹರಿಸುವುದಕ್ಕೆ ವೈಶ್ಯನಲ್ಲ. ಒಕ್ಕಲಮಗನ ತಪ್ಪ ನೋಡದೆ ಒಪ್ಪುಗೊಳ್ಳಯ್ಯ ಕಾಮಭೀಮಜೀವದನದೊಡೆಯ ನೀನೇ ಬಲ್ಲೆ

(2) ದೊಡ್ಡವೆರಡು ಕಂಭದ ಮಧ್ಯದಲ್ಲಿ ಚಿಕ್ಕವೆರಡು ಕಂಬ; ಇಂತೀನಾಲ್ಕುಐಮಧ್ಯದ ಮನೆ, ಅಸ್ಥಿಯ ಗಳು, ನರದ ಕಟ್ಟು, ಮಜ್ಜೆಯ ಸಾರ, ಮಾಂಸದ ಗೋಡೆ, ಚರ್ಮದ ಹೊದಿಕೆ, ಶೋಣಿತದ ಸಾರಣೆ, ಶುಕ್ಲದ ಕಂಬದಿಂದಲಿಪ್ಪುದೊಂದು ಚಿತ್ರದ ಮನೆ ನೋಡಾ. ಆ ಮನೆಗೆ ಒಂಬತ್ತು ಬಾಗಿಲು, ಈಡೆ ಪಿಂಗಳೆಯೆಂಬ ಗಾಳಿಯ ಬಾದಳ, ಮೃದುಕಠಿನವೆಂಬೆರಡಗುಳಿಯ ಭೇದವು ನೋಡಾ. ಇತ್ತಲೆಯಮೇಲಿಪ್ಪ ಸುಷುಮ್ನನಾಳವ ಮುಚ್ಚಿ ದಿವಾರಾತ್ರವೆಂಬ ಮಳಿವಳಿವಿನ ಉಭಯದ ಕದ ಕೆತ್ತುವನೆ ನಷ್ಟವಾಗಿಹೋದಡೆಯೂ ಮನೆಯೊಡೆಯ ಮತ್ತೊಂದು ಮನೆಗೆ ಹೋಹುದು ತಪ್ಪದು ನೋಡಾ. ಇಂತೀಮನೆಗೆ ಮರಳಿ ಬಾರದಂತೆ ಮಾಡಯ್ಯಾ ಕಾಮಭೀಮಜೀವದನದೊಡೆಯ ನಿಮ್ಮ ಧರ್ಮ ನಿಮ್ಮ ಧರ್ಮ.

## ಗೊಗ್ಗವ್ವೆ. ಸು. 1160

ಇವಳ ವಚನಗಳಲ್ಲಿ ನಾಸ್ತಿನಾಥ (ದ್ವಿ. ಸಂಪುಟ 123) ಎಂಬ ಅಂಕಿತವು ಉಪಯೋಗಿಸಿದೆ-

(1) ಅನಲನು ಕೊಂಡ ಭೋಗಕ್ಕೆ ಪರಿಪ್ರಕಾರವುಂಟೆ? ಶರಧಿ ಕೊಂಡ ಸಾಗರಕ್ಕೆ ಕುಱುಹಿನ ತಲೆಯುಂಟೆ? ಲಿಂಗವು ಮುಟ್ಟಿದ ಅಂಗಕ್ಕೆ ಪುಣ್ಯವೆಂಬುದು ಹುಸಿ ನಾಸ್ತಿನಾಥಾ.

(2) ಉದ್ಭವನೇಱುವುದಕ್ಕೆ ಗದ್ದುಗೆಯಿಲ್ಲದೆ ಎದ್ದುಬಾರದು, ಚಿದ್ರೂಪನನ್ನಱಿವುದಕ್ಕೆ ಅರ್ಚನೆ ಪೂಜನೆ ನಿತ್ಯನೇಮವಿಲ್ಲದೆ ಕಾಣಬಾರದು ಅದನು ಸತ್ಯದಿಂದ ಮಾಡಿ ಅಸತ್ಯವ ಮಱೆದಡೆ ಇದೇ ಸತ್ಯ ನಾಸ್ತಿನಾಥಾ

## ಜೇಡರ ಮಾಯಣ್ಣ ಸು. 1160

ಇವನ ಅಂಕಿತ ಶಂಭುಸೋಮನಾಥಲಿಂಗ. (ದ್ವಿ. ಸಂಪುಟ 123)

(1) ಮುನ್ನ ಪರಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ; ಬಳಿಕ ಶರಣಸತಿ ಪಾರ್ವತಿಯೆಂದು ನಡಸಿತ್ತು ನುಡಿಸಿತ್ತು ಗುರುವಚನ;

ಇನ್ನು ಸತಿಯರೆಲ್ಲ ಗುರುಸತಿಯರೆಂದು ನಡಸಿತ್ತು ನುಡಿಸಿತ್ತು ಗುರುವಚನ. ಶಂಭು ಸೋಮನಾಥಲಿಂಗನ ಸಂಗ ಸುಸಂಗವ ಮಾಡಿತ್ತು ಗುರುವಚನ.

(2) ಎನ್ನ ತ್ರಿವಿಧಾತ್ಮ ನಿಮ್ಮ ಹೆಂಡಿರು. ಸತ್ವರಜಸ್ತಮಂಗಳು ನಿಮ್ಮ ಭೃತ್ಯರಯ್ಯಾ. ಅಂತಃಕರಣಚತುಷ್ಟಯಂಗಳು ನಿಮ್ಮ ಬಾಣಸಿಗರಯ್ಯಾ. ಅಷ್ಟತುದಂಗಳು ನಿಮ್ಮ ದಳವಾಯಿಗಳು. ನವರಸಂಗಳು ನಿಮ್ಮ ಭಂಡಾರಿಗಳಯ್ಯಾ ದಶವಾಯುಗಳು ನಿಮ್ಮ ಛತ್ರಚಾಮರಸೀಗುರಿಗಳು ಶಂಭುಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹ್ಯಾಂತರ ಡಿಂಗರಿಗರಯ್ಯಾ.

## ಜೋಹರ ಕಕ್ಕಯ್ಯ. ಸು. 1160

ಈತನ ಅಂಕಿತ ಅಭಿನವಮಲ್ಲಿಕಾರ್ಜುನ (ದ್ವಿ ಸಂಪುಟ 123). ಕೆಲವು ಕಡೆ ಅಭಿನವಚೆನ್ನಮಲ್ಲಿಕಾರ್ಜುನ ಎಂದೂ ಇರುವಂತೆ ತೋರುತ್ತದೆ.

ನೆನೆಯಲಱಿಯೆ ನಿರ್ಧರಿಸಲಱಿಯೆ ಮನವಿಲ್ಲಾಗಿ, ಭಾವಿಸಲಱಿಯೆ ಬೆರಸಲಱಿಯೆ ಭಾವ ನಿಭರ್ಾವವಾಯಿತ್ತಾಗಿ, ಧ್ಯಾನಮೌನವನಱಿಯೆ ಧ್ಯಾನಮೌನಾತೀತ ತಾನೆಯಾಯಿತ್ತಾಗಿ, ಜ್ಞಾತೃಜ್ಞಾನಜ್ಞೇಯಂಗಳಿಲ್ಲವ ಏನೆಂಬ' ಅಭಿನವಮಲ್ಲಿಕಾರ್ಜುನನಲ್ಲಿ ಪರಮಸುಖಿಯಾಗಿರ್ದೆ.

## (ಪ್ರ. ಸಂಪುಟ 116) ಹಡಪದ ಅಪ್ಪಣ್ಣ. ಸು. 1160

ಇವನ ವಚನಗಳಲ್ಲಿ ಬಸವಪ್ರಿಯ ಕೂಡಲಚೆನ್ನಸಂಗಮದೇವ ಎಂಬ ಅಂಕಿತವಿದೆ.

ಅನೇಕಪರಿಯ ಭಕ್ತಿಯ ವೇಷವನಳವಡಿಸಿಕೊಂಡು ಮನೆಮನೆದಪ್ಪದೆ ತಿರುಗುವೆನು. ಅವರಿಚ್ಛೆಗೆ ಅನುಮಾನವಿಡಿದು ನುಡಿವೆನು ಅವರ ಮನೋಧರ್ಮವನಱಿಯದೆ ನುಡಿದೆನಾದಡೆ ಅನೇಕಪರಿಯಲ್ಲಿ ಭಂಗವಡುವೆನು. ದಿಟದಭಕ್ತನಂತೆ ಪುರಾತನರ ವಚನಂಗಳ ಉದರನಿಮಿತ್ತನಾಗಿ ಬಚಿಸುವೆನು ಕಡುಪಾಪಿ. ಇನ್ನೇನು ಪದನಯ್ಯ ಬಸವಪ್ರಿಯಕೂಡಲಚೆನ್ನಸಂಗಮದೇವಾ 1 ?

---

1 ಇವನ ಒಂದು ವಚನವು (ಪರರಾಶೆಯೆಂಬ ಜ್ವರಹತ್ತಿ ಇತ್ಯಾದಿ) ಪ್ರಥಮ ಸಂಪುಟದ 77 ನೆಯ ಪುಟದಲ್ಲಿ ಚೆನ್ನಬಸವನದೆಂದು ತಪ್ಪಾಗಿ ಕೊಟ್ಟಿದೆ.

(ಪ್ರ. ಸಂಪುಟ 196) ಬಾಚಿಕಾಯಕದ ಬಸವಪ್ಪ. ಸು. 1160.

ಈತನ ಅಂಕಿತ ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ ರಾಜೇಶ್ವರಲಿಂಗ.

ಚಾಲಗಾಜಂಗೆ ಸುವರ್ಣದ ವಳಿಯನರಿದು ತೊಳೆಯಬೇಕು ಬಲೆಗಾಜಂಗೆ ಮತ್ಸ್ಯದ ಬೆಂಬಳಿಯನರಿದು ಕಲ್ಲಿಯ ಇಡಿ'ಯಬಿಡಬೇಕು. ಶಬರಂಗೆ ಸಂಭ್ರಮದ ಬಿಟ್ಟು ತರುಲತೆಪರ್ಣಗಳಂತಿರಬೇಕು. ಇಂತೀ ಕೊಲಬಿನ ತೆಱನಂತೆ ಗುಣವಿವರವನರಿದು ಆರಾರ ಇರವಿನ ತೆಱನರಿದು ಅನುಸರಿಸಲಾಗಿ ವಿರತಿಗಳ ನಿಜವನರಿದು ವೇಷಗಳ್ಳರ ನಿಹಿತವ ನೋಡಿ ವಂಚಕರ ಪರಿಹಾಸಕರ ನೀತಿಯ ತಿಳಿದು ಮತ್ತಾವ ರೀತಿನೀತಿಗಳಲ್ಲಿಯೂ ಮನತಾರದೆ ತನ್ನ ಸುನೀತಿಯನೆ ಬೀಱಿ ತನ್ನ ಸದ್ಗುಣರೀತಿಯನೆ ತೋಱಿ ತನ್ನ ಸದ್ಗುಣವಾಸನೆಯ ಕೀಱಿ ಸತ್ಕುಲ ಭಕ್ತಿಯನೆ ತನ್ನ ಸತ್ಯವನೆ ನಾಱಿ ಇಪ್ಪಾತ ತ್ರಿವಿಧದವನಲ್ಲ, ಅರಿಷಡ್ವರ್ಗಂಗಳೊಳು ನಿಲ್ಲ, ಪ್ರಪಂಚೇಂದ್ರಿಯಂಗಳ ಸಂಚಿನ ಸುಖದವನಲ್ಲ, ಮಿಕ್ಕಾದ ಬಹು ವಿಷಯದ ಗೊಂಚಲ ತೊಂಬೆಯವನಲ್ಲ, ಬಸವಣ್ಣಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲರಾಜೇಶ್ವರಲಿಂಗವು ತಾನು ತಾನೇ.

(ಪ್ರ. ಸಂಪುಟ 196) ಕಾಳವ್ವೆ. ಸು. 1160

ಇವಳು ಬಾಚಿಕಾಯಕದ ಬಸವಪ್ಪನ ಹೆಂಡತಿ, ಈಕೆಯ ಅಂಕಿತ ಕರ್ಮಹರ ಕಾಳೇಶ್ವರ

ಕೈತಪ್ಪಿ ಕೆತ್ತಲು ಕಾಲಿಂಗೆ ಮೂಲ, ಮಾತುತಪ್ಪಿ ನುಡಿಯಲು ಬಾಯಿಗೆ ಮೂಲ; ವ್ರತಹೀನನ ನೆರೆಯಲು ನರಕಕ್ಕೆ ಮೂಲ, ಕರ್ಮಹರಕಾಳೇಶ್ವರಾ.

(ಪ್ರ. ಸಂಪುಟ 200) ಮರುಳುದೇವ. ಸು 1160.

ಇವನ ವಚನಗಳಲ್ಲಿ ಶುದ್ಧಸಿದ್ಧಪ್ರಸಿದ್ಧಪ್ರಭುಸೇ ಶಾಂತಚೆನ್ನಮಲ್ಲಿಕಾರ್ಜುನಯ್ಯಾ ಎಂಬ ಅಂಕಿತವು ದೊರೆಯುತ್ತದೆ.

ಶ್ರೋತ್ರದಲ್ಲಿ ಕೇಳುವ ಸುವಾಕ್ಯದ ಪರಿಣಾಮವನು ಮನದ ಅವಧಾನದಲ್ಲಿ ಲಿಂಗಕ್ಕೆ ಸಮರ್ಪಿಸಬೇಕು. ನೇತ್ರದಲ್ಲಿ ಕಂಡ ರೂಪನು ಮನದ ಅವಧಾನದಲ್ಲಿ

ಲಿಂಗಕ್ಕೆ ಸಮರ್ಪಿಸಬೇಕು ನಾಸಿಕದಲ್ಲಿ ಬಂದ ಸುಗಂಧದ ಪರಿಣಾಮವನು ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು ಜಿಹ್ವೆಯಲ್ಲಿ ಬಂದ ಸುರುಚಿಯನು ಮನದ ಅವಧಾನದಲ್ಲಿ ಲಿಂಗಕ್ಕೆ ಅರ್ಪಿಸಬೇಕು ಇದೇ ಅರ್ಪಿತದ ಮುಖ ಕೇಳಿರಣ್ಣಾ. ನಮ್ಮ ಶುದ್ಧಸಿದ್ಧಪ್ರಸಿದ್ಧ ಪ್ರಸನ್ನಪ್ರಭುವೇ ಶಾಂತಮಲ್ಲಿಕಾರ್ಜುನಯ್ಯನಲ್ಲಿಯೂ ಈಯರ್ಪಿತಮುಖವಱಿದು ಅರ್ಪಿಸಬಲ್ಲಡೆ ತೃಪ್ತಿಯನೆಯ್ದುವನು.

## ಮಾದಾರ ಚೆನ್ನಯ್ಯ. ಸು. 1160.

ಈತನ ಅಂಕಿತ ಕಯ್ಯಾಳಿಗತ್ತಿ ಅಡಿಗೂಂಟಕೆಡೆಯಾಗಬೇಡ ಅಱಿ ನಿಜಾತ್ಮರಾಮರಾಮನ.

ನಡೆ ನುಡಿ ಸಿದ್ಧಾಂತವಾದಲ್ಲಿ ಕುಲ ಹೊಲೆಯಿಲ್ಲ. ನುಡಿ ಲೇಸು ನಡೆಯಧಮವಾದಲ್ಲಿ ಅದೇ ಬಿಡುಗಡೆ. ಇಲ್ಲದ ಹೊಲೆ ಕಳವು ಪರದಾರಂಗಳಲ್ಲಿ ಹೊಲಬನಱಿಯದೆ ಕೆಟ್ಟು ನಡೆಯುತ್ತ ಮತ್ತೆ ಕುಲಜರೆಂಬ ಒಡಲುಂಟೆ? ಆಚಾರವೇ ಕುಲ, ಅನಾಚಾರವೇ ಹೊಲೆ. ಇಂತೀಉಭಯವ ತಿಳಿದು ಅಱಿಯಬೇಕು. ಕಯ್ಯಾಳಿಗತ್ತಿ ಅಡಿಗೂಂಟಕೆಡೆಯಾಗಬೇಡ ಅಱಿ ನಿಜಾತ್ಮರಾಮರಾಮನಾ.

## ದಸರಯ್ಯ. ಸು. 1160.

ಇವನ ಅಂಕಿತ ದಸರೇಶ್ವರಲಿಂಗ.

(1) ನುಡಿಯಲ್ಲಿ ಕಿಂಕರತ್ವವನಱಿದು, ಕರವ ಬೀಸುವಲ್ಲಿ ತುಷಾರಕೀಟವನಱಿದು, ಅಡಿಯಿಡುವಲ್ಲಿ ಪೊಡವಿಯಲ್ಲಿ ಹಱಿಹೊಮ್ಮದ ಜೀವನಚೇತನಾದಿಗಳನಱಿದು, ಮತ್ತೆ ಗಿಡವ ಹಿಡಿವಲ್ಲಿ ಮಾತ್ರೆಯಿಂದ ಒಡಗೂಡುವಲ್ಲಿ ಒಡಗೂಡಿ ಬಿಡುವಲ್ಲಿ ಸರ್ವದಯಕ್ಕೆ ಪುದಿಪುಚ್ಚವಿಲ್ಲದಿರಬೇಕು. ಇಂತೀಸಡಗರದ ಚಿತ್ತ ದಸರೇಶ್ವರಲಿಂಗವನೊಡಗೂಡುವ ಭಕ್ತಿ.

(2) ಸರ್ವವನಱಿದಲ್ಲಿ ಸರ್ವಜ್ಞನಾದಲ್ಲಿ ಇದಿರೆಲ್ಲ ತನ್ನಲ್ಲಿ ತಾನೆಲ್ಲ ಇದಿರಲ್ಲಿ. ತನ್ನ ಭಿನ್ನಭಾವ ಅನ್ಯರಲ್ಲಿ ತೋಱಿ ಆಗುಣ ತನ್ನನೆ ಅನ್ಯವೆನಿಸುವುದು. ತನ್ನಯ ಶಾಂತಿ ಅನ್ಯರಲ್ಲಿ ತೋಱಿ ಅಲ್ಲಿ ಭಿನ್ನಭಾವವಿಲ್ಲದಿರೆ ಅವರನ್ಯರಲ್ಲ ಎಮ್ಮವರೆ

ಬರು ಈದು ತನ್ನ ಗುಣ ಅನ್ಯವಿಲ್ಲ ಎಂಬುದನರಿದು ತನ್ನೊಪ್ಪ ದರ್ಪಣದಲ್ಲಿ ತೋರುವಂತೆ. ಇದಕ್ಕೆ ಕರ್ತೃವಿಲ್ಲ ದಸರೇಶ್ವರಲಿಂಗವನರಿ'ವುದಕ್ಕೆ.

ವೀರಮ್ಮ. ಸು. 1160.

ಈಕೆ ದಸರಯ್ಯನ ಹೆಂಡತಿ, ಇವಳ ಅಂಕಿತ ಗುರುಶಾಂತೇಶ್ವರ.

ಬರಸಾಯುಧ ವೇಳೆಯನರಿ'ವುದಯ್ಯಾ. ಭಕ್ತ ವ್ರತಹೀನನನರಿ'ದು ನೆರೆಯನಯ್ಯಾ. ನೆರೆದರೆ ನರಕ ಗುರುಶಾಂತೇಶ್ವರಾ.

ಮೋದರ ಕೇತಯ್ಯ. ಸು. 1160.

ಇವನ ವಚನಗಳಲ್ಲಿ ಗೌರೇಶ್ವರ ಎಂಬ ಅಂಕಿತವಿದೆ.

ಇಂದ್ರಿಯಂಗಳ ಕೊಂದಿಹೆನೆಂದಡೆ ಅವು ಕಂದರ್ಪನ ಹಂಗು. ಕಂದರ್ಪನ ಕೊಂದಿಹೆನೆಂದಡೆ ಅವು ಕಂಗಳ ಲಾಭ. ಕಂಗಳು ಮುಚ್ಚಿಯಲ್ಲದೆ ಲಿಂಗವ ಕಾಣಬಾರದು. ಅದು ನಿರಂಗಂಗಲ್ಲದೆ ಜಗದ ಹಂಗಿನವರಿಗಿಲ್ಲ ಎಂದೆ ಗೌರೇಶ್ವರಾ

ಕರುಳಕೇತಯ್ಯ. ಸು. 1160.

ಈತನ ವಚನಗಳಲ್ಲಿ ಮನಕ್ಕೆ ಮನೋಹರ ಶಂಖೇಶ್ವರಲಿಂಗ ಎಂಬ ಅಂಕಿತವಿದೆ.

ತನಗಲ್ಲದಾದುದ ಘಟ ಸೋಂಕಿದಲ್ಲಿ ಅಲ್ಲಿಯೆ ಕಡಿವೆನು. ತನಗಲ್ಲದಾದುದ ಕೈಮುಟ್ಟಿದಲ್ಲಿ ಅಲ್ಲಿಯೆ ತೆಗೆವೆನು ತನಗಲ್ಲದಾದುದ ಕಿವಿ ಕೇಳಿದಲ್ಲಿ ಅಲ್ಲಿಯೆ ಗೂಂಟವ ಬಲಿವೆನು. ತನಗಲ್ಲದಾದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೆ ದುರ್ಗಂಧಕ್ಕೆ ನೇಣಿ'ಸುವೆನು. ದೃಷ್ಟಿ ಅನುದಪ್ಪಿ ನೋಡಿದಲ್ಲಿ ಅಲ್ಲಿಯೆ ಕಿತ್ತಿಡುವೆನು. ಚಿತ್ತ ಅನುದಪ್ಪಿ ಮತ್ತೊಂದ ನೆನೆದಡೆ ಆತ್ಮನನಲ್ಲಿಯೆ ಕಿತ್ತುಹಾಕುವೆನು. ಇದಕ್ಕೆ ನೀವೇ ಸಾಕ್ಷಿ ಮನಕ್ಕೆ ಮನೋಹರ ಶಂಖೇಶ್ವರಲಿಂಗವೇ.

ಕಲಕೇತಬೊಮ್ಮಯ್ಯ. ಸು. 1160.

ಇವನ ವಚನಗಳಲ್ಲಿ ಮೋಖಲೇಶ್ವರಲಿಂಗ ಎಂಬ ಅಂಕಿತವು ಉಪಯೋಗಿಸಿದೆ.

ಬೇಡಲೇತಕ್ಕೆ ಕಾಯಕೆನವಮಾಡಿಹೆನೆಂದು ? ಕಳುಹಿತೆ ಒಡೆ ಪ್ರಿಯ ಗುರಾ

ಬಯ್ಯಲೇತಕ್ಕೆ ? ಭಕ್ತರು ಮಾಡಿಹರೆಂದು ಗಡಿತಡಿಗಳಲ್ಲಿ ಕವಾಟಮಂದಿರಗಳ ಮುಂದೆ ಗೊಂದಿಗಳಲ್ಲಿ ನಿಂದು ಕಾಯಲೇತಕ್ಕೆ ? ಈ ಗುಣ ಕಾರ್ಯಕದಂದವೆ ? ಈ ಗುಣ ಹೊಟ್ಟೆಗೆ ಕಾಣದ ಸಂಸಾರದ ಘಟ್ಟುವನ ಇರವು. ಉಭಯಭ್ರಷ್ಟಂಗೆ ಕೊಟ್ಟ ದ್ರವ್ಯ ಮೋಖಲೇಶ್ವರ ಲಿಂಗಕ್ಕೆ ಮುಟ್ಟದೆ ಹೋಯಿತು.

ಒಳ್ಳೇಶ ಮಲ್ಲಯ್ಯ. ಸು. 1160.

ಇವನ ಅಂಕಿತ ಬಳ್ಳೇಶ್ವರಲಿಂಗ.

ಆ ಪರಮನೆಂಬುದು ನಿಮ್ಮ ಭೇರಿ. ಬೇಡಿದುದನೀವನೆಂಬುದು ನಿಮ್ಮ ತಂಬಟೆ. ಜಗದ್ವಂದಿತ ಲೋಕದೊಡೆಯನೆಂಬುದು ನಿಮ್ಮ ಶಂಖ. ಶಿವನಲ್ಲದೆ ಪರದೈವವಿಲ್ಲೆಂಬುದು ನಿಮ್ಮ ಡಮರುಗ. ಶಿವಕೊಡನೆಂಬವರ ಬಾಯ ತ್ರಿಶೂಲದಲ್ಲಿ ಊವ ಬಳ್ಳೇಶ್ವರಲಿಂಗದ ಡಂಗುರ ಮೂಜಗದೊಳಯ್ಯ.

ಮಂಡಸಂಗಯ್ಯ. ಸು. 1160.

ಈತನ ಅಂಕಿತ ತರುಣರಸಂಗಮಲಿಂಗದೇವ

ಶಮೆದಮೆಗಳಲ್ಲಿ ತ್ರಿಕರಣದಿಂದ ಶುದ್ಧವಾಗದ ಪರಿಯಂತ ಪೂಜೆಯಲ್ಲಿಹುದು ? ಅವರ ಮಹಿಮೆ ಅವರ ಗುಣವು ಪೂಜೆಯಲ್ಲಿ ಕಾಣಬಹುದಲ್ಲದೆ ಬೇಱೆ ಅಱಿಸಲುಂಟೆ ತರುಣಸಂಗಮಲಿಂಗದೇವಾ.

ರಾಯಸದ ಮಂಚಣ್ಣ. ಸು. 1160.

ಈತನ ವಚನಗಳಲ್ಲಿ ಜಾಂಬೇಶ್ವರ ಎಂಬ ಅಂಕಿತವಿದೆ.

(1) ಕೈದು ಮೊನೆಯೋಱುವುದಕ್ಕೆ ಮುನ್ನವೆ ಕಟ್ಟಬಲ್ಲಡೆ ಕೈದೇನಮಾಡುವುದು ? ಹಾವು ಬಾಯಿಬಿಡುವುದಕ್ಕೆ ಮೊದಲೆ ಹಿಡಿದ ಮತ್ತೆ ವಿಷವೇನಮಾಡುವುದು ? ಮನವಿಕಾರಿಸುವುದಕ್ಕೆ ಮೊದಲೆ ಮುಹದಲ್ಲಿ ನಿಂದಮತ್ತೆ ಇಂದ್ರಿಯಂಗಳೇನಮಾಡಲಾಪುವು ಜಾಂಬೇಶ್ವರಾ.

(2) ಊರ ವಂಕದ ಹೊಱಗಿರ್ದು ಮನೆಯ ಬಾಗಿಲ ಕಾಣೆನೆಂದು ಅಱಸುವನಂತೆ, ಇದಿರಲ್ಲಿ ತೋಱುವ ಕುಱುಹ ಮಱೆದು ಅಱಿವನೊಳಕೊಂಡೆನೆಂ

ಬವನಂತೆ, ಜಂಬುಕಶಸ್ತ್ರದ ಫಳವನುಂಗಿ ಜಂಬೂದ್ವೀಪವೆಲ್ಲ ಪ್ರಳಯವಾಯಿತೆಂದಡೆ ಅದು ಚಂದವೆ ಜಾಂಬೇಶ್ವರಾ.

## ಗಾವುದಿ ಮಾಚಯ್ಯ[1]. ಸು. 1160

ಇವನ ವಚನಗಳಲ್ಲಿ ಕಲ್ಯಾಣದ ತ್ರಿಪುರಾಂತಕಲಿಂಗ ಎಂಬ ಅಂಕಿತವೊಡನೆ ಈತನ ಹೆಸರೂ ಬರುತ್ತದೆ.

(1) ಮುನ್ನಗಳುಪಿದವರೊಡವೆಯು ಈಗ ಕಂಡು ಮತ್ತೆ ಇನ್ನಾರಿಗೆ ಗಳುಪಿಹರಣ್ಣಾ. ಆದಂದಿಗೆ ಮುಟ್ಟಿ ಬೆಳೆ ತಾನಿದ್ದಂದಿಗೂ ತಪ್ಪದು. ಇದನರಿಯದು ಕಲ್ಯಾಣದ ತ್ರಿಪುರಾಂತಕ ಲಿಂಗದಲ್ಲಿ ಗಾವುದಿಮಾಚಯ್ಯ ಹೇಳುವುದು ದಿಟವೆನ್ನಿರಣ್ಣಾ.

(2) ಭಕ್ತರು ಬಯಕೆಯನಿರಿಸಿದಡೆ ಅದು ಸತ್ತನಾಯ ಮಾಂಸ. ವಿರಕ್ತರು ದ್ರವ್ಯವ ಮುಟ್ಟಿದಡೆ ಅದು ಕತ್ತೆಯ ಹಸುಹು. ಹೀಗೆ ತಪ್ಪಿದರಂಬಿ. ಇದು ಸತ್ಯ. ತ್ರಿಪುರಾಂತಕ ಲಿಂಗದಲ್ಲಿ ಗಾವುದಿ ಮಾಚಯ್ಯ ಹೇಳುವುದು ಸತ್ಯವೆನ್ನಿರಣ್ಣಾ.

## ತಳವಾರ ಕಾಮಿದೇವ[1]. ಸು. 1160.

ಇವನ ಅಂಕಿತ ಕಾಮಹರಪ್ರಿಯ ರಾಮನಾಥ.

ಕಾಲವಂಚಕನಾಗಿ ಜಂಗಮಕಿಕ್ಕಿದಡೆ ಕರ್ಮವೆ ತಿಂಬುದು. ಉಪಚರಿಸಿಕೊಂಬನಾಗಿ ತ್ರಿಸಂಧಿಯ ಶಿವಪೂಜೆಯ ಮಾಡಿದಡೆ ಅದು ಹಸಿವಿಲ್ಲದ ಗ್ರಾಸ. ಅಸಮಾಕ್ಷನ ಮುಟ್ಟದು. ಇದು ಹುಸಿಯಲ್ಲವೆಂದೆ ಕಾಮಹರಪ್ರಿಯ ರಾಮನಾಥಾ.

---

1. ಚನ್ನಬಸವಪುರಾಣದಲ್ಲಿ ಗಾವುದಿ ಮಾರಿತಂದೆ, ತಳವಾರ ರಾಮಯ್ಯ ಎಂದಿದೆ, ಕಾಂಡ 5, ಸಂಧಿ 4

## ಹೊಡೆಹುಲ್ಲ ಬಂಕಣ್ಣ. ಸು. 1160.

ಈತನ ಅಂಕಿತ ಕುಂಭೇಶ್ವರಲಿಂಗದಲ್ಲಿರ್ದ ಜಗನ್ನಾಥ.

ಕೂಲಿ ಕೃಷಿ ಕಾಯಕಂಗಳಿಂದ ಮಾಡುವ ಸೇವೆ ಆದಾವ ತೆಱನೆಂದಱಿವು ಭಾವಶುದ್ಧವಾಗಿ ಮಾಡುವ ಕಾಯಕವಂತನಿರವು ಎಂತುಟೆಂದಡೆ ಮಾಡಿಕೊಂಡ ಕೃತ್ಯದಲ್ಲಿ ಆರಿಗೂ ಒಡಲೆಡೆಗುಡದೆ ಸಂಕಲ್ಪನಱಿದು ಪ್ರಸಾದವನೆಡೆಮಾಡ ಬೇಕು. ಅದು ನಿರ್ಮಾಲ್ಯವಲ್ಲ. ಅದು ಲಿಂಗಾಂಗ ಕುಂಭದಲ್ಲಿ ನಿಂದ ಪ್ರಸಾದ. ಇದಱ ಸಂದೇಹವ ಹಱಿದು ಕಾಯಕಗೊಂಡ ಪ್ರಸಾದಿಗೆ ಕುಂಭೇಶ್ವರ ಲಿಂಗ ದಲ್ಲಿರ್ದ ಜಗನ್ನಾಥ ಸಾಕ್ಷಿಯಾಗಿ ನಮೋನಮೋ ಎನುತಿರ್ದನು.

## ತೆಲುಗ ಜೊಮ್ಮಯ್ಯ. ಸು. 1160.

ಇವನ ಅಂಕಿತವು ತೆಲುಗೇಶ್ವರ ಎಂದಿರುವಂತೆ ತೋರುತ್ತದೆ.

ಕಾವ ಸನ್ನದ್ಧನಾಗಿ ತಾ ಚೆಲುವನಾದಡೆ ಕಾಮಿನೀ ಜನವೆಲ್ಲ ಮೆಚ್ಚ ಬೇಕು. ದಾನಗುಣವುಳ್ಳವ ಗರೆದೀವನಾದಡೆ ಯಾಚಕ ಜನವೆಲ್ಲ ಮೆಚ್ಚಬೇಕು. ವೀರನಾದಡೆ ವೈರಿಗಳು ಮೆಚ್ಚಬೇಕು. ಖೂಳನಾದಡೆ ತನ್ನತಾ ಮೆಚ್ಚಿಕೊಂಬ. ಎನ್ನದೇವ ತೆಲುಗೇಶ್ವರನಲ್ಲಿ ತಾನು ಭಕ್ತನಾದಡೆ ದೇವರು ಮೆಚ್ಚಿ ಜಗವು ತಾ ಮೆಚ್ಚುವುದು.

## ವೈದ್ಯಸಂಗಣ್ಣ. ಸು. 1160

ಈತನ ಅಂಕಿತ ಮರುಳು ಶಂಕರಪ್ರಿಯ ಸಿದ್ಧ ರಾಮೇಶ್ವರಲಿಂಗ.

ಭಕ್ತಂಗೊಂದೇ ವಾಕ್ಯ. ಬಾಟಿಗೊಂದೇ ಫಲ. ವಿರಕ್ತಬಿಟ್ಟುದ ಹಿಡಿ ದಲ್ಲಿ ಮತ್ತೆ ಮುಟ್ಟಿದಡೆ ಸತ್ತನಾಯ ಹಡುಹು. ಮತ್ತೆ ಸತ್ಕ್ರಿಯೆಯಲ್ಲಿ ನಡೆ ವ ತನ್ನ ನಿತ್ಯನೇಮವ ತಪ್ಪಿಕೆಟ್ಟು ನಡೆವ ಮತ್ತೆ ದ್ರವ್ಯವ ಕೊಟ್ಟು ಭಕ್ತರೊಡೆ ಯರಲ್ಲಿ ಪರಿಹರಿಸಿಕೊಂಡಿಹನೆಂಬ ಬಹುಮಿಟ್ಟಿಯ ಭಂಡರ ಕಂಡಡೆ ಮರುಳು ಶಂಕರಪ್ರಿಯ ಸಿದ್ಧರಾಮೇಶ್ವರಲಿಂಗವಾಯಿತಾದಡೂ ಒಡಗೂಡಲೊಲ್ಲೆ.

## ಗಾಣದ ಕನ್ನಪ್ಪ. ಸು. 1160.

ಈವನ ವಚನಗಳಲ್ಲಿ ಗುಹೇಶ್ವರನಲ್ಲಯ್ಯ ಎಂಬ ಅಂಕಿತವಿದೆ.

ಪುಣ್ಯಪಾಪವಿಲ್ಲಾಗಿ ಯಮನ ಹಂಗಿಲ್ಲ. ಬಂದುದನುಂಬನಾಗಿ ಮಾನವರ ಹಂಗಿಲ್ಲ. ಭವಗೆಟ್ಟನಾಗಿ ದೈವದ ಹಂಗಿಲ್ಲ. ಸತ್ಯಜ್ಞಾನಾನಂದವೆ ತಾನಾಗಿ ಇನ್ನಾರ ಹಂಗಿಲ್ಲ. ಇನ್ನಾರ ಹಂಗಿಲ್ಲದಾತ ಗುಹೇಶ್ವರನಲ್ಲಯ್ಯನೊಬ್ಬನೆ.

## ರಕ್ಕಸ ಬೊಮ್ಮಯ್ಯ ಸು. 1160.

ಈತನ ವಚನಗಳಲ್ಲಿ ರಕ್ಕಸನೊಡೆಯ ಎಂಬ ಅಂಕಿತವು ಉಪಯೋಗಿಸಿದೆ.

ನಾನು ನಾನಾದ ಕಾರಣ ಎನಗೆ ಗುರುವಿಲ್ಲ. ನಾನೆಂಬುದನರಿಯನಾಗಿ ಎನಗಾಲಿಂಗವಿಲ್ಲ. ನಾ ಮಾಡದವನಾಗಿ ಎನಗಾ ಜಂಗಮವಿಲ್ಲ. ಇಂತೀ ಮೂರು ಇಲ್ಲದವಂಗೆ ಭಕ್ತಿಪಥವಿಲ್ಲ. ಇದನಿನ್ನಾರ ಕೇಳುವೆ? ರಕ್ಕಸನೊಡೆಯ ಕೊಟ್ಟುದು ಬೇಡಾ.

## ಸೋಮದೇವಯ್ಯ ಸು 1160

ಈವನ ವಚನಗಳಲ್ಲಿ ಗಾರುಡೇಶ್ವರಲಿಂಗ ಎಂಬ ಅಂಕಿತವಿದೆ.

ಸರ್ಪನಲ್ಲಿ ವಿಷವಿದ್ದಿತ್ತೆಂದಡೆ ಸರ್ವಾಂಗದಲ್ಲಿ ವಿಷ ತಪ್ಪದಿಪ್ಪುದೆ ವಿಷವಿಪ್ಪ ಠಾವು ಒಂದಲ್ಲದೆ? ಪೃಥ್ವಿಯಲ್ಲಿ ನಿಕ್ಷೇಪವಿದ್ದಿತ್ತೆಂದಡೆ ಅಲ್ಲಿ ಎಲ್ಲ ಠಾವಿನಲ್ಲಿ ಅಡಗಿಪ್ಪುದೆ? ಸಮಯಕುಲದಲ್ಲಿ ವಸ್ತು ಪರಿಪೂರ್ಣವೆಂದಡೆ ಪಾಷಂಡಿಗಳಲ್ಲಿ ವಸ್ತು ಪರಿಪೂರ್ಣವಾಗಿಪ್ಪುದೆ ಇಪ್ಪ ಸತ್ಯ ಸನ್ಮುಕ್ತರಲ್ಲಿಯಲ್ಲದೆ ಪರಮವಿರಕ್ತನಲ್ಲಿಯಲ್ಲದೆ? ನೆಲದಲ್ಲಿರ್ದ ನಿಧಾನವನರಿದು ಅಗೆವುದು, ವಿಷವಿದ್ದ ಬಾಯ ಮುಚ್ಚಿ ಹಿಡುವುದು, ವಸ್ತುವಿದ್ದ ಠಾವ ನರಿದು ಪೂಜಿಸುವುದು, ಭೂತ ಅರಿವುಳ್ಳವರಲ್ಲಿ ಎರವಿಲ್ಲದ ಕೂಟವು, ಇಂತಿವು ಜಗದಲ್ಲಿ ಅರಿದು ಮಾಡುವ ಪರಿತೋಷ ಗಾರುಡೇಶ್ವರ ಲಿಂಗದಲ್ಲಿ ಎರಡರಿದವನ ಕೂಟ.

## ಹಡಪದ ರೇಚಣ್ಣ. ಸು. 1160.

ಈತನ ಅಂಕಿತ ನಿಃಕಳಂಕ ಕೂಡಲ ಚನ್ನಸಂಗಮದೇವ.

ಮರದ ದೇವರಿಗೆ ಉರಿಯ ಪೂಜೆಯುಂಟೆ? ಮಣ್ಣಿನ ಹಱಿಗೋಲಲ್ಲಿ ತುಂಬಿದ ತೊಱೆಯ ಹಾಯಲು ಬಹುದೆ? ಇಂತೀ ದೃಷ್ಟವ ಕಂಡು ಕಾಣಿಸಿದಲ್ಲಿ ಪ್ರಮಾಣಿಸದಲ್ಲದೆ ಆವ ತೆಱನು? ಹಾಗೆ ಬಱಿಹುಂಡರ ಆಚಾರಭ್ರಷ್ಟರ ಅರ್ಥ ಕಾಱರ ಚರ್ಚೆಗೋಷ್ಠಿವಂತರ ಬಹು ಯಾಚಕರ ಪಗುಡಿ ಪರಿಹಾಸಕರ ತ್ರಿವಿಧದಲ್ಲಿ ಸೂತಕವನಱಿಸುವರ ವಿಶ್ವಾಸಘಾತಕರ ಅಪ್ರಮಾಣಪಾತಕರ ಭಕ್ತಿ ತೊಟ್ಟಲ್ಲಿ ಭಕ್ತರೆಂದಡೆ ವಿರಕ್ತಿ ತೊಟ್ಟಲ್ಲಿ ಕರ್ತರೆಂದಡೆ ದೀಕ್ಷೆಯ ಮಾಡಿದಲ್ಲಿ ಗುರುವೆಂದಡೆ ನಾನೀ ತಪ್ಪುಕಂಡಲ್ಲಿ ಎತ್ತಿ ತೂಱುವೆನು. ಗೋಷ್ಠಿಯಲ್ಲಿ ಕುಚಿತ್ತ ಬಿಡದಿದ್ದಡೆ ಇದು ನಿಮಗೆ ನಿಶ್ಚಯವಲ್ಲ ಎಂಬೆನು. ಮತ್ತೆಯು ಇವ ಕಚ್ಚ ಬಿಡಲಾಱದಿದ್ದಡೆ ನಿಃಕಳಂಕ ಕೂಡಲ ಚೆನ್ನಸಂಗಮ ದೇವರಾದಡೂ ಎತ್ತಿ ಹಾಕುವೆನು.

## ಬೊಕ್ಕಸದ ಸಂಗಣ್ಣ. ಸು 1160

ಇವನ ಅಂಕಿತ ಬಸವಣ್ಣ ಪ್ರಿಯ ನಾಗರೇಶ್ವರ ಲಿಂಗ.

ಸೀತವುಳ್ಳನಕ ಉಷ್ಣವ ಪ್ರತಿಪಾದಿಸಬೇಕು. ಉಷ್ಣವುಳ್ಳನಕ ಸೀತವ ಪ್ರತಿಪಾದಿಸಬೇಕು. ದಿವದಲ್ಲಿ ಎದ್ದು ರಾತ್ರಿಯಲ್ಲಿ ಒಱಗುವನಕ ಅದ್ವೈತ ಅಶಕ್ಯ ನೋಡಾ. ಇದು ಕಾರಣ ಕ್ರಿಯೆಯ ಮಱೆಯಲಿಲ್ಲ ಅಱಿವು ಶೂನ್ಯವೆಂದು ಬಿಡಲಿಲ್ಲ ಅದು ಶಿಲೆಯ ಮಱೆಯ ಪಾವಕ, ತಿಲದೊಳಗಣ ತೈಲ ಅನರ ಒಲವಱಿವಲ್ಲಿ ಕುಲವ ಕಾಣಬೇಕು ಬಸವಣ್ಣ ಪ್ರಿಯ ನಾಗರೇಶ್ವರ ಲಿಂಗವನಱಿವುದಕ್ಕೆ

## ಕೀಲಾರದ ಭೀಮಣ್ಣ ಸು. 1160

ಈತನ ವಚನಗಳಲ್ಲಿ ಕಾಲಕರ್ಮವಿರಹಿತ ತ್ರಿಪುರಾಂತಕಲಿಂಗ ಎಂಬ ಅಂಕಿತವಿದೆ.

ವ್ಯಾಧನಂತೆ ಜಾಲಗಾಱನಂತೆ ಹೇಮ ಚೋರನಂತೆ ಇಂತೀ ಗಳಹುಗಳ್ಳರಂತೆ ಮಾತಿನಲ್ಲಿ ಬ್ರಹ್ಮವ ನುಡಿವ ಸರ್ವಸಂಪಾದದಲ್ಲಿ ವಿಟತ್ವಮಂ ಭೋಗುಳ್ಳ

ಬೇಯುತ್ತ ನೋಯುತ್ತ, ಮತ್ತೆ ಬ್ರಹ್ಮದ ಸುಮ್ಮಾನದ ಸಂಖಿಗಳೆಂತಪ್ಪರೋ ? ಇಂತು ನುಡಿಯಬಾರದು, ಸಮಯವ ಬಿಡಬಾರದು ಕ್ರಿಯೆಯಱಿದು ಮಱೆಯಬಾರದು ಜ್ಞಾನ. ಇಂತೀ ಭೇದವನಱಿದು ಹಱಿವಂಗಲ್ಲದೆ ಕಾಲಕರ್ಮವಿರಹಿತ ತ್ರಿಪುರಾಂತಕ ಲಿಂಗವು ಸಾಧ್ಯವಲ್ಲ.

## ಕಾಳವ್ವೆ ಸು. 1160

ಈಕೆ ಸಿದ್ಧಬುದ್ಧಯ್ಯನ ಹೆಂಡತಿ. ಇವಳ ಅಂಕಿತ ಘೀಮೇಶ್ವರ.

ವ್ರತಭ್ರಷ್ಟ ಲಿಂಗಬಾಹ್ಯನ ಕಂಡಡೆ ಸತ್ತನಾಯ ಕಾಗೆಯ ಕಂಡಂತೆ. ಅವರೊಡನೆ ನುಡಿಯಲಾಗದು ಭೀಮೇಶ್ವರಾ

## ಬೊಂತಲದೇವಿ ಸು 1160

ಇವಳ ಅಂಕಿತ ಬಿಡಾಡಿ.

ಊರೊಳಗಣ ಬಯಲು ಊರ ಹೊಱಗಣ ಬಯಲು ಎಂದುಂಟೆ ? ಊರೊಳಗಣ ಬ್ರಾಹ್ಮಣ ಬಯಲು ಊರ ಹೊಱಗೆ ಹೊಲೆ ಬಯಲು ಎಂದುಂಟೆ ? ಎಲ್ಲಿ ನೋಡಿದಡೆ ಬಯಲೊಂದೆ ಭಿತ್ತಿಯಿಂದ ಒಳಹೊಱಗೆಂಬ ನಾಮವೈಸೆ ಎಲ್ಲಿ ನೋಡಿದಡೆ ಕರೆದಡೆ ಓ ಎಂಬಾತನೇ ಬಿಡಾಡಿ.

## ಕದಿರಕಾಯಕದ ರೆಮ್ಮವ್ವೆ ಸು. 1160

ಈಕೆ ಕದಿರರೆಮ್ಮಯ್ಯನ ಅನುಬಂಧಿನಿ ಎಂದು ತೋರುತ್ತದೆ. ಇವಳ ವಚನಗಳಲ್ಲಿ ಗುಮ್ಮೇಶ್ವರ ಎಂಬ ಅಂಕಿತವೂ ಈಕೆಯ ಹೆಸರೂ ಬರುತ್ತವೆ.

(1) ನಾ ತಿರುಹುವ ರಾಟೆಯ ಕುಲಜಾತಿಯ ಕೇಳಿರಣ್ಣಾ ಅಡಿಯಣ ಹಲಗೆ ಬ್ರಹ್ಮ, ತೋರಣ ವಿಷ್ಣು, ನಿಂದ ಬೊಂಬೆ ಮಹಾರುದ್ರ, ರುದ್ರನ ಬೆಂಬಳಿಯವೇಡು ಸೂತ್ರದ ಕಣ್ಣೆ. ಅಱಿವೆಂಬ ಕದಿರು, ಭಕ್ತಿಯೆಂಬ ಕಯ್ಯಲ್ಲಿ ತಿರುಹಲಾಗಿ ಸುತ್ತಿತ್ತು ನೂಲು, ಕದಿರು ತುಂಬಿತ್ತು, ರಾಟೆಯ ತಿರುಹಲಾಱೆ. ಎನ್ನ ಗಂಡ ಕುಟ್ಟಿಹ. ಇನ್ನೇವೆ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ ?

(2) ಎಲ್ಲರ ಗಂಡಂದಿರು ಪರದಳವಿಭಾಡರು ; ಎನ್ನ ಗಂಡ ಮನೆದಳವಿಭಾಡ. ಎಲ್ಲರ ಗಂಡಂದಿರು ಗಜಬೇಂಟೆಕಾಱರು ; ಎನ್ನ ಗಂಡ ಮನಬೇಂಟೆಕಾಱ. ಎಲ್ಲರ ಗಂಡಂದಿರು ತಂದಿಕ್ಕಿಸಿಕೊಂಬರು ; ಎನ್ನ ಗಂಡ ತಾರದೆ ಇಕ್ಕಿಸಿಕೊಂಬ. ಎಲ್ಲರ ಗಂಡಂದಿರಿಗೆ ಮೂಱು, ಎನ್ನ ಗಂಡಂಗೆ ಒಂದು. ಅದೊಂದು ಸಂದೇಹ ಬೇಡ ಕದಿರ ರೆಮ್ಮಿಯೊಡೆಯ ಗುಮ್ಮೇಶ್ವರಾ.

## ರೇಚವ್ವೆ. ಸು. 1160

ಇವಳು ಕಾಳಕೂಟಯ್ಯನ ಹೆಂಡತಿ. ಈಕೆಯ ಅಂಕಿತ ಕುಂಭೇಶ್ವರ.

ಒಂಜೆ ಆವಿಂಗೆ ಕ್ಷೀರವುಂಟೆ ? ವ್ರತಹೀನನ ಬೆರೆಯಲಾಗದು. ಬೆರೆದಡೆ ನರಕ ತಪ್ಪದು. ನಾನೊಲ್ಲೆ ಬಲ್ಲೆನಾಗಿ ಕುಂಭೇಶ್ವರಾ.

## ರೆಮ್ಮವ್ವೆ. ಸು 1160

ಈಕೆಯ ಅಂಕಿತ ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ.

(1) ಆಚಾರ ತಪ್ಪಿದಡೆ ಪ್ರಾಯಶ್ಚಿತ್ತವುಂಟೆಂಬ ಅನಾಚಾರಿಗಳ ಮುಖವ ನೋಡಬಹುದೆ ? ಆಚಾರ ನೋಟದ ಹೊನ್ನೇ ? ಮೊತ್ತದ ಮಡಕೆಯೇ ? ಸಂತೆಯ ವ್ಯವಹಾರವೇ ? ಜೂಜಿನ ಮಾತೇ ? ವೇಶಿಯ ಸತ್ಯವೇ ? ಸುಸರವಾಚ್ಯವೇ ? ಇಂತೀ ವ್ರತದ ವಿಹಿತವ ತಿಳಿದಲ್ಲಿ ಇಷ್ಟಬಾಹ್ಯನ ವ್ರತಭ್ರಷ್ಟನ ನಾನಱಿತು ಕೂಡಿದೆನಾದಡೆ ಅಱಿಯದೆ ಕೂಡಿ ಮತ್ತಱಿದಡೆ ಆತನ ಬಿಡದಿರ್ದಡೆ ಎನಗದೇ ಭಂಗ. ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗವಾದಡೂ ತಪ್ಪಿದಡೆ ಹೊಱಗೆಂದು ಮತ್ತೆ ಕೂಡಿಕೊಳ್ಳೆ.

(2) ವೇಷ ಎಲ್ಲಿರದು ? ಸೂಳೆಯಲ್ಲಿ ಡೊಂಬನಲ್ಲಿ ಬಹುರೂಪಿಯಲ್ಲಿ ಇರದೆ ? ವೇಷವ ತೋಱಿ ಒಡಲ ಹೊರೆವ ದಾಸಿವೇಶಿಯ ಮಕ್ಕಳಿಗೆ ನಿಜಭಕ್ತಿ ಎಲ್ಲಿಯದೋ ಆಚಾರವೇ ಪ್ರಾಣವಾದ ರಾಮೇಶ್ವರ ಲಿಂಗದಲ್ಲಿ ?

## ಕೊಟ್ಟಣದ ಸೋಮವ್ವೆ. ಸು. 1160

ಇವಳ ವಚನಗಳಲ್ಲಿ ನಿರ್ಲಜ್ಜೇಶ್ವರ ಎಂಬ ಅಂಕಿತವು ದೊರೆಯುತ್ತದೆ.

ಹದ ತಪ್ಪಿ ಕುಟ್ಟಲು ನುಚ್ಚಲ್ಲದೆ ಅಕ್ಕಿಯಿಲ್ಲ. ವ್ರತಹೀನನ ನೆರೆಯೆ ನರಕವಲ್ಲದೆ ಮುಕ್ತಿಯಿಲ್ಲ. ಅರಿಯದಾದಡೆ ಹೋಗಲಿ ಅರಿದು ಬೆರೆದೆನಾದಡೆ ಕನ್ನಗತ್ತಿಯಲ್ಲಿ ಕಿವಿಯ ಕೊಯ್ವರಯ್ಯ ಒಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ.

## ದಶಗಣ ಸಿಂಗಿದೇವಯ್ಯ. ಸು. 1160

ಇವನ ಅಂಕಿತ ನಾಚಯ್ಯಪ್ರಿಯ ಮಲ್ಲಿನಾಥಯ್ಯ.

(1) ಸತಿ ಸುತ ಮಾತಾಪಿತರಿಗೆಂದು ಹಡೆದಡೆ ನಿಮ್ಮಾಣೆ ಕಂಡಯ್ಯ. ಮಾನವರ ಸೇವೆಮಾಡಿದಡೆ ನಿಮ್ಮಾಣೆ ಕಂಡಯ್ಯ. ನೀವಲ್ಲದನ್ಯಕ್ಕೆ ಬಗಿದಡೆ ನಿಮ್ಮಾಣೆ ಕಂಡಯ್ಯ. ಎನ್ನ ಸತಿಯಲ್ಲದನ್ಯಸತಿಗಳು ಪಿಡಿದಡೆ ನಿಮ್ಮಾಣೆ ಕಂಡಯ್ಯ. ತನುಮನ ವಂಚನೆಯಾದಡೆ ನಾಚಯ್ಯಪ್ರಿಯ ಮಲ್ಲಿನಾಥಯ್ಯ ನಿಮ್ಮಾಣೆ ಕಂಡಯ್ಯ.

(2) ಹೆಂಡಿರೆನ್ನದೆ ಮಕ್ಕಳೆನ್ನದೆ ತೊತ್ತಿರೆನ್ನದೆ ಬಂಟರೆನ್ನದೆ ಹಗೆಗಳೆನ್ನದೆ ತಪ್ಪೆನ್ನದಯ್ಯ. ಜಾಗ್ರತ್ಸ್ವಪ್ನ ಸುಷುಪ್ತಿಯಲ್ಲಿ ತಪ್ಪೆನ್ನದಯ್ಯ. ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ನೀನು ಇರ್ದನರ ನೀನೆನ್ನದ ತಪ್ಪೆನ್ನದಯ್ಯ.

## ಅನಾಮಿಕ ನಾಚಯ್ಯ. ಸು. 1160

ಈತನ ಅಂಕಿತ ನಾಚಯ್ಯಪ್ರಿಯ ಚೆನ್ನರಾಮೇಶ್ವರ.

ಹಸಿವಿಂಗೆ ಲಯವಿಲ್ಲ. ವಿಷಯಕ್ಕೆ ಕುಲವಿಲ್ಲ. ಮರಣಕ್ಕೆ ಮನ್ನಣೆಯಿಲ್ಲ. ಆಸೆಗೆ ಹವಣಿಲ್ಲ. ವಂಚಕನನಾಮಿಕ. ನಾಚಯ್ಯಪ್ರಿಯ ಚೆನ್ನರಾಮೇಶಯ್ಯಾ.

## ಬಾಲಬೊಮ್ಮಣ್ಣ. ಸು. 1160

ಇವನ ವಚನಗಳಲ್ಲಿ ವೀರಶೂರರಾಮೇಶ್ವರ ಲಿಂಗ ಎಂಬ ಅಂಕಿತವಿದೆ.

ಪ್ರಾಣಕ್ಕೂ ಲಿಂಗಕ್ಕೂ ಅನುಸಂಧಾನವ ಮಾಡಬೇಕೆಂಬಲ್ಲಿ ಮಣಿಯು ವಿರಳದಲ್ಲಿ ಏಱುವ ಸೂಲೇ' ರಾಗಾದಿವ್ಯಾಮೋಹ ತಥ್ಯ ಮಿಥ್ಯ ನಿಶ್ಚಯವಾದಲ್ಲಿ ಯೆ ವಸ್ತುವಿನಲ್ಲಿ ಅನುಸಂಧಾನವಾದ ಚಿತ್ತವ ಸನ್ನೆ ಸಂಜ್ಞೆಯ ಮಾಡಿ ಪೂಜಿಸ ಲಿಲ್ಲ. ಆಯುಧದಲ್ಲಿ ಗಾಯವಾದ ಆತ್ಮನ ಸ್ವಸ್ಥದಂತೆ ಅಱಿದಲ್ಲಿಯೇ ಮಾಯಾ ಹೀನ ಮಲಕರ್ಮವ ಬಿಟ್ಟುದು ವೀರಶೂರರಾಮೇಶ್ವರ ಲಿಂಗವನಱಿದುದು.

## ವೀರ ಗೊಲ್ಲಾಳಯ್ಯ. ಸು 1160.

ಇವನ ಅಂಕಿತ ವೀರ ಬೀರೇಶ್ವರ ಲಿಂಗ.

ಕಲ್ಲು ಲಿಂಗವಲ್ಲ, ಉಳಿಯ ಮೊನೆಯಲ್ಲಿ ಒಡೆಯಿತ್ತು. ಮರ ದೇವ ರಲ್ಲ, ಉರಿಯಲ್ಲಿ ಬೆಂದಿತ್ತು. ಮಣ್ಣು ದೇವರಲ್ಲ, ನೀರಿನ ಕೊನೆಯಲ್ಲಿ ಕದಡಿ ತ್ತು. ಇಂತಿವನೆಲ್ಲವನಱಿವ ಚಿತ್ತ ದೇವರಲ್ಲ, ಕರಣಂಗಳ ಮೊತ್ತದೊಳಗಾಗಿ ಸತ್ತುಗೆಟ್ಟಿತ್ತು. ಇಂತಿವ ಕಳೆದುಳಿದು ವಸ್ತುವಪ್ಪೆಡೆಯಾವುದೆಂದಡೆ ಕಂಡವ ರೊಳಗೆ ಕೈಕೊಂಡಾಡನೆ ಕೊಂಡ ವ್ರತದಲ್ಲಿ ಮತ್ತೊಂದನೊಡಗೂಡಿ ಬೆರೆಯದೆ ವಿಶ್ವಾಸ ಗ್ರಹಿಸಿ ನಿಂದಲ್ಲಿ ಆ ನಿಜಲಿಂಗವಲ್ಲದೆ ಮತ್ತೊಂದ ಪೆಱತನಱಿಯದೆ ನಿಂದಾತನೆ ಸರ್ವಾಂಗಲಿಂಗಿ, ವೀರಬೀರೇಶ್ವರ ಲಿಂಗದೊಳಗಾದ ಶರಣ.

## (ದ್ವಿ|ಸಂಪುಟ 123) ಮಲ್ಲಯ್ಯ. ಸು. 1160.

ಈತನ ಅಂಕಿತ ಗುರುಕುಲದ ಮಲ್ಲಯ್ಯ.

(1) ಒಳಗನಱುಹಿಸಿ ತಿಳುಹ| ಹೊಱಗೆ ಬೋಧಿಸಿ ನಿಲಿಸಿ|
ಒಳಗು ಹೊಱಗೆಂದೆಂಬಿವೆರಡ ಕೆಡಿಸಿ |
ಕಳೆಯ ಲಿಂಗದೊಳೊಚ್ಚ| ತವನೊಪ್ಪುಗೊಳಿಸಿದಾ|
ಕರುಣಿ ಗುರುಕುಲದ ಮಲ್ಲಯ್ಯಗುರುವೇ ||

(2) ಎನ್ನ ಪಾದವೆ ಪಾದಶಿಲೆಯಾಗಿ, ಎನ್ನ ಕಾಲೆ ಕಡಹದ ಕಂಬಗಳಾಗಿ, ಎನ್ನ ತೋಳೆ ನಾಗವೇದಿಗೆಯಾಗಿ, ಎನ್ನ ಅಸ್ಥಿಯೆ ಸುತ್ತಣ ಜಂತೆಯಾಗಿ, ಎನ್ನ ಅಧರವೆ ಒಳ್ಳಿಹ ಬಾಗಿಲಾಗಿ, ಎನ್ನ ಗುರುಕರುಣವ ಲಿಂಗವಾಗಿ, ಎನ್ನಂಗವೆ ರಂಗಮಧ್ಯವಾಗಿ, ಎನ್ನ ಹೃದಯಕಮಲವೆ ಪೂಜೆಯಾಗಿ, ಎನ್ನ ಕಿವಿಗಳೆ ಕೀರ್ತಿಮುಖವಾಗಿ, ಎನ್ನ ನಾಲಗೆಯೆ ಗಂಟೆಯಾಗಿ, ಎನ್ನ ಶಿರವೆ ಸುವರ್ಣಕಳಶವಾಗಿ, ಎನ್ನ ನಯನವೆ ಕುಂದದ ಜ್ಯೋತಿಯಾಗಿ, ಎನ್ನ ಚರ್ಮವೆ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೆ ತನಗೆ ಉಪಹಾರವಾಗಿ ಗುರುಪುರದ ಮಲ್ಲಯ್ಯ ನಿಂದನಾಗಿ.

## ಅಣಾತಿಯ ಚಂದಯ್ಯ. ಸು. 1160

ಇವನ ಅಂಕಿತ ಅಣಾತಿಯ ಲಿಂಗ.

ನಿಜಜಂಗಮವೆನಿದೆನಿಸಿರ್ಪರು ಕುಂದುಕೊರತೆ ನುಡಿವರೆ? ಅನಾದಿ ಜಂಗಮವೆಂದೆನಿಸುವರು ಆಚರಣೆಯ ಭೇದದಲ್ಲಿ ದಾಕ್ಷಿಣ್ಯವಿಡಿದಿರ್ಪರೆ? ಶೂರನು ರಣಪ್ರಸಂಗದಲ್ಲಿ ಮಗನ ನೋಡುವನೆ? ಇದು ಕಾರಣ ತಮ್ಮವರೇನು ಅನ್ಯರೇನು ಮೃದುವಾಗಿ ಮಾತಾಡರು ಅಣಾತಿಯ ಲಿಂಗದ ಆಜ್ಞೆಯುಳ್ಳ.

## ಅಂಗ ಸೋಂಕಿದ ಲಿಂಗ ತಂದೆ. ಸು. 1160.

ಇವನ ಅಂಕಿತ ಭೋಗ ಬಂಕೇಶ್ವರ ಲಿಂಗ.

ಮರದೊಳಗಣ ಬೆಂಕಿ ತನ್ನ ತಾನೆ ಉರಿಯಬಲ್ಲುದೆ? ಶಿಲೆಯೊಳಗಣ ದಿಪ್ತಿ ಆ ಬೆಳಗ ತನ್ನ ತಾನೆ ಅರಿಯಬಲ್ಲುದೆ? ಆತ್ಮನಂತೆ ಕುಟಿಲನ ಭಕ್ತಿ ಕಿಸುಕುಳನ ವಿರಕ್ತಿ ಮಥನಿಸಿಯಲ್ಲದೆ ದಿಟವ ಕಾಣಬಾರದು. ಸತ್ಯವನು ಅಸತ್ಯವನು ಪ್ರತ್ಯಕ್ಷ ಪ್ರಮಾಣಿಸಿಯಲ್ಲದೆ ನಿಶ್ಚಯವನರಿಯಬಾರದು. ಗುರುವಾದಡೂ ಲಿಂಗವಾದಡೂ ಜಂಗಮವಾದಡೂ ಪರೀಕ್ಷಿಸಿ ಹಿರಿಯದವನ ಭಕ್ತಿ ವಿರಕ್ತಿ ತೂತ ಕುಂಭದಲ್ಲಿಯ ನೀರು, ಸೂತ್ರ ತಪ್ಪಿದ ಬೊಂಬೆ, ನಿಜನೇತ್ರ ತಪ್ಪಿದ ದೃಷ್ಟಿ. ಬೇರು ವೇಲಾಗಿ ಸಸಿಗೆ ನೀರಿನಾರಯ್ಕೆಯುಂಟೆ? ಇಂತೀ ಅವ ಕ್ರಿಯೆಯಲ್ಲಿಯೂ ಭಾವ ಶುದ್ಧವಾಗಿ ಆರಯ್ಕೆ ಬೇಕು ಇದು ಭೋಗ ಬಂಕೇಶ್ವರ ಲಿಂಗದ ಸಂಗದ ಶರಣನ ಸುಖ.

## ಗೋರಕ್ಷ 1160.

ಇತನ ಅಂಕಿತ ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗ.

ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾರುದಿಲ್ಲ. ನಾನಾಕಲ್ಪಪ್ರಯೋಗ ಅದೃಶ್ಯಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೆ? ನಾನಾವಾಗ್ವಾದಂಗಳಿಂದ ಹೋಹ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮಪರಿಚಿತವಾದುದಿಲ್ಲ. ನೀ ನಾ ಎಂದಲ್ಲಿ ನೀನು ನಾನಾದೆಯಲ್ಲದೆ ನಾನು ನೀನಾದುದಿಲ್ಲ ಗೋರಕ್ಷಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗ ನೀ ನಾನಾದೆಯಲ್ಲದೆ ಲೀಯವಾಗಿ ನಾ ಆ ಲಿಂಗವ ಆದುದಿಲ್ಲ.

## ಕಾಳವ್ವೆ. ಸು. 1180.

ಇವಳು ಉರಿಲಿಂಗ ಪೆದ್ದಿಯ ಹೆಂಡತಿ. ಈಕೆಯ ಅಂಕಿತ ಉರಿಲಿಂಗ ಪೆದ್ದಿಗಳರಸ.

(1) ವ್ರತವೆಂಬುದು ನಾಯಕರತ್ನ. ವ್ರತವೆಂಬುದು ಸುಪ್ಪಾಣಿಯ ಮುತ್ತು. ವ್ರತವೆಂಬುದು ಜೀವದ ಕಳೆ. ವ್ರತವೆಂಬುದು ಸುಯಿಧಾನ, ಸುಯಿಧಾನ, ಸುಯಿಧಾನ. ವ್ರತತಪ್ಪಲು ಉರಿಲಿಂಗ ಪೆದ್ದಿಗಳರಸ ಒಲ್ಲನವ್ವಾ.

(2) ತುಪುರಿಯ ಕೊಳ್ಳಿಯಂತೆ ಉರಿವಾತ ಭಕ್ತನೆ? ಹುಸಿದು ತಂದು ಮಾಡುವಾತ ಭಕ್ತನೆ? ಭಕ್ತರ ಕುಲವನೆತ್ತಿ ನಿಂದಿಸುವಾತ ಭಕ್ತನೆ? ತನ್ನ ಪ್ರಾಣದ ಮೇಲೆ ಬಂದಡೂ ಬರಲಿ, ಇವರ ಬಿಡಬೇಕು. ಇವರ ಬಿಡದಿರಲು ಉರಿಲಿಂಗ ಪೆದ್ದಿಗಳರಸನೊಲ್ಲನವ್ವಾ,

## ಗುಡ್ಡವ್ವೆ. ಸು. 1430.

ಈಕೆ ಬತ್ತಲೇಶ್ವರನ ಹೆಂಡತಿ. ಇವಳ ಅಂಕಿತ ನಿಂಬೇಶ್ವರ.

ತನು ಬತ್ತಲೆಯಾದಡೇನು? ಮನ ಬತ್ತಲೆಯಾಗದನಕ ವ್ರತವಿದ್ದಡೇನು? ವ್ರತಹೀನನಾದ ಬಟಿ'ಕ ನೆರೆವರೆ ನರಕವಯ್ಯಾ ನಿಂಬೇಶ್ವರಾ.

## ಘನಲಿಂಗದೇವ. ಸು. 1480.

ಈತನು ತೋಂಟದ ಸಿದ್ಧಲಿಂಗನ ಶಿಷ್ಯನು. ಇವನ ಅಂಕಿತ ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ.

ದೇವಾ ! ಕಂಬಳಕ್ಕೆ ಹೋಗಿ ಕನಕದ ಕೊಡನ ಕಂಡಂತೆ ಮರ್ತ್ಯಲೋಕಕ್ಕೆ ಬಂದು ಮಾನವ ಜನ್ಮವ ಕಂಡೆ. ಆ ಮಾನವಜನ್ಮಕ್ಕೆ ಗುಣಾಕ್ಷರಪ್ರಾಪ್ತಿಯಾದಂತೆ ಲಿಂಗ ಬಂದುದ ಕಂಡೆ. ಎನಗಿದು ಚೋದ್ಯವಯ್ಯಾ. ಎನಗಿದು ವಿಪರೀತವಯ್ಯಾ. ಇದಕ್ಕೆ ನುಡಿದಂತೆ ನಡಸು. ನಡೆದಂತೆ ನುಡಿಸು. ನುಡಿದ ನಡೆಗೆ ಭಿನ್ನವಾದಡೆ ನಿಮ್ಮ ಶರಣರೊಪ್ಪರು. ನಿಮ್ಮ ಶರಣರೊಪ್ಪದಲ್ಲಿಯೆ ನೀನೊಪ್ಪೆ. ನೀನೊಪ್ಪದಲ್ಲಿಯೆ ಎನಗೆ ಬಂದಿತ್ತು ಹಿಂದಣ ಭವದ ಹೆಮ್ಮಾರಿ. ಅದಕ್ಕೆ ನಾನಂಜುವೆನಯ್ಯಾ. ಅದಕ್ಕೆ ನಾನಳುಕುವೆನಯ್ಯಾ. ನುಡಿ ನಡೆ ಎರಡಾಗದಂತೆ ನಡಸಯ್ಯಾ ಘನಲಿಂಗಿಯ ಮೋಹದ ಚೆನ್ನ ಮಲ್ಲಿಕಾರ್ಜುನಾ.

## ಮಸಣಮ್ಮ. ಸು. 1500.

ಇವಳು ಎಡೆಮಟದ ನಾಗಿದೇವನ ಹೆಂಡತಿ. ಇವಳ ಅಂಕಿತ ನಿಜಗುಣೇಶ್ವರಲಿಂಗ.

ಕಾಗೆಯ ನಾಯ ತಿಂದವರಿಲ್ಲ. ವ್ರತಭ್ರಷ್ಟನ ಕೂಡಿದವರಿಲ್ಲ. ನಾಯಿಗೆ ನಾರಂಗವಪ್ಪುದೆ? ಲೋಕದ ನರಂಗೆ ವ್ರತವಪ್ಪುದೆ ಶಿವಬೀಜಕ್ಕಲ್ಲದೆ ನೀವೆ ಸಾಕ್ಷಿಯಾಗಿ ನಿಜಗುಣೇಶ್ವರ ಲಿಂಗದಲ್ಲಿ ?

## ರೇಕಮ್ಮ. ಸು. 1500.

ಈಕೆ ರೇವಣಸಿದ್ಧಯ್ಯನ ಹೆಂಡತಿ. ಇವಳ ಅಂಕಿತ ಶ್ರೀಗುರುಸಿದ್ಧೇಶ್ವರ.

ಲಿಂಗಬಾಹ್ಯನ ಆಚಾರಭ್ರಷ್ಟನ ವ್ರತತಪ್ಪಕನ ಗುರುಲಿಂಗಜಂಗಮಕೊಂದವನ ಪಾದೋದಕ ಪ್ರಸಾದ ದೂಷಕನ ವಿಭೂತಿ ರುದ್ರಾಕ್ಷಿ ನಿಂದಕನ ಕಂಡಡೆ ಶಕ್ತಿಯುಳ್ಳಡೆ ಸಂಹಾರಮಾಡುವುದು. ಶಕ್ತಿಯಿಲ್ಲದಿರ್ದಡೆ ಗ್ರಾಮವ ಬಿಡುವುದು. ಇಲ್ಲದಿರ್ದಡೆ ಆಸ್ಥಳವ ಬಿಡುವುದು, ಅದಾಗದಿರ್ದಡೆ

ಕರ್ಣವುಚ್ಚಿಕೊಂಬುದು, ಶಿವ ಮಂತ್ರ ಜಪಿಸುವುದು. ಅಲ್ಲದಿರ್ದಡೆ ಕುಂಭಿನೀಪಾತಕ ನಾಯಕ ನರಕದಲ್ಲಿಕ್ಕುವ ಶ್ರೀಗುರು ಸಿದ್ಧೇಶ್ವರನು.

## ವರದ ಸಂಗಣ್ಣ. ಸು. 1500

ಈತನ ಅಂಕಿತ ವರದ ಶಂಕರೇಶ್ವರ.

ಓತ ಹಿಡಿದನ ಕೈ ಮಸಿ ಎಂಬುದ ನಾಡೆಲ್ಲ ಬಲ್ಲರು. ಅವನ ಕೂಡೆ ಆಡಲಾದಯ್ಯ, ತನಗಾ ಮಸಿ ಹತ್ತುವುದಾಗಿ. ಲಿಂಗ ವಿರೋಧಿಯ ಕೈವಿಡಿದಾಡುವನು ಮುನ್ನವೆ ವ್ರತಗೇಡಿ, ಅಂತವನ ಸಂಗ ಬೇಡವಯ್ಯ ತನಗಾ ಭಂಗ ಬಂದುದಾಗಿ. ಎಂತೆಂದೊಡೆ ಜಗದ ಕರ್ತ ಶಿವನ ವಿರೋಧವಮಾಡಿ ದಕ್ಷನೊಬ್ಬ ಯಾಗವನಿಕ್ಕಲು ಮೂವತ್ತು ಮೂರುಕೋಟಿ ದೇವರ್ಕಳೆಲ್ಲ ತೊತ್ತುಬಿದುಬಸಿಕೊಂಡು ನುಚ್ಚುನುಱಿಯಾಗಿ ಹೋದರು ನೋಡಾ, ಅವನಂಗಸಂಗದಲ್ಲಿರ್ದ ಕಾರಣ ಗೆಲವು ಸೋಲಕ್ಕೆ ಇಕ್ಕುಮುಡಿಗೆ ಏಱುಮುಡಿಗೆ ಎಂಬ ಮತ್ಸರಕ್ಕೆ ಮುಂದುವಿಡಿದು ಮುಡುಹಿಕ್ಕಿ ಕೆಲೆದಾಡುವರನೆಲ್ಲ ತಮ್ಮ ಮನದಲ್ಲಿ ತಾವಱಿದು ಒಯ್ಯನೆ ಸೋಲಗುವರು. ಮೇಲೆ ಲಿಂಗ ನಿರೂಪದಿಂದ ಬಂದ ಕಾರ್ಯಕ್ಕೆ ಅಂಜರು ಏಕಾಂಗ ವೀರರು. ವಾಯುದ ಪರಿವಾತಿನವಾಲೆಗೆ ಬೆದಱಿ ಓಡುವರಲ್ಲ ಏಕೋಭಾವನಿಷ್ಠೆ ನಿಬ್ಬೆರಗು ಗಟ್ಟಿಗೊಂಡು ದೃಢಚಿತ್ತವುಳ್ಳ ಸದ್ಭಕ್ತರು. ಇಂತಪ್ಪ ಉಲುಹಡಗಿದ ಶರಣರ ಸುಸಂಗದಲ್ಲಿರಿಸಿ ಬದುಕುಸಂತಿರಿಸಯ್ಯ ವರದ ಶಂಕರೇಶ್ವರಾ.

## ಕಾಲು ಕಣ್ಣಿಯ ಕಾಯಮ್ಮ. ಸು. 1500

ಈಕೆಯ ಅಂಕಿತ ನಿಭ್ರೀಂತಿ ನಿಜಲಿಂಗದಲ್ಲಿ.

ಎನ್ನ ಕರಣಂಗಳ ಲಿಂಗದಲ್ಲಿ ಕಟ್ಟುವೆ. ಗುರು ಲಿಂಗಜಂಗಮದ ಕಾಲ ಕಟ್ಟುವೆ. ವ್ರತ ಭ್ರಷ್ಟರನಟ್ಟೊರಸುವೆ, ಸುಟ್ಟು ತೂಱುತೂಱನೆ ತೂಱುವೆ ನಿಭ್ರಾಂತಿ ನಿಜಲಿಂಗದಲ್ಲಿ.

## ಕೇದಾರಗುರು. ಸು. 1500.

ಇವನ ವಚನಗಳಲ್ಲಿ ಈತನ ಹೆಸರು ಸ್ಪಷ್ಟವಾಗಿ ಹೇಳಿದೆ; ಅಂಕಿತ ಕೇದಾರಗುರುದೇವ.

ಎಲೆ ಗುಡ್ಡ ಸೀ ನುಡಿದ ನುಡಿಯಿಂದ ನಿನ್ನ ಮನದ ಜಡ್ಡು ಕಳೆಯಿತೆಂದೆನಲಾಪೆ ನಿಜವಳಿ... ಅಳಿಕ ಸಂಸಾರ ಬಿಡಾಡಿಕೊಳಾ? ನಿಜವಳಿದ ಬಳಿಕ ಅಂಗೀಕರಿಸಿದ ಹೆಣ್ಣು ಬಿಟ್ಟರೆ ಘೋರನರಕದಲ್ಲಿಕ್ಕುವ ಕೇದಾರಗುರುದೇವ ಕೇಳಾ ಅಂದಿಂಗೆಂಗೆ.

## ನಿವೃತ್ತಿ ಸಂಗಯ್ಯ. ಸು 1500

ಈತನ ವಚನಗಳಲ್ಲಿ ಇವನ ಹೆಸರು ಹೇಳಿದೆ.

ಪರಧನ ಪರಾನ್ನ ಪರಸ್ತ್ರೀಯಯಾಶೆ ಬಿಡದು. ಶರಣನೆಂತೆಂಬೆ? ಸಂಬಂಧಿಯೆಂತೆಂಬೆ ಮರುಳೆ? ಜಿಹ್ವಾ ದಗ್ಧಾ ಪರಾನ್ನೇನ ಹಸ್ತೌ ದಗ್ಧೌ ಪ್ರತಿಗ್ರಹಾತ್। ಚಕ್ಷುರ್ದಗ್ಧಂ ಪರ ಸ್ತ್ರೀ ಭ್ಯಸ್ತಸ್ಯ ಜನ್ಮ ನಿರರ್ಥಕಂ ॥ ಇಂತೆಂದು ಶ್ರುತಿ ಸಾಜಲು ಮತಿಗೆಡುವರಕಟಾ! ನಿವೃತ್ತಿ ಸಂಗಯ್ಯ ದೇವರೆಂತೊಲಿವನವ್ವಾ?

## ಸತ್ತಿಗೆಕಾಯಕದ ಇಟ್ಟಪ್ಪಯ್ಯ ಅಥವಾ ಮಾರಿತಂದೆ. ಸು. 1500.

ಇವನ ಅಂಕಿತ ಐಘಂಟೇಶ್ವರಲಿಂಗ.

ಆವ ಆಚರಣೆಯ ತೊಟ್ಟಲ್ಲಿ ಅನುಸರಣೆಯಿಲ್ಲದಿರ್ಪುದೆ ಗುರುಚರಲಿಂಗ ಪೂಜೆ. ಕಾಯಕಕ್ಕೆ ಇಂದಿಂಗೆ ನಾಳಿಂಗೆಂಬ ಸಂದೇಹವಿಲ್ಲದಲ್ಲಿಯೆ ಸರ್ವಶೀಲ. ತಾಗು ನಿರೋಧ ಬಂದಲ್ಲಿ ಕಂದದೆ ಕುಂದದೆ ಎಂದಿನಂತಿಪ್ಪುದೆ ಶಿವಲಿಂಗ ಪೂಜೆ. ಇದಕ್ಕೆ ಹಿಂದು ಮುಂದು ವಿಚಾರಿಸಲಿಲ್ಲ, ಇದಕ್ಕೆ ಐಘಂಟೇಶ್ವರಲಿಂಗ ಸಾಕ್ಷಿಯಾಗಿ.

## ಕಾಳಲಿಂಗ. ಸು 1500.

ಇವನ ವಚನಗಳಲ್ಲಿ ಈತನ ಹೆಸರು ಉಕ್ತವಾಗಿದೆ.

ಆಚಾರ ವಿಚಾರ ತಪ್ಪಿದಲ್ಲಿ ಶರಣರ ವಾದವಲ್ಲದೆ ಮತ್ತೊಂದಱಲ್ಲಿ ವಾದ ವಿಲ್ಲ. ಶರಣರ ವಾದ ಮೋಕ್ಷದ ಬೀಡು, ಶರಣರ ವಾದ ಲಿಂಗದ ನಾಡು, ಶರಣರ ವಾದ ಕಾಳಿಲಿಂಗ ದೇವನು ಮಾಡಿದ ಮಾಯೆಯ ಕೇಡು.

## ಕಂಭದ ಮಾರಯ್ಯ. ಸು. 1500.

ಈತನ ಅಂಕಿತ ಕದಂಬ ಲಿಂಗ.

ಕಾಯದಿಂದ ಕರ್ಮವ ಕಂಡು ಭಾವದಿಂದ ಲಿಂಗವ ಕಂಡು ಲಿಂಗದಿಂದ ಸ್ವಾನುಭಾವವಾಗಿ ಅಂಗದ ಸಂಗಕ್ಕೆ ಪೂಜೆಗಾಯಿತ್ತು ಕದಂಬಲಿಂಗವನಱಿಯಲಾಗಿ.

## ಘರಾರಿ ದೇವಯ್ಯ. ಸು. 1700.

ಈತನ ಅಂಕಿತ ಮಹಾದೇವಲಿಂಗ.

ಶರಣರಲ್ಲಿ ವಾದ ಬಂದಡೆ ಶರಣರೆ ಸಮರ್ಥರು. ಸತಿಪತಿಯರಲ್ಲಿ ವಾದ ಬಂದಡೆ ಜನನಿ ಜನಕರೆ ಸಮರ್ಥರು. ರಾಜರಾಜರಲ್ಲಿ ವಾದ ಬಂದಡೆ ಛತ್ರಪತಿಗಳೆ ಸಮರ್ಥರು. ಶಿವಗೌರೀವರರಲ್ಲಿ ವಾದ ಬಂದಡೆ ಲೋಕವೃಱಿವುದೆಂತು? ಇದು ಕಾರಣ ಶಿವನಲ್ಲಿ ಸಿದ್ಧರಾಮನಲ್ಲಿ ಬಂದ ವಾದ ವಾದವಲ್ಲ, ಪ್ರಸಾಧರ ಮನಕ್ಕೆ ಮಹಾಮೋದ ಮಹಾದೇವಲಿಂಗದಲ್ಲಿ.

## ಕಾಡ ಸಿದ್ಧೇಶ. ಸು. 1725.

ಇವನ ವಚನಗಳಲ್ಲಿ ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬ ಲಿಂಗ ನಿರ್ಮಾಯ ಪ್ರಭುವೇ ಎಂಬ ಅಂಕಿತವಿದೆ. ಈಕವಿ ಇಷ್ಟಲಿಂಗ ಶತಕವನ್ನು ರಚಿಸಿದ ಕಾಡಸಿದ್ಧೇಶನೇ (ಪುಟ 28) ಆಗಿರಬಹುದೆಂದು ತೋರುತ್ತದೆ.

(1) ನೇಲ ಫಲ ಉತ್ಪತ್ತಿ ಮಾಡಿ ಹಣ್ಣಿನಂತೆ ಇರುವರು ಮರ್ತ್ಯರು ಹಲಸು ತೆಂಗು ದಾಳಿಂಬದಂತೆ ಇರುವರು ಸ್ವರ್ಗರು. ಹಾಲು ತುಪ್ಪ ಸಕ್ಕರೆ

ಬೆಲ್ಲದಂತೆ ಇರುವರು ನಿಮ್ಮವರು ಕಾಡಿನೊಳಗಾದ ಶಂಕರ ಪ್ರಿಯ ಚೆನ್ನಕದಂಬ ಲಿಂಗ ನಿರ್ಮಾಯಪ್ರಭುವೇ.

(೨) ಆಕಾರವಿಲ್ಲ ನಿರಾಕಾರವಿಲ್ಲ, ಆದಿಯಿಲ್ಲ ಅಂತರವಿಲ್ಲ, ಎಡನಿಲ್ಲ ಬಲನಿಲ್ಲ, ಹಿಂದಿಲ್ಲ ಮುಂದಿಲ್ಲ, ಒಳಗಿಲ್ಲ ಹೊರಗಿಲ್ಲ, ಊರ್ಧ್ವದಲ್ಲಿಲ್ಲ, ಮಧ್ಯದಲ್ಲಿಲ್ಲ. ಮತ್ತೆಲ್ಲಿಹುದು? ಎರಡಳಿದು ಒಂದಿಲ್ಲದೆ ನಿರಾಳದಲ್ಲಿಹುದು ಎಂದೆನಯ್ಯ ಕಾಡಿನೊಳಗಾದ ಶಂಕರಪ್ರಿಯ ಚೆನ್ನಕದಂಬಲಿಂಗ ನಿರ್ಮಾಯ ಪ್ರಭುವೇ.

---

ಇನ್ನೂ ಕೆಲವರು ವಚನಕಾರರ ಹೆಸರುಗಳೂ ಅಂಕಿತಗಳೂ ದೊರೆತಿವೆ; ವಚನಗಳು ಮಾತ್ರ ಸದ್ಯಃ ಸಿಕ್ಕಿಲ್ಲ. ಈ ವಚನಕಾರರ ಹೆಸರುಗಳನ್ನು ಅಂಕಿತಗಳೊಡನೆ ಕೆಳಗೆ ವರ್ಣಾನುಕ್ರಮದಲ್ಲಿ ಕೊಟ್ಟಿದ್ದೇವೆ. ಇವರಲ್ಲಿ ಹಲವರು ಬಸವನ ಸಮಕಾಲದವರು.

| ಹೆಸರು | ಅಂಕಿತ |
|---|---|
| ಅಕ್ಕನಾಗಮ್ಮ | ಬಸವಣ್ಣಪ್ರಿಯ ಚೆನ್ನಸಂಗ |
| ಅನಂತದೇವ | ಅನಂತಗುರು ಅಲ್ಲಮ ಮಹಾಪ್ರಭು |
| ಅಹಂಕಾರ ಭೀಮಯ್ಯ | ನಿರಹಂಕಾರ ಭೀಮಯ್ಯ |
| ಏಕಾಂತದ ರಾಮಯ್ಯ | ಏಕಾಂತರಾಮೇಶ್ವರಲಿಂಗ |
| ಕನಕದ ನಾಚಯ್ಯ | ಕನಕದ ನಾಚಿಲಿಂಗ |
| ಕನ್ನಡಿಕಾಯಕದ ಅಮ್ಮಿದೇವಯ್ಯ. | ಚೆನ್ನಬಸವಣ್ಣಪ್ರಿಯ ಕಮಳೇಶ್ವರಲಿಂಗ |
| ಕನ್ನಡಿ ಕಾಯಕದ ರೆಮ್ಮಮ್ಮ | ಸದ್ಗುರು ಸಂಗ ನಿರಂಗಲಿಂಗ |

| ಹೆಸರು | ಅಂಕಿತ. |
|---|---|
| ಕನ್ನದಮಾರಿ ತಂದೆ | ಮಾರನ ವೈರಿ ಮಾರೇಶ್ವರ. |
| ಕಾಮಾಟದ ಭೀಮಣ್ಣ | ಭಾಗೇಶ್ವರಲಿಂಗ |
| ಕಿರಾತ ಸಂಗಯ್ಯ | ಕಿರಾತೇಶ್ವರಲಿಂಗ |
| ಕುಪ್ಪಸದ ಚಂದಯ್ಯ | ಕುಪ್ಪಸ ಚಂದೇಶ್ವರಲಿಂಗ |
| ಕ್ಷೇತ್ರನಾಥ | ಕ್ಷೇತ್ರನಾಥಲಿಂಗ |
| ಗಂಗಮ್ಮ | ಗಂಗೇಶ್ವರಲಿಂಗ |
| ಗಂಗಾಂಬಿಕೆ (ಬಸವನ ಹೆಂಡತಿ) | ಗಂಗಾಪ್ರಿಯ ಕೂಡಲಸಂಗದೇವ |
| ತೆಲುಗೇಶ ಮಸಣಯ್ಯ | ಶಂಭು ತೆಲುಗೇಶ್ವರ |
| ನಿರಂಜನ ದೇವ | ನಿರಂಜನಲಿಂಗ |
| ನಿರಾಲಂಬ ದೇವ | ನಿರಾಲಂಬ |

| ಹೆಸರು | ಅಂಕಿತ |
| --- | --- |
| ನೀಲಲೋಚನೆ | ಸಂಗಯ್ಯ |
| ನೀಲಾಂಬಿಕೆ | ಬಸವಪ್ರಿಯ ಕೂಡಲಸಂಗಮದೇವ |
| ಪಂಚಾಕ್ಷರದೇವ | ಶ್ರೀಗುರುಪಂಚಾಕ್ಷರಲಿಂಗ |
| ಪಡಿಹಾರಿಬಸವಣ್ಣ | ಪಡಿಹಾರಿಪ್ರಿಯ ಕೂಡಲಸಂಗಮದೇವ |
| ಪರ್ವತನಾಥ | ಪರ್ವತನಾಥಲಿಂಗ |
| ಪ್ರಸಾದಿಲೆಂಕಬಂಕಣ್ಣ | ದಹನಚಂಡಿಕೇಶ್ವರಲಿಂಗ |
| ಪುಷ್ಪದ ಸೋಮಯ್ಯ | ಸೋಮೇಶ್ವರಲಿಂಗ |
| ಬಿಬ್ಬಿದೇವಯ್ಯ | ಕೂಡಲಸಂಗಮದೇವ + ಬಸವಣ್ಣ |
| ಬೆಡಗಿನ ಸುಂದರಯ್ಯ | ಸುಂದರ ಶಿವಲಿಂಗಯ್ಯ |
| ಭರಿತಾರ್ಪಣದ ಚೆನ್ನಬಸವಣ್ಣ | ಚೆನ್ನ ಕೂಡಲ ರಾಮೇಶ್ವರಲಿಂಗ |
| ಭೋಗಣ್ಣ | ನಿಜಗುರುಭೋಗಸಂಗ |
| ಮಲಹರಕಾಯಕದ ಚಿಕ್ಕದೇವಯ್ಯ | ಊರ್ಧ್ವರೇತೋಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರಲಿಂಗ |
| ಮಹಾದೇವಿ | ಮಹಾದೇವ ಜ್ಯೋತಿರ್ಲಿಂಗ |
| ಮುಗ್ಧಸಂಗಯ್ಯ | ಮುಗ್ಧಸಂಗ |
| ಮೂಲಪ್ರಣಮದೇವ | ಮೂಲಪ್ರಣಾಮದೇವ |
| ಮೈದುನರಾಮಯ್ಯ | ಮಹಾಲಿಂಗ ಚೆನ್ನರಾಮ |
| ಮೌಕ್ತಿಕಸಂಗಯ್ಯ | ಮುತ್ತಿನಸಂಗಲಿಂಗ |
| ರತ್ನದ ರಾಚಯ್ಯ | ವೀರರಾಚೋಟಿಲಿಂಗ |
| ಲಕ್ಷ್ಮಮ್ಮ (ಕೊಂಡೆಯ ಮಂಚಣ್ಣನ ಹೆಂಡತಿ) | ಅಗಜೇಶ್ವರಲಿಂಗ |
| ಲಿಂಗಸತ್ಯಣ್ಣ | ಲಿಂಗಸತ್ಯಣ್ಣ |
| ವೀರಚಂಡ | ವೀರಚಂಡಲಿಂಗ |
| ವೇದಮೂರ್ತಿಸಂಗಣ್ಣ | ಲಲಾಮಭೀಮಸಂಗಮೇಶ್ವರ |
| ಶಂಕರದಾಸಿಮಯ್ಯ | ನಿಜಗುರುಶಂಕರದೇವ |
| ಶಂಕರಸೋಮಯ್ಯ | ಸಾಂಬಸೋಮೇಶ್ವರಲಿಂಗ |
| ಶಾಂತರಾಮ | ಶಾಂತರಾಮಲಿಂಗ |
| ಶಾಂತಸೆಟ್ಟಿ | ಶಿವಶಾಂತಮಲ್ಲಿಕಾರ್ಜುನ |
| ಶಾರ್ದೂಲಸಂಗಯ್ಯ | ಶಾರ್ದೂಲಲಿಂಗ |
| ಶಿವನಾಗಮಯ್ಯ | ನಾಗಯ್ಯಪ್ರಿಯ ಚೆನ್ನರಾಮೇಶ್ವರ |
| ಶಿವಪೂಜೆಯ ಭೀಮಯ್ಯ | ಶಿವಪೂಜೆಯ ಭೀಮ |
| ಶಿವಾನಂದದೇವ | ಶಿವಾನಂದಲಿಂಗ |
| ಸಿದ್ಧವೀರದೇವ | ತೋಂಟದಸಿದ್ಧಲಿಂಗದೇವ |
| ಸಿದ್ಧಾಂತಿವೀರಸಂಗಯ್ಯ | ಗೋಳಕಾಕಾರ ವಿಶ್ವವಿರಹಿತಲಿಂಗ |
| ಸುವರ್ಣದೇವಿ | ಸುವರ್ಣಲಿಂಗ |
| ಸೂಜಿಕಾಯಕದ ರಾಮಿತಂದೆ | ಪ್ರಸನ್ನ ಕಪಿಲಸಿದ್ಧಮಲ್ಲಿಕಾರ್ಜುನಲಿಂಗ |
| ಹೆಂಡದ ಮಾರಯ್ಯ | ಧರ್ಮೇಶ್ವರ |

ಮತ್ತೆ ಕೆಲವರು ವಚನಕಾರರು.—ಷಣ್ಮುಖಸ್ವಾಮಿ, ಕರಸ್ಥಳದ ವೀರಣ್ಣ, ಕರಿಬಸವೇಶ್ವರ, ಚೆನ್ನದಣಾಯಕ, ಗುರುಬಸವಾರೂಢ, ಲಿಂಗಾವಧೂತ.

## ಹೊಸ ಅಂಕಿತಗಳು

ಹೆಸರು ಗೊತ್ತಿಲ್ಲದ ಸುಮಾರು ಐವತ್ತು ವಚನಕಾರರ ಅಂಕಿತಗಳೊಡನೆ ವಚನಗಳು ದೊರೆತಿವೆ. ಈಯಂಕಿತಗಳನ್ನು ವರ್ಣಾನುಕ್ರಮದಲ್ಲಿ ಕೊಟ್ಟು ಅವನ್ನು ಒಳಕೊಂಡಿರುವ ಒಂದೊಂದು ವಚನವನ್ನು ಉದಾಹರಿಸುತ್ತೇವೆ —

ಅಪ್ಪಣಪ್ರಿಯ ಚೆನ್ನಬಸವೇಶ್ವರ, ಅಮರೇಶ್ವರಲಿಂಗ, ಕಪಿಲಸಿದ್ಧಮಲ್ಲಿನಾಥ, ಕಮರೇಶ್ವರಲಿಂಗ, ಕಲ್ಲೇಶ್ವರಲಿಂಗ, ಕಾಮೇಶ್ವರಲಿಂಗ, ಕಿನ್ನರ ತ್ರಿಪುರಾಂತಕಲಿಂಗ, ಕೂಡಲಚೆನ್ನಸಂಗಯ್ಯ+ಅಲ್ಲಯ್ಯ, ಗಜೇಶ್ವರ (ದ್ವಿ. ಸಂಪುಟ 1'1), ಗುರುಶಾಂತಮಲ್ಲಿಕಾರ್ಜುನ, ಗುರುಸಿದ್ಧಮಲ್ಲ[1] (ದ್ವಿ. ಸಂಪುಟ 119), ಘನಗುರುಪ್ರಿಯ ಸೋಮನಾಥ (ದ್ವಿ ಸಂಪುಟ 124), ಘನಲಿಂಗ ಗುರುಚೆನ್ನಬಸವೇಶ್ವರ, ಚಂದೇಶ್ವರಲಿಂಗ, ಚೆನ್ನದಸರೇಶ್ವರಲಿಂಗ, ಚೆನ್ನಬಂಕನಾಥನ ಮಹೇಶ್ವರ, ಚೆನ್ನ ಬಸವಣ್ಣಪ್ರಿಯ ಚಂದೇಶ್ವರಲಿಂಗ, ಚೆನ್ನರಾಮ, ಚೆನ್ನಸಿದ್ಧನಾಥ, ನಂದಗೋಪಿಯ ಕಂದಪ್ರಿಯ ನಿಸ್ಸಂಗಲಿಂಗ ರಾಮನಾಥ (ದ್ವಿ. ಸಂಪುಟ 122), ನಿಃಕಳಂಕ ಚೆನ್ನ ಮಲ್ಲಿಕಾರ್ಜುನಯ್ಯ, ನಿಜಗುರು ಭೋಗೇಶ್ವರ, ನಿಜಗುರು ಶಾಂತೇಶ್ವರ (ದ್ವಿ. ಸಂಪುಟ 122), ನಿಜಗುರು ಸ್ವತಂತ್ರಕಪಿಲಸಿದ್ಧಮಲ್ಲೇಶ್ವರ, ನಿಸ್ಸಂಗಸಿರಾಳಪ್ರಭು, ಭೌಂಭೇಶ್ವರ (ದ್ವಿ. ಸಂಪುಟ 122), ಮಸಣಯ್ಯ ಪ್ರಿಯ ಗಜೇಶ್ವರ (ದ್ವಿ ಸಂಪುಟ 111), ಮಹಾಘನಲಿಂಗ ಹುಲಿಗೆರೆಯ ಸೋಮೇಶ್ವರ, ಮಹಾಘನಸದ್ಗುರು ಸಿದ್ಧಸೋಮನಾಥ, ರೇಕನಾಥಯ್ಯ (ದ್ವಿ. ಸಂಪುಟ 124), ಶ್ರೀ ಗುರುಲಿಂಗಜಂಗಮವೇ, ಶ್ರೀಜಂಗಮಲಿಂಗಪ್ರಭುವೇ, ಸಂಗನಬಸವಣ್ಣ, ಸಂಗನಬಸವಣ್ಣಪ್ರಿಯಚಂಡೇಶ್ವರಲಿಂಗ, ಸಂಗನ ಬಸವೇಶ್ವರ, ಸಂಗಪ್ರಭು (ದ್ವಿ. ಸಂಪುಟ 124), ಸಂಗಯ್ಯಪ್ರಿಯಬಂಕೇಶ್ವರ (ದ್ವಿ. ಸಂಪುಟ 115), ಸದ್ಗುರು ಮಲ್ಲಿಕಾರ್ಜುನಯ್ಯ, ಸದ್ಗುರು ಶಂಭುಸೋಮೇಶ್ವರ (ದ್ವಿ. ಸಂಪುಟ 124), ಸದ್ಗುರ

1. ಇದು ಪಂಡಿತರಾಧ್ಯನ ಅಂಕಿತವೆಂದು ಕೆಲವರು ಹೇಳುತ್ತಾರೆ.

ಸಿದ್ಧಸೋಮೇಶ್ವರಲಿಂಗ (ದ್ವಿ ಸಂಪುಟ 117), ಸಿದ್ಧಸೋಮನಾಥ, ಸಿದ್ಧಸೋಮನಾಥಲಿಂಗ, ಸಿದ್ಧಸೋಮೇಶ (ದ್ವಿ ಸಂಪುಟ 123), ಹಂಪೆಯ ವಿರುಪಯ್ಯ[1] (ದ್ವಿ. ಸಂಪುಟ 124), ಹುಲಿಗೆರೆಯವರದ ಸೋಮನಾಥ, ಹುಲಿಗೆರೆಯ ವರದಸೋಮೇಶ (ದ್ವಿ. ಸಂಪುಟ 124).

ವಚನಗಳು.

ಜಂಗಮವೇ ಜಗತ್ಪಾವನ. ಆ ಜಂಗಮದ ನೆನಹು ಲಿಂಗವಾಯಿತ್ತು. ಅವರ ತನುವೆ ಎನ್ನ ಕಾಯವಾಯಿತ್ತು, ಅವರ ದರುಶನವೆ ಎನಗೆ ಪರುಷವಾಯಿತ್ತು. ಆ ಪರುಷವಿದಿರಿದು ಮನವ ಲಿಂಗದಲ್ಲಿ ಬರಸಿ ಕನಸು ಕಳವಳಿಕೆ ಹೆಸರುಗಟ್ಟು ಹೋದುವಯ್ಯಾ ನಿಮ್ಮ ಜಂಗಮದಿಂದ ಅಪ್ಪಣಪ್ರಿಯ ಚೆನ್ನಬಸವೇಶ್ವರಾ.

ಗೆದ್ದಲು ಮನೆಮಾಡಿ ಸರ್ಪಂಗೀಡಾದಂತೆ ತಾನತ್ತಣ ದ್ರವ್ಯವ ತಂದು ಇತ್ತ ಮಾಡಿದಡೆ ನಿನಗೆತ್ತಣ ಮುಕ್ತಿ? ಅಮರೇಶ್ವರಲಿಂಗವೇ.

ಜಲದೊಳಗಣ ಮತ್ಸ್ಯವು ಜಲವ ತನ್ನ ನಾಸಿಕದತ್ತ ಹೊದ್ದಲೀಯದ ಪರಿಯನೋಡಾ ಅಯ್ಯಾ. ಶರಣನು ಸಂಸಾರಪ್ರಪಂಚಗಳೊಳಗಿದ್ದು ಆ ಸಂಸಾರಪ್ರಪಂಚವು ತನ್ನ ಹೊದ್ದಲೀಯದ ಪರಿಯ ನೋಡಾ ಅಯ್ಯಾ. ಶರಣಂಗೆ ಈ ಬುದ್ಧಿಯ ಮತ್ಸ್ಯಂಗೆ ಆ ಬುದ್ಧಿಯ ನೀನು ಕಲಿಸಿದೆಯಲ್ಲ ಎನ್ನ ಕಪಿಲಸಿದ್ಧಮಲ್ಲಿನಾಥಯ್ಯಾ.

ಕಾಂಬುದು ಜೀವನಲ್ಲ, ಕಾಣಿಸಿಕೊಂಬುದು ಪರಮನಲ್ಲ, ಮುಟ್ಟಿಹರಿದಾಡುವುವು ಕರಣಂಗಳಲ್ಲ; ಸುಖವನನುಭವಿಸುವುವು ಇಂದ್ರಿಯಂಗಳಲ್ಲ. ಇಂತೀ ಭೇದಂಗಳಲ್ಲಿ ಆರೆಂಬುದ ತಿಳಿದು ಶಿವವೃಕ್ಷಕ್ಕೆ ನೀರನೆರೆದಡೆ ನೀರ ಕುಡಿವುದು ಬೇರೋ ಮರನೋ ವಿಶಾಲ ಬೆಳೆವ ಫಲವೋ ಎಂಬುದನರಿತಲ್ಲಿ ಅರಿದ ಅರಿಕೆಯ ನಿರಿಗೆಯ ಬಲ್ಲಾತನೆ ಕಮಠೇಶ್ವರಲಿಂಗ ತಾನಾದ ಶರಣ.

ಕರ್ತುವ ಭೃತ್ಯನ ವಾಸಕ್ಕೆ ಎಯ್ದಿದಲ್ಲಿ ಆತನ ಭಕ್ತಿಯನರಿತು ತಾನೊಡಗೂಡಿದಲ್ಲಿ ಆತ ಕೊಟ್ಟುದ ತಾ ಮುಟ್ಟದೆ, ಆತನಲ್ಲಿ ದುರ್ವಾಕ್ಯ ದುಶ್ಚರಿತ್ರ ಪಗಡಿ ಪರಿಹಾಸಂಗಳಂ ಮಾಡದೆ, ಆತನ ಚಿತ್ತ ನೋವಂತೆ ಮತ್ತಾವ ಬಂಧನದ ಕಷ್ಟವ

---

1. ಇದು ಅಗ್ಗವಣಿಯ ಹಂಪಯ್ಯನ ಅಂಕಿತವೆಂದು ಕಲವರು ಹೇಳುತ್ತಾರೆ

ನಿಕ್ಕದೆ, ಕೃತ್ಯ ಎನಗೊಂದು ಮಾಡೆಂಬ ನೇಮವ ಲಕ್ಷಿಸದೆ, ಆತ ತನ್ನ ತಾನ ಱಿದು ಮಾಡುವಲ್ಲಿ ಅದು ತನಗೆ ಮುನ್ನಿನ ಸೋಂಕೆಂಬುದನಱಿದು, ಗನ್ನಗತುಕಿನಿಂ ಬಿನ್ನಾಣದಿಂ ಬಂದುವ ಮುಟ್ಟದೆ, ಆ ಪ್ರಸನ್ನವಪ್ಪ ವಸ್ತು ಮಹವಾಗಿರುವ ಕಲ್ಲೇಶ್ವರ ಲಿಂಗವು ತಾನಾದ ಶರಣ.

ತನ್ನ ತಾನಱಿದಡೆ ತನ್ನಱಿವೇ ಗುರು, ತಾನೇ ಲಿಂಗ, ತನ್ನ ನಿಷ್ಪತ್ತಿಯೇ ಜಂಗಮ. ಇಂತೀತ್ರಿವಿಧವು ಒಂದಾದಡೆ ಕಾಮೇಶ್ವರಲಿಂಗವು ತಾನೆ.

ಪ್ರಭುವಿನ ವಾದದಿಂದ ವೈರಾಗ್ಯ ಸಂಪತ್ತು, ಬಸವನ ವಾದದಿಂದ ಭಕ್ತಿಯ ಸಂಪತ್ತು, ಚೆನ್ನಬಸವನ ವಾದದಿಂದ ಶಿವಪ್ರಸಾದದ ಸಂಪತ್ತು; ಮಡಿವಾಳಯ್ಯನ ವಾದದಿಂದ ಜ್ಞಾನದ ಸಂಪತ್ತು, ಸಕಳೇಶನ ವಾದದಿಂದ ಶಾಂತಿಯ ಸಂಪತ್ತು. ಮೋಳಿಗಯ್ಯನ ವಾದದಿಂದ ದಾಸೋಹದ ಸಂಪತ್ತು; ನೀಲಮ್ಮನ ವಾದದಿಂದ ಲಿಂಗಪೂಜೆಯ ಸಂಪತ್ತು, ನಾಗಮ್ಮನ ವಾದದಿಂದ ಮಹತ್ವ ಸಂಪತ್ತು. ಇದುಕಾರಣ ಕಿನ್ನರ ತ್ರಿಪುರಾಂತಕಲಿಂಗ ಸಾಕ್ಷಿಯಾಗಿ ಪ್ರಮಥರ ನುಡಿಯಲ್ಲಿ ಬೇಸಱ ಬೇಡದಿರು

ಕೂನ್ನು ಹೆಣ್ಣು ಮಣ್ಣು ಬಟ್ಟು ಮಂಡೆಯ ಬೋಳಿಸಿಕೊಂಡು ಬೋಳಾದ ಬಳಿಕ ನಿರಾಸಕ್ತನಾಗಿ ಶಿವಧ್ಯಾನ ಪರಾಯಣನಾಗಿಪ್ಪುದೀಗ ಪ್ರಥಮಬೋಳು; ಲಿಂಗಾಣತಿಯಿಂದ ಬಂದುದ ಕೈಕೊಂಡು ಲಿಂಗಸಾವಧಾನವಾಗಿಪ್ಪುದೀಗ ದ್ವಿತೀಯಬೋಳು; ಶರಣ ಸತಿ ಲಿಂಗ ಪತಿ ಎಂಬುಭಯವಳಿದು ಪರಮಾನಂದ ದಲ್ಲಿಪ್ಪುದೀಗ ತೃತೀಯಬೋಳು. ಬೋಳಿನ ಅನುವ ಕೂಡಲ ಚೆನ್ನ ಸಂಗಯ್ಯನಲ್ಲಿ ಅಲ್ಲಯ್ಯ ಬಲ್ಲ.

ದೇವರ ನೆನೆದು ಮುಕ್ತರಾದೆವೆಂದೆಂಬ ಯುಕ್ತಿಶೂನ್ಯರ ಮಾತು ಕೇಳಲಾಗದು. ಅದೇನುಕಾರಣವೆಂದೊಡೆ ದೇವರ ನೆನೆವವರಿಗೆ ದೇವರುಂಟೇ? ದೂರದಲ್ಲಿದ್ದವರ ನೆನೆವರಲ್ಲದೆ ಸಮೀಪದಲ್ಲಿದ್ದವರ ನೆನೆವರಿಲ್ಲ. ಇದನಱಿದು ನಿನ್ನೊಳಡಗಿದೆ ನಿನ್ನ ನೆನೆಯಲಿಲ್ಲ, ನೀನೆನಗೆ ಮುಕ್ತಿಯನೀಯಲಿಲ್ಲ, ನೀನಾನೆಂದೆನಲಿಲ್ಲ ಗಜೇಶ್ವರ.

ಕರಸ್ಥಲದಲ್ಲಿದ್ದ ಲಿಂಗವ ಬಿಟ್ಟು ಧರೆಯ ಮೇಲಣ ಪ್ರತಿಮೆಗೆ ಎರಗುವ ನಾಯಕ ನರಕಿಗಳನೇನೆಂಬೆನಯ್ಯಾ ಪರಮಗುರು ಶಾಂತಮಲ್ಲಿಕಾರ್ಜುನಾ.

ಇಲ್ಲದ ತತ್ತ್ವವ ಕೊಂಡು ಬಲ್ಲವರ ಬಾಯ ಹೊಗಳೋದಡೆ ಬಲ್ಲಬಲ್ಲರೆಲ್ಲಾ ಅಲ್ಲತ್ತತ್ತಗೊಳುತಿದ್ದರು. ಇದೆಲ್ಲಿಯ ತತ್ತ್ವವೆಂದು ತಿಳಿದು ವಿಚಾರಿಸಲು ಅದಲ್ಲಿಯೆ ಬಯಲಾಯಿತ್ತು ಗುರುಸಿದ್ಧಮಲ್ಲ.

ದಶವಾಯುಗಳ ತಮ್ಮ ವಶಕೆ ಹರಿಯಲೀಯದೆ ಊರ್ಧ್ವವಶಕೆ ಬಪ್ಪ ಪ್ರಣಮವಶನಾಗಿರಾ. ವಿಷಮಲೋಚನ ಘನಗುರು ಪ್ರಿಯ ಸೋಮನಾಥ ಎಸಳಿನಾ ದಳದೊಳಗೆ ಬೆಳಗುತಿಹನು.

ಉದಯದಲೆದ್ದು ಗಡಗಡನೆ ನಡುಗುತ ಹೋಗಿ ಹೂಗಿಡುವ ಪತ್ರೆಯ ಕಡಿವ ದೃಷ್ಟಗೇಡಿಗಳಿರಾ! ನೀವು ಕೇಳಿರಿ. ಅದು ಕಡುಪಾಪವಲ್ಲವೆ? ನಿಮಗೆ ನಡುಗಿರೋ. ಪರಧನ ಪರಸ್ತ್ರೀಯರಿಗೆ ನಡುಗಿರೋ. ಕೊಲೆಹುಸಿಕಳವು ಪರದಾರಕಾಂಕ್ಷೆಗೆ ನಡುಗಿರೋ. ಹರನಿಂದೆ ಗುರುನಿಂದೆ ಶಿವನಿಂದೆ ಕೇಳಲಾರೆವೆಂದು ನಡುಗಿರೋ. ಶಿವಾಚಾರಕ್ಕೆ ನಡುಗದೆ ಮಹಾಚಳಿಗೆ ನಡುಗಿ ಹೂವಿನ ಗಿಡುವ ತಿರಿವ ಕಡುಪಾಪಿಗಳಿರಾ! ನಿಮಗೆ ವ್ಯಡನ ಪೂಜೆ ಎಲ್ಲಿಯದು? ಇಲ್ಲ ನಿಮಗೆ ಅಖಂಡ ಪರಿಪೂರ್ಣ ಘನಲಿಂಗ ಗುರು ಚೆನ್ನಬಸವೇಶ್ವರ ಸಾಕ್ಷಿಯಾಗಿ.

ಕಂದಿಸಿ ಕುಂದಿಸಿ ಬಂಧಿಸಿ ನೋಯಿಸಿ ಕಂಡಕಂಡವರ ಬೇಡಿ ತಂದು ಮಾಡಿಹೆನೆಂಬುದು ದಂದುಗದೋಗರ; ಲಿಂಗನೈವೇದ್ಯಕ್ಕೆ ಸಲ್ಲದು. ತನು ಕರಗಿ ಮನ ಬಳಲಿ ಬಂದ ತೆಱದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ ದಾಸೋಹವ ಮಾಡುವುದೆ ಮಾಟ. ಕಾರೆಯ ಸೊಪ್ಪಾದಡೂ ಕಾಯಕದಿಂದ ಬಂದುದು ಲಿಂಗಕ್ಕರ್ಪಿತವಲ್ಲದೆ ದುರಾಶೆಯಿಂ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯದ್ರವ್ಯ ಚಂದೇಶ್ವರಲಿಂಗಕ್ಕೆ ನೈವೇದ್ಯ ಕೇಳಯ್ಯಾ.

ಸರ್ವಜೀವ ನಿನ್ನ ಹಾಹು ಎಂಬೆನೆ, ಅದು ಭಿನ್ನಭಾವ. ತ್ರಿಗುಣಾತ್ಮಕರುಂಟು. ಅವರು ನಿನಗನ್ಯರೆಂಬೆನೆ, ಆ ತ್ರಿಗುಣಾತ್ಮಕರು ನಿನ್ನ ತಿಲಾಂಶ. ಇಂತೀ ಸರ್ವಭೂತಕ್ಕೆ ನಿನ್ನ ದಯೆ ಎನಗಿದೇಕೆ? ಗೆಲ್ಲ ಸೋಲವೆಂಬ ಖುಲ್ಲತನ ಎಲ್ಲ ಜೀವಕ್ಕೂ

ಸರಿ. ಅರುಣೋದಯದಂತೆ ಎನ್ನ ಚಿತ್ತದಲ್ಲಿ ಸರ್ವಜೀವಕಕ್ಕೊ ದಯವ ಮಾಡು ಚೆನ್ನ ದಸರೇಶ್ವರಲಿಂಗಾ.

ಸುಖದ ಸುಖಿಗಳ ಸಂಭಾಷಣೆಯಿಂದ ದುಃಖ ವಿಶ್ರಾಮವಾಯಿತ್ತು. ಭಾವಕ್ಕೆ ಭಾವ ತಾರ್ಕಣೆಯಾದಲ್ಲಿ ನೆನಹಿಂಗೆ ವಿಶ್ರಾಮವಾಯಿತ್ತು. ಬೆಚ್ಚು ಬೆರಸಲೊಡನೆ ಮಚ್ಚು ಒಳಕೊಂಡಿತ್ತು ಚೆನ್ನಬಂಕನಾಥನ ಮಹೇಶ್ವರಂಗೆ.

ಇಷ್ಟಲಿಂಗ ಗುರುವಿನ ಹಂಗು; ಚಿತ್ತ ಕಾಮ್ಯದ ಹಂಗು; ಪೂಜೆ ಪುಣ್ಯ ಮಹಾದೇವನ ಹಂಗು; ಎನ್ನದಾಸೋಹ ಅರ ಹಂಗೂ ಇಲ್ಲ. ಚೆನ್ನಬಸವಣ್ಣಪ್ರಿಯ ಚಂಡೇಶ್ವರಲಿಂಗವೇ! ಕಣ್ಣಿಯ ಮಾಡಬಲ್ಲಡೆ ಬಾ ಎನ್ನ ತಂದೆ.

ಶಿಲೆ ಹಲವುತೆಜದಲ್ಲಿ ಹೊಲಬಿಗರಿಗೆ ಹೊಲಬಾಗಿ ಒಲವರವಿಲ್ಲದೆ ಅವರ ಭಾವದಲ್ಲಿ ನಿಲುವುದು ಶಿಲೆಯೋ ಮನವೋ? ಆ ನಿಜದ ನೆಲೆಯ ತಿಳಿವುದು. ದಳು ಣಾದ ತನ್ನೊಪ್ಪದ ಭಾವ ಎನ್ನಯ್ಯ ಚೆನ್ನರಾಮುನಸಟೆವಲ್ಲ.

ಪ್ರಾಣಲಿಂಗವೆಂಬುದೊಂದು ಮಾತಿನಂತುಟಲ್ಲ ನೋಡಾ. ಲೋಕದ ಸುಖದುಃಖ ತನ್ನದೆಂಬನಕ ಚೆನ್ನಸಿದ್ಧನಾಥನೆಂಬ ಲಿಂಗ ಬಟೆವೆ ಒಲವನೆ?

ವಾದ್ಯದೊಳಗಣ ನಾದದವೊಲು ಪಾಷಾಣದೊಳಗಣ ಪಾವಕನವೊಲ ಕಿಸಲಯದೊಳಗಣ ರಸದವೊಲು ಅಸಿಯ ಮೊನೆಯಲ್ಲಿ ತೋಱುವ ನಯಕುಸುಲ ವೊಲು ಮುಸುಕಿನೊಳಗೆ ತೋಱುವ ಆಕಾಶದ ಪ್ರತಿರೂಪಿನವೊಲು ಗಜಗತಿಯಂತೆ ಮಯೂರನಂತೆ ಉಲುಹಡಗಿದ ವೃಕ್ಷ ಬಯಲೊಳಡಗಿದ ನಾದದಂತೆ ಹೊಱಹೊಮ್ಮದ ಐಕ್ಯ. ಇಂತಿವಱಂದದಲ್ಲಿ ಸಂದ ಶರಣಂಗೆ ಸಂದೇಹಪರವಿಲ್ಲ ನಂದಗೋಪಿಯ ಕಂದಪ್ರಿಯ ನಿಸ್ಸಂಗಲಿಂಗರಾಮನಾಥ.

ಹುಟ್ಟಿಸುವಾತ ಬ್ರಹ್ಮನಾದಡೆ ಅರ್ಚಿಸಲೇಕೊ ನಿಮ್ಮನ? ರಕ್ಷಿಸುವಾತ ವಿಷ್ಣುವಾದಡೆ ಅರ್ಪಿಸಲೇಕೊ ನಿಮಗೊಂದುವ? ಕೊಂದಿಸುವಾತ ರುದ್ರನಾದಡೆ ಮಹತ್ವವ ನುಡಿಯಲೇಕೊ ನಿಮ್ಮವ? ಇಂತೀಲೀಲೆಗೆ ಆರಾದಡೂ ಆಗಲಿ, ನಾನಾ ಲೀಲೆಯವನಲ್ಲ, ಇದಱ ಕೊಳಹು ನೀನೆ ನಿಃಕಳಂಕ ಚೆನ್ನಮಲ್ಲಿಕಾರ್ಜುನಯ್ಯ.

ಅಯ್ಯಾ ನಿಮ್ಮ ಶರಣರ ಇರವು ಉರಿಯ ಕಯ್ಯ ದೀವಿಗೆಯಂತಿರ್ದಿತಯ್ಯ. ಅಯ್ಯಾ ನಿಮ್ಮ ಶರಣರ ಸುಳುಹು ಪವನನ ಕಯ್ಯ ಪರಿಮಳದಂತಿರ್ದಿತಯ್ಯ. ಹುತಾ

ಶನನೆಂಬ ಗದ್ದುಗೆಯ ಮೇಲೆ ಕಪ್ಪುರದರಸು ಕುಳ್ಳಿರಲು, ಅರಸು ಗದ್ದುಗೆಯ ನುಂಗಿದನೊ ಗದ್ದುಗೆ ಅರಸನ ನುಂಗಿತ್ತೊ ಎಂಬ ದೃಷ್ಟದಲ್ಲಿ, ಕಂಗಳ ಗದ್ದುಗೆಯ ಮೇಲೆ ಮಹಾಗುರುಲಿಂಗನೆಂಬರಸು ಕುಳ್ಳಿರಲು, ಲಿಂಗ ಕಂಗಳ ನುಂಗಿತ್ತೊ ಕಂಗಳು ಲಿಂಗನ ನುಂಗಿತ್ತೊ ಈ ಉಭಯವ ನುಂಗಿದ ಬೆಡಗಿನ ಬಿನ್ನಾಣವ ನಿಜಗುರು ಭೋಗೇಶ್ವರಾ ನಿಮ್ಮ ಶರಣರಲ್ಲಿಯೆ ಕಾಣಬಹುದು.

ಪರಿಪೂರ್ಣನಲ್ಲ ಪ್ರಾದೇಶಿಕನಲ್ಲ ನಿರುಶಯದೊಳತಿಶಯ ತಾ ಮುನ್ನಲ್ಲ. ಶರಣನೈಕ್ಯನಲ್ಲ ಪರಮನಲ್ಲ ಜೀವನಲ್ಲ ನಿರವಯನಲ್ಲ ಸಾವಯ ಬಲೆಕಲ್ಲ ಪರವಿಹ ವೆಂಬುಭಯದೊಳಗಲ್ಲ. ನಿಜಾಲಯ ನಿಜಗುರುಶಾಂತೇಶ್ವರನ ಶರಣನ ನಿಲುವು ಉಪಮೆಗೆ ತಾನನುಪಮ.

ಕಾಯವ ನಿಶ್ಚಯಿಸಲಿಲ್ಲ, ಜೀವವ ನಿಶ್ಚಯಿಸಲಿಲ್ಲ. ಕಾಯ ಜೀವಕ್ಕೆಂತು ನೆಲೆಯಿಲ್ಲವಯ್ಯ. ಸುಖವ ನಿಶ್ಚಯಿಸಲಿಲ್ಲ, ದುಃಖವ ನಿಶ್ಚಯಿಸಲಿಲ್ಲ. ಸುಖ ದುಃಖಗಳೆಂಬ ಪಕ್ಕೆಂತು ನೆಲೆಯಿಲ್ಲವಯ್ಯ. ರಾಜ್ಯವ ನಿಶ್ಚಯಿಸಲಿಲ್ಲ, ಲಕ್ಷ್ಮಿಯ ನಿಶ್ಚಯಿಸಲಿಲ್ಲ. ಅಭ್ರಚ್ಛಾಯ, ಮಾಯಾಮೋಹ, ಮಹೇಂದ್ರಜಾಲವೋ. ಎನ್ನದು ಮನೆ ಎನ್ನದು ಧನ ಎನ್ನದು ಸ್ತ್ರೀ ಎಂಬುದೆಲ್ಲವೂ ಕನಸಿನಲ್ಲಿ ಕಂಡ ಸಿರಿ ಕಣ್ಣು ತೆರೆದಡೆ ಹೋದಂತೆ. ಪಾಲುಳ್ಳಲ್ಲಿ ಮಾಡು. ಗಾಳಿ ಇದ್ದಲ್ಲಿ ತೂರಿಕೊಳ್ಳಿ. ಬಲೆಕಳೆಪದಕುಂನ ಪರಮಸುಖವು? ನಿಜಗುರುಸ್ವತಂತ್ರ ಕಪಿಲಸಿದ್ಧ ಮಲ್ಲೇಶ್ವರನಲ್ಲಿ ಹಲೆಗೋಲು ಪಡೆದಲ್ಲಿ ಕೊಳೆಯದಾಂಟಿಕೊಳ್ಳಿ ಭೋ.

ಶಿವನು ಜಗದ್ಭರಿತನೆಂದೆಂಬವರ ಬಾಯಲ್ಲಿ ಇಕ್ಕಿರೊ ಹನ್ನೆರಡುವರ್ಷದ ಹಳೆಯ ಪಾದರಕ್ಷೆಯನು. ಅದೇನು ಕಾರಣವೆಂದಡೆ, ಶಿವನು ಜಗದ್ಭರಿತನೆ? ಅಲ್ಲ ಶಿವನು ಜಗದ್ಭರಿತನಾದಡೆ ಜೀವಕ್ಕೆ ಜೀವ ಭಕ್ಷಿಸಲೇತಕೋ? ಶಿವನು ಜಗದ್ಭರಿತನಾದಡೆ ಪ್ರಾಣಕ್ಕೆ ಪ್ರಾಣ ವಿರೋಧಿಸಲೇತಕೋ? ಶಿವನು ಜಗದ್ಭರಿತ ನೆಂದಱಿದಡೆ ತಾನೆ ಗುರು ತಾನೆ ಲಿಂಗ ತಾನೆ ಜಂಗಮ ತಾನೆ ಪಾದೋದಕ ಪ್ರಸಾದಕಾಣಾ ನಿಸ್ಸಂಗನಿರಾಳಪ್ರಭುವೆ.

ಅಱಿವಿನ ಪ್ರಸಂಗಕೆ ಮಚ್ಚರವೇಕೆ? ಮಹಾನುಭಾವಿಗೆ ಮನ್ನಣೆಯ ಮಾಡ ರೆಂಬ ತೇಜದ ಶಿಷ್ಟತೆಯೇಕೆ? ತಾನು ತಾನಾದಮತ್ತೆ ತನಗೇನೂ ಅನ್ಯವಿಲ್ಲ ಎಂದ ಭೌಂಭೇಶ್ವರ

ಶಿವನೆ ನೀನು ಗುರುವಾದೆ, ಲಿಂಗವಾದೆ, ಜಂಗಮವಾದೆ, ಭಕ್ತನಾದೆ. ಗುರುವಾಗಿದ್ದು ಭಕ್ತನೊಳಡಗಿದೆ; ಲಿಂಗವಾಗಿದ್ದು ಭಕ್ತನೊಳಡಗಿದೆ; ಜಂಗಮವಾಗಿದ್ದು ಭಕ್ತನೊಳಡಗಿದೆ. ಇಂತಡಗುವರೇ ಹಿರಿಯರು, ಇಂತಡಗುವರೇ ಗರುವರು, ಇಂತಡಗುವರೇ ಮಹಿಮರು, ಇವರಿಗೆ ಭಾಜನವೊಂದೆ, ಭೋಜನವೊಂದೆ. ಈ ನಾಲ್ಕು ಒಂದಾದ ಘನಕ್ಕೆ ಪರಿಣಾಮ ಬೇರೆಂಬ ಶಾಸ್ತ್ರದ ಸೂತ್ರಗಳನೆನಗೆ ತೋರದಿರಾ ಮಸಣಯ್ಯಪ್ರಿಯ ಗಜೇಶ್ವರ.

ಅಷ್ಟತನುಮೂರ್ತಿ ಶಿವನೆಂಬ ಕಷ್ಟಜೀವಿಗಳ ಮಾತ ಕೇಳಲಾಗದು. ನಾನೇನೆಂಬೆನಯ್ಯಾ? ಯುಗಯುಗಪ್ರಳಯವಾಹಲ್ಲಿ ಧರೆ ಜಲದಲ್ಲಿ ಅಡಗಿತ್ತು, ಜಲ ಅಗ್ನಿಯಲ್ಲಿ ಅಡಗಿತ್ತು; ಅಗ್ನಿ ವಾಯುವಿನಲ್ಲಿ ಅಡಗಿತ್ತು; ವಾಯು ಆಕಾಶದಲ್ಲಿ ಅಡಗಿತ್ತು; ಆಕಾಶ ಅತೀತದಲ್ಲಿ ಅಡಗಿತ್ತು, ಅತೀತ ಆದಿಯೊಳಡಗಿತ್ತು; ಆದಿ ಅನಾದಿಯೊಳಡಗಿತ್ತು, ಅನಾದಿ ನಿಜದೊಳಡಗಿತ್ತು. ಇಂತೀ ಅಷ್ಟತನುಗಳು ಒಂದರೊಳಗೊಂದು ಅಡಗುವಲ್ಲಿ ಒಂದರಿಂದೊಂದು ಹುಟ್ಟುವಲ್ಲಿ ಎಂದಳಿದರೆಂಬುದ ಬಲ್ಲಡೆ ನೀವು ಹೇಳಿರೇ ಎಂದು ಹುಟ್ಟಿದರೆಂಬುದ ನೀವು ಬಲ್ಲಡೆ ಹೇಳಿರೇ. ಹುಟ್ಟಿದನಳಿದನೆಂಬ ಕಷ್ಟವಚನವ ನುಡಿಯಲಾಗದು. ಇಂತೀಯಷ್ಟತನುವೆಲ್ಲವು ನಮ್ಮ ಮಹಾಘನಲಿಂಗ ಹುಲಿಗೆರೆಯ ಸೋಮೇಶ್ವರ ಆಗೆಂದಡಾದುವು, ಬೇಡೆಂದಡೆ ಮಾದುವು.

ಕಾಯ ಲಿಂಗಾರ್ಪಿತವಾದಡೆ ಕರ್ಮವಿಲ್ಲ, ಜೀವ ಲಿಂಗಾರ್ಪಿತವಾದಡೆ ಜನಿತವಿಲ್ಲ; ಭಾವ ಲಿಂಗಾರ್ಪಿತವಾದಡೆ ಭ್ರಮೆಯಿಲ್ಲ. ಅಱಿವು ಲಿಂಗಾರ್ಪಿತವಾದ ಬಳಿಕ ಆ ಪ್ರಸಾದವ ಗ್ರಹಿಸಿದನಾಗಿ ಕುಱುಹು ಮುನ್ನಿಲ್ಲ. ಮಾಯಾಪ್ರಪಂಚವ ಸತಿಗಳೆದು ನಿಮಗರ್ಪಿಸಬಲ್ಲನಾಗಿ ಆತನೇ ಶರಣ. ಬಿಟ್ಟಂತೆ ಬೆರಸಿ ಅಚ್ಚೊತ್ತಿದಂತೆ, ಅಪ್ಪು ಒಳಕೊಂಡ ಆಲಿಕಲ್ಲಿನಂತೆ ಜ್ಯೋತಿಯುಂಡ ತೈಲದಂತೆ ಜಲ ಉಂಡ ಮುತ್ತಿನಂತೆ ಬಯಲುಂಡ ಬೆಳಗಿನಂತೆ ಇದ್ದರಾಗಿ ಮಹಾಘನಸದ್ಗುರು ಸಿದ್ಧ ಸೋಮನಾಥ ನಿಮ್ಮ ಶರಣರ ಹೆಸರಡಗಿದ ಲಿಂಗೈಕ್ಯರೆಂಬ.

ಸತ್ತು ಸಂಯೋಗದಿಂದೆ ಭಕ್ತಿರತಿಯು ಕೂಡಲು ಸಮತೆಯೆಂಬ ಬಸುಱಾಗಲು ಪರಿಣಾಮವೆಂಬ ಮಗ ಹುಟ್ಟಲು ರೇಕನಾಥಯ್ಯನೆಂದು ಹೆಸರಿಟ್ಟರು.

ಕಾಮಾವೇಶದಿಂದ ತೊಳಲಿತ್ತಯ್ಯಾ ಎನ್ನ ಕಾಯವು. ಆಶೆಯಿಂದ ಹೊದಕುಳಿಗೊಂಡಿತ್ತಯ್ಯಾ ಎನ್ನ ಮನವು. ಆಶೆಯೆಂಬ ಮಱವೆಯಲ್ಲಿ ಮನೆಮಾಡಿತ್ತಯ್ಯಾ ಎನ್ನ

ಪ್ರಾಣವು. ಆಶೆಯೆಂಬ ಹೊಡೆಗಿಚ್ಚಿನಲ್ಲಿ ಹೊಡೆದಾಡಿ ಸತ್ತಿತ್ತಯ್ಯ ಎನ್ನ ಭಾವವು. ಇನ್ನೆನಗೆ ಗತಿ ಪಥವ ತೋಱಿ ರಕ್ಷಿಸಯ್ಯ ಭವಪಾಶರಹಿತ ಪರಬ್ರಹ್ಮಮೂರ್ತಿ ಶ್ರೀ ಗುರುಲಿಂಗ ಜಂಗಮವೇ.

ಚತುರ್ವೇದದನುಭವವಮಾಡುವ ಜಂಗಮವೆಲ್ಲ ಬ್ರಹ್ಮನ ಸಂತತಿ. ಹದಿನೆಂಟು ಪುರಾಣದನುಭವ ಮಾಡುವ ಜಂಗಮವೆಲ್ಲ ವಿಷ್ಣುವಿನ ಸಂತತಿ. ಇಪ್ಪತ್ತೆಂಟು ದಿವ್ಯಾಗಮದನುಭವ ಮಾಡುವ ಜಂಗಮವೆಲ್ಲ ರುದ್ರನ ಸಂತತಿ. ಮೂವತ್ತೆರಡು ಉಪನಿಷದುಗಳನುಭವ ಮಾಡುವ ಜಂಗಮವೆಲ್ಲ ಈಶ್ವರನ ಸಂತತಿ. ಆಱುಶಾಸ್ತ್ರಗಳನುಭವ ಮಾಡುವ ಜಂಗಮವೆಲ್ಲ ಸದಾಶಿವನ ಸಂತತಿ. ಇಂತೀ ಎಲ್ಲ ಶಬ್ದವನು ಮುಚ್ಚಿ ಲಿಂಗದನುಭವವಮಾಡುವ ಜಂಗಮ ಘನ ನಿತ್ಯ ಕಾಣಾ ಶ್ರೀ ಜಂಗಮ ಲಿಂಗಪ್ರಭುವೆ .

ಅಯ್ಯಾ ಕೊಱಡು ಕೊನರಾಗಬಲ್ಲುದೆ? ಬಱಡು ಹಯನಾಗಬಲ್ಲುದೆ? ಕುರುಡಂಗೆ ಕನ್ನಡಿಯ ತೋಱಿದಡೆ ನೋಡಬಲ್ಲನೆ? ಮೂಗಂಗೆ ರಾಗವ ಹೇಳಿದಡೆ ಹಾಡಬಲ್ಲನೆ? ಲೋಗರಿಗ ಉಪದೇಶವ ಹೇಳಿದಡೆ ಶಿವಸತ್ಪಥದ ಹಾದಿಯ ಬಲ್ಲರೆ? ಇದು ಕಾರಣ ಶಿವಸತ್ಪಥದ ಆಗೆಂಬುದು ಶಿವಜ್ಞಾನ ಸಂಪನ್ನಂಗಲ್ಲದೆ ಸಾಧ್ಯವಲ್ಲ ಕಾಣಾ. ಅಸಾಧ್ಯ. ನಿರವಯಶೂನ್ಯವಸ್ತುವಿನೊಳಗಣ ಸತ್ಪಥಸೈಜ್ಜೈಕ್ಯವು ಅವಿವೇಕಿಗಳಿಗೆ ಅಳವಡುವುದೆ ನಿಮ್ಮವರಿಗಲ್ಲದೆ ಸಂಗನ ಬಸವಣ್ಣಾ?

ಗುರುವನಱಿತು ಮಾಡುವಲ್ಲಿ ಅಹಂಕಾರವ ಮಱೆದು ಮಾಡಬೇಕು; ಲಿಂಗವನಱಿತು ಮನ ಮುಟ್ಟಿದಲ್ಲಿ ಪ್ರಕೃತಿ ತಲೆದೋಱದಿರಬೇಕ ; ಜಂಗಮವನಱಿತು ಮುಟ್ಟಿ ಪೂಜಿಸುವಲ್ಲಿ ಅರ್ಥ ಪ್ರಾಣ ಅಭಿಮಾನ ಈ ಮೂಱಱಲ್ಲಿ ನಿಶ್ಚಯವಾಗಿರಬೇಕು, ಸಂಗನ ಬಸವಣ್ಣಪ್ರಿಯ ಚಂಡೇಶ್ವರಲಿಂಗವನಱಿಯಬಲ್ಲಡೆ.

ಕಾಳಿಕಾ, ಚಾಮುಂಡಿ, ಗಂಗೆ, ಗೌರಿ, ಬನಶಂಕರಿ, ಎಲ್ಲಿ, ಎಕ್ಕನಾದಿ, ಹುಲಿಗೆ. ಹೊಸೂರಿ, ಸತ್ತವರು, ಹೆತ್ತವರು ಇಂತೀ ಹಲವು ಪಿಶಾಚಗಳ ಹೆಸರಿಂದ ಇದಿರಿಟ್ಟು ಆರಾಧಿಸಿ ಅವರ ನೈವೇದ್ಯವೆಂದು ಶ್ರೀಗುರುವಿತ್ತ ಲಿಂಗಕ್ಕೆ ತೋಱಿ ಭುಂಜಿಸುವ ಶಿವದ್ರೋಹಿಗಳಿಗೆ ಗುರುವಿಲ್ಲ ಲಿಂಗವಿಲ್ಲ ಜಂಗಮಪಾದೋದಕ ಪ್ರಸಾದವಿಲ್ಲ ಕಾಣಾ ಸಂಗನ ಬಸವೇಶ್ವರಾ.

ಒಡೆಯರಿಂಗೊಡವೆಯನೊಪ್ಪಿಸಿ ಶುದ್ಧನು | ಎಡೆಯೊಳಗಾವೂದಿದುದಿಲ್ಲೆಂದಡೆ |
ದೊಡಲವಗುಣವಡಗಿಸಿ ನಿರಹಂಭಾವದೊಳಗೆ ಸಲೆ ಸಂದು ||
ಮೃಡಶರಣರುಗಳ ಕಂಡವರಡಿಗಳ | ಪಿಡಿದು ಸದಾಸುಖಿಯಾಗಿರ್ಪರ ಮೆ |
ಲ್ಲಡಿಗಳೊಳಗೆ ಹಾವುಗೆಯಾಗಿರಿಸೆನ್ನನು ಸಂಗಪ್ರಭುವೇ ||

ಅಡಿಗಡಿಗೆ ಬಂದು ಅಡರುತ್ತಿಪ್ಪೆ ಕಡುಚಲ ನಿನಗೆ ಬೇಡ ಕಂಡೆಯಾ. ಮೃಡನೆ ಎನ್ನೊಡನೆ ತೊಡರಿ ನೀನು ಸಸಿನೆ ಹೋಗಲರಿಯೆ. ಅದು ಹೇಗೆಂದಡೆ ನಾನು ನಿನಗಂಜುವನಲ್ಲ. ಗಾಸಿಯಾಗಬೇಡ ಕಂಡೆಯಾ. ಹರಹರಾ! ಶಂಕರಾ! ಎನ್ನ ನೇಮಕ್ಕೆ ಅಡ್ಡಬಾರದಿರು. ಒಡವೆ ಸವೆದಡೆ ಒಡಲನೊಡ್ಡುವೆ, ಕಡಗಿ ನೋಡುವಡೊಮ್ಮೆ ಹಿಡಿಚು. ಬಂದು ಬಡವನ ಕೈಯ ಕಡುಹ ನೋಡೆನ್ನೊಡೆಯ ಸಂಗಯ್ಯಪ್ರಿಯ ಬಂಕೇಶ್ವರಾ.

ತನುವಿಡಿದು ದಾಸೋಹವ ಮಾಡಿ ಗುರುಪ್ರಸಾದಿಯಾದ ಬಸವಣ್ಣ. ಮನ ವಿಡಿದು ದಾಸೋಹವ ಮಾಡಿ ಲಿಂಗಪ್ರಸಾದಿಯಾದ ಬಸವಣ್ಣ. ಧನವಿಡಿದು ದಾಸೋಹವ ಮಾಡಿ ಜಂಗಮಪ್ರಸಾದಿಯಾದ ಬಸವಣ್ಣ. ಇಂತೀ ತ್ರಿವಿಧ ವಿಡಿದು ದಾಸೋಹವ ಮಾಡಿ ಸದ್ಗುರು ಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸವಣ್ಣ ಸ್ವಯ ಪ್ರಸಾದಿಯಾದನಯ್ಯಾ.

ಶಿವನೆ ಅಧಿಕನು ಶಿವಭಕ್ತನೆ ಕುಲಜನು ಶಿವನ ಪ್ರಸಾದದಿಂದಧಿಕವಾವುದಿ ಲ್ಲೆಂದುದು ಶ್ರುತಿ ಇದನರಿತು ಸದ್ಗುರು ಶಂಭುಸೋಮೇಶ್ವರನ ಭಜಿಸಿ ಪ್ರಸಾದವ ಸೇವನೆಯ ಮಾಡದಿರಲು ಅಘೋರನರಕ ತಪ್ಪದು.

ಶಿವನ ನೆನೆದಡೆ ಭವಹರವಹುದೆಂಬ ವಿವರಗೇಡಿಗಳ ಮಾತ ಕೇಳಲಾಗದು ಅದೇನುಕಾರಣವೆಂದಡೆ—ಜ್ಯೋತಿಯ ನೆನೆದಡೆ ಕತ್ತಲೆ ಹರೆವುದೆ? ಮೃಷ್ಟಾನ್ನವ ನೆನೆದಡೆ ಹೊಟ್ಟೆ ತುಂಬುವುದೆ? ರಂಭೆಯ ನೆನೆದಡೆ ಕಾಮದ ಕಳವಳವು ಹಿಂಗು ವುದೆ? ನೆನೆದಡಾಗದು. ನಿರ್ಧರಿಸಿ ದ್ವಯಕುಳವಳಿದು ಬೆರಸಬಲ್ಲಡೆ ಸದ್ಗುರು ಸಿದ್ಧಸೋಮೇಶ್ವರಲಿಂಗವು ತಾನೆ.

ಜ್ಞಾನದಲ್ಲಿ ಅರಿದಡೇನಯ್ಯ ಸತ್ಕ್ರಿಯಾಚಾರ ಸಂದನಕ? ನೆನೆದಮಾತ್ರ ದಲ್ಲಿ ಕಾಂಬುದೆ ಕಾರ್ಯದಲಲ್ಲದೆ? ಕುರುಡ ಕಾಣ ಪಥವ, ಹೆಳವ ನಡೆಯಲರಿಯ,

ಒಂದಿಲ್ಲದಿದ್ದರೆ ಒಂದಾಗದು. ಜ್ಞಾನವಿಲ್ಲದ ಕ್ರಿಯೆ ಜಡನು; ಕ್ರಿಯೆಯಿಲ್ಲದ ಜ್ಞಾನ ಭ್ರಾಂತು. ಇದು ಕಾರಣ ಸಿದ್ಧಸೋಮನಾಥನಲ್ಲಿ ಎರಡೂ ಬೇಕು.

ಉಷ್ಣತೆಯು ಒಚಿತೆಯಂತೆ ಉರಿಯು ನೆಬಿಲಂತೆ ಮಂಜಿನ ಮಷೆಯಂತೆ ಬಿಸಿಲ ಕುದುರೆಯಂತೆ ಬೆಟ್ಟದ ಶಬ್ದದಂತೆ ಸುಜೀವ ಸಿದ್ಧಸೋಮನಾಥಲಿಂಗ ನಿಮ್ಮ ಶರಣ.

ಉರಿ ಕರ್ಪ್ಪುರವ ಸೋಂಕಿದಂತೆನ್ನೊಳು ಬೆರಸಿರ್ಪ ಮಹಾಘನವನು ತೋಱಿ ಪರಮಸುಖದೊಳಗಿರಿಸಿದ ಸಿದ್ಧಸೋಮೇಶ ಕರುಣಾಮೃತಗುರುವೆ ಶರಣು.

ದಶದಿಕ್ಕು ಸಚರಾಚರದೊಳಗೆಲ್ಲ ವಿಚರಿಸಿ ನೋಡಲು ತನ್ಮಯು. ಅಪರಾಪರ ಹಂಸೆಯು ವಿರುಪಯ್ಯನಲ್ಲದಿಲ್ಲವೆಂದು ಶ್ರುತಿ ಸಾಱುತಿವೆ.

ಆದಂತೆ ಆಗಲಿ ಮಾದಂತೆ ಮಾಣಲಿ ಎನಲಾಗದು. ನೇಮದಾತಂಗೆ ಚಲ ಬೇಕು, ಚಲ ಬೇಕಯ್ಯ. ಹಿಡಿದುದ ಬಿಡಲಾಗದು. ಹುಲಿಗೆಱೆಯ ವರದ ಸೋಮನಾಥನ ಮನಮುಟ್ಟಿದ ಧೀರನು ಎತಕ್ಕೂ ಸೋಲುವನಲ್ಲ.

ಮಾಯಾಸಂಗ್ರಹಮಲವ ತೊಳೆದು ನಿರ್ಮಾಯಸ್ವರೂಪವನೆಯ್ದಿಸಿ ಕಾವುದು ಹುಲಿಗೆಱೆಯ ವರದಸೋಮೇಶನ ಅಕ್ಷಯಾನಂದಪಾದೋದಕ.

ಇನ್ನೂ ಕೆಲವು ಅಂಕಿತಗಳು ದೊರೆತಿವೆ, ಆದರೆ ಇವುಗಳುಳ್ಳ ವಚನಗಳು ಸದ್ಯಃ ಸಿಕ್ಕಿಲ್ಲ. ಈ ಅಂಕಿತಗಳನ್ನು ವರ್ಣಾನುಕ್ರಮದಲ್ಲಿ ಕೆಳಗೆ ಕಾಣಿಸುತ್ತೇವೆ:—ಕದಂಬಕಲಶ ಕೂಡಲ ಚೆನ್ನಸಂಗ, ಕುಮಾರಸಂಗ, ಗುರುವರದ ವಿರೂಪಾಕ್ಷ, ಗುಹೇಶ್ವರಲಿಂಗ + ಸಂಗನ ಬಸವಣ್ಣ, ಚೆನ್ನಬಂಕನಾಥ, ನಿಜಲಿಂಗೈಕ್ಯ ನಿಃಕಳಂಕ ನಿರ್ಮಾಯಪ್ರಭುವೇ, ಬಸವಣ್ಣ ಪ್ರಿಯ ನಿಃಕಳಂಕ ಸೋಮೇಶ್ವರ, ಬಾಲಸಂಗಯ್ಯ ಪ್ರಿಯ ಕೂಡಲಸಂಗಮದೇವ, ಮತ್ಪ್ರಾಣನಾಥ ಮಹಾಶ್ರೀ ಗುರುಸಿದ್ಧಲಿಂಗೇಶ್ವರ, ಮಾರಿದಮಹಾಲಿಂಗ, ಶಂಭುಭುಜಂಗೇಶ್ವರ ಲಿಂಗ, ಶಿವತಂತ್ರ ಗುರುಶಾಂತೇಶ್ವರ, ಹುಲಿಗೆರೆಯ ಸೋಮೇಶ್ವರ.

---

ಇದುವರೆಗೆ ವಚನಕಾರರ ವಿಷಯವನ್ನೆಲ್ಲಾ ಒಂದೇ ಕಡೆ ಸೇರಿಸಿ ಹೇಳಿದುದಾಯಿತು. ಇನ್ನು ಮುಂದೆ ಕೆಲವು ಬೇರೆ ವಿಷಯಗಳನ್ನು ಹೇಳುತ್ತೇವೆ :—

## ಶ್ರೀಕಂಠಸೂರಿ. 1099.

ಈತನು ಬಳ್ಳಾರಿಜಿಲ್ಲೆಗೆ ಸೇರಿದ ಕುರುವತ್ತಿಯಲ್ಲಿರುವ ಒಂದು ಶಾಸನವನ್ನು ಬರೆದುದಾಗಿ ಆಶಾಸನದ ಕೊನೆಯಲ್ಲಿರುವ

ವಿದ್ಯಾವಧೂಶ್ರವಣಭಾಸುರಕರ್ಣಪೂರಃ ಶ್ರೀಕಾಳಿದಾಸವಿಬುಧಾಧಿಪತೇಸ್ತನೂಜಃ|
ಸೋಮೇಶಶಾಸನವಚೋರಚನಾಂ ವಿಧಾಯ ಶ್ರೀಕಂಠಸೂರಿರಲಿಖದ್ವಿಬುಧೈರ್ವಿ
[ಚಾರ್ಯ್ಯಂ ||

ಎಂಬ ಪದ್ಯದಿಂದ ತಿಳಿಯುತ್ತದೆ.[1] ಇವನು ಬ್ರಾಹ್ಮಣಕವಿ; ಕಾಳಿದಾಸನ ಮಗನು. ಈ ಶಾಸನವು ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ 1099ರಲ್ಲಿ ಹುಟ್ಟಿದೆ. ಇದರಲ್ಲಿ ಕುರುವತ್ತಿಯ ಇನ್ನೂರ್ವರೂ ಅಲ್ಲಿಯ ಅಧಿಪತಿಯಾದ ಕಾಳಿದಾಸನೂ ಅಭಿನವ ಸೋಮೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಒಂದೆರಡುಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ಕಾಳಿದಾಸ.

ಪರಹಿತದೊಳ್ ವಿದ್ಯಾಧರ | ಪರಿವೃಢನಂ ಸ್ವಾಮಿಭಕ್ತಿಯೊಳ್ ಪವನಜನಂ |
ಪರಮೌದಾರ್ಯ್ಯದೊಳಂಗೇ | ಶ್ವರನನಧಃಕರಿಸಿ ಕಾಳಿದಾಸಂ ನೆಗಳ್ದಂ ||

ಕುರುವತ್ತಿಯ ಇನ್ನೂರ್ವರು.

ಶರಣಾಯಾತಜನಕ್ಕೆ ವಜ್ರಕವಚಂ ಮಾಹಾಂತ ವೀರಂಗೆ ಕೇ |
ಸರಿ ಬಾಯ್ವಿಟ್ಟರೆದಂಗೆ ಕಲ್ಪಮಹಿಜಂ ಶಾಸ್ತ್ರಕ್ಕೆ ತಾನಾಸ್ಪದಂ ||
ಪುರುಷಾರ್ಥಕ್ಕೆ ತವರ್ ಶ್ರುತಿಸ್ಮೃತಿಗೆ ತಾಂ ಲೀಲಾಗೃಹಂ ಧರ್ಮದಾ |
ಕರಮೆಂತೀಕುರುವರ್ತಿವರ್ತಿ ಮಹಿದೇವಾನೀಕಮಿನ್ನೂರ್ವರುಂ ||

## ಭಾಸ್ಕರ. 1127.

ಈತನು ನಿಜಾಂ ಸರಕಾರಕ್ಕೆ ಸೇರಿದ ಪಟ್ಟನಚೆರುವು ಎಂಬ ಗ್ರಾಮದಲ್ಲಿರುವ ಒಂದು ಶಾಸನವನ್ನು ಬರೆದುದಾಗಿ ಆ ಶಾಸನದ ಅಂತ್ಯದಲ್ಲಿರುವ

1. *Archæological Survey of India*, Memoir 13, p. 9.

ನಿರತಿಶಯೋನ್ನತಮತಿ ಭಾ | ಸ್ಕರ ಸರಸಕವೀಂದ್ರರಚಿತ ಶಾಸನಮಂ ಬಿ |
ತ್ತರದಿಂ ಪ್ರತಿಕಂಠಂ ಸಾ | ಕ್ಷರನಿಳಯಂ ತಿದ್ದಿ ಭಾಸ್ಕರಯ್ಯಂ ಬರೆದಂ ||

ಎಂಬ ಪದ್ಯದಿಂದ ತಿಳಿಯುತ್ತದೆ[1] ಅಲ್ಲದೆ ಇವನು ಬರೆದುದನ್ನು ಭಾಸ್ಕರಯ್ಯನೆಂಬವನು ತಿದ್ದಿ ಬರೆದಂತೆಯೂ ತಿಳಿಯುತ್ತದೆ. ಭಾಸ್ಕರನು ಬ್ರಾಹ್ಮಣಕವಿಯೆಂದು ತೋರುತ್ತದೆ. ಈ ಶಾಸನವು ಚಾಳುಕ್ಯರಾಜನಾದ ಭೂಲೋಕಮಲ್ಲ ಸೋಮೇಶ್ವರನ ಆಳಿಕೆಯಲ್ಲಿ 1127ರಲ್ಲಿ ಹುಟ್ಟಿದೆ. ಇದರಲ್ಲಿ ದೊರೆ ತನ್ನ ಪಟ್ಟಬಂಧೋತ್ಸವಸಮಯದಲ್ಲಿ ನನ್ನಯಭಟ್ಟನಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ. ಈ ಶಾಸನದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ತೈಲಪ.

ಶ್ರೀಮಚ್ಚಾಳುಕ್ಯವಂಶೋದ್ಭವನನುಪಮಿತೋದ್ಯದ್ಭುಜಾದಂಡಶೌರ್ಯೋ |
ದ್ದಾಮಂ ವೀರಾರಿಭೂಭೃತ್ತ್ರಕರನಿಶಿತವಜ್ರಾಯುಧಂ ಕ್ಷತ್ರವಿದ್ಯಾ ||
ಧಾಮಂ ರಟ್ಟಾನ್ವವಾಯ ಪ್ರಬಳತರತಮಸ್ತೋಮಮಾರ್ತಾಂಡತೇಜ |
ಸ್ತೋಮಂ ತಾನೆಂಬಿನಂ ಮಿಕ್ಕೆಸೆದನಸದಳಂ ತೈಲಪಕ್ಷೋಣಿಪಾಳಂ ||
ಮೊಳೆವೆತ್ತಿತ್ತಿದ ತೋಳ ಬಾಳ ಬಳದಿಂ ಮೆಯ್ಗೊಂಡಮಿತ್ರಾಂಗನಾ |
ಕುಳಬಾಷ್ಪದ್ರವದಿಂ ತಳಿರ್ತು ರಿಪುಸೇನಾಚಕ್ರರಕ್ತಾಂಬುವಿಂ ||
ಬಳೆದತ್ತೀಗಳುಪಾಹಿತಾಹಿತಗಳಕ್ಕಾಳಿಂಗಮಾತಂಗಸಂ |
ಕುಳದಾನಪ್ಲವದಿಂ ಪರಾಕ್ರಮವನಂ ಭೂಲೋಕಮಲ್ಲಾಂಕನಾ ||

[ಪ್ರ. ಸಂಪುಟ 155] ಮಧುಸೂದನದೇವ. 1148.

ಈತನು ಬಳ್ಳಾರಿ ಜಿಲ್ಲೆಯ ಹಡಗಳ್ಳಿ ತಾಲ್ಲೂಕಿನ ಕೊಟ್ಟಕಲ್ಲಿನಲ್ಲಿಯೂ ಒಂದು ಶಾಸನವನ್ನು ಬರೆದಿದ್ದಾನೆ.[2] ಇದು ಚಾಳುಕ್ಯರಾಜನಾದ 2ನೆಯ ಜಗದೇಕಮಲ್ಲನ ಆಳಿಕೆಯಲ್ಲಿ 1148 ರಲ್ಲಿ ಹುಟ್ಟಿದೆ. ಇದರಲ್ಲಿ ಈ ರಾಜನ ಸಾಮಂತ ವೀರಪಾಂಡ್ಯನ ಮಾತುಲನಾದ ವಿಕ್ರ

1. *Archæological Survey of India,* Memoir 13, p. 12.
2. *Ibid.* p. 10.

ಮಾದಿತ್ಯನು ಸ್ವಯಂಭು ಕೋಟಿ ಶಂಕರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

## ವಿಕ್ರಮಾದಿತ್ಯ.

ವಿನಯಾಂಭೋನಿಧಿಯೆಂದು ಧರ್ಮಪರನೆಂದುದ್ದಾಮಪುಣ್ಯೈಕಭಾ |
ಜನನೆಂದುರ್ವರೆ ಬಣ್ಣಿಕುಂ ವಿಬುಧವಕ್ತ್ರೇಂದೀವರಾದಿತ್ಯನಂ ||
ತನುವಿಂ ನಿತ್ಯನನುದ್ಘಸತ್ಯನನಶೇಷೋರ್ವೀತಳಸ್ತುತ್ಯನಂ |
ಮನುಸಾಹಿತ್ಯನನಲ್ಕಿಜೀಂಪೆ ಸತತಂ ಶ್ರೀವಿಕ್ರಮಾದಿತ್ಯನಂ ||
ಆಯುದೊಳ್ ವಿಕ್ರಮದೊಳ್ ಪರೋಪಕೃತಿಯೊಳ್ ವಿಖ್ಯಾತಿಯೊಳ್ [ನೀತಿಯೊಳ್ |
ದಯೆಯೊಳ್ ಧರ್ಮದೊಳರ್ಪಿನೊಳ್ ವಿನಯದೊಳ್ ಸಂಶುದ್ಧಿಯೊಳ್ [ಬುದ್ಧಿಯೊಳ್ ||
ನಿಯತಂ ತನ್ನವೊಲನ್ಯರಾರನೆ ಜಗಂ ಜೀಯೆಂಬಿನಂ ಸಂತತೋ |
ದಯಮಂ ತಾಳ್ದಿದ ಪೆರ್ಮೆ ನೂರ್ಮಡಿ ವಲಂ ಶ್ರೀವಿಕ್ರಮಾದಿತ್ಯನಾ ||
ಜನತಾಸಂಸ್ತುತಮಾದನೇಕಗುಣದಿಂ ಶ್ರೀವಿಕ್ರಮಾದಿತ್ಯದೇ |
ವನೊಳಿಂತೀ ಕಲಿಕಾಲಕಲ್ಮಷಮಹೀಸಂಶ್ಲಿಷ್ಟರಂ ಪೋಲಿಪೆ ||
ಗ್ಗನೊಳೇನುನ್ನತಸತ್ವಸಂಪದದೊಳಾರಿಂದಗ್ಗಳಂ ನೋಲ್ಪೊಡಂ |
ಬಿನೆಗಂ ತಾಳ್ದಿದನತ್ಯುದಾತ್ತಚರಿತಂ ದಿಗ್ವರ್ತಿಸತ್ಕೀರ್ತಿಯಂ ||
ಸ್ಥಿರತೇಜೋಜಾಳಮೆಂಟುಂ ದೆಸೆಗೆ ಪಸರಿಸಲ್ ವೈರಿವೀರಾಂಧಕಾರಂ |
ಪರೆದೋಡಲ್ಕಾನತಾಸ್ಯಾಂಬುರುಹವನಮುದಾನಂದಮಂ ತಾಳ್ದೆ ವಿದ್ವಿ ||
ಟ್ತರುಣೀನೇತ್ರೋತ್ಪಳಂಗಳ್ ಕೊರಗೆ ನಿಜಚಮೂಚಕ್ರವಾಕೋತ್ಕರಂ ರಾ |
ಗರಸಾಂಭೋರಾಶಿಯೊಳ್ ನರ್ತಿಸೆ ಧರೆಗೆಸೆವಂ ವಿಕ್ರಮಾದಿತ್ಯದೇವಂ ||
ಪರಮಂ ಶ್ರೀವಿಕ್ರಮಾದಿತ್ಯರಸ ನಿನಗೆ ದೀರ್ಘಾಯುವಂ ಶ್ರೀಯುಮಂ ಶಂ |
ಕರನತ್ಯಾನಂದದಿಂದಂ ಕುಡುಗಮರಸರಿದ್ವಾರಿಪೂತೋಚ್ಚಳಚ್ಛೀ ||
ಕರತಾ (ರಾ) ಧಾರಚಂಚತ್ತರುಣಶಶಿಕಳಾಕಾಂತಿಸಂತಾನಶೋಭಾ |
ಕರಮಂಜತ್ತುಂಗಪಿಂಗದ್ಯುತಿವಿಕಟಜಟಾಜೂಟಕೋಟೀರಭಾರಂ ||

(ದ್ವಿ. ಸಂಪುಟ 346) ಗಣದಾಸಿ ವೀರಣ್ಣ. ಸು. 1160.

ಈತನ ಹೆಸರು ಗಣಸಹಸ್ರನಾಮದ (ಪ್ರ.ಸಂಪುಟ 294) ಅಮರ ಗಣದಲ್ಲಿ ಪಠಿತವಾಗಿರುವುದರಿಂದ ಇವನು ಬಸವನ ಸಮಕಾಲದವನು. ಇವನ ಕಾಲವು ಸುಮಾರು 1160 ಆಗಿರಬೇಕು.

(ಪ್ರ. ಸಂಪುಟ 246) ತ್ರಿಭುವನತಾತ. ಸು. 1165.

ಈತನು ಗುರುರಗಳೆಯನ್ನು ಬರೆದಿರುವುದಾಗಿ ಶಾಂತಮಲ್ಲನು (ದ್ವಿ. ಸಂಪುಟ 390) ಇದಕ್ಕೆ ತಾನು ಬರೆದಿರುವ ಟೀಕೆಯ ಅಂತ್ಯದಲ್ಲಿಯ

ಧರೆಯೊಳ್ ತ್ರಿಭುವನತಾತಂ | ಗುರುವಿಂದುಪದೇಶವಾಗುವಾಗಳ್ ರಗಳೆಯ |
ಬರೆದು ನಿಜಮುಕ್ತನಾದಂ | ಭರದಿಂ ಪಠಿಸಿದರ್ಗೆ ಭೋಗಮೋಕ್ಷಗಳಕ್ಕುಂ ||

ಎಂಬ ಪದ್ಯದಲ್ಲಿ ಹೇಳುತ್ತಾನೆ ಈ ರಗಳೆಯಿಂದ ಸ್ವಲ್ಪ ಭಾಗವನ್ನು ಉದಾಹರಿಸುತ್ತೇವೆ —

ಆಳಿನಪಮಾನನಾಳ್ದಂಗಯ್ಯ ಗುರು ಶರಣು |
ಕಾಲಕರ್ಮಗಳೆನ್ನ ಕಾಡುತಿವೆ ಗುರು ಶರಣು ||
ಶೂಲಪಾಣಿಯು ನೀವು ಬಿಡಿಸಯ್ಯ ಗುರು ಶರಣು |
ಮೇಲೆ ನೀವಲ್ಲದಿನ್ನಾರಯ್ಯ ಗುರು ಶರಣು ||

285ನೆಯ ಪುಟವನ್ನು ನೋಡಿ ಅಲ್ಲಿ ಕೊಟ್ಟಿರುವ ಕಾಲವು ತಪ್ಪಾಗಿದೆ.

ಭಾಸ್ಕರ. 1186

ಇವನು ಬಳ್ಳಾರಿಜಿಲ್ಲೆಯ ನಂದನರವೆಂಬ ಗ್ರಾಮದಲ್ಲಿರುವ ಒಂದು ಶಾಸನವನ್ನು ಬರೆದಿರುವುದಾಗಿ ಆ ಶಾಸನದ ಅಂತ್ಯಭಾಗದಿಂದ ತಿಳಿಯುತ್ತದೆ.[1] ಈತನು ಬ್ರಾಹ್ಮಣಕವಿಯೆಂದು ತೋರುತ್ತದೆ ಇವನಿಗೆ ಕುಕವಿಮುಖಮುದ್ರ, ಸುಕವಿಪದ್ಮಪ್ರಭಾಕರ ಎಂಬ ವಿಶೇಷಣಗಳು ಹೇಳಿವೆ ಈ ಶಾಸನವು ಚಾಳುಕ್ಯರಾಜನಾದ 4 ನೆಯ ಸೋಮೇ

1. *Archæological Survey of India*, Memoir 13, p. 13,

ಶ್ವರನ ಆಳಿಕೆಯಲ್ಲಿ 1186ರಲ್ಲಿ ಬರೆದುದು. ಇದರಲ್ಲಿ ಸೋಮೇಶ್ವರನ ದಂಡನಾಯಕ ಮಾಳಪರಸನು ನಂದಾಪುರದ ಮಲ್ಲಿಕಾರ್ಜುನದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಇದರಿಂದ ಒಂದು ಪದ್ಯವನ್ನು ತೆಗೆದು ಬರೆಯುತ್ತೇವೆ :—

ಮಾಳಪರಸ.

ಪವನಪಥದಂತುಪಾಶ್ರಿತ | ಕವಿರಾಜನನಂತನಂತೆ ಬಹುಭೋಗಧರಂ |
ದಿವಸಕರನಂತೆ ತೇಜೋ | ಭವನು ಮಾಳಪಚಮೂಪನೆಸೆವಂ ಧರೆಯೊಳ್ ||

(ಪ್ರ. ಸಂಪುಟ 122) ರಾಜಾದಿತ್ಯ. ಸು 1190.

ಇವನ ವ್ಯವಹಾರಗಣಿತದ ಒಂದು ಪ್ರತಿಯಲ್ಲಿ ಸೇವುಣರಾಜನಾದ ಭಿಲ್ಲಮನ (1187-1191) ಹೆಸರನ್ನು ಹೇಳುವ ಪದ್ಯಗಳಿರುವುದಾಗಿ ಈಚೆಗೆ ತಿಳಿದುಬಂದಿರುವುದರಿಂದ ಈ ಕವಿಯ ಕಾಲವನ್ನು ಸು. 1120 ರಿಂದ ಸು. 1190ಕ್ಕೆ ತರಬೇಕಾಗುತ್ತದೆ.

(ಪ್ರ. ಸಂಪುಟ 427) ಮಧುರ. 1410.

ಈತನು ಹಂಪೆಯ ಸಮೀಪದಲ್ಲಿ ಕೃಷ್ಣದೇವಸ್ಥಾನದ ಬಳಿ ಇರುವ ಒಂದು ಶಾಸನವನ್ನು ಬರೆದಂತೆ ಆ ಶಾಸನದ ಕೊನೆಯ ಪದ್ಯದಿಂದ ತಿಳಿಯುತ್ತದೆ.[1] ಈ ಶಾಸನವು ವಿಜಯನಗರದ ರಾಜನಾದ 1ನೆಯ ದೇವರಾಯನ ಆಳಿಕೆಯಲ್ಲಿ 1410ರಲ್ಲಿ ಹುಟ್ಟಿದುದು. ಇದರಲ್ಲಿ ರಾಜನ ಮಂತ್ರಿಯಾದ ಲಕ್ಷ್ಮೀಧರನು ಮಾಲ್ಯವತ್ಪರ್ವತದ ಬಳಿ ಗಣೇಶ ಪ್ರತಿಷ್ಠೆಯನ್ನು ಮಾಡಿದಂತೆ ಹೇಳಿದೆ. ಈ ಶಾಸನದಿಂದ ಮಧುರನು ಹರಿಹರರಾಜನಕಾಲವಾದ ಮೇಲೆ ದೇವರಾಯನ ಆಳಿಕೆಯಲ್ಲಿಯೂ ಇದ್ದನೆಂದೂ ಆ ದೊರೆಯ ಮಂತ್ರಿಯಾದ ಲಕ್ಷ್ಮೀಧರನ ಆಶ್ರಿತನಾಗಿದ್ದನೆಂದೂ ತಿಳಿಯುತ್ತದೆ. ಈ ಲಕ್ಷ್ಮೀಧರನು ಮಧುರನಿಗೆ ಸುಕ್ಷೇತ್ರ ಹಸ್ತ್ಯಶ್ವಭೂಷಾದಿಗಳನ್ನು ಕೊಟ್ಟು ಗೌರವಿಸಿದಂತೆ ತಿಳಿಯಬರುತ್ತದೆ. ಅಲ್ಲದೆ ಮಧುರನು ದೊರೆಗೆ ಪ್ರಾಣಾಪಾಯವುಂಟಾಗಿದ್ದಾಗ

1. *Archæological Survey of India*, Memoir 13, p. 15.

ತನ್ನ ಸಾಹಸದಿಂದ ಅವನ ಪ್ರಾಣವನ್ನು ಉಳಿಸಿದಂತೆ ತಿಳಿಯುತ್ತದೆ. ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ :–

ದೇವರಾಯ

ಸಲೆ ನಾನಾಸಸ್ಯಸಂಪತ್ತಿಯನೊದವಿಸಿ ಸಂತುಷ್ಟಿಯಂ ದಾನಧಾರಾ ।
ಜಲದಿಂ ಸಂತಾಪಮಂ ತಗ್ಗಿಸಿ ವಿಶದ ಸಿತಚ್ಛತ್ರಸುಚ್ಛಾಯೆಗೊಯ್ಯು ॥
ಜ್ವಲಿಪಾಜ್ಞಾದಾಮದಿಂದಂ ನಿಯಮಿಸಿ ನಿಜಗೋಸ್ತಂಭದೊಳ್ ಕಟ್ಟಿಗೋಮಂ।
ಫಲಮಂ ಸತ್ಕೀರ್ತಿದುಗ್ಧಂಗಪೆದನಚಿಕೆಯಿಂ ದೇವರಾಜಾವನೀಂದ್ರಂ ॥

ಲಕ್ಷ್ಮೀಧರ.

ಕನ್ನಡಿಗಕುಲಕೆ ರನ್ನದ । ಕನ್ನಡಿಯೆನೆ ವಿಶ್ವವಿದಿತವೃತ್ತಶ್ರೀಸಂ ।
ಪನ್ನಂ ಲಕ್ಷ್ಮೀಧರದೇ । ವನ್ನಿರ್ಮಲನಾಗಿ ನೆಗೞ್ದನೊಳಗಂ ಪೊಱಗಂ ॥
ಕೈಯೆಂದೊಡೆ ಮಂದಾರದ। ಕೈಯುಂ ಮಂತ್ರೀಂದ್ರಲಕ್ಷ್ಮಣಾಂಕನ ಕೈಯುಂ।
ಕೈಯಲ್ಲದುೞಿದ ಮನುಜರ । ಕೈಯುಂಬುವು ಮರುಳ ಕೈಗಳೇತಱಕೈಗಳ್ ॥
ಧರಣೀಚಕ್ರಂ ಮನಂಗೊಳ್ವುದಯಮುರುತಮಸ್ತೋಮವಲ್ಲಾಡುವಾತ್ಮಾ ।
ಚರಣಂ ಸನ್ಮಾರ್ಗಮುದ್ಯೋತಿಸುವ ರುಚಿ ಸದಾಲೋಕಮುರ್ವೀಱಿಪ್ಪತೇಜ ।
ಸ್ಫುರಣಂ ನಿತ್ಯಾನುರಾಗಕ್ಕೆಡೆಗುಡಲೆಸೆವೀಪೆರ್ಮೆಯಿಂ ದೇವಭೂಭೃ ।
ದ್ವರಪಾದಾಸನ್ನನೇನುನ್ನತಿವಡೆದನೊ ಲಕ್ಷ್ಮೀಧರಾವರಾತ್ಯಮಿತ್ರಂ ॥
ಪೂವಿನ ಬಿಲ್ಲನೇಱಿಸುವ ಬಂಡಬಸಂತನನಾಸೆಮಾಡುವಿ ।
ಮ್ಮಾವಿನರಲ್ಗಳಂ ಬನಸಗೆಯ್ವೆಳದಿಂಗಳ ಪಂಗುಗೊಳ್ವ ಬ ॥
ಲ್ಪೀವುದೆನುತ್ತೆ ಚಿತ್ತಭವನಾವನ ಮೆಯ್ವಳಗೊಂಡು ಕಂಡ ಕಾಂ ।
ತಾವಳಿಯಂ ಮರಳ್ಚುವನೆನಲ್ ಸೊಬಗೆಂತುಟೊ ಲಕ್ಷ್ಮಣಾಂಕನಾ ॥
ಸಾರಶ್ರೀನೀತಿವಾಕ್ಯಾಮೃತಪರಿಸರದೊಳ್ ಪುಟ್ಟಿ ಮೆಯ್ವಂದದಾನಂ ।
ದಾರಾವಂಸನ್ನರಾಮಾಯಣದೊಳವುದುರ್ ತಳ್ತುವಗಂ ಕೃಷ್ಣಲೀಲಾ ॥
ಧಾರಂ ತಾನಾಗಿ ನಾನಾಫಲಮನಿಳೆಗೆ ಬೀಱಿತ್ತು ಸಂಸಾರ ಸೌಖ್ಯಾ ।
ಕಾರಂ ಸನ್ಮಂತ್ರಿಲಕ್ಷ್ಮೀಧರನುರುಕವಿತಾಕಲ್ಪವಲ್ಲೀವಿತಾನಂ ॥
ಪೊಗೞಲ್ ಪೊಂಪುೞಿವೋಪ ಪೆಂಪಿನ ಯಶೋಲಕ್ಷ್ಮೀಧರಂ ಬಲ್ಲವರ್ ।

ಬಗೆಗೊಳ್ಳಿಂಪಿನ ಸೊಂಪುವೆತ್ತ ಕವಿತಾಲಕ್ಷ್ಮೀಧರಂ ರಾಜಿನೀ ||
ತಿಗೆ ನೇರ್ಪಾದ ಮಹಾಪ್ರಧಾನಪದವೀಲಕ್ಷ್ಮೀಧರಂ ಧಾತ್ರಿಯೊಳ್ |
ನೆಗಟ್ದಂ ನಿರ್ಮಲರಾಮಚಂದ್ರತನಯಂ ಸನ್ಮಂತ್ರಿಲಕ್ಷ್ಮೀಧರಂ ||

## ಸೊಸಲ ಚಿಕ್ಕಣಾರಾಧ್ಯ. ಸು. 1450.

ಇವನು ಪಂಚಬ್ರಹ್ಮೋದಯಭಾಷ್ಯವನ್ನು ಬರೆದಿದ್ದಾನೆ. ಈತನು ವೀರಶೈವಕವಿ, ಅಮರಗುಂಡದ ಮಲ್ಲಿಕಾರ್ಜುನವಂಶೋದ್ಭವನಾದ ಶಾಂತಲಿಂಗನ ಮಗನು. ತನ್ನ ಗ್ರಂಥದಲ್ಲಿ ಶಬ್ದಮಣಿದರ್ಪಣದಿಂದ ಸೂತ್ರವನ್ನು ಉದಾಹರಿಸಿರುವುದರಿಂದ ಕೇಶಿರಾಜನಿಗಿಂತ (ಸು. 1260) ಈಚೆಯವನು ಎಂಬುದು ವ್ಯಕ್ತವಾಗುತ್ತದೆ ಸೊಸಲ ಭೈರವರಾಜನ ಕಾಲದಲ್ಲಿ ಒಬ್ಬ ಚಿಕ್ಕಣಾರ್ಯನು ಇದ್ದಂತೆ ತಿಳಿಯುತ್ತದೆ. (ದ್ವಿ. ಸಂಪುಟ 266). ಇವನೇ ಕವಿಯಾಗಿರಬಹುದು. "ನೂತನರಲ್ಲಿ" ಒಬ್ಬನಾದ ಈ ಭೈರವರಾಜನ (ದ್ವಿ ಸಂಪುಟ 386) ಕಾಲವು ಸುಮಾರು 1450 ಆಗುವುದರಿಂದ ಕವಿಯ ಕಾಲವೂ ಇದೇ ಆಗಿರಬೇಕು.

ಇವನ ಗ್ರಂಥ

### ಪಂಚಬ್ರಹ್ಮೋದಯ ಭಾಷ್ಯ.

ಇದು ಗದ್ಯಗ್ರಂಥ ; ಅಧ್ಯಾಯ 9 ಅಥರ್ವಣ ವೇದಮಂತ್ರವ್ಯಾಖ್ಯೆಯೆಂದು ಹೇಳಿದೆ. ಕೊನೆಯಲ್ಲಿ ಪಂಚಾಚಾರ್ಯರು, ಅವರ ಸಂತತಿಯವರು, ತತ್ಕೃತ ಗ್ರಂಥಗಳು ಈ ವಿಷಯಗಳು ಉಕ್ತವಾಗಿವೆ. ಈ ಗ್ರಂಥದ ವಿಷಯವಾಗಿ ಕವಿ ಹೀಗೆ ಹೇಳುತ್ತಾನೆ :—

ವೇದಮಂತ್ರಕ್ಕೆ ಸಾನಂದಮುನಿ ಶಂಭುಸೂತ್ರವೆಂಬ 36 ಸಾವಿರ ಗ್ರಂಥಪರಿಮಾಣವೂ 72 ಅಧ್ಯಾಯಗಳೂ ಉಳ್ಳ ಭಾಷ್ಯವನ್ನು ಬರೆದನು ; ಬಳಿಕ ಶ್ರೀಪತಿಪಂಡಿತನು ಆರಾಧ್ಯಸಂಹಿತೆಯೆಂಬ 12 ಸಾವಿರ ಗ್ರಂಥಪರಿಮಾಣವೂ 16 ಅಧ್ಯಾಯಗಳೂ ಉಳ್ಳ ಸಂಗ್ರಹವಾದ ಭಾಷ್ಯವನ್ನು ಬರೆದನು, ಮತ್ತೆ ಇದನ್ನು ಸಂಗ್ರಹಿಸಿ ಪಾಲ್ಕುರಿಕೆ ಲಿಂಗಣಾರಾಧ್ಯನು ನಾದೋದಯವೆಂಬ

6 ಸಾವಿರ ಗ್ರಂಥಪರಿಮಾಣವೂ 13 ಪ್ರಕರಣಗಳೂ ಉಳ್ಳ ಭಾಷ್ಯವನ್ನು ಬರೆದನು. ಈ ಭಾಷ್ಯಗಳೆಲ್ಲಾ ಸಂಸ್ಕೃತದಲ್ಲಿರುವುದರಿಂದ ಕವಿ ತನ್ನ ಭಾಷ್ಯವನ್ನು ಕನ್ನಡದಲ್ಲಿ ಬರೆದನು

## ನಂಜನಾಥಾಚಾರ್ಯ. ಸು. 1500.

ಇವನು ವೈಷ್ಣವವಾದಖಂಡನವನ್ನು ಬರೆದಿದ್ದಾನೆ. ಈತನು ವೀರಶೈವಕವಿ, ತ್ರಿಲೋಚನಾಚಾರ್ಯನ ಮಗನು. ಪದ್ಮಣಾಂಕನ (ಸು 1385) ಪದ್ಮರಾಜಪುರಾಣವನ್ನು ನಿರ್ದೇಶಿಸುವುದರಿಂದ ಅವನ ಕಾಲಕ್ಕೆ ಈಚೆಯವನೆಂಬುದು ಸ್ಪಷ್ಟವಾಗುತ್ತದೆ. ಸುಮಾರು 1500ರಲ್ಲಿ ಇದ್ದಿರಬಹುದೆಂದು ತೋರುತ್ತದೆ.

ಇವನ ಗ್ರಂಥ

### ವೈಷ್ಣವವಾದಖಂಡನ.

ಇದು ಗದ್ಯರೂಪವಾಗಿದೆ. ಈ ಗ್ರಂಥದ ವಿಷಯವಾಗಿ ಕವಿ ಹೀಗೆ ಹೇಳುತ್ತಾನೆ —

ಈ ವಾದಖಂಡನವೆಂಬುದು ದೋರಾಂಬುಧಿಯೆಂಬ ಪುರಕ್ಕಧಿಪತಿಯಾದ ನೃಸಿಂಹಬಲ್ಲಾಳರಾಜನ ಮಹದೈಶ್ವರ್ಯಕ್ಕೆ ದಣಾಯಕಪಟ್ಟಮಂ ತಾಳ್ದಿದುದ್ ಆ ರಾಜನಿಗೆ ತಟಾಕದ ಮಹಿಮೆಯಂ ತೋರಿ ನೆಱೆದ ತಟಾಕಪದ್ಮಣಾಚಾರ್ಯರ (ಕೆರೆಯ ಪದ್ಮರಸ) ಪುತ್ರಪೌತ್ರಾದಿಗಳಿದು ಬಂದ ಪದ್ಮಣಾಚಾರ್ಯರು (ಪದ್ಮಣಾಂಕ) ಆವಾದನಿಮಿತ್ತವಾಗಿ ವೇದೋ ರಾಣಾಗಮೇತಿಹಾಸಾದಿ ಗ್ರಂಥಂಗಳೆಲ್ಲವಂ ತೆಗೆದು ವಾಕ್ಯವೇಷ್ಟನ ಷಟ್ಪದಪದಬಂಧರೂಪಿನಿಂದ (ಪದ್ಮರಾಜಪುರಾಣ) ರಚಿಸಿದರು. ಆವರ ವಾಕ್ಯಪ್ರಸಾದದ ಬಲದಿಂದ ವೇದೋಪನಿಷತ್ಪುರಾಣಾಗಮಾದಿ ಗ್ರಂಥಂಗಳನು ಸಂಗ್ರಹಿಸಿಕೊಂಡು ತ್ರಿಲೋಚನಾಚಾರ್ಯರ ಸತ್ಕುಮಾರನು ನಂಜನಾಥಾಚಾರ್ಯನು ತ್ರಿಭುವನತಾತನೆಂಬ ವಾದಿ (ಪ್ರ. ಸಂಪುಟ 246) ತನ್ನ ವಿಷ್ಣುವಿನ ಮಹತ್ವವ ನುಡಿದ ನುಡಿಗಳೆಲ್ಲವನು ವಚನರೂಪಿನಿಂದ ಖಂಡಿಸಿ ಆ ವಚನದೆಡಗೆಡೆಗೆ ವೇದಪುರಾಣಾಗಮಾದಿ ಗ್ರಂಥಂಗಳಂ ಬರೆದು ಇದು ವೈಷ್ಣವವಾದಖಂಡನವೆಂದು ಹೆಸರನಿಟ್ಟು ಮಾಡಿದನು.

(ದ್ವಿ. ಸಂಪುಟ 141) ಕುಮಾರವಾಲ್ಮೀಕಿ.

ಈ ಕವಿಯ ಕಾಲವನ್ನು ಕುರಿತು ಒಬ್ಬ ಮಿತ್ರರು ಹೀಗೆ ಬರೆದಿದ್ದಾರೆ :—

"ಕುಮಾರವಾಲ್ಮೀಕಿಯ ಕಾಲವು ಕ್ರಿ. ಶ. 1500 ಎಂದು ತಾವು ಹೇಳಿರುವಿರಿ. ಆದರೆ 1580 ರಿಂದ 1632 ರವರೆಗೆ ಆಳಿದ ಸುಲ್ತಾನ್ ಇಬ್ರಾಹಿಮು ಅದಿಲಶಹನು ತೊರವೆಯನ್ನು ಕಟ್ಟಿಸಿದ್ದಾನೆ. ಹೀಗೆಂದಮೇಲೆ ಕುಮಾರವಾಲ್ಮೀಕಿಯ ಕಾಲವು ಸುಮಾರು ಕ್ರಿ. ಶ. 1650 ಎಂದು ಹೇಳಬೇಕಾಗಬಹುದಲ್ಲವೇ ?"

ತೊರವೆಯ ಉತ್ಪತ್ತಿ ಇಲ್ಲಿ ಸೂಚಿತವಾದ ಕಾಲದಲ್ಲಿ ಆಯಿತು ಎಂಬುದಕ್ಕೆ ಸರಿಯಾದ ಪ್ರಮಾಣವಿದ್ದರೆ ಕುಮಾರವಾಲ್ಮೀಕಿಯ ಕಾಲವನ್ನು ಈಚೆಗೆ ಹಾಕಬೇಕಾಗುವುದು.

(ದ್ವಿ. ಸಂಪುಟ 313) ಮಲ್ಲಿಕಾರ್ಜುನಕವಿ. 1593.

ಈತನು ಮಗ್ಗೆಯ ಮಾಯಿದೇವನ ಶತಕತ್ರಯಕ್ಕೆ ವ್ಯಾಖ್ಯಾನವನ್ನು ಬರೆದಿದ್ದಾನೆ.

## ಕಂಬಾಳ ಶಾಂತಮಲ್ಲೇಶ. ಸು. 1600.

ಇವನು ಗಣವಚನರತ್ನಾವಳಿಯನ್ನು ಬರೆದಿದ್ದಾನೆ. ಈತನು ವೀರಶೈವ ಕವಿ, ಷಟ್ಸ್ಥಲಾಚಾರ್ಯವರ್ಯ ಎಂಬ ವಿಶೇಷಣವು ಇವನಿಗೆ ಹೇಳಿದೆ. ಈತನಿಗೆ ಕಂಬಾಳದೇವ ಎಂಬ ಹೆಸರೂ ಉಂಟು. ತೋಂಟದ ಸಿದ್ಧೇಶ್ವರನ (ಸು. 1470) ಶಿಷ್ಯನಾದ ಬೋಳೇಶನ ವಚನಗಳನ್ನು ಉದಾಹರಿಸುವುದಾಗಿ ಹೇಳಿರುವುದರಿಂದ ಕವಿ ಅವನ ಕಾಲಕ್ಕೆ ಈಚೆಯವನಾಗಿರಬೇಕು. ಸುಮಾರು 1600 ರಲ್ಲಿ ಇದ್ದಿರಬಹುದು.

ಇವನ ಗ್ರಂಥ.

### ಗಣವಚನರತ್ನಾವಳಿ

ಇದು ಪುರಾತನರ ವಚನಗಳ ಸಂಗ್ರಹ; ಸ್ಥಲ 216, ಸ್ವರವಚನಗಳು 1206. ಇದರಲ್ಲಿ ಉದಾಹೃತರಾದ ವಚನಕಾರರ ಹೆಸರುಗಳು ಈ ಪದ್ಯದಲ್ಲಿ ಹೇಳಿವೆ :—

ಬಸವೇಶ ನೀಲಾಂಬೆ ಸಿದ್ಧರಾಮಂ ಚೆನ್ನ | ಬಸವನಲ್ಲಮಃ ಕರಸ್ಥಲವೀರನಾಗಾರ್ಯ |
ರಸಮಮಾಯಿಗದೇವರಪ್ಪಣ್ಣ ಮಹದೇವಿ ದಾಸ ಬಹುರೂಪಿ ಚೌಡಂ ||
ಮಿಸುಪ ಶಾಂತಯ್ಯನಾದಯ್ಯ ಬೋಳೇಶಗುರು | ಬಸವಶಂಕರದೇವ
ನಾಗಾಂಬೆ ಮೊದಲಾದ |
ರುಸುರ್ದ ನಾನಾರಾಗಕಲಿತವಚನಂಗಳಿಂ ರಚಿತಮಾಯ್ತು ಶಾಸ್ತ್ರವು ||

ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ :—

ಇದು ಲಿಂಗಾಂಗಸುಯೋಗಮಂ ತಿಳಿಪಲೊಂದೇಸಾಲ್ವುದಮ್ಮವ್ವ ನೋ |
ಡಿದು ವೇದಾಗಮವಾಗತೀತಪದಮಂ ತೋರ್ದಪ್ಪುದಯ್ಯಯ್ಯ ತಾ ||
ನಿದು ಕರ್ಮತ್ರಯವೃಕ್ಷಮೂಲದೊದಪಂ ಕಿೞ್ತಪ್ಪುದಾಹಾ ಬೞ |
ಕ್ಕಿದು ಸನ್ಮುಕ್ತಿವಧೂಟಿಯೊಳ್ ನೆರಪುಗುಂ ತಾನೆಂದೊಡಾರ್ ಒಣ್ಣಿಪರ್ ||

ಒಂದೊಂದು ಸ್ಥಲದ ಆದಿಯಲ್ಲಿಯೂ ಕವಿರಚಿತವಾದ ಕೆಲವು ಪದ್ಯಗಳಿವೆ ಒಂದೆರಡನ್ನು ಉದಾಹರಿಸುತ್ತೇವೆ :—

ಬಸವಾದಿಪ್ರಮಥರ ಪದ | ಬಿಸಜಮನೆರ್ದೆಗೊಳಿಸಿ ತತ್ಕೃಪಾಬಲದಿಂದೀ |
ಪೊಸತೆನಿಪ ಶಾಸ್ತ್ರಮಂ ವಿರ | ಚಿಸಿದೆಂ ಶರಣಾಳಿ ಕೇಳಿ ಕೈಕೊಳ್ವುದಿದಂ ||
ತಿಳಿಪಲ್ ಶಿವಜೀವೈಕ್ಯಮ | ನಿೞಿಪಲ್ ಭವಪಾಶಬಂಧಮಂ ಶಿವಪದವಿ |
ತ್ತುೞಿಪಲ್ ನಿಜದೊಳ್ ಚಿತ್ಕ್ರಿಯ | ಯುಳವಟ್ಟ ಪುರಾತನೋಕ್ತಿಯೊಂದೆ
ಸಮರ್ಥಂ ||

(ದ್ವಿ. ಸಂಪುಟ 377) ಶಾಂತವೀರದೇಶಿಕ. ಸು. 1650.

ಈತನು ಶಿವಲಿಂಗಚಾರಿತ್ರ, ಶಿವಗಣಚಾರಿತ್ರ ಎಂಬ ಗ್ರಂಥಗಳಲ್ಲದೆ ಸೌಂದರೇಶ್ವರನ ಯಕ್ಷಗಾನ, ಶಿವಮಹತ್ವಸಾರಶಿಖಾಮಣಿ ಸಂಗ್ರಹಶತಕ, ಗಿರಿಜಾದೇವಿಯ ಸಂಕೀರ್ತನ ಎಂಬ ಮೂರು ಗ್ರಂಥಗಳನ್ನೂ ಬರೆದಿದ್ದಾನೆ ಇವನ ಸ್ಥಳ ಕೆಣೆಯನೂರು. ಪರಕವಿಗಜೇಂದ್ರ ಕಂಠೀರವ, ಶಿವಕವಿಭೃತ್ಯ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ. ಇವನ ತಂದೆ ಚೆನ್ನಾರ್ಯನನ್ನು "ಸರಸಕವಿ ಕರ್ನಾಟಚಕ್ರೇಶ್ವರ" ಎಂಬುದರಿಂದ ಈತನೂ ಕವಿಯಾಗಿದ್ದಂತೆ ತೋರುತ್ತದೆ.

ಆವ ಗ್ರಂಥವನ್ನು ಬರೆದಿದ್ದಾನೆಯೋ ತಿಳಿಯದು. ಕವಿಯ ಸೌಂದರೇಶ್ವರನ ಯಕ್ಷಗಾನದ ಒಂದು ಓಲೆಯ ಪ್ರತಿಯ ಕೊನೆಯಲ್ಲಿ “ ಇದನು ಶಾಂತವೀರದೇಶಿಕನು ನಿರ್ಮಿಸಿ ಕಾಳಾಯುಕ್ತ ಸಂವತ್ಸರದಲ್ಲಿ ಬಸವನ ಕೋಟೆಯ ಪರಮೇಶ್ವರಯ್ಯನಿಗೆ ಲೇಖನಂಗೈದುದು ” ಎಂದಿದೆ. ಈ ಕಾಳಾಯುಕ್ತವರ್ಷವು 1678 ಆಗಿರಬೇಕು.

ಈ ಗ್ರಂಥಗಳಲ್ಲಿ

1. ಸೌಂದರೇಶ್ವರನ ಯಕ್ಷಗಾನ.

ಇದಕ್ಕೆ ಜನವೈಶ್ಯತಿಲಕ ಎಂಬ ಹೆಸರೂ ಉಂಟು. ಸಂಧಿ 13, ಪದ 1610. ಇದರಲ್ಲಿ 63 ಶಿವಭಕ್ತರಲ್ಲಿ ಒಬ್ಬನಾದ ಸೌಂದರೇಶ್ವರ ಅಥವಾ ನಬಿಯಣ್ಣ ಎಂಬವನ ಕಥೆ ಹೇಳಿದೆ.

2. ಶಿವಮಹತ್ವಸಾರಶಿಖಾಮಣಿ ಸಂಗ್ರಹಶತಕ.

ಇದರಲ್ಲಿ ಶಾರ್ದೂಲವಿಕ್ರೀಡಿತ ವೃತ್ತಗಳು 100 ಇವೆ ಒಂದೊಂದು ವೃತ್ತವೂ “ಶ್ರೀ ಶಾಂತವೀರೇಶ್ವರ” ಎಂದು ಮುಗಿಯುತ್ತದೆ. ಪ್ರತಿ ವೃತ್ತಕ್ಕೂ ವ್ಯಾಖ್ಯಾನ ರೂಪವಾಗಿ ಸಂಸ್ಕೃತ ಗ್ರಂಥಗಳಿಂದ ಶ್ಲೋಕಗಳು ಅನುವಾದ ಮಾಡಲ್ಪಟ್ಟಿವೆ. ಪ್ರಕರಣ 11, ವೃತ್ತ ಗ್ರಂಥಸಹ 640 ಗ್ರಂಥದ ಉದ್ದೇಶ ಶಿವಮಹತ್ವನಿರೂಪಣ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಸುರಭೂಜಾತಕೆ ಕಾಡ ಕಗ್ಗಲಿಯುಮಂ ಪಂಕೇಜಮಿತ್ರಂಗೆ ದುಃ |
ಕರಖದ್ಯೋತಮಧರ್ಮಿಗಂ ಕೃಪಣನಜ್ಞಾನಂಗೆ ಸುಜ್ಞಾನಿಯುಂ ||
ನೆಱೆ ಸಾದೃಶ್ಯಮ ಮಾಳ್ಪವೋಲ್ ಸುರಪಕಂಸಾರಾತಿದೇವಾದ್ಯರಂ |
ಗಿರಿಜಾಕಾಂತಗೆ ಸಾಟಿಯೆಂಬರಧಮರ್ ಶ್ರೀಶಾಂತವೀರೇಶ್ವರಾ ||
ಕುಡುವಿಲ್ಗೀಱಿಸಿ ತುಂಬಿಬಲ್ಪೆದೆಯ ಬೊಬ್ಬಿಟ್ಟಾಗ ಪಂಚಾಸ್ತ್ರಮಂ |
ತೊಡೆದುತ್ತಂ ಮುಳಿದೆಚ್ಚ ಮನ್ಮಥನ ತದ್ಫಾಳಾಕ್ಷದಾವಾಗ್ನಿಯೊಳ್ ||
ಸುಡೆ ಬೆಂದಿರ್ದ ರತೀಶನಂ ತುಟಿದು ಭಸ್ಮೋದ್ಧೂಳನಂ ಮಾಡಿದಾ |
ಕಡುಸಾಮರ್ಥ್ಯರದಾರು ದೇವತತಿಯೊಳ್ ಶ್ರೀಶಾಂತವೀರೇಶ್ವರಾ ||

## ಪುಷ್ಪಮಾಲಿಕಾ ಪ್ರಬಂಧ

ನತಸುತದಾತನಾಗಧರ ಧರ್ಮದಯಾಪರ ಧೀರಸಾರ ಶೋ |
ಭಿತಹತಸೂತಕಾದಿ ಸುಭಸುದ್ಧಸುರಾಶ್ರಯ ಮಾಯಕಾಯವ ||
ರ್ಜಿತಮೃತಭೀತಭೀಮ ಮುನಿಮುಖ್ಯಮುರಾಂತಕನೀಕಶೋಕನಂ |
ದಿತಶತಶಾಂತವೀರನಿಜನಿತ್ಯ ನಿರಾಕರ ಮಾರಸೂರನೇ ||

ಈ ಪದ್ಯಕ್ಕೆ ಪ್ರಸ್ತಾರ

ನು ರ ಧೀ ಹ ಭ ಮಾ
ನ ತ ನಾಗ ಧ ಯಾಪ ರ ಶೋ | ಭಿ ತ ಕಾದಿ ಸು ರಾಶ್ರ ಯ ವ ||
ದಾ ರ್ಮ ಸಾ ಸೂ ದ್ಧ ಕಾ

ಮೃ ನಿ ನೀ ಶ ಜ ಮಾ
ರ್ಜಿ ತ ಭೀಮ ಮು ರಾಂತ ಕ ನಂ | ದಿ ತ ವೀರ ನಿ ರಾಕ ರ ನೇ ||
ಭೀ ಖ್ಯ ಶೋ ಶಾಂ ತ್ಯ ಸೂ

### 3 ಗಿರಿಜಾದೇವಿಯ ಸಂಕೀರ್ತನ

ಇದರಲ್ಲಿ ಪಾರ್ವತೀ ಸ್ತುತಿರೂಪವಾದ 131 ಪದಗಳಿವೆ. ಕೊನೆಯಲ್ಲಿ ಈ ಗದ್ಯವಿದೆ,—

ಇತಿ ಶ್ರೀಮದ್ಗುರುಶಾಂತವೀರೇಶಪದಪಂಕಜಪರಾಗಸೇವಿತ ಶಿಳೀಮುಖ ಪರ ಕವಿಗಜೇಂದ್ರಕಂಠೀರವ ಶಿವಕವಿಭೃತ್ಯ ಚೆನ್ನವೀರಾಖ್ಯತನೂಭವ ಶಾಂತವೀರ ದೇಶಿಕ ವಿರಚಿತಮಪ್ಪ ಗಿರಿಜಾದೇವಿಯ ಸಂಕೀರ್ತನಂ ಸಂಪೂರ್ಣಂ

(ದ್ವಿ. ಸಂಪುಟ 433) ವೀರಣಾರ್ಯ. ಸು 1650.

ಈತನು ಪ್ರಸಾದಚಾರಿತ್ರವಲ್ಲದೆ ನಂಜುಂಡೇಶ್ವರಪುರಾಣವನ್ನೂ ಬರೆದಿದ್ದಾನೆ. ಇದರಲ್ಲಿ ಕೊಲ್ಲಿಪಾಕಿಯ ಸೋಮೇಶ್ವರ ಎಂಬುದಕ್ಕೆ ಪ್ರತಿಯಾಗಿ ರೇವಣಸಿದ್ಧೇಶವಂಶದ ವೀರಣಾರಾಧ್ಯ ಎಂದಿದೆ. ದೇವಣಾರಾಧ್ಯ ಎಂದು ನಾವು ಕೊಟ್ಟಿರುವುದು ರೇವಣಾರಾಧ್ಯ ಎಂದಿರಬೇಕು.

## ನಂಜುಂಡೇಶ್ವರಪುರಾಣ

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 11, ಪದ್ಯ 697. ಇದರಲ್ಲಿ ನಂಜನಗೂಡು ನಂಜುಂಡೇಶ್ವರನ ಮಹಿಮೆ ವರ್ಣಿತವಾಗಿದೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯದಲ್ಲಿ ಹೇಳಿದ್ದಾನೆ :—

ಪಲವುದಿನವಗಲಿರ್ದ ಕಾಂತನು | ಘಟಿಲಿಸಿದಿರ್ದೈತರಲು ಮುಗ್ಧಾ |
ಲಲನೆ ಜಾಣ್ನುಡಿಯಾಡಲಱಿಯದೆ ಕೊರಳ ಸೆರೆ ಬಿಗಿದು ||
ಗಳಬಳನೆ ಗದ್ಗದಿಸುತಿಹ ಜೆ | ಡ್ವಳಿಯಃಳನುಚಿತವಾಕ್ಯಮೊಪ್ಪುವೊ |
ಲಿಳೆಯ ಸತ್ಕವಿಗಳಿಗೆ ರಾಜಿಸುತಿರ್ಪುದೀಕಾವ್ಯ ||

ಗ್ರಂಥಾವತಾರದಲ್ಲಿ ನಂಜುಂಡೇಶ್ವರನ ಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಂಗೆ, ಗಣೇಶ, ಷಣ್ಮುಖ, ಬಸವ, ಭೃಂಗಿ, ವೀರಭದ್ರ ಇವರುಗಳನ್ನು ಹೊಗಳಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

### ಶಿವಸ್ತುತಿ

ಇಂಗಡಲ ಮಗಳೆಱೆಯ ಸಗ್ಗದ | ಹೆಂಗಳೊಡೆಯರ ಶಿರದೊಳೊಪ್ಪುವ |
ರಂಗುದೋರ್ಪ ಕಿರೀಟಮಣಿಗಳೊಳೆಯ್ದೆ ಮಧುಪಿಸುವ ||
ತುಂಗಪದಪಂಕೇಜನಗಜೆಯ | ನುಣ್ಗದಪನಾಲೋಕಿಸುವ ಕಡೆ |
ಗಂಗಳಿಂದೆಮ್ಮುವನು ಪಾಲಿಪುದೀಶನಹಿಭೂಷಾ ||

### ವರ್ಷಾಕಾಲ

ಮುಗಿಲ ಮದ್ದಾನೆಗಳ ಮಿಂಚಿನ | ನೆಗೆವ ತುರಗಾಳಿಗಳ ಸಿಡಿಲಿಂ |
ದೊಗೆವ ದನಿವಾದ್ಯಗಳ ಬಲ್ವನಿಯೆಸೆವ ಕಿಂಕರರಿಂ ||
ಸೊಗಯಿಸುವ ಕೆಮ್ಮುಗಿಲ ತೇರನು | ಮಿಗುವಹರುಷದೊಳೇಱಿ ಚೈತ್ರನ |
ಮೊಗವ ಕೆಡಿಸುತ ವರ್ಷಸೇನಾಧೀಶನೈತಂದ ||

### ರೇಣುಕಿಯ ಗಂಡನ ಅನನುರೂಪತೆ

ಮಿಗದ ಚಕ್ಕಳ ಕೌಂಕುಳೊಳ್ಳುತೆರೆ | ನೆಗೆದ ಮುಸುಡಿನ ಪಚ್ಚೆವಲ್ಲಿನ |
ಬಿಗಿದ ಕೆಂಜೆಡೆ ನರೆತ ಗಡ್ಡದ ಬೂದಿ ಮೈಯವಗೆ ||

ಮುಗುದೆಯುಹ ಗೋಪಿಕಿಯುನೀವುದು | ಬಗೆಯೆ ಒಱಿದೇ ಹೋಯ್ತುಬೊಮ್ಮಗೆ |
ಮಿಗಿಲುದಲೆಯೆಂದೆನುತ ಮುಱುಗಿತು ಖಚರ ವಧುನಿಕರ ||

## ರಾಘವೇಂದ್ರಸ್ವಾಮಿ. ಸು. 1650

ಈತನು ಕೀರ್ತನೆಯನ್ನು ಬರೆದಿದ್ದಾನೆ. ಇವನು ಬ್ರಾಹ್ಮಣನು; ನಂಜನಗೂಡು ಮಾಧ್ವ ಮಠದಲ್ಲಿ 1624 ರಿಂದ 1671 ರ ವರೆಗೆ ಸ್ವಾಮಿಯಾಗಿದ್ದಂತೆ ತಿಳಿಯುತ್ತದೆ. ಈತನು ಮಾಧ್ವ ಗುರುಗಳಲ್ಲಿ ಬಹಳಪ್ರಸಿದ್ಧನು. ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ಬರೆದಿದ್ದಾನೆ. ಕನ್ನಡದಲ್ಲಿ ಒಂದೇ ಒಂದು ಕೀರ್ತನೆಯನ್ನು ಬರೆದನೆಂದು ಹೇಳುತ್ತಾರೆ ಈತನ ಸಮಾಧಿ ಬಳ್ಳಾರಿ ಜಿಲ್ಲೆಯ ಮಂತ್ರಾಲಯದಲ್ಲಿದೆ. ಇವನ ಕೀರ್ತನೆಯಲ್ಲಿ ವೇಣು ಗೋಪಾಲ ಎಂಬ ಅಂಕಿತವಿದೆ.

### ಕೀರ್ತನೆ.

ರಾಗ ಭೈರವಿ. ಅಟತಾಳ.

ಪಲ್ಲವಿ|| ಇಂದು ಎನಗೆ ಗೋವಿಂದ ನಿನ್ನ ಪಾದಾರ|ವಿಂದವ ತೋರೊ ಮುಕುಂದ||
ನೊಂದೆನಯ್ಯ ಭವ ಬಂಧನದೊಳು ಸಿಲುಕಿ | ಮುಂದೆ ದಾರಿಗಾಣದೆ ಕುಂದಿದೆ ಜಗದಿ |
ಕಂದನಾದೆನ್ನ ಕುಂದುಗಳೆಣಿಸದೆ|ತಂದೆ ಕಾಯೊ ಎನ್ನ ಕಂದರ್ಪಜನಕನೆ||1||

ಮೂಢತನದಿ ಬಲು ಹೇಡಿಜೀವನನಾಗಿ | ದೃಢ ಭಕುತಿಯನು ಮಾಡಲಿಲ್ಲ |
ನೋಡಲಿಲ್ಲವೊ ನಿನ್ನ ಪಡೆದಿಲ್ಲವೋ ಮಹಿಮ | ಗಾಡಿಕಾಱಕೃಷ್ಣ ಬೇಡಿ ಕೊಂಬೆನೊ ದೇವ ||2||

ಧಾರಿಣಿಯೊಳು ಭೂಭಾರ ಜೀವನನಾಗಿ | ಮೀರಿದಪ್ಪಿ ನಡೆದು ಸೇರಿದೆ ಕುಜನರ |
ಆರೂ ಕಾಯುವರಿಲ್ಲ ಸಾಱುವೆ ನಿನಗಯ್ಯ | ಧೀರ ವೇಣುಗೋಪಾಲ ಪಾರಗಾಣಿಸೊ ರಾಮ ||3||

## (ದ್ವಿ. ಸಂಪುಟ 442) ಷಡಕ್ಷರದೇವ. 1655

ಷಡಕ್ಷರದೇವನು ಕನ್ನಡದಲ್ಲಿ ಷಡಕ್ಷರ ಮಂತ್ರಸ್ತೋತ್ರ ಎಂಬ ಗ್ರಂಥವನ್ನೂ ಬರೆದಿದ್ದಾನೆ. ಇದು ಉತ್ಸಾಹರಗಳೆಯಲ್ಲಿ ಬರೆದಿದೆ; ಸುಮಾರು 105 ವಾಕ್ಯಗಳಿವೆ. ಒಂದೊಂದೂ "ಓಂ ನಮಶ್ಶಿವಾಯ" ಎಂದು ಮುಗಿಯುತ್ತದೆ. ಆರಂಭದಲ್ಲಿ

ಶ್ರೀಮದುಮಾವರವಿಲಸ | ನ್ನಾಮೋನ್ನತಶುಭಷಡಕ್ಷರೋತ್ತಮ
ಮಂತ್ರೋ |
ದ್ದಾಮಸ್ತುತಿಯಂ ರಚಿಸಿ ಭ | ವಾಮಯಮಂ ತೀರ್ಚಿ ಕಳೆದೆನಾಂ
ಶಿವಲಿಂಗಾ ||

ಎಂಬ ಕಂದವೂ ಅಂತ್ಯದಲ್ಲಿ

ಹರಕರುಣಾಬಲದೆ ಷಡ | ಕ್ಷರದೇವಂ ಭಕ್ತಿಯಿಂದೆ ವಿರಚಿಸಿದ ಷಡ |
ಕ್ಷರಮಂತ್ರಸ್ತವಮನಿದಂ | ಬರೆದೋದುವವರ್ಗೆ ಭುಕ್ತಿಮುಕ್ತಿಗಳಕ್ಕುಂ ||
ಹರಿವಿಧಿವಾಸುಕಿಫಣೀ | ಸುರಗುರುಗಳ್ ತಿಳಿಯಲಾರದಪ್ರತಿಮ ಷಡ |
ಕ್ಷರಮಹಿಮೆಯನರಿವವರಾರ್ | ವಿರಚಿಸಿದೆಂ ಸ್ವಲ್ಪಮತಿಯೊಳಾನರಿ
ದನಿತಂ ||

ಎಂಬ ಕಂದಗಳೂ ಇವೆ. ಈ ಗ್ರಂಥದಿಂದ ಕೆಲವು ವಾಕ್ಯಗಳನ್ನು ಉದಾಹರಿಸುತ್ತೇವೆ—

ಶರಣಜನದ ಹರಣಮೆನಿಸಿ ಮೆರೆವುದೋಂ ನಮಶ್ಶಿವಾಯ |
ಮರಣರುಜೆಯ ಪರಿವ ಸುಧೆಯು ಕರೆವುದೋಂ ನಮಶ್ಶಿವಾಯ ||
ಮುಳಿದು ಜವನ ಗರ್ವಗಜವ ಸೀಳ್ವುದೋಂ ನಮಶ್ಶಿವಾಯ |
ಸೆಳೆದು ಮೃತ್ಯುಕುಜವನೊತ್ತಿ ಕೀಳ್ವುದೋಂ ನಮಶ್ಶಿವಾಯ ||
ಮಂಗಳಕ್ಕೆ ಮಂಗಳಂ ನಿರಂಗಮೋಂ ನಮಶ್ಶಿವಾಯ |
ಸಿಂಗರಕ್ಕೆ ಸಿಂಗರಂ ಚಿದಂಗಮೋಂ ನಮಶ್ಶಿವಾಯ ||

ಈ ಕವಿಯಿಂದ ರಚಿತವಾದ ವೀರಭದ್ರೋದ್ಧರಣಗದ್ಯ[1] ಎಂಬ ಸಂಸ್ಕೃತ ಗ್ರಂಥವು ಮುದ್ರಿತವಾಗಿದೆ. ಇದರ ಕೊನೆಯ ಶ್ಲೋಕದ

ಗದ್ಯಂ ಹೃದ್ಯಂ ವ್ಯಧತ್ತ ಪ್ರಣವಪರಿಮಿಳತ್ಪಂಚವರ್ಣಾರ್ಘ್ಯದೇವಃ |
ಕ್ಷಿಪ್ರಂ ಭದ್ರಪ್ರದಾತುರ್ಬುಧನುತಕೆಳದೀ ವೀರಭದ್ರೇಶ್ವರಸ್ಯ ||

ಎಂಬ ಉತ್ತರಾರ್ಧದಿಂದ ಈ ಗ್ರಂಥವು ಕೆಳದಿಯ ವೀರಭದ್ರದೇವರ ಸ್ತುತಿರೂಪವಾದುದು ಎಂದು ತಿಳಿಯುತ್ತದೆ. ಕವಿ ಆ ಸ್ಥಳಕ್ಕೆ ಹೋಗಿದ್ದನೆಂದು ಊಹಿಸಬಹುದಾಗಿದೆ. ನಾವು ಹೇಳಿರುವ ವೀರಭದ್ರದಂಡಕವು ಇದೇ ಆಗಿರಬಹುದೋ ಏನೋ ತಿಳಿಯದು.

(ದ್ವಿ. ಸಂಪುಟ 554) ಶಾಂತಾಚಾರ್ಯ. ಸು. 1700.

ಈತನು ಮರಣಮಣಿದರ್ಪಣಶತಕವನ್ನು ಬರೆದಿರುವಂತೆ ತೋರುತ್ತದೆ. ಇದರಲ್ಲಿ 100 ಕಂದಗಳಿವೆ. ಸ್ಕಂದಪುರಾಣಾದಿಗ್ರಂಥಗಳಲ್ಲಿ ಹೇಳಿರುವ ಮರಣಸೂಚನೆಗಳನ್ನು ಕವಿ ಕನ್ನಡಿಸಿದಂತೆ ಹೇಳುತ್ತಾನೆ. ಈ ಶತಕದಲ್ಲಿ ಮರಣಸೂಚನೆಗಳಲ್ಲದೆ ಸುಸ್ವಪ್ನ ದುಸ್ಸ್ವಪ್ನ ಫಲ, ಆಯುರ್ವೃದ್ಧಿಕಾರಣ ಇವೂ ಹೇಳಿವೆ. ಒಂದೆರಡು ಪದ್ಯಗಳನ್ನು ಉದಾಹರಿಸುತ್ತೇವೆ :—

ಗೂಗೆ ಕಪೋತಂ ಬಲಿಗಳ್ | ಬೇಗದಿ ಬಂದೇಱಿ ಮಸ್ತಕದಿ ಕುಳ್ಳಿರೆ ತಾಂ |
ಯೋಗೀಂದ್ರ ಕೇಳು ಷಣ್ಮಾಸ | ಪೋಗುವುದಾಜನೆಯುಮಾಸಕಿದು ನಿಜವೆಂದಂ ||
ನುಡಿಯದೆ ನಿಂದಕಮಂ ಪರ | ಮಡದಿಯುತಂ ಮಾತೆಯೆಂದು ಮನದೊಳ್ [ಭಾವಿಸು |
ತೊಡೆಬಿಡದೆ ಸತ್ಯವಾಡಲ್ | ಪೊಡವಿಯೊಳವಗಕ್ಕು ನಿರುತ ದೀರ್ಘಾಯುಷ್ಯಂ ||

ನಂಜುಂಡೇಶಚರಿತೆ ಎಂಬ ಗ್ರಂಥದ ಕೊನೆಯಲ್ಲಿರುವ

---

1. ಈ ಗ್ರಂಥವನ್ನೂ ಏಕತ್ರೀಕೃತವಾದ ಇನ್ನೂ 13 ಸ್ತುತಿಗಳನ್ನೂ ಮೇಲೆ ಹೇಳಿದ ಷಡಕ್ಷರ ಮಂತ್ರಸ್ತೋತ್ರದೊಡನೆ ದಾವಣಗೆರೆ ನಿಶಾನಿಮಠದ ಶ್ರೀಮಾನ್ ಶಾಂತವೀರಾರ್ಯರು ಕಂಡು ಹಿಡಿದು ಅಚ್ಚು ಹಾಕಿಸಿರುತ್ತಾರೆ. ಈ ಕವಿಯ ಸಂಸ್ಕೃತ ಕೃತಿಗಳಲ್ಲಿ ಶಿವ ಮಹಿಮಾಗದ್ಯವೆಂಬುದೂ ಒಂದು.

ವಿಧಿಮಧುಸೂದನವಿನುತ ನಂಜುಂಡೇಶ | ಪದಪದ್ಮಷಟ್ಪದನೆನಿಪ |
ಸದಮಲಶಾಂತಾರ್ಯ ಪೇಳಿದೀಕೃತಿಯೊಳ | ಗೊದವಿದೇಕಾದಶ ಸಂಧಿ ||

ಎಂಬ ಪದ್ಯದಿಂದ ಈ ಗ್ರಂಥವೂ ಏತತ್ಕವಿಕೃತವಾಗಿರಬಹುದೆಂದು ತೋರುತ್ತದೆ. ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ 11, ಪದ್ಯ 744.

ಉದ್ದಂಡ ಸು. 1700.

ಇವನು ಸುಜ್ಞಾನಿದೇವಕಾವ್ಯವನ್ನು ಬರೆದಿದ್ದಾನೆ. ಈತನು ವೀರಶೈವ ಕವಿ; ಇವನ ತಂದೆ ಹಲಗ, ಗುರು ಚಿತ್ರಹಳ್ಳಿಯ ಸಿದ್ಧೇಶನ ಶಿಷ್ಯ ಶಾಂತಪ್ಪ, ಪೋಷಕ ಚಿತ್ರಹಳ್ಳಿಯ ರಾಚಪ್ಪ. ಇವನ ಸ್ಥಳ ಚಿತ್ರಹಳ್ಳಿಯಾಗಿರಬಹುದು ಇವನು ಸುಮಾರು 1700 ರಲ್ಲಿ ಇದ್ದಿರಬಹುದೆಂದು ಊಹಿಸುತ್ತೇವೆ.

ಇವನ ಗ್ರಂಥ

ಸುಜ್ಞಾನಿದೇವಕಾವ್ಯ.

ಇದು ಸಾಂಗತ್ಯದಲ್ಲಿ ಬರೆದಿದೆ, ಸಂಧಿ 7, ಪದ್ಯ 1178. ಇದರಲ್ಲಿ ಬಸವನ ಸಮಕಾಲದವನಾದ ಓಢ್ರದೇಶದಲ್ಲಿಯ ಕರ್ಣಿಕಾಪುರದ ಸುಜ್ಞಾನಿದೇವನ ಕಥೆ ಹೇಳಿದೆ. ಈ ಕಥೆಯನ್ನು ಕಲ್ಯಾಣದಲ್ಲಿ ಬಸವನು ಶಿಷ್ಯರಿಗೆ ಹೇಳಿದಂತೆ ತಿಳಿಯುತ್ತದೆ

**ಕಥಾಸಾರ**—ಸುಜ್ಞಾನಿದೇವನು ಶಿವಜ್ಞಾನಮೂರ್ತಿಯಿಂದ ಬಸವನ ಮಹಿಮೆಯನ್ನು ಕೇಳಿ ಆತನನ್ನು ನೋಡಬೇಕೆಂದು ಹೊರಟುಬರುತ್ತ ದಾರಿಯಲ್ಲಿ ಮತಂಗನೆಂಬ ಕ್ರೂರನಾದ ಬೇಡನನ್ನು ಸಂಧಿಸಿ ತತ್ವೋಪದೇಶದಿಂದ ಅವನನ್ನು ಸಾಧುಮಾಡಿ ನನ್ನಯ್ಯನೆಂಬ ಹಸರಿಟ್ಟು ಶಿಷ್ಯನನ್ನಾಗಿ ಮಾಡಿಕೊಂಡು ಮುಂದಕ್ಕೆ ತೆರಳಿ ಒಂದು ಮರದಡಿಯಲ್ಲಿ ಮಲಗಿರಲು, ಆ ಸಮಯದಲ್ಲಿ ಅಮರಪುರದ ಕೌಶಿಕರಾಯನ ಅರಮನೆಯಲ್ಲಿ ಒಡವೆಗಳನ್ನು ಕದ್ದಿದ್ದ ಕಳ್ಳರು ರಾಜಪುರುಷರಿಂದ ಹಿಂಬಾಲಿಸಲ್ಪಟ್ಟು ಆ ಒಡವೆಗಳನ್ನು ನಿದ್ರೆಮಾಡುತ್ತಿದ್ದ ಸುಜ್ಞಾನಿದೇವನಬಳಿಯಲ್ಲಿಟ್ಟು ಓಡಿಹೋಗಲು, ರಾಜಪುರುಷರು ಇವನೇ ಕಳ್ಳನೆಂದು ಭ್ರಮಿಸಿ ಇವನ

ತಲೆಯನ್ನು ಕತ್ತರಿಸಿಕೊಂಡು ಹೋಗಿ ದೊರೆಗೆ ಒಪ್ಪಿಸಿದಾಗ ಆವನು ಆ ತಲೆಯನ್ನು ಊರ ಹೊರಗಣ ಒಂದು ಮರಕ್ಕೆ ಕಟ್ಟಿಸಿದನು. ಇತ್ತ ನನ್ನಯ್ಯನು ಗುರುವಿನ ಮುಂಡವನ್ನು ನೋಡಿ ಅದಕ್ಕೆ ತನ್ನ ತಲೆಯನ್ನು ಕತ್ತರಿಸಿ ಸೇರಿಸಲುದ್ಯುಕ್ತನಾದಾಗ ಶಿವನಿಂದ ತಡೆಯಲ್ಪಟ್ಟು ಮಣ್ಣಿನಿಂದ ತಲೆಯನ್ನು ಮಾಡಿರಿಸಿ ಗುರುವನ್ನು ಬದುಕಿಸಿ ಸಂಗಡ ಕರೆದುಕೊಂಡು ಒರುತ್ತ ಅಮರಪುರದಬಳಿ ಮರಕ್ಕೆ ಕಟ್ಟಿದ್ದ ಗುರುವಿನ ತಲೆಯನ್ನು ಕಂಡು ಅದಕ್ಕೆ ತನ್ನ ಮುಂಡವನ್ನು ಕತ್ತರಿಸಿಕೊಡಲು ಯತ್ನಿಸಿದಾಗ ಪುನಃ ಶಿವನಿಂದ ತಡೆಯಲ್ಪಟ್ಟು ಮಣ್ಣಿನ ಮುಂಡವನ್ನು ಆ ತಲೆಗೆ ಸೇರಿಸಿ ಕರೆದುಕೊಂಡು ಬರುತ್ತಿರಲು ಶಿವನು ಮೆಚ್ಚಿ ಇಬ್ಬರನ್ನೂ ಕೈಲಾಸಕ್ಕೊಯ್ದನು.

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗುರುಶಾಂತಮಲ್ಲೇಶ, ಸಿದ್ಧೇಶ ಶಿಷ್ಯ ಶಾಂತಪ್ಪ ಇವರುಗಳನ್ನು ಹೊಗಳಿದ್ದಾನೆ.

ಈ ಗ್ರಂಥದಿಂದ ಒಂದೆರಡುಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ಕವಿಗಳ ಕರುಣದಿ ಶಿವನ ನಿರೂಪದಿ | ವಿವರಿಸಿದೆನು ಈ ಕೃತಿಯ |
ನವರಸಗಳ ಬಲ್ಲ ಕೋವಿದಸುಜನರು | ಹವಣ ಕಂಡಳಿದು ತಿದ್ದುವುದು ||
ಗಿಡುವನು ಮಡುವನು ಮೊಜಿದಿಕಾನನವನು | ಗೊಡವೆ ಬಣ್ಣಿಸಿ ಬಟಿಲದಲಿ |
ದೃಢಭಕ್ತರ ಪಾದವನೆನೆದು ಬದುಕೆಂದು | ಪೊಡಮಟ್ಟು ಬೇಡಿದೆ ಮನವ ||

# Appendix V.

## ಪರಿಶಿಷ್ಟ V.

ಸಂಪುಟಕ್ಕೆ ಸೇರಬೇಕಾದ ಇನ್ನು ಕೆಲವರ ಆಧುನಿಕ ಗ್ರಂಥಕರ್ತರ ವಿಷಯ.

### ಸಕ್ಕರೆ ಶಾಂತ ಸು. 1800.

ಈತನು ಪ್ರಭುನಾಟಕವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ, ಸುಮಾರು 1800 ರಲ್ಲಿ ಇದ್ದಿರಬಹುದು. ಇವನ ಗ್ರಂಥವು ಯಕ್ಷ ಗಾನರೂಪವಾಗಿದೆ, ಪ್ರಭುದೇವನ (ಅಲ್ಲಮನ) ಚರಿತೆಯನ್ನು ಹೇಳುತ್ತದೆ.

### (ದ್ವಿ. ಸಂಪುಟ 517) ಪಂಡಿತ ಮಲ್ಲಿಕಾರ್ಜುನ. 1800.

ಈತನಿಂದ ರಚಿತವಾದ ಶಂಕರದಾಸಿಮಯ್ಯನ ಚರಿತ್ರೆಯು ಮತ್ತೊಂದು ಪ್ರತಿಯ ಕೊನೆಯಲ್ಲಿ ಗ್ರಂಥರಚನಾಕಾಲವು ಹೀಗೆ ಹೇಳದೆ :—

.... ಮಿಗೆ ರೌದ್ರಿ ಸಂವ | ತ್ಸರದ ಶ್ರೀವೈಶಾಖಮಾಸಾಂ |
ತರದೆ ಬಹುಳೈಕಾದಶಿಗೆ ಮುಗಿದುದು ಮಹಾಕೃತಿಯು ||

"ನೃಪ ಶಾಲಿವಾಹನ ಶಕೆ 1722 ಪ್ರವರ್ತಮಾನ ರೌದ್ರಿನಾಮಸಂವತ್ಸರ ಸುಮು ಹೂರ್ತ ವೈಶಾಖಮಾಸ ಬಹುಳೈಕಾದಶಿಯ ಪರಿಯಂತದಲ್ಲಿ ಚಂದ್ರಹೋರೆಯಲ್ಲಿ ಪುರಾಣ ಮುಗಿಯಿತು."

ಇದರಿಂದ ಗ್ರಂಥವು 1800 ರಲ್ಲಿ ಹುಟ್ಟಿದಂತೆ ತಿಳಯುತ್ತದೆ.

### ಯಾದವ (ಪುಟ 157).

ಈತನು ಮಾಧ್ವಕವಿಯೆಂದೂ, ಮೈಸೂರು ಮುಮ್ಮಡಿ ಕೃಷ್ಣ ರಾಜನ ಆಸ್ಥಾನಪಂಡಿತನಾಗಿದ್ದನೆಂದೂ, ಇವನ ಸ್ಥಳ ದೊಡ್ಡಬಳ್ಳಾಪುರ ವೆಂದೂ ತಿಳಯುತ್ತದೆ (ಕನ್ನಡ ಪರಿಷತ್ಪತ್ರಿಕೆ IX, 4, 272).

## ವಿರಕ್ತದೇವ. 1803.

ಇವನು ಸೌನಂದಗಣೇಶ್ವರನ ಸಾಂಗತ್ಯವನ್ನು ಬರೆದಿದ್ದಾನೆ. ಈತನು ವೀರಶೈವಕವಿ; ಇವನ ತಂದೆ ಗುರುಮಲ್ಲದೇವ, ಸ್ಥಳ ತಿಲ್ಲಳ್ಳಿ. ದೀಕ್ಷಾವಿಧಾನವೆಂಬ ಒಂದು ಓಲೆಯ ಪುಸ್ತಕದ ಕೊನೆಯಲ್ಲಿ ಇವನು ಅದನ್ನು 1803 ರಲ್ಲಿ ಪ್ರತಿಮಾಡಿದಂತೆ ತಿಳಯುತ್ತದೆ.

ಇವನ ಗ್ರಂಥ

ಸೌನಂದಗಣೇಶ್ವರನ ಸಾಂಗತ್ಯ.

ಸಂಧಿ 11, ಪದ್ಯ 1223. ಇದರ ಕಥೆ ದ್ವಿತೀಯ ಸಂಪುಟದ 207 ನೆಯ ಪುಟದಲ್ಲಿ ಸೂಚಿತವಾಗಿದೆ. ಆರಂಭದಲ್ಲಿ ಸಾಸಲುಸೋಮೇಶ್ವರನ ಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣೇಶ, ಷಣ್ಮುಖ' ವೀರಭದ್ರ, ಬಸವ ಇವರುಗಳನ್ನು ಹೊಗಳಿ ಪೂರ್ವಕವಿಗಳಲ್ಲಿ ಬಾಣ, ಮಯೂರ, ಕೇಶಿರಾಜ, ಶ್ರೀಹರ್ಷ, ಕಾಳಿದಾಸ, ಉದ್ಭಟ, ಕವಿಚಂದ್ರ ಭಾವಭೂತಿ, ಭೀಮಕವಿ, ರಾಘವಾಂಕ, ಬಿಲ್ಹಣ, ದಂಡಿ ಇವರುಗಳನ್ನು ಸ್ಮರಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ಒಲ್ಲವರಾಡಿದುತ್ತರಕೆ ಸಮ್ಮತಿ ಬೇಕು | ಖುಲ್ಲರಿಗೆಡೆವಟ್ಟೆ ಸಾಕು |
ಬೆಲ್ಲಕ್ಕೆ ಕ್ರಯವಿಕ್ಕಿಕೊಳಬೇಕು ನವಣೆಯ | ಹುಲ್ಲಿಗೆ ಒಡಿವಾಶೆ ಸಾಕು ||
ನಗೆನುಡಿಯುವರು ಸಕ್ಕರೆ ವಾತಿನವರು ಮ | ಲ್ಲಿಗೆ ನುಡಿ ಸವಿನುಡಿಯುವರು |
ಮಿಗೆ ಮುದ್ದುನುಡಿ ಗಿಳಿನುಡಿ ಬೆಲ್ಲವಾತಿನ | ಸೊಗಸುಗಾತಿಯರಲೊಪ್ಪಿದರು||
ಎಳದುಂಬಿಗುರುಳು ಮುಂಗುರುಳು ನೀಲಾಳಕ | ಸುಟೆಗುರುಳುರುಸೋಗೆಗುರುಳು |
ಇಟೆಗುರುಳಂಚೆಗುರುಳು ನಿಡುಗುರುಳು ಕೋ | ಮಳೆಯರೊಪ್ಪಿದರೋಲಗದಲಿ||

## ಸಿದ್ಧಲಿಂಗ. 1860

ಇವನು ಶಿವಯೋಗೀಶ್ವರ ಪುರಾಣವನ್ನು ಬರೆದಿದ್ದಾನೆ. ಈತನು ವೀರಶೈವಕವಿ; ಪೊಮ್ಮಣ್ಣನ ಮಗನು. ಈ ಗ್ರಂಥವನ್ನು ಶಕ 1781

ಸಿದ್ಧಾರ್ಥಿಯಲ್ಲಿ (1860) ಬರೆದಂತೆ ಹೇಳುತ್ತಾನೆ. ಇದು ಭಾಮಿನೀ ಷಟ್ಪದಿಯಲ್ಲಿ ಬರೆದಿದೆ; ಸಂಧಿ 17, ಪದ್ಯ 776. ಇದರಲ್ಲಿ ಶಿವಯೋಗೀಶ್ವರನು ಅನೇಕ ಪವಾಡಗಳನ್ನು ಮಾಡಿ ಕೈಲಾಸಕ್ಕೆ ಹೋದನೆಂದು ಹೇಳಿದೆ. ಈ ಶಿವಯೋಗೀಶ್ವರನು ಹಲವು ಶೃಂಗಾರ ಪದಗಳನ್ನು ರಚಿಸಿರುವುದಾಗಿ ತಿಳಿಯಬಂದಿದೆ. ಇವನ ಕಾಲವು ಸುಮಾರು 1600.

## ಗೇರಸೊಪ್ಪೆ ವೆಂಕಟರಮಣಯ್ಯ

ಈತನು ಸಾರಸ್ವತ ಬ್ರಾಹ್ಮಣನು; ಮಂಗಳೂರು ಪ್ರಾಂತದವನು; ಗೇರಸೊಪ್ಪೆ ಶಾಂತಯ್ಯನ (ಪುಟ 188) ಮಗನು. ಇವನು ಹಾಡುಗಳನ್ನೂ ಜ್ಯೋತಿಷಾದಿ ಗ್ರಂಥಗಳನ್ನೂ ಬರೆದಿದ್ದಾನೆಂದು ಹೇಳುತ್ತಾರೆ.

## ಹಟ್ಟಿಯಂಗಡಿ ಮಂಜಯ್ಯ

ಇವನು ಸಾರಸ್ವತ ಬ್ರಾಹ್ಮಣನು; ಮಂಗಳೂರು ಪ್ರಾಂತದವನು. ಸಭಾಪರ್ವವೆಂಬ ಯಕ್ಷಗಾನವನ್ನೂ ಹಾಡುಗಳನ್ನೂ ರಚಿಸಿರುವಂತೆ ತಿಳಿಯುತ್ತದೆ ಈತನ ಹಾಡುಗಳಲ್ಲಿ "ಕೇರವರ ಮಾಧವ" ಎಂಬ ಅಂಕಿತವಿದೆ.

## ಮೂಲಿಕೆ ವೆಂಕಣ್ಣಕವಿ

ಈತನು ಮಾಧ್ವಕವಿ; ಮಂಗಳೂರು ಪ್ರಾಂತದವನು. ಇವನು ಜ್ಞಾನಮಾರ್ಗದ ಕವಿತೆಗಳನ್ನೂ ಯಕ್ಷಗಾನಗಳನ್ನೂ ಕನ್ನಡ ಸುಭಾಷಿತವನ್ನೂ ಬರೆದಿದ್ದಾನೆ. ಹರಿದಾಸನಾಗಿಯೂ ದಶಾವತಾರದ ಆಟಗಳ ಭಾಗವತನಾಗಿಯೂ ಇದ್ದನೆಂದು ಹೇಳುತ್ತಾರೆ. ಇವನ ಗ್ರಂಥಗಳಲ್ಲಿ "ಒಳಲಂಕೆಯ ಶ್ರೀನರಸಿಂಹ" ಎಂಬ ಅಂಕಿತವಿದೆ.

## ಹಟ್ಟಿಯಂಗಡಿ ರಾಮಭಟ್ಟ

ಇವನು ಹವ್ಯಕ ಬ್ರಾಹ್ಮಣನು; ಮಂಗಳೂರು ಪ್ರಾಂತದವನು. ಧ್ರುವಚರಿತ್ರೆ, ಸುಭದ್ರಾಕಲ್ಯಾಣ[1] ಮುಂತಾದ ಯಕ್ಷಗಾನಗಳನ್ನೂ ಹಾಡುಗಳನ್ನೂ ಬರೆದಿದ್ದಾನೆ. ಇವನ ಗ್ರಂಥಗಳಲ್ಲಿ "ಗೋಪ್ತೀಪುರದೇವಿಯ ಲೋಕನಾಥ" ಎಂಬ

1. 326 ನೆಯ ಪುಟವನ್ನು ನೋಡಿ.

ಅಂಕಿತವಿದೆ. ಇವನ ಸಂತತಿಯವರು ಈಗಲೂ ಹಟ್ಟಿಯಂಗಡಿಯ ಲೋಕನಾಥ ದೇವಸ್ಥಾನದಲ್ಲಿ ಅರ್ಚಕರಾಗಿದ್ದಾರೆ.

## ಪಾರ್ತಿ (ಪಾರ್ವತಿಯ) ಸುಬ್ಬಯ್ಯ

ಈತನು ಬ್ರಾಹ್ಮಣನೆಂದು ತೋರುತ್ತದೆ. ಇವನ ಸ್ಥಳ ಕಾಸರಗೋಡು ತಾಲ್ಲೂಕು ಕುಂಬಳೆಕಣಿ. ರಾಮಾಯಣ ಕಥೆಗೆ ಸಂಬಂಧಿಸಿದ ಕೆಲವು ಯಕ್ಷಗಾನಗಳನ್ನು ರಚಿಸಿದ್ದಾನೆ. ಈತನು ಉಪಯೋಗಿಸಿರುವ ಅಂಕಿತ "ಕಣಿಪುರದ ಗೋಪಾಲಕೃಷ್ಣ"

## ಬೆನಕಯ್ಯ ಭಾಗವತ

ಇವನು ಸಾರಸ್ವತ ಬ್ರಾಹ್ಮಣನು, ಮಂಗಳೂರು ಪ್ರಾಂತದವನು. ಸಭಾಲಕ್ಷಣವೆಂಬ ಯಕ್ಷಗಾನವನ್ನೂ ಇತರ ಕವಿತೆಗಳನ್ನೂ ಮಾಡಿದ್ದಾನೆ. ಈತನ ಅಂಕಿತ "ಆತ್ಮಾರಾಮ"

## ಹಟ್ಟಿಯಂಗಡಿ ರಾಮಚಂದ್ರಯ್ಯ

ಈತನು ಸಾರಸ್ವತ ಬ್ರಾಹ್ಮಣನು; ಮಂಗಳೂರು ಪ್ರಾಂತದವನು. ಯಕ್ಷಗಾನಗಳನ್ನೂ ಹಾಡುಗಳನ್ನೂ ಬರೆದಿರುವಂತೆ ತಿಳಿಯುತ್ತದೆ.

## ಬಟ್ಟರಬೆಟ್ಟು ಆನಂದರಾಯ

ಇವನು ಸಾರಸ್ವತ ಬ್ರಾಹ್ಮಣನು; ಇವನ ಸ್ಥಳ ಬ್ರಹ್ಮಾವರ. ಕನ್ನಡದಲ್ಲಿ ಕವಿತೆ ಮಾಡಿದ್ದಾನೆಂದು ಹೇಳುತ್ತಾರೆ.

## ಎಂ. ಎನ್. ಶ್ರೀನಿವಾಸರಾಯ, ಬಿ. ಎ.

ಈತನು ಮಾಧ್ವನು; ಮೈಸೂರು ದೇಶದವನು, ಮುಂಬಯಿ ಟಾಟಾ ಕಂಪೆನಿಯಲ್ಲಿ ಕೆಲಸದಲ್ಲಿದ್ದನು. ಗ್ರಂಥ—ಕೊಳಲಜೋಗಿ (ಪದ್ಯ).

## ತುಳಸೀಬಾಯಿ

ಈಕೆ ಮಾಧ್ವಳು, ಎಂ. ಎನ್. ಶ್ರೀನಿವಾಸರಾಯನ ಸಹೋದರಿ. ಗ್ರಂಥಗಳು—ರಂಗಸೆಟ್ಟಿ, ತೊಳಗೌಡ, ಹಾಡುಗಳು.

## ಡಿ. ಎಸ್. ಶಂಕರನಾರಾಯಣಶಾಸ್ತ್ರಿ[1], ಬಿ. ಎ.

ಈತನು ಸ್ಮಾರ್ತನು; ಮೈಸೂರು ದೇಶದವನು. ಗ್ರಂಥಗಳು—ಮದುವೆಯ ಗಲಿಬಿಲಿ, ಶಂಕರ ಕಥಾಸಾರ, ಭಗವತ್ಪಾದಾಚಾರ್ಯ ಪ್ರಶಂಸೆ.

---

1 ಈತನು ಗವರ್ನ್‌ಮೆಂಟ್ ಅಡ್ವೊಕೇಟ್ ಶ್ರೀಮಾನ್ ಶಂಕರನಾರಾಯಣರಾಯರ ತಂದೆ.

### ಕೆ. ವೆಂಕಟರಮಣರಾಯ, ಬಿ. ಎ.

ಇವನು ಮಾಧ್ವನು, ಮದರಾಸ್ ಕ್ರಿಶ್ಚಿಯನ್ ಕಾಲೇಜಿನಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥ—ಕಾವ್ಯಲಕ್ಷಣಸಾರ.

### ವಲ್ಲಭ ಮಹಲಿಂಗಶೆಟ್ಟಿ

ಈತನು ಬ್ರಾಹ್ಮಣನು; ಧಾರವಾಡ ಪ್ರಾಂತದವನು. ಗ್ರಂಥ—ಕನ್ನಡಿಗರ ಜನ್ಮಸಾರ್ಥಕತೆ.

### ಶೇಷದಾಸಾಚಾರ್ಯ ಆದ್ಯ

ಈತನು ಮಾಧ್ವನು; ಬಿಜಾಪುರ ಜಿಲ್ಲಾ ಅಗರಖೇಡದ ಜಾಗೀರ್ದಾರನಾಗಿದ್ದನು. ಗ್ರಂಥ—ಸುವದನಾಭಾಸ್ಕರ.

### ಕೃಷ್ಣರಾಯ ರಾ ಬಂಕಾಪುರ

ಇವನು ಮಾಧ್ವನು; ಧಾರವಾಡ ಪ್ರಾಂತದವನು; ಬನ್ಮನ ಹಳ್ಳಿಯಲ್ಲಿ ಉಪಾಧ್ಯಾಯನಾಗಿದ್ದನು ಗ್ರಂಥ—ವಸಯಿಂಕೋಟೆಯ ಘನಘೋರ ಸಂಗ್ರಾಮ.

### ಆರ್. ಶ್ರೀನಿವಾಸರಾಯ

ಈತನು ಮಾಧ್ವನು; ಕ್ಲೋಸ್‌ಪೇಟೆಯಲ್ಲಿ ಉಪಾಧ್ಯಾಯನಾಗಿದ್ದನು ಗ್ರಂಥಗಳು—ವಿವೇಕಮಂಜರಿ, ಗೃಹಿಣಿಯಾದ ಗಂಗೆ (Taming of the Shrew). ಇವನು ಹನುಮಾರ್ದಾಸನೊಡನೆ ಸೇರಿ ಸಾಹಸಿಕೆ, ನಾನಕನ ಚರಿತ್ರೆ ಎಂಬ ಗ್ರಂಥಗಳನ್ನೂ ಬರೆದಿದ್ದಾನೆ.

### ಹನುಮಾರ್ದಾಸ

ಇವನು ಮಾಧ್ವನು; ಮೈಸೂರಿನಲ್ಲಿ ಮುದ್ರಿತವಾಗುತ್ತಿದ್ದ ಮಧುರವಾಣಿ ಎಂಬ ಮಾಸಪತ್ರಿಕೆಯ ಸಂಪಾದಕನಾಗಿದ್ದನು. ಗ್ರಂಥಗಳು—ಸಿಲೀಮಬೇಗಂ, ಗಜೇಂದ್ರಸಿಂಹ. ಈತನು ಆರ್. ಶ್ರೀನಿವಾಸರಾಯನೊಡನೆ ಸೇರಿ ಸಾಹಸಿಕೆ, ನಾನಕನ ಚರಿತ್ರೆ ಎಂಬ ಗ್ರಂಥಗಳನ್ನೂ ರಚಿಸಿದ್ದಾನೆ.

### ಕೆ. ವಿನಾಯಕಶಾಸ್ತ್ರಿ

ಈತನು ಬ್ರಾಹ್ಮಣನು; ಉತ್ತರಕನ್ನಡ ಪ್ರಾಂತದವನು. ಏಕಚಕ್ರಭಾಸ್ಕರ ಎಂಬ ಹೆಸರಿನಿಂದ ಗ್ರಂಥಗಳನ್ನು ಬರೆದಿದ್ದಾನೆ. ಗ್ರಂಥಗಳು—ಲುಲಾಯಶಾಸ್ತ್ರ, ಕುಣುಕುಮಿಣುಕು

## ಕೆ. ಲಕ್ಷ್ಮಣರಾಯು, ಬಿ. ಎ.

ಇವನು ಕಾವೇರೀಕೊಂಕಣಸ್ಥನು; ಮಂಗಳೂರು ಪ್ರಾಂತದವನು. ಗ್ರಂಥಗಳು—ಚಂಡೀಮದಮರ್ದನನಾಟಕ (Taming of the Shrew), ಪಶ್ಚಾತ್ತಾಪಬಾಷ್ಪ (Paradise and the Peri).

## ಬೊಳ್ಳಾರ ಬಾಬುರಾಯು

ಈತನು ಕಾವೇರೀಕೊಂಕಣಸ್ಥನು; ಮಂಗಳೂರು ಪ್ರಾಂತದಲ್ಲಿ ತಹಸೀಲ್ದಾರನಾಗಿದ್ದನು. ಗ್ರಂಥಗಳು—ಶಿವಲೀಲಾಮೃತ (ಷ), ಭಕ್ತಿಮಹಿಮೆ (ಷ), ವಾಗ್ದೇವಿ.

## ಗುಲವಾಡಿ ವೆಂಕಟರಾಯು

ಇವನು ಸಾರಸ್ವತ ಬ್ರಾಹ್ಮಣನು; ಮಂಗಳೂರು ಪ್ರಾಂತದಲ್ಲಿ ಪೊಲೀಸ್ ಇನ್ಸ್ಪೆಕ್ಟರಾಗಿದ್ದನು. ಗ್ರಂಥಗಳು—ಇಂದಿರಾಬಾಯಿ, ಭಾಗೀರಥಿ ಅಥವಾ ಮೂರ್ಖತ್ವದ ಯಾತನೆಗಳು, ಸೀಮಂತಿನಿ.

## ಮೂಲಿಕೆ ರಾಮಕೃಷ್ಣಕವಿ

ಈತನು ಸಾರಸ್ವತಬ್ರಾಹ್ಮಣನು; ಮಂಗಳೂರುಪ್ರಾಂತದವನು. ಗ್ರಂಥಗಳು—ವೆಂಕಟಗಿರಿಮಾಹಾತ್ಮ್ಯ (ಷ), ಹಾಡುಗಳು

## ಭಾರದ್ವಾಜ ಶಿವರಾಯು

ಇವನು ಸಾರಸ್ವತಬ್ರಾಹ್ಮಣನು; ಮಂಗಳೂರು ಪ್ರಾಂತದವನು; ಬಾಸಲ್ ಮಿಷನ್ ಪ್ರೆಸ್ಸಿನಲ್ಲಿ ಕೆಲಸದಲ್ಲಿದ್ದನು. ಗ್ರಂಥಗಳು—ರೋಗಚಿಕಿತ್ಸೆ, ಗೃಹೋಪಯೋಗದ ಹೋಮಿಯೋಪಥಿ.

## ಕ್ರಿಸ್ತಾನುಜವತ್ಸ

ಈತನು ಕ್ರೈಸ್ತನು; ಮಂಗಳೂರು ಪ್ರಾಂತದವನು. ಇಂಗ್ಲಿಷ್ ಕನ್ನಡ ನಿಘಂಟುವನ್ನೂ ಕ್ರಿಸ್ತಮತಸಂಬಂಧವಾದ ಕೆಲವು ಗ್ರಂಥಗಳನ್ನೂ ಬರೆದಿರುವಂತೆ ತಿಳಿಯುತ್ತದೆ.

## ಎಸ್. ವರದರಾಜಯ್ಯಂಗಾರ್

ಇವನು ಶ್ರೀವೈಷ್ಣವನು; ಮೈಸೂರು ಸರಕಾರದಲ್ಲಿ ಸಬ್‌ಜಡ್ಜಿ ಕೆಲಸದಲ್ಲಿದ್ದನು. ಗ್ರಂಥಗಳು—ಸೂರ್ಯೋದಯರಾಜ್ಯ, ತತ್ವತ್ರಯ, ಆಹಾರಶುದ್ಧಿ.

ಚಂದಯ್ಯ ಉಪಾಧ್ಯಾಯ

ಈತನು ಜೈನಕವಿ, ಇವನ ಸ್ಥಳ ಮೂಡಬಿದರೆ. ಗ್ರಂಥ—ಜೈನಾಚಾರ (ಸಾಂ).

(ಪುಟ 222) ಎಣ್ಣೆಮುಡಿ ವೆಂಕಟರಮಣಯ್ಯ

ಈತನು ಸಿರಾಲಿಯಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥಗಳು—ದೇವೀಮಾಹಾತ್ಮ್ಯ, ಕೆಲವು ಯಕ್ಷಗಾನಗಳು.

(ಪುಟ 233) ಸಜೀಪ ರಾಮಕೃಷ್ಣಯ್ಯ

ಗ್ರಂಥಗಳು—ವಚನ ಕೌಮುದಿ (ಕನ್ನಡ ವ್ಯಾಕರಣ), ಹಾಡುಗಳು

(ಪುಟ 233) ಬೋಳಾರ ರಾಮಕೃಷ್ಣಯ್ಯ

ಈತನು ಕರ್ಣಾಟಕಬ್ರಾಹ್ಮಣನು; ಮಂಗಳೂರು ಮಿಷನ್ ಹೈಸ್ಕೂಲಿನಲ್ಲಿ ಕನ್ನಡ ಪಂಡಿತನಾಗಿದ್ದನು. ಗ್ರಂಥಗಳು—ನಾನಾರ್ಥಶಬ್ದಾವಳಿ ಮತ್ತು ಸಂಜ್ಞಾರ್ಥಗಳು ಎಂಬ ಕನ್ನಡ ನಿಘಂಟು, ಪದ್ಯರೂಪವಾದ ಒಂದು ವ್ಯಾಕರಣ.

ಬೋಳಾರ ವಾಸುದೇವಯ್ಯ

ಈತನು ಬ್ರಾಹ್ಮಣನು; ಮಂಗಳೂರು ಪ್ರಾಂತದವನು; ಹರಿದಾಸನಾಗಿದ್ದನು. ಗ್ರಂಥಗಳು—ದುಂದುಭಿಆಖ್ಯಾನ, ಚಂದ್ರಮೌಳಿಕಾಳಗ ಇತ್ಯಾದಿ ಯಕ್ಷಗಾನಗಳು, ಭಗವನ್ನಾಮಸಂಕೀರ್ತನಾವಳಿ.

ಹರಿದಾಸ ಮೂಲಿಕೆ ಲಕ್ಷ್ಮೀನಾರಣಪ್ಪಯ್ಯ

ಇವನು ಸ್ಥಾನಿಕ ಬ್ರಾಹ್ಮಣನು; ಮಂಗಳೂರು ಪ್ರಾಂತದವನು; ಹರಿಕಥೆಗಳನ್ನು ಮಾಡುತ್ತಿದ್ದನು. ಅನೇಕ ಹಾಡುಗಳನ್ನೂ ದೇವರ ನಾಮಗಳನ್ನೂ ರಚಿಸಿದ್ದಾನೆ; ಆಶುಕವಿ ಎಂದು ಪ್ರಸಿದ್ಧಿಯನ್ನು ಪಡೆದಿದ್ದನು.

ರಾಘವೇಂದ್ರ ಹನುಮಂತ ಕೊಪ್ಪಳಕರ್, ಬಿ.ಎ., ಎಲ್.ಎಲ್.ಬಿ.

ಈತನು ಮಾಧ್ವನು; ನಿಜಾಂ ಇಲಾಖಾ ಸರ್ ಸಾಲಾರ್‌ಜಂಗ್ ಜಾಗೀರಿಯಲ್ಲಿ ತಹಸೀಲ್ದಾರನಾಗಿದ್ದನು. ಇವನ ಸ್ಥಳ ಕೊಪ್ಪಳ. ಗ್ರಂಥ—ಲೀಲಾವತಿ (ಕನ್ನಡ ಮನೋರಂಜಕಗ್ರಂಥಮಾಲೆಯ ಪ್ರಥಮ ಪುಸ್ತಕ).

ಗುರುರಾವ್ ವಿಠಲ ಮೋಹರೆ

ಈತನು ಬ್ರಾಹ್ಮಣನೆಂದು ತೋರುತ್ತದೆ. ಧಾರವಾಡಪ್ರಾಂತದವನು. ಗ್ರಂಥ—ಶಬ್ದಸಂಗ್ರಹ.

## II ನೆಯ ಪರಿಶಿಷ್ಟಕ್ಕೆ ಸೇರಬೇಕಾದ ಕೆಲವು ಗ್ರಂಥಗಳು.

### ಪರಮರಹಸ್ಯ. ಸು. 1600.

ಇದು ಷಟ್ಸ್ಥಲವಿವರಣರೂಪವಾದ ಗ್ರಂಥ, ಇದರಲ್ಲಿ 260 ಸಂಸ್ಕೃತ ಶ್ಲೋಕಗಳಿಗೆ ಕನ್ನಡ ಟೀಕೆಯಿದೆ. ಕೊನೆಯಲ್ಲಿ "ಇತಿ ಉಮಾಮಹೇಶ್ವರ ಸಂವಾದೇ ಷಟ್ಸ್ಥಲನಿರ್ಣಯಂ ಪರಮರಹಸ್ಯಂ ಸಂಪೂರ್ಣಂ" ಎಂದಿದೆ

### ಶಿವದರ್ಶನಾಷ್ಟಕ. ಸು 1600.

ಕಂದ 9. ಪ್ರತಿಕಂದವೂ "ಕಂಡೆನೆನ್ನ ಕರಸರಸಿಜದೊಳ್" ಎಂದು ಮುಗಿಯುತ್ತದೆ. 9 ನೆಯ ಕಂದದಲ್ಲಿ "ಶಂಕರಲಿಂಗ" ಎಂಬ ಅಂಕಿತವಿದೆ (೭೪೬ನೆಯ ಪುಟವನ್ನು ನೋಡಿ).

ಹಾದರಿಯ ಹರ್ಷನಿಧಿಯಂ | ಮಾಧವಿಯ ಮಹಾವಿದಗ್ಧಗುರುಶಂಕರನಂ |
ಕೇದಗೆಯ ಕಿಱಿಯೆಸಳ ವು | ಣ್ಯಾಧಿಕನಂ ಕಂಡೆನೆನ್ನ ಕರಸರಸಿಜದೊಳ್ ||

### ಚಿತ್ಕ್ರಿಯಾ ಸಂಗ್ರಹ. ಸು. 1600

ಇದರಲ್ಲಿ ಕೆಲವರು ವಚನಕಾರರ ವಚನಗಳೂ ಅವಕ್ಕೆ ಆಗಮಪ್ರಮಾಣಗಳೂ ಹೇಳಿವೆ.

### ಮಹಿಮಾಷ್ಟಕ. ಸು 1700.

ಕಂದ 9. ಕೊನೆಯ ಕಂದದಲ್ಲಿ "ಹೇಮಕೂಟ ವಿರೂಪಾಕ್ಷನ ಮಹಿಮಾಷ್ಟಕ" ಎಂದಿದೆ.

ಆವನ ಧನು ಸುರರಾಶ್ರಯ | ವಾವನ ಬಿಲ್ನಾರಿಯುರಗವರ್ಯಂ ಧರಿಸಿರ್ಪುದು |
ಆವನ ಸಮರತಿ ವಿಶ್ವವು | ದೇವ ವಿರೂಪಾಕ್ಷನಲ್ಲದ ಪೆರದವರುಂಟೇ ||

### ಪ್ರೇಮಾಷ್ಟಕ. ಸು 1700.

ಕಂದ 9. ವಿರೂಪಾಕ್ಷಪ್ರೇಮಾಷ್ಟಕ ಎಂಬ ಹೆಸರೂ ಉಂಟು.

ಕಲ್ಲಯ್ಯನ ಮನದೊಡೆಯನೆ | ಮಲ್ಲಯ್ಯಗೆ ಬಳ್ಳ ಲಿಂಗವಾದನೆ ಬಾಲ್ಕೆ |
ಮೊಲ್ಲೆಯ ಬೊಮ್ಮಣ್ಣಯ್ಯನ | ನಲ್ಲನೆ ದನಿದೋಱು ಹಂಪೆಯ ವಿರೂಪಾಕ್ಷಾ ||

### ಬುಕ್ಕರಾಯ ಚರಿತ್ರೆ. 1811.

ಗದ್ಯಗ್ರಂಥ. ಇದರಲ್ಲಿ ಬುಕ್ಕರಾಯನ ವಿಷಯವಾಗಿ ವಿಶೇಷ ಸಂಗತಿಗಳೇನೂ ಹೇಳಿಲ್ಲ; ಹಂಪೆ ಅನಂತಪುರದ ಪಾಳೆಯಗಾರರ ಚರಿತೆ ತಕ್ಕಮಟ್ಟಿಗೆ ವಿಸ್ತಾರವಾಗಿ ಹೇಳಿದೆ.

# ಶುದ್ಧಿಪತ್ರ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 347 | 10 | ತೆಲುಗ ಜೊಮ್ಮಯ್ಯ | ತೆಲುಗೇಶ ಮಸಣಯ್ಯ |
| 349 | 13 | ಸಂಗಣ್ಣ | ಚಿಕ್ಕಣ್ಣ |
| 358 | 16 | ಇಟ್ಟಪ್ಪಯ್ಯ ಅಥವಾ ಎಂಬುದನ್ನು ಬಿಡಬೇಕು. | |
| 362 | 28 | ಪಂಡಿತರಾಧ್ಯ | ಪಂಡಿತಾರಾಧ್ಯ |
| 365 | 14 | ತಿಟವ | ತಿಱವ |
| ,, | 19 | ನಟಿದು | ನಱಿದು |
| 366 | 11 | ದಪು | ದರ್ಪ |
| ,, | 12 | ನಟಿವಲ್ಲಿ | ನಱಿವಲ್ಲಿ |
| ,, | 13 | ಲೋಕದರ್ | ಲೋಕದ |
| ,, | 14 | ಒಟಿದೆ | ಒಱಿದೆ |
| ,, | 15 | ಪೊಲ | ಪೊಲು |
| ,, | 16 | ತೋಟುವ | ತೋಱುವ |
| ,, | 19 | ಇಂತಿವಟಿಂದ | ಇಂತಿವಱಿಂದ |
| ,, | 23 | ನಿಮ್ಮವ | ನಿಮ್ಮುವ |
| ,, | 24 | ಇದಟಿ | ಇದಱಿ |
| 367 | 16 | ತೂಟಿ | ತೂಱಿ |
| ,, | 18 | ಹಟಿ | ಹಱಿ |
| ,, | 23 | ದಟಿ | ದಱಿ |
| 368 | 20 | ಕುಱಹು | ಕುಱುಹು |
| ,, | 27 | ತೊಱ | ತೊಱಿ |
| 373 | 18 | ಗಳಕಾಠ್ಯ | ಗಳತಾಠ್ಯ |
| 382 | 11 | ನಬಿ | ನಂಬಿ |

# APPENDIX VI

## ಪರಿಶಿಷ್ಟ VI

## Index to Poets and Works in Volumes I and II

## ಪ್ರಥಮ ದ್ವಿತೀಯ ಸಂಪುಟಗಳಲ್ಲಿ ಹೇಳಿರುವ ಕವಿಗಳ ಮತ್ತು ಗ್ರಂಥಗಳ ಅಕಾರಾದಿ ಸೂಚಿ.


| ಹೆಸರು | | ಪುಟ |
|---|---|---|
| ಅಂಜನಾಚರಿತ್ರೆ | I | 350 |
| ಅಂತಃಕರಣ ಪ್ರಕಾಶಿಕೆ | II | 365 |
| ಅಂಬಿಗರ ಚೌಡಯ್ಯ | I | 191 |
| ಅಕ್ಕಗಳ ಪೀಠಿಕೆ | I | 187 |
| ಅಕಾರಾದಿ ವೈದ್ಯನಿಘಂಟು | I | 408 |
| ಅಕ್ರೂರ ಚರಿತ್ರೆ | II | 327 |
| ಅಕ್ಷರಮಾಲಿಕಾ ಸಾಂಗತ್ಯ | II | 486 |
| ಅಖಂಡೇಶ್ವರ ವಚನ | II | 561 |
| ಅಗ್ಗಳ | I | 284 |
| ಅಚರಾಜ | I | 116 |
| ಅಚ್ಯುತದಾಸ | II | 411 |
| ಅಜಗಣ್ಣ | I | 193 |
| ಅಜಿತಪುರಾಣ | I | 65 |
| ಅಣ್ಣಾಜಿ | II | 334 |
| ಅತಿರಸಿಕ ಕರ್ಣಾಭರಣಬುಧವರ | I | 250 |
| ಅದೃಶ್ಯಕವಿ | II | 305 |
| ಅದ್ವೈತಾನಂದ | II | 554 |
| ಅನಂತನಾಥ ಪುರಾಣ | I | 334 |
| ಅನ್ನದಾನಿ ಮಲ್ಲಿಕಾರ್ಜುನಾಚಾರ್ಯ | II | 440 |
| ಅನಾಮಯ ಸ್ತೋತ್ರ ಟೀಕೆ | I | 413 |
| ಅನುಪ್ರೇಕ್ಷೆ | II | 85 |
| ಅನುಭವ ಮುಕುರ | II | 93 |
| ಅನುಭವಮುದ್ರೆ | II | 390 |
| ಅನುಭವ ಶತಕ | II | 561 |
| ಅನುಭವಸಾರ | II | 163 |

| ಹೆಸರು | | ಪುಟ |
|---|---|---|
| ಅನುಭವಾಮೃತ | II | 491 |
| ಅಪರಾಜಿತೇಶ್ವರ ಶತಕ | II | 277 |
| ಅಪ್ರತಿಮವೀರ ಚರಿತೆ | II | 465 |
| ಅಭಿನವ ಚಂದ್ರ | I | 444 |
| ಅಭಿನವ ದಶಕುಮಾರ ಚರಿತೆ | I | 404 |
| ಅಭಿನವ ನಿಘಂಟು | I | 439 |
| ಅಭಿನವ ಪಂಪ | I | 100 |
| ಅಭಿನವ ಮಂಗರಾಜ | I | 438 |
| ಅಭಿನವ ವಾದಿವಿದ್ಯಾನಂದ | II | 227 |
| ಅಭಿನವ ಶ್ರುತಮುನಿ | I | 422 |
| ಅಮರಕೋಶ ಟೀಕೆ | I | 406 |
| ಅಮರಕೋಶ ಟೀಕೆ | II | 331 |
| ಅಮರುಕ | II | 45 |
| ಅಮ್ಮನವರ ಚರಿತೆ | II | 514 |
| ಅಮಿತಗತಿ ಶ್ರಾವಕಾಚಾರ ಟೀಕೆ | I | 416 |
| ಅಮುಗಿದೇವಯ್ಯ | I | 194 |
| ಅಮೃತ ನಂದಿ | I | 408 |
| ಅರಿವಿನಮಾರಿ ತಂದೆ | I | 206 |
| ಅರುವತ್ತು ಮೂವರ ತ್ರಿಪದಿ | II | 157 |
| ಅರ್ಥಪಂಚಕ | II | 481 |
| ಅರ್ಧನೇಮಿ | I | 283 |
| ಅರ್ಧೇಂದುಮೌಳಿ ಶತಕ | II | 170 |
| ಅರ್ಹದ್ದಾಸ | I | 400 |
| ಅರ್ಹದ್ದಾಸ | II | 415 |
| ಅವಧೂತ ಗೀತೆ | II | 78 |

| ಹೆಸರು | | ಪುಟ |
|---|---|---|
| ಅವಸರದ ರೇಕಣ್ಣ | I | 208 |
| ಅಶ್ವವೈದ್ಯ | II | 171 |
| ಅಶ್ವಶಾಸ್ತ್ರ | I | 446 |
| ಅಶ್ವಶಾಸ್ತ್ರ | II | 37,367 |
| ಅಷ್ಟಭಾಷಾ ಕವೀಶ್ವರ ಶಿವದಾಸ | I | 252 |
| ಅಷ್ಟಾವರಣ ಸ್ತವ | II | 258 |
| ಅಷ್ಟಾವರಣ ಸ್ತೋತ್ರದ ತ್ರಿವಿಧಿ | I | 185 |
| ಅಷ್ಟಾವರಣ ಸ್ತೋತ್ರದ ವಚನ | II | 298 |
| ಅಷ್ಟಾವರಣ ಸ್ತೋತ್ರದ ಷಟ್ಪದ | II | 168 |
| ಆಸಗ | I | 39 |
| ಆಂದಯ್ಯ | I | 366 |
| ಆಚಣ್ಣ | I | 299 |
| ಆಚರಣೆಯ ಸಂಬಂಧದ ವಚನ | II | 214 |
| | | 324,555 |
| ಆಚಾರಸಾರಟೀಕೆ | I | 168 |
| ಆತ್ಮಲಿಂಗ ಪ್ರಣವ ಸಂಯೋಗ ಸ್ಥಲದ ತ್ರಿವಿಧಿ | I | 199 |
| ಆದಯ್ಯ | I | 203 |
| ಆದಿತ್ಯ ಪುರಾಣ | II | 260 |
| ಆದಿಪಂಪ | I | 30 |
| ಆದಿಪುರಾಣ | I | 33,399 |
| ಆದಿಯಪ್ಪ | II | 414,555 |
| ಆನಂದ ಬಸವಲಿಂಗ ಶಿವಯೋಗಿ | II | 146 |
| ಆಯುಶವರ್ಗ | I | 440 |
| ಆಯ್ದಕ್ಕಿಯ ಮಾರಯ್ಯ | I | 191 |
| ಆರಾಧ್ಯಚಾರಿತ್ರ | II | 134 |
| ಆರ್ಯಸೇನ | I | 409 |
| ಇತರ ವಚನಕಾರರು | I | 201 |
| ಇಮ್ಮಡಿ ತೋಂಟದಯ್ಯ | II | 226 |
| ಇಮ್ಮಡಿ ಮುರಿಗೆಯ ಸ್ವಾಮಿ | II | 313,575 |
| ಇಷ್ಟಲಿಂಗಸ್ತೋತ್ರ | I 213, II | 577 |
| ಈಶ್ವರಕವಿ | II | 150 |
| ಈಶ್ವರಾರ್ಯ | I | 396 |
| ಉಚಿತ ಕಥೆಗಳು | II | 322 |
| ಉಜ್ಜಿನೀಶ | II | 259 |
| ಉತ್ತರದೇಶದ ಬಸವಲಿಂಗದೇವ | II | 321 |
| ಉತ್ತರ ರಾಮಾಯಣ | II | 393,412 |
| ಉದಯ | I | 11 |
| ಉದಯಾದಿತ್ಯ | I | 159 |
| ಉದಯಾದಿತ್ಯಾಲಂಕಾರ | I | 160 |
| ಉದ್ಭಟ | I | 223 |
| ಉದ್ಭಟಕಾವ್ಯ | I | 340 |
| ಉದ್ಭಟದೇವಚರಿತ | II | 262 |
| ಉದ್ಯೋಗಸಾರ | I | 397 |
| ಉಪಾಧ್ಯಾಯ ನಿರಪೇಕ್ಷ | II | 484 |
| ಉಮಾಮಹೇಶ್ವರ ಶತಕ | II | 220 |
| ಉಮಾಸ್ತೋತ್ರ ಷಟ್ಪದಿ | II | 168 |
| ಉರಿಲಿಂಗ ದೇವ | I | 265 |
| ಉರಿಲಿಂಗಪೆದ್ದಿ | I | 275 |
| ಎಮ್ಮೆಬಸವ | II | 233 |
| ಎರಡನೆಯ ಚೆನ್ನಬಸವ | II | 163 |
| ಎಳಮಲೆಯ ಗುರು ಶಾಂತದೇವ | II | 298 |
| ಏಕೋತ್ತರ ಶತಸ್ಥಲ | II | 52 |
| ಏಕೋತ್ತರ ಶತಸ್ಥಲ ಷಟ್ಪದಿ | II | 70 |
| ಏಕೋತ್ತರ ಶತಸ್ಥಲೀ ಟೀಕೆ | II | 69 |
| ಏಕೋನವಿಂಶತಿ ಪ್ರಬಂಧ | II | 214 |
| ಏಕೋರಾಮಿತಂದೆ | I | 215 |
| ಏಚಮ | I | 74 |
| ಏಲೇಶ್ವರದ ಕೇತಯ್ಯ | I | 203 |
| ಐಪುರೀಶ್ವರ ಶತಕ | II | 73 |
| ಐರಾವತ | II | 69 |
| ಓದುವಗಿರಿಯ | II | 207 |
| ಕಂಠೀರವ ನರಸರಾಜವಿಜಯ | II | 374 |
| ಕಂತಿ | I | 110 |
| ಕಂತಿಹಂಪನ ಸಮಸ್ಯೆಗಳು | I | 110 |
| ಕಂದಶತಕ | II | 222 |
| ಕನಕಚಂದ್ರ | I | 408 |
| ಕನಕದಾಸ | II | 237 |
| ಕನ್ನಡಗೀತಿಗಳು | I | 197 |
| ಕನ್ನಡ ಜಾಣ, ಬಿರುದು | II | 175 |

| ಹೆಸರು | | ಪುಟ |
|---|---|---|
| ಕನ್ನಡ ರತ್ನಕರಂಡಕ | I | 441 |
| ಕಪ್ರಜ್ಞಭಟ್ಟ | I | 74 |
| ಕಂಪಿ ನಂಜಯ್ಯ | II | 294, 574 |
| ಕಪ್ಪಿ ನಂಜಿದೇವರು | II | 574 |
| ಕಪೋತವಾಕ್ಯ | II | 549 |
| ಕಬ್ಬಿಗರ ಕಾವ | I | 367 |
| ಕಬ್ಬಿಗರ ಕೈಪಿಡಿ | II | 218 |
| ಕಮಲಭವ | I | 361 |
| ಕಮಲಾಚಲ ಮಾಹಾತ್ಮ್ಯ | II | 471 |
| ಕಮಲಾದಿತ್ಯ | I | 50 |
| ಕರಣಹಸುಗೆ | I | 178 |
| ಕರಣಹಸುಗೆಯ ಟೀಕೆ | II | 397 |
| ಕರಸ್ಥಲದ ನಾಗಯ್ಯನ ಚರಿತೆ | II | 400 |
| ಕರಸ್ಥಲದ ನಾಗಿದೇವ | II | 69 |
| ಕರಸ್ಥಲದ ನಾಗಿದೇವತ್ರಿವಿಧಿ | II | 69 |
| ಕರ್ಣಪಾರ್ಯ | I | 139 |
| ಕರ್ಣವೃತ್ತಾಂತ ಕಥೆ | II | 326 |
| ಕರ್ನಾಟಕ ಭಾಷಾಭೂಷಣ | II | 147 |
| ಕರ್ನಾಟಕ ಶಬ್ದಮಂಜರಿ | II | 286 |
| ಕರ್ನಾಟಕ ಶಬ್ದಾನುಶಾಸನ | II | 350 |
| ಕರ್ನಾಟಕ ಸಂಜೀವನ | II | 339 |
| ಕಲ್ಲುಮಠದ ಪ್ರಭುದೇವ | II | 61 |
| ಕಲ್ಲಯ್ಯ | I | 3[illegible]8 |
| ಕಲ್ಲರಸ | II | 93 |
| ಕರ್ಪರಸ | I | 96 |
| ಕಲ್ಯಾಣಕೀರ್ತಿ | II | 84 |
| ಕಲ್ಯಾಣದ ವಚನಭಂಡಾರಿ ಶಾಂತರಸ | I | 207 |
| ಕಲ್ಯಾಣದಸ್ವಾಮಿ | II | 172 |
| ಕಲ್ಯಾಣೇಶ್ವರ | II | 76 |
| ಕಲಿದೇವಯ್ಯ | I | 194 |
| ಕವಿಕಂದಹಾರ | II | 370 |
| ಕವಿಕಾಮ | I | 305 |
| ಕವಿಕಾಳಿದಾಸ | I | 157 |
| ಕವಿಜಿಹ್ವಾಬಂಧನ | II | 151 |
| ಕವಿತಾವಿಲಾಸ | I | 113, 451 |
| ಕವಿನಾಗದೇವ | I | 345 |
| ಕವಿಪರಮೇಷ್ಠಿ | I | 4 |
| ಕವಿಪುಟ್ಟಣಾಂಕ ಪಂಡಿತ | I | 426 |
| ಕವಿಮಲ್ಲ | I | 78, 443 |
| ಕವಿಮಾದಣ್ಣ | II | 433 |
| ಕವಿರಾಜಮಾರ್ಗ | I | 18 |
| ಕವಿರಾಜರಾಜ | I | 25 |
| ಕವಿರಾಜಸಂಕಷ್ಟ | I | 399 |
| ಕವಿರಾಮ | I | 198 |
| ಕವಿಲಿಂಗ | II | 137 |
| ಕವಿಲಿಂಗನ ಪದ | II | 137 |
| ಕವಿವ್ಯಾಸ | I | 26 |
| ಕವಿವಿಟ್ಠಲ | II | 331 |
| ಕವೀಶ್ವರ | I | 14 |
| ಕಾದಂಬರಿ | I | [illegible]9 |
| ಕಾಮಂದಕನೀತಿ | II | 484 |
| ಕಾಮನಕಥೆ | II | 85 |
| ಕಾಮನ ಪದ | II | 542 |
| ಕಾಮ ವಚನ | II | 642 |
| ಕಾರಣಾಗಮದ ವಾರ್ಧಕ | II | 172 |
| ಕಾರ್ಕಳದ ಗೊಮ್ಮಟೇಶ್ವರ ಚರಿತೆ | II | 371 |
| ಕಾರ್ತಿಕೇಯಾನುಪ್ರೇಕ್ಷಾಟೀಕೆ | I | 321 |
| ಕಾರುಗಹಳ್ಳಿ ಶಾಂತಯ್ಯ | II | 532 |
| ಕಾಲಜ್ಞಾನ | I | 179, 185, 187, 189, 197, 198, II 234, 440, 559 |
| ಕಾಲಜ್ಞಾನ ವಚನ | I | 176, 180 |
| ಕಾವನಗೆಲ್ಲ | I | 367 |
| ಕಾವ್ಯರತ್ನ | I | 119 |
| ಕಾವ್ಯಸಾರ | I | 371 ; II 229 |
| ಕಾವ್ಯಾವಲೋಕನ | I | 146 |
| ಕಾಳವ್ವೆ | I | 196 |
| ಕಿಕ್ಕೇರಿಯಾರಾಧ್ಯ ನಂಜುಂಡ | II | 265 |
| ಕಿರಾತ | I | 385 |
| ಕೀರ್ತನೆಗಳು | II | 152, 206, 233, 243, 280, 303, 359, 516 |

| ಹೆಸರು | | ಪುಟ |
|---|---|---|
| ಕೀರ್ತಿವರ್ಮ | I | 129 |
| ಕುಂತಿ | II | 174 |
| ಕುಪ್ಪಟೂರ ತಿಮ್ಮರ ವಾಸುದೇವ | I | 288 |
| ಕುಮಟರಾಮನ ಕಥೆ | II | 423 |
| ಕುಮಾರಚೆನ್ನಬಸವ | II | 254 |
| ಕುಮಾರಪದ್ಮರಸ | I | 277 |
| ಕುಮಾರಬಂಕನಾಥ | II | 56 |
| ಕುಮಾರರಾಮಕಥೆ | II | 204 |
| ಕುಮಾರವಾಲ್ಮೀಕಿ | II | 141 |
| ಕುಮಾರವ್ಯಾಸ | II | 64 |
| ಕುಮುದೇಂದು | I | 392 |
| ಕುಮುದೇಂದುರಾಮಾಯಣ | I | 383 |
| ಕುಸುಮಾವಳಿ | I | 315 |
| ಕೃಷ್ಣ | II | 540 |
| ಕೃಷ್ಣಕರ್ಣಾಮೃತ | II | 540 |
| ಕೃಷ್ಣಗೋಪೀವಿಲಾಸ | II | 546 |
| ಕೃಷ್ಣಚಾರಿತ್ರ | II | 557 |
| ಕೃಷ್ಣಲೀಲಾಭ್ಯುದಯ | II | 437 |
| ಕೃಷ್ಣಶರ್ಮ | II | 528 |
| ಕೆರೆಯಪದ್ಮರಸ | I | 245 |
| ಕೆರೆಯ ಪದ್ಮರಸನನ್ನು ಸ್ತುತಿಸಿದ ಕನ್ನಡ ಕವಿಗಳು | I | 250 |
| ಕೇಶವದೇವ | I | 288 |
| ಕೇಶವರಾಜ | I | 268 |
| ಕೇಶವರಾಜಜೀಮೂತ | I | 297 |
| ಕೇಶವವರ್ಣಿ | I | 415 |
| ಕೇಶವಶತಕ | II | 554 |
| ಕೇಶಿದಂಡನಾಯಕ | I | 62 |
| ಕೇಶಿಯಣ್ಣ | I | 319 |
| ಕೇಶಿರಾಜ | I | 385 |
| ಕ್ಷೇತ್ರಗಣಿತ | I 127, II | 547 |
| ಕೈವಲ್ಯಕಲ್ಪವಲ್ಲರಿ | II | 560 |
| ಕೈವಲ್ಯಚಿಂತಾಮಣಿ | II | 553 |
| ಕೈವಲ್ಯಪದ್ಧತಿ | II | 154 |
| ಕೊಂಡಗುಳಿಕೇಶಿರಾಜ | I | 183 |
| ಕೊಟ್ಟೂರು ಬಸವೇಶ್ವರಪುರಾಣ | II | 501 |
| ಕೋಟೀಶ್ವರ | II | 145 |
| ಕೋಲಶಾಂತಯ್ಯ | I | 192 |
| ಖಗೇಂದ್ರಮಣಿದರ್ಪಣ | I | 418 |
| ಗಂಗ | II | 421 |
| ಗಂಗಾಧರ | II | 270 |
| ಗಂಗಾಧರಾಚಾರ್ಯ | II | 97 |
| ಗಗನತಾರಾವಳಿ | II | 541 |
| ಗಜಶಾಸ್ತ್ರ | I | 17 |
| ಗಜಾಂಕುಶ | I | 72 |
| ಗಣೇಶಮಸಣಯ್ಯ | I | 195 |
| ಗಣದಾಸಿವೀರಣ್ಣ | II | 346 |
| ಗಣಭಾಷ್ಯರತ್ನಮಾಲೆ | II | 101 |
| ಗಣಸಹಸ್ರನಾಮ | I | 214 |
| ಗಣಿತಸಾರ | II | 422 |
| ಗತಪ್ರತ್ಯಾಗತ | I | 40 |
| ಗದಾಯುದ್ಧ | I | 61 |
| ಗಿರಿಜಾಕಲ್ಯಾಣ | I | 227 |
| ಗೀತಗೋಪಾಲ | II | 459 |
| ಗುಣಚಂದ್ರ | II | 416 |
| ಗುಣನಂದಿ | I | 22 |
| ಗುಣರತ್ನ, ಬಿರುದು | II | 176 |
| ಗುಣವರ್ಮ I & II | I | 23, 356 |
| ಗುಣವರ್ಮ, ವಿಚಾರ | I | 23 |
| ಗುಪ್ತಮಂಚಣ್ಣ | I | 209 |
| ಗುಬ್ಬಿಯ ಮಲ್ಲಣ್ಣ | II | 101 |
| ಗುಬ್ಬಿಯ ಮಲ್ಲಣಾರ್ಯ | II | 191 |
| ಗುಮ್ಮಟಸ್ತುತಿ | I | 432 |
| ಗುಮ್ಮಟಾರ್ಯ | II | 169 |
| ಗುಮ್ಮಳಾಪುರದ ಸಿದ್ಧಲಿಂಗೇಶ್ವರ | II | 127 |
| ಗುರುದತ್ತಚರಿತ | II | 392 |
| ಗುರುದೇವ | I | 413 |
| ಗುರುನಂಜ | II | 187 |
| ಗುರುಪ್ರಸಾದ | II | 424 |
| ಗುರುಬಸವ | II | 74 |

| ಹೆಸರು | ಪುಟ |
|---|---|
| ಗುರುಬಸವಾರ್ಯರ ವಚನ | II 74 |
| ಗುರುಬೋಧಾಮೃತ | II 147 |
| ಗುರುಭಕ್ತಾಂಡಾರಚರಿತ್ರ | II 427 |
| ಗುರುಮೂರ್ತಿಶಂಕರಶತಕ | II 82 |
| ಗುರುರಗಳೆಯ ಟೀಕೆ | II 391 |
| ಗುರುರಾಜಚಾರಿತ್ರ | II 385 |
| ಗುರುಲಿಂಗಜಂಗಮಚಾರಿತ್ರ | II 439 |
| ಗುರುಲಿಂಗವಿಭು | II 261 |
| ಗುರುಸಿದ್ಧ | II 575 |
| ಗುರುಸ್ತೋತ್ರ | I 199 |
| ಗುರುಸ್ತೋತ್ರತ್ರಿಪದಿಯ ಟೀಕೆ | I 397 |
| ಗುರುಸ್ತೋತ್ರದ ಟೀಕೆ | II 295 |
| ಗುಹೇಶ್ವರ ವಚನ | I 181 |
| ಗೊಮ್ಮಟಸಾರಟೀಕೆ | I 416 |
| ಗೊಮ್ಮಟಸ್ತುತಿ | I 280 |
| ಗೋವಿಂದ | II 394 |
| ಗೋವೈದ್ಯ | I 130 |
| ಗೌರಾರ್ಯ | I 390 |
| ಘಟಚಕ್ರದ ವಚನ | I 177 |
| ಘಟ್ಟಿವಾಳಯ್ಯ | I 189 |
| ಘೋರಾಸುರಯುದ್ಧ | II 539 |
| ಚಂದನತಿಲಕ, ಬಿರುದು | II 570 |
| ಚಂದ್ರ | I 15 |
| ಚಂದ್ರಕವಿ | II 81 |
| ಚಂದ್ರಕೀರ್ತಿ | I 442 |
| ಚಂದ್ರಚೂಡಾಮಣಿಶತಕ | I 86 |
| ಚಂದ್ರನಾಥಾಷ್ಟಕ | I 128, 360 |
| ಚಂದ್ರಪ್ರಭಚರಿತೆ | I 75, II 252 |
| ಚಂದ್ರಪ್ರಭ ಪುರಾಣ | I 13, 285 |
| ಚಂದ್ರಪ್ರಭಷಟ್ಪದಿ | II 304 |
| ಚಂದ್ರಭಟ್ಟ | I 73, 82 |
| ಚಂದ್ರಮ | II 371, 422 |
| ಚಂದ್ರರಾಜ | I 89 |
| ಚಂದ್ರಶೇಖರ | II 526 |
| ಚಕ್ರಪಾಣಿರಂಗನಾಥ | I 296 |
| ಚಕ್ರೇಶ್ವರ ಚರಿತ | I 62 |
| ಚತುರಾಚಾರ್ಯಪುರಾಣ | II 570 |
| ಚತುರಾಸ್ಯನಿಘಂಟು | II 92 |
| ಚತುರಾಸ್ಯ ಬೊಮ್ಮರಸ | II 92 |
| ಚತುರ್ಮುಖ ಬೊಮ್ಮರಸ | II 138 |
| ಚವುಂಡಿ | II 174 |
| ಚಾಕರಾಜ | II 173 |
| ಚಾಟುವಿಠಲನಾಥ | II 222 |
| ಚಾಮಯ್ಯ | II 535 |
| ಚಾಮರಸ | II 59 |
| ಚಾಮರಾಜ | II 359 |
| ಚಾಯಣಭಾರತ | II 267 |
| ಚಾರಿತ್ರಸಾರಟೀಕೆ | I 408 |
| ಚಾವಣ | I 268 |
| ಚಾವುಂಡರಾಯ | I 46, 163 |
| ಚಾವುಂಡರಾಯಪುರಾಣ | I 47 |
| ಚಿಂತಾಮಣಿಪ್ರತಿಪದ | I 438 |
| ಚಿಕದೇವರಾಜಬಿನ್ನಪ | II 457 |
| ಚಿಕದೇವರಾಜ ವಂಶಾವಳಿ | II 464, 507 |
| ಚಿಕದೇವರಾಜವಿಜಯ | II 412 |
| ಚಿಕ್ಕದೇವರಾಜ | II 455 |
| ಚಿಕ್ಕಯ್ಯನಸಾಂಗತ್ಯ | II 269 |
| ಚಿಕ್ಕರಸ | II 513 |
| ಚಿಕ್ಕುಪಾಧ್ಯಾಯ | II 467 |
| ಚಿತ್ರಶತಕಸಾಂಗತ್ಯ | II 488 |
| ಚಿತ್ರಹಸುಗೆ | I 127 |
| ಚಿದಾನಂದಕವಿ | I 354, II 508 |
| ಚಿನ್ಮಯಚಿಂತಾಮಣಿ | II 421 |
| ಚೂಡನಾಸ್ಥಾನ | II 201 |
| ಚೂಡಾಮಣಿ | I 7 |
| ಚೂಡಾರತ್ನ, ಬಿರುದು | II 176 |
| ಚೆನ್ನಕವಿ | II 346 |
| ಚೆನ್ನಣ | II 436 |
| ಚೆನ್ನಪ್ಪ | II 440 |
| ಚೆನ್ನಬಸವ | I 177 |

| ಹೆಸರು | | ಪುಟ |
|---|---|---|
| ಚೆನ್ನಬಸವನ ಮಂತ್ರಗೋಪ್ಯದ ಟೀಕೆ | II | 163 |
| ಚೆನ್ನಬಸವಪುರಾಣ | II | 308 |
| ಚೆನ್ನಬಸವಸ್ತೋತ್ರದ ರಗಳೆ | I | 295 |
| ಚೆನ್ನಬಸವಾಂಕ | II | 234 |
| ಚೆನ್ನಮಲ್ಲಿಕಾರ್ಜುನ | II | 294 |
| ಚೆನ್ನಮಲ್ಲೇಶ | II | 543 |
| ಚೆನ್ನಮಲ್ಲೇಶ್ವರ ಶತಕ | II | 295 |
| ಚೆನ್ನರಾಜ | II | 300 |
| ಚೆನ್ನವೀರ | II | 169 570 |
| ಚೆನ್ನವೀರಣ್ಣೊಡೆಯ | II | 429 |
| ಚೆನ್ನವೃಷಭ | II | 556 |
| ಚೆನ್ನಿಗ | II | 530 |
| ಚೇರಮಕಾವ್ಯ | II | 209 |
| ಚೇರಮಾಂಕ | II | 208 |
| ಚೇರೆಯ ಅಲ್ಲಾಳಬುಧ | I | 380 |
| ಚೋರಕಥೆ | II | 338 |
| ಚೋಳಪಾಲಕಚರಿತ | I | 385 |
| ಚೋಳರಾಜಸಾಂಗತ್ಯ | II | 257 |
| ಚೌಂಡರಸ | II | 403, 451 |
| ಛಂದಸ್ಸಾರ | II | 416 |
| ಛಂದೋಂಬುಧಿ | I | 56 |
| ಛತ್ತೀಸ ರತ್ನಮಾಲೆ | I | 136 |
| ಜಂಗಮರಗಳೆ | II | 127 |
| ಜಕ್ಕಣಾರ್ಯ | II | 57 |
| ಜಕ್ಕಭೂಪಾಲ | II | 361 |
| ಜಗದ್ದಳ ಸೋಮನಾಥ | I | 164 |
| ಜಗದಾರಾಧ್ಯ ನಾಗದೇವ | I | 251 |
| ಜಗನ್ನಾಥವಿಜಯ | I | 272 |
| ಜನವಶ್ಯ | II | 94 |
| ಜನ್ನ | I | 328 |
| ಜಯನೃಪಕಾವ್ಯ | I | 180 |
| ಜಯಬಂಧು | I | 12 |
| ಜಯಬಂಧುನಂದನ | I | 16 |
| ಜಯವರ್ಮ | I | 181 |
| ಜಾತಕತಿಲಕ | I | 76 |

| ಹೆಸರು | | ಪುಟ |
|---|---|---|
| ಜ್ಞಾನಚಂದ್ರಚರಿತೆ | II | 564, 565 |
| ಜ್ಞಾನಚಂದ್ರಾಭ್ಯುದಯ | II | 84, 569 |
| ಜ್ಞಾನಭಾಸ್ಕರಚರಿತೆ | II | 281 |
| ಜ್ಞಾನಸಾರ | I | 88 |
| ಜಿತೇಂದ್ರಮಾಲಾಟೀಕೆ | I | 416 |
| ಜಿನದತ್ತರಾಯ ಚರಿತೆ | II | 514 |
| ಜಿನದೇವಣ್ಣ | II | 86 |
| ಜಿನಮುನಿತನಯ | II | 9, 420 |
| ಜಿನಸಂಹಿತಾಟೀಕೆ | I | 113 |
| ಜಿನಸ್ತುತಿ | I | 254 ; II 85 |
| ಜಿನಾಕ್ಷರಮಾಲೆ | I | 45 |
| ಜಿನಾಚಾರ್ಯ | I | 447 |
| ಜೀವಂಧರಚರಿತೆ | II | 47 |
| ಜೀವಂಧರಸಾಂಗತ್ಯ | II | 131 |
| ಜೀವಂಧರಷಟ್ಪದಿ | II | 146 |
| ಜೀವಸಂಬೋಧನೆ | I | 312 |
| ಜೇಡರದಾಸಿಮಯ್ಯ | I | 201 |
| ಜೈನಗಣಿತಸೂತ್ರೋದಾಹರಣ | I | 127 |
| ಜೈಮಿನಿಭಾರತ | II | 528 |
| ಡಕ್ಕೆಯ ಬೊಮ್ಮಣ್ಣ | I | 208 |
| ತತ್ವತ್ರಯವಿವರಣ | II | 557 |
| ತತ್ವಭೇದಾಷ್ಟಕ | II | 86 |
| ತತ್ವರತ್ನಪ್ರದೀಪಿಕೆ | I | 255 |
| ತತ್ವಾರ್ಥತಾತ್ಪರ್ಯವೃತ್ತಿ | I | 255 |
| ತತ್ವಾರ್ಥಸೂತ್ರವೃತ್ತಿ | I | 80 |
| ತಾತ್ಪರ್ಯಸಂಗ್ರಹಟೀಕೆ | II | 440 |
| ತಿಪ್ಪಣೋಜ | I | 252 |
| ತಿಮ್ಮ | II | 320 |
| ತಿಮ್ಮಕವಿ | II | 492 |
| ತಿಮ್ಮಣ್ಣಕವಿ | II | 189 |
| ತಿಮ್ಮರಸ | II | 408, 547 |
| ತಿರುಮಲಭಟ್ಟ | II | 317 |
| ತಿರುಮಲಾರ್ಯ | II | 461 |
| ತಿರುಮಲವೈದ್ಯ | II | 593 |
| ತಿರುವಾಯ್ಮೊಳಿ ಟೀಕೆ | II | 480 |

| ಹೆಸರು | | ಪುಟ |
|---|---|---|
| ತ್ರಿಪುರದಹನ ಸಾಂಗತ್ಯ | । | 352 |
| ತ್ರಿಪುರಸುಂದರೀಸ್ತೋತ್ರ | ।। | 167 |
| ತ್ರಿಭುವನತಿಲಕ | ।। | 138 |
| ತ್ರಿಲೋಕಶತಕ | ।। | 277 |
| ತ್ರಿವಿಕ್ರಮಪಂಡಿತ | । | 283 |
| ತ್ರಿಷಷ್ಟಿಪುರಾತನರ ಚರಿತ್ರೆ | ।। | 161 |
| ತ್ರಿಷಷ್ಟಿಲಕ್ಷಣ ಮಹಾಪುರಾಣ | । | 47 |
| ತುರುಗಾಹಿ ರಾಮಣ್ಣ | । | 209 |
| ತುಲಸೀಮಾಹಾತ್ಮ್ಯ | ।। | 412 |
| ತೆರಕಣಾಂಬಿ ಬೊಮ್ಮರಸ | ।। | 128 |
| ತ್ರೈಲೋಕ್ಯಚೂಡಾಮಣಿಸ್ತೋತ್ರ | । | 136 |
| ತೊರವೆಯ ರಾಮಾಯಣ | ।। | 142 |
| ತೋಂಟದ ಸಿದ್ಧೇಶ್ವರ | ।। | 97 |
| ತೋಂಟದ ಸಿದ್ಧೇಶ್ವರನ ಪುರಾಣ | ।। | 297 |
| ದಶಗ್ರಂಥಿಯ ಟೀಕೆ | ।। | 429 |
| ದಶಾವತಾರಚರಿತೆ | ।। | 511 |
| ದ್ರವ್ಯಸಂಗ್ರಹಸೂತ್ರ ಟೀಕೆ | । | 39 |
| ದಾಮರಾಜ | । | 98 |
| ದಾಮೋದರ | । | 380 |
| ದಾಮರಸ | । | 252 |
| ದಾಸೋಹದ ಸಂಗಣ್ಣ | । | 209 |
| ದ್ವಾದಶಾನುಪ್ರೇಕ್ಷೆ | ।। | 87 |
| ದಿವ್ಯಸೂರಿಚರಿತೆ | ।। | 478 |
| ದಿವಾಕರನಂದಿ | । | 79 |
| ದೀಕ್ಷಾಬೋಧೆ | । | 247 |
| ದೀಪದಕಲಿಯಾರಕಾವ್ಯ | ।। | 544 |
| ದುರ್ಗಸಿಂಹ | । | 149 |
| ದುರ್ವಿನೀತ | । | 12 |
| ದೇಪರಾಜ | ।। | 43 |
| ದೇವಕವಿ | । | 314 |
| ದೇವಪಾರ್ಯ | । | 267 |
| ದೇವಭದ್ರಮುನಿ | । | 216 |
| ದೇವರಸ | ।। | 391, 558 |
| ದೇವರಸಪಂಡಿತ | । | 251 |
| ದೇವರಾಚಾರ್ಯ | ।। | 379 |
| ದೇವರಾಜೇಂದ್ರಸಾಂಗತ್ಯ | ।। | 535 |
| ದೇವೀಸ್ತೋತ್ರ | ।। | 575 |
| ದೇವೇಂದ್ರಮುನಿ | । | 320 |
| ದೇವೋತ್ತಮ | ।। | 330 |
| ದೈವಜ್ಞವಲ್ಲಭ | ।। | 535 |
| ದೊಡ್ಡಣಾಂಕ | ।। | 308 |
| ದೊಡ್ಡತಿಮ್ಮದಾಸ | ।। | 558 |
| ದೊಡ್ಡಯ್ಯ | ।। | 251 |
| ದೊಡ್ಡರನಾಚಯ | । | 288 |
| ದೊಡ್ಡ ಷಡಕ್ಷರಸ್ವಾಮಿ | ।। | 428 |
| ದೊಡ್ಡಷಡಕ್ಷರಸ್ವಾಮಿಯ ವಚನ | ।। | 428 |
| ದೋರಾಂಬುಧಿಯ ರಾಮಣ್ಣ | । | 250 |
| ಧನ್ಯಕುಮಾರಚರಿತೆ | ।। | 414 |
| ಧರಣಿಪಂಡಿತ | ।। | 417 |
| ಧರಣೋಜ | ।। | 49 |
| ಧರ್ಮನಾಥ ಪುರಾಣ | । | 415, 429 |
| ಧರ್ಮಪರೀಕ್ಷೆ | । | 170 |
| ಧರ್ಮಶರ್ಮಾಭ್ಯುದಯ ಟೀಕೆ | ।। | 172 |
| ಧರ್ಮಾಮೃತ | । | 119 |
| ನಂಜ | ।। | 549 |
| ನಂಜಚಾರ್ಯ | ।। | 438 |
| ನಂಜನಾಥಭೂಪಾಲ | ।। | 559 |
| ನಂಜುಂಡ | ।। | 202 |
| ನಂದಿಮಾಹಾತ್ಮ್ಯ | ।। | 395 |
| ನಂದೀಶಕವಿ | ।। | 228 |
| ನಗೆಯಮಾರಿತಂದೆ | । | 207 |
| ನನ್ನಯ್ಯಗಳ ಚಾರಿತ್ರ | ।। | 304, 433 |
| ನಮಕ ಚಮಕ ಟೀಕೆ | ।। | 159 |
| ನಯವರ್ಮ | । | 381 |
| ನಯಸೇನ | । | 117 |
| ನರಪಿಂಗಲಿ | ।। | 172, 416 |
| ನರಸಾರ್ಯ | ।। | 563 |
| ನರಸಿಂಹ | ।। | 435 |
| ನರಸಿಂಹಚಾರಿತ್ರ | ।। | 590 |
| ನರಸಿಂಹಸ್ತುತಿಯ ಹಾಡು | ।। | 557 |

ವಚನಗಳಲ್ಲಿ ಮಾರೇಶ್ವರ ಎಂಬ ಅಂಕಿತವಿದೆ. ಒಂದೆರಡು ವಚನಗಳನ್ನು ಉದಾಹರಿಸುತ್ತೇವೆ:—

ಊಡಿದದುಣ್ಣದು, ಒಡನೆ ಮಾತಾಡದು, ನೋಡದು, ನುಡಿಯದು, ಬೇಡದು, ಕಾಡದು, ಕಾಡಬೆರಣೆಯ ಕೈಯಲಿ ಕೊಟ್ಟು ಹೇಳಿದ ಹೋದೆಯೋ ಮಾರೇಶ್ವರಾ.

ಸತ್ಯದ ಹಿರಿಯರ ಕತ್ತಲೆ ಕಚ್ಚಿ ಹುತ್ತವನೇಱುತ್ತಲಿಪ್ಪರಲ್ಲಾ. ಅಲ್ಲದ ಚೇಳಿನ ಬಲಕ್ಕೆ ಹೋಗಿ ಇವರೆಲ್ಲರೂ ಒಸೆದು ಕೆಟ್ಟರಲ್ಲಾ. ಇವರೆಲ್ಲರ ಕಾರ್ಯ ವಿಲ್ಲಿಯೋ ಉಱಿಯಿತ್ತು ಲ್ಲವಬರಾರೊ ಮಾರೇಶ್ವರಾ.

ಪುಟ 360-361ರಲ್ಲಿ ಹೇಳಿರುವ ಕೆಲವರು ವಚನಕಾರರ ವಚನಗಳನ್ನು ಉದಾಹರಿಸುತ್ತೇವೆ. ಇವರೆಲ್ಲಾ ಬಸವನ ಸಮಕಾಲದವರು ಎಂದು ತೋರುತ್ತದೆ.

## ಏಕಾಂತದ ರಾಮಯ್ಯ ಅಥವಾ ಏಕಾಂತರಾಮಿತಂದೆ. ಸು. 1160

ಇವನ ಅಂಕಿತವು ಎನ್ನಯ್ಯ ಚೆನ್ನರಾಮ ಅಥವಾ ಚೆನ್ನರಾಮೇಶ್ವರ ಲಿಂಗ 360ನೆಯ ಪುಟದಲ್ಲಿ ಕೊಟ್ಟಿರುವ ಏಕಾಂತ ರಾಮೇಶ್ವರಲಿಂಗ ಎಂಬುದು ತಪ್ಪು.

ಅಶನ ವ್ಯಸನ ಸರ್ವವಿಷಯಾದಿಗಳಲ್ಲಿ ಹುಸಿದು ಪಿಸುಣತ್ವದಿಂದ ಗಸಣೆಗೊಂಡು ಮಾಡಿಸಿಕೊಂಬುದು ಸಂಬಂಧವಲ್ಲ. ತಿಲರಸವಾರಿಯ ಭೇದದಂತೆ ಮಣಿಯೊಳಗಿದ್ದ ಸೂತ್ರದಂತೆ ಅಂಗವ ತೀರ್ಚಿ ಪ್ರಾಯ್ದು ನಿಂದ ಅಹಿಯ ಅಂಗದಂತೆ ಸದ್ಗುರುಸ್ಥಲದ ಸಂಬಂಧ ಎನ್ನಯ್ಯ ಚೆನ್ನರಾಮೇಶ್ವರಲಿಂಗವನಱಿಯಬಲ್ಲಡೆ. (366ನೆಯ ಪುಟದಲ್ಲಿ ಒಂದು ವಚನವು ಉದಾಹೃತವಾಗಿದೆ.)

## ಕನ್ನದ ಮಾರಿತಂದೆ. ಸು. 1160

ಕತ್ತಲೆಯಲ್ಲಿ ಕನ್ನವನಿಕ್ಕಿದಡೆ ಎನಗೆ ಕತ್ತಿಯ ಕೊಟ್ಟ ಕರ್ತೃವಿಂಗೆ ಭಂಗ; ಅವರು ಮಱೆದಿರ್ದಲ್ಲಿ ಮಱೆಯ ಹೊಕ್ಕಡೆ ಎನ್ನ ಚೋರತನದ ಅಱಿಕೆ ಧಂಗ; ಮಱೆದಿರ್ದವರ ಎಬ್ಬಿಸಿ ಅವರಿಗೆ ಅವರೊಡವೆಯ ತೋಱಿ ಎನ್ನೊಡವೆಯ ತಂದೆ ಮಾರನ ವೈರಿ ಮಾರೇಶ್ವರ.

## ಪ್ರಸಾದಿ ಲೆಂಕಬಂಕಣ್ಣ. ಸು. 1160

ರೂಪನಱಿದು ರುಚಿಯನುಂಡು ಅವಱ ನಿಹಿತಂಗಳ ಕಂಡು ಮತ್ತೆ ಲಿಂಗಕ್ಕೆ ಅರ್ಪಿಸಿ ಪ್ರಸಾದ ಮುಂತಾಗಿ ಕೊಂಡೆಹೆನೆಂಬ ವರ್ತಕಭಂಡರ ನೋಡಾ. ಕಟ್ಟಿ ಹುಟ್ಟಿದ ರಕ್ಷಸುಗುಣ, ಅಪ್ಪು ತುಂಬಿದ ಮುತ್ತು, ಕಳೆ ತುಂಬಿದ ಬೆಳಗು, ಕೊಳವುದೋಱುವ ಸೂತ್ರ, ಲವಲವಿಕೆಯಿಲ್ಲದ ಚಿತ್ತ, ಇದಱ ಗುಣವನಱಿಯದ ಆತ್ಮ, ಇಂತಿವು ಫಲಿಸಬಲ್ಲವೇ ? ಕ್ರಿಯೆಯನಱಿದು ಅರ್ಪಿಸಬೇಕು ; ಅರ್ಪಿಸುವಲ್ಲಿ ದೃಷ್ಟಾಂತಸಿದ್ಧಿ ಪ್ರಸಿದ್ಧವಾಗಬೇಕು. ಕಾಣದವಗೆ ತಾ ಕಂಡು ಕುಱುಹಿನ ದಿಕ್ಕ ಅಱುಹಿತೋಱುವ ತೆಱನಂತೆ, ತಾ ಲಕ್ಷಿಸಿದಲ್ಲಿ ತಾ ದೃಷ್ಟಿಸಿದಲ್ಲಿ ತಾ ಮುಟ್ಟಿದಲ್ಲಿ ಅರ್ಪಿತವಾದ ಪ್ರಸಾದಿಯು ಕಟ್ಟು ದಹನಚಂಡಿಕೇಶ್ವರ ಲಿಂಗವು ತಾನಾದ ಚಿತ್ತ ದವನ ಮುಟ್ಟು.

## ಮೈದುನ ರಾಮಯ್ಯ. ಸು 1160

ಮಱಲಲ್ಲಿ ರಸವುಂಟೆ ? ನೆಱಲಿಗೆ ತಡೆಯುಂಟೆ ? ರಣದಲ್ಲಿ ತಪವುಂಟೆ ? ನೇಹ ತಪ್ಪಿದಲ್ಲಿ ಮೋಹವನರಸಲುಂಟೆ ? ಮಹಾಲಿಂಗ ಚೆನ್ನರಾಮ ಮನವುಂಡ ಬೞಿಕ ಕಂಗಳಗೆ ವಿಷವಯ್ಯ.

## ಸಿದ್ಧಾಂತಿ ವೀರಸಂಗಯ್ಯ. ಸು. 1160

ಕ್ರಿಯೆಯಲ್ಲಿ ವಸ್ತುವಿಪ್ಪುದೆ ದಿಟ, ಆದಡೆ ಇನ್ನು ತಿಳದು ನೋಡಿದಲ್ಲಿ ವಸ್ತುವಿನಲ್ಲಿ ಕ್ರಿಯೆಯಿಪ್ಪುದೆ ದಿಟ , ಇಂತೀ ಉಭಯವ ತಿಳದು ನೋಡಿದಲ್ಲಿ ವಸ್ತುವಿಗೂ ಕ್ರಿಯೆಗೂ ಭಿನ್ನವುಂಟು. ಅದೆಂತೆಂದಡೆ ಸಕ್ಕರೆಯ ಕುಂಭವೆನ ಲೇಕೆ ? ತುಪ್ಪದ ಕಂದಲೆನಲೇಕೆ ? ಕಪ್ಪುರದ ಕರಂಡವೆನಲೇಕೆ ? ಆ ವಸ್ತು ದೃಷ್ಟ ದಿಟವೆ. ಕುಂಭ ಸಕ್ಕರೆಯಲ್ಲ ಸಕ್ಕರೆ ಕುಂಭವಲ್ಲ ; ತುಪ್ಪ ಕಂದಲಲ್ಲ ಕಂದಲು ತುಪ್ಪವಲ್ಲ ; ಕರಂಡ ಕಪ್ಪುರವಲ್ಲ ಕಪ್ಪುರ ಕರಂಡವಲ್ಲ ; ಅಲ್ಲಿದ್ದ ವಸ್ತು ಹೋದಮತ್ತೆ ಉಪದೃಷ್ಟದ ಮಾತದಗಿತ್ತು, ಬಣ್ಣವಿಲ್ಲದ ಮತ್ತೆ ಬಂಗಾರ ವೆಂಬ ಕುಱುಹುಂಟೆ ? ಸಕ್ಕರೆ ತುಪ್ಪ ಕಪ್ಪುರ ಹೋದ ಮತ್ತೆ ಘಟವಲ್ಲದೆ ವಸ್ತುನಾಮವಿಲ್ಲ. ವಸ್ತು ವಸ್ತುಕದಂತೆ, ಘಟ ಆತ್ಮನಂತೆ, ಉಭಯಕ್ಕೂ ಭಿನ್ನವಿಲ್ಲದೆ ಸಿದ್ಧಿಯಾಗಿ ಆ ಸಿದ್ಧಿ ಪ್ರಸಿದ್ಧಿಯಾಗಿ ಆ ಪ್ರಸಿದ್ಧಿ ಪ್ರಸಂಗವಾಗಿ

ಆ ಪ್ರಸಂಗ ಆ ಪ್ರಸಂಗಕ್ಕೊಡಲರಿತುದು ಗೋಳಕಾಕಾರ ವಿಶ್ವವಿರಹಿತ ಲಿಂಗವು ತಾನಾದುದು.

## ಸೂಜಿಕಾಯಕದ ರಾಮಿತಂದೆ. ಸು. 1160

ಎತ್ತದಲ್ಲಿ ಹುಟ್ಟಿ ಒತ್ತದಲ್ಲಿ ತೆಗೆದು ಬಿತ್ತದಲ್ಲಿ ಒಡಗೂಡಿ ಕುರುಹಿನಲ್ಲಿ ಹುಟ್ಟಿದ ಸೊನ್ನೆಯಲ್ಲಿ ಸಂಜ್ಞೆಗೆಟ್ಟು ಸೂಜಿಯ ಮೊನೆಯೊಡಗೂಡುವುದಕ್ಕೆ ಎರಡಿಲ್ಲ. ಇದನಾರು ಬಲ್ಲರು? ಇಂತಿವನಾರಯ್ಯಾ ಬಲ್ಲಡೆ ಪ್ರಸನ್ನ ಕಪಿಲಸಿದ್ಧಮಲ್ಲಿಕಾರ್ಜುನಲಿಂಗವ ಬಲ್ಲವ.

ಸ್ಥೂಲಕ್ಕೆ ಮೂರು, ಸೂಕ್ಷ್ಮಕ್ಕೆ ಎರಡು, ಕಾರಣಕ್ಕೆ ಒಂದೆಂದು ತಿಳಿದ ಮತ್ತೆ ನಾನಾಸಂದುಸಂದ ಹೊಲಿಯಲೇತಕ್ಕೆ? ನಾಗಳಗೆಯು ಒಡಗೂಡಿ ದಳೆದು ಮುಗಿದ ಮತ್ತೆ ಹೊಲಿವ ತಾನೇಕವಾದ ಮತ್ತೆ ಪ್ರಸನ್ನ ಕಪಿಲಸಿದ್ಧಮಲ್ಲಿಕಾರ್ಜುನ ಲಿಂಗವನೊಡಗೂಡುವನಿರವು.

## ಉಗ್ಘಡಿಸುವ ಬಿಬ್ಬಿದೇವಯ್ಯ[1]. ಸು. 1160

ಈತನು ವಚನಗಳನ್ನು ಬರೆದಿದ್ದಾನೆ ಇವನು ವೀರಶೈವಕವಿ. ಇವನ ವಚನಗಳಲ್ಲಿ ಕೂಡಲಸಂಗಮದೇವರಲ್ಲಿ ಬಸವಣ್ಣಾ ಎಂಬ ಅಂಕಿತವಿದೆ. ಕೆಲವು ವಚನಗಳನ್ನು ತೆಗೆದು ಬರೆಯುತ್ತೇವೆ —

ಜೀವನ ಬಾಗಿಲಲ್ಲಿ ಭ್ರಮೆಯು ತಡೆದು ಆತ್ಮನ ಬಾಗಿಲಲ್ಲಿ ಪ್ರಕೃತಿಯು ತಡೆದು ಪರಮನ ಬಾಗಿಲಲ್ಲಿ ಚಿತ್ತವ ತಡೆದು ಮಿಕ್ಕಾದ ವಾಯುಗಳ ಪೆಸೆಯಿಂದ ಇಂದ್ರಿಯಂಗಳಂ ತಿಳಿದು ಇಂತೀ ಜೀವಾತ್ಮಪರಮತ್ರಿವಿಧಗುಣಂಗಳಂ ತಲೆದೋಱದೆ ಕರ್ಮೇಂದ್ರಿಯ ಭಾವೇಂದ್ರಿಯ ಜ್ಞಾನೇಂದ್ರಿಯ ಇಂತೀ ತ್ರಿವಿಧ ಸ್ವಾನುಭಾವದಲ್ಲಿ ಅಡಗಿ ಓಂಕಾರದ ಉಲುಹು ನಷ್ಟವಾಗಿ ಷಡಕ್ಷರ ಪಂಚಾಕ್ಷರ ಮೂಲದ ಉಭಯದ ವೊಳೆ ಮುಳಿದು ಐವತ್ತೊಂದು ಭೇದದ ಸೂತಕದ ಹುಟ್ಟುಹಡಗಿ ಹಿಂದಣ ಮುಂದಣ ಎಚ್ಚರಿಕೆ ಸಮುಖ ತಿರುಗಲಾಗೆನುತಿದ್ದನು ಕೂಡಲಸಂಗಮದೇವರಲ್ಲಿ ಬಸವಣ್ಣನ ಮುಂದಣ ಎಚ್ಚರಿಕೆ ಕುಂದದಂತೆ ಉಗ್ಘಡಿಸುತಿದ್ದನು.

---

1 ಗಬ್ಬಿ ದೇವಯ್ಯ ಎಂದೂ ಇರುವಂತೆ ತೋಱುತ್ತದೆ

## ಬೆಡಗಿನ ಸೋಮನಾಥಪಂಡಿತ. 1190.

ಇವನು ಬಿಜಾಪುರಜಿಲ್ಲೆ ಇಂಡಿತಾಲ್ಲೂಕು ಹಿರಿಯಬೇನೂರಲ್ಲಿರುವ ಒಂದು ಶಾಸನವನ್ನು ಬರೆದುದಾಗಿ ಆ ಶಾಸನದ "ಸಾಸನವ ಪೇೞ್ದ ಬೆಡಗಿನ ಸೋಮನಾಥಪಂಡಿತರ್ಗ್ಗೆ ಮಾನ್ಯವೆರಡು" ಎಂಬ ಭಾಗದಿಂದ ತಿಳಿಯುತ್ತದೆ. ಸೋಮನಾಥಪಂಡಿತನೆಂಬ ಮತ್ತೊಬ್ಬ ಶಾಸನಕವಿ 1234 ರಲ್ಲಿ ಇದ್ದಂತೆ ಪ್ರಥಮಸಂಪುಟದ 352ನೆಯ ಪುಟದಿಂದ ತಿಳಿಯುತ್ತದೆ. ಆದರೆ ಇವರಿಬ್ಬರೂ ಬೇರೆ ಬೇರೆ ಕವಿಗಳಾಗಿರಬಹುದೆಂದು ತೋರುತ್ತದೆ. ಹಿರಿಯಬೇನೂರು ಶಾಸನದಲ್ಲಿ ಸೇವುಣರಾಜನಾದ ಭಿಲ್ಲಮನ ಮಂತ್ರಿ ಮಾಯಿದೇವನ ಆಜ್ಞಾನುಸಾರವಾಗಿ ಬೊಪ್ಪಣನಾಯಕನ ಪತ್ನಿ ಸಿರಿದೇವಿ 'ಕ್ಷಿತಿರುಹವಿಡುವೊಂದು ನೋಂಪಿಯುಂಟೆನೆ ಕೇಳ್ದು' ಬೇವಿನೂರಲ್ಲಿ ಫಲವೃಕ್ಷಗಳ ಬನವನ್ನು ಮಾಡಿಸಿ ಅಲ್ಲಿ ಧರ್ಮಸಂತೆ ನೆರೆವಂತೆ ಏರ್ಪಾಡುಮಾಡಿರಲು ಶಕ 1112 ನೆಯ ಸಾಧಾರಣವರ್ಷದಲ್ಲಿ (1190) ಮಾಯಿದೇವನು 'ಸಂತೆಯುಮಂ ವನಸ್ಪತಿಯುಮಂ ಸರ್ವಾರ್ಧಮಂ ಮಾಡಿದಂ' ಎಂದು ಹೇಳಿದೆ

ಈ ಶಾಸನದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ —

ಭಿಲ್ಲಮ.

ಚೋಳಾಂಭೋರಾಶಿಯೌರ್ವಾನಳನಹಿತತುರುಷ್ಕಾದ್ರಿಸಂಘಾತವಜ್ರಂ ।
ಗೌಳಾಂಭೋದಾಳಿಝಂಝಾನಿಳನತುಳಬಳಂ ಗೂರ್ಜರೇಭೇಂದ್ರಸಿಂಹಂ ॥
ಕಾಳಿಂಗಾನಂಗಗೌರೀವರನೆನಿಪೆಸಕಂದಾಳ್ದಿದೀ ಭಿಲ್ಲಮೋರ್ವೀ ।
ಪಾಳಂಗಾರ್ಪಾಟಿ ಚಕ್ರೇಶ್ವರರೆನಲೆಸೆವಂ ಬಣ್ಣಿಸಲ್ ಬಲ್ಲನಾವಂ ॥

ಮಾಯಿದೇವ

ಬಿಸರುಹದಿಂ ಕೊಳಂ ನಿಶಿ ನಿಶಾಧಿಪನಿಂ ದಿನನಾಥನಿಂದಮಾ ।
ಗಸಮಮರೇಂದ್ರನಿಂ ದಿವಿಜಸಂತತಿ ಕೇವಣದಿಂದೆ ಮಾಣಿಕಂ ॥
ವಸುಮತಿಯಲ್ಲಿ ಶೋಭಿಸುವವೋಲ್ ನೆಱೆ ಯಾದವರಾಜ್ಯಲಕ್ಷ್ಮಿ ಶೋ ।
ಭಿಸುವುದು ಮಾಯಿದೇವರಧಿನೇಶ್ವರನಿಂದೆನಲೇನ ಬಣ್ಣಿಪೆಂ ॥

ಬೊಪ್ಪಣ

ಸುರಪತಿಯಿರ್ದ ದೇವಸಭೆ ಪಂಕಜಮಿರ್ದ ಸರೋಜಷಂಡಮಾ ।
ಸುರತರುವಿರ್ದ ನಂದನವನಂ ಹರಿಯಿರ್ದಮೃತಾಬ್ಧಿಯೊಪ್ಪುವಂ ॥

ತಿರೆ ನೃಪಮೇರು ಭಿಲ್ಲಮನಮಾತ್ಯಶಿಖಾಮಣಿ ಮಾಯಿದೇವನಾ |
ದರಸನ ಮಂತ್ರಿ ಬೊಪ್ಪಣಜನಾಪತಿಯಿರ್ದೆಡೆಯಂತಿರೊಪ್ಪುಗುಂ ||

ಬೇವಿನೂರು

ಪಲವುಂ ವೇದದ ಶಾಸ್ತ್ರದಾಗಮದ ವಿದ್ಯಾಭ್ಯಾಸವಿಪ್ರಕ್ಕರ್ಳಿಂ |
ದಳಿಯಿಂ ಕೋಗಿಲೆಯಿಂ ಶುಕಪ್ರತತಿಯಿಂ ಪೌಂಡ್ರೇಕ್ಷುದಂಡಂಗಳಿಂ ||
ದಲದಂಭೋರುಹಷಂಡದಿಂ ಪಲವುಮುದ್ಯಾನಂಗಳಿಂ ಶಿಷ್ಯಸಂ |
ಕುಳದಿಂದೊಪ್ಪುವ ಬೇವಿನೂರ್ಗೆ ದೊರೆಯೇ ಭೂಲೋಕದೊಳ್ ಪಟ್ಟಣಂ ||

ಫಲಶ್ರುತಿ

ಊರೊಡೆಯರಕ್ಕೆ ಮನ್ನಿಯ |
ರೂರಾಳ್ವರಕ್ಕೆ ನಾಡ ಕೊಂಡೆಯರಕ್ಕಿಂ |
ತಾರಾದೊಡಮೀಧರ್ಮವ |
ನೋರಂತಿರೆ ಕಿಡಿಸಿದವರಘೋರಗತಿಗಿೞ್ವರ್ ||

ಇದೇ ತಾಲ್ಲೂಕು ಸಾಲೋಟಗಿಯಲ್ಲಿ ಹೊಲೆಯರ ಚಾವಡಿಯ ಗೋಡೆಗೆ ನಟ್ಟಿರುವ ಶಾಸನವನ್ನೂ ಈ ಕವಿಯೇ ಬರೆದಿರಬೇಕೆಂದು ತೋರುತ್ತದೆ. ಏಕೆಂದರೆ—ಬೇವಿನೂರು ಶಾಸನದ ಪದ್ಯಗಳಲ್ಲಿ ಕೆಲವು ಈ ಶಾಸನದಲ್ಲಿಯೂ ದೊರೆಯುತ್ತವೆ. ಅಲ್ಲದೆ ಒಂದು ಶಾಸನದಲ್ಲಿ ವರ್ಣಿತರಾದ ವ್ಯಕ್ತಿಗಳೇ ಮತ್ತೊಂದರಲ್ಲಿಯೂ ವರ್ಣಿತರಾಗಿದ್ದಾರೆ. ಈ ಶಾಸನದ ಕಾಲವೂ (1187) ಬೇವಿನೂರು ಶಾಸನದ ಕಾಲಕ್ಕೆ ಬಹಳ ಸಮೀಪವಾಗಿದೆ.

ಸಾಲೋಟಗಿಯ ಶಾಸನದಲ್ಲಿ ಸೇವುಣರಾಜನಾದ ಭಿಲ್ಲಮನ ಸಾಮಂತ ಬಂದರಸನು ಶಕ 1110 ರಲ್ಲಿ (1187) ರಾಜಧಾನಿ ಪೌರಗೆಯ ಭೋಗೇಶ್ವರ ದೇವರಿಗೆ ಮಾವುಲಿಗನೂರನ್ನು ಬಿಟ್ಟಂತೆ ಹೇಳಿದೆ. ಇದರಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ —

ಬಂದರಸನ ತಂದೆ ಗೋವಣ.

ಅಂತೊಡೆ ಕೊಂದನೆಂದೆ ಬಗೆ ಶತ್ರುಸಿಕಾಯಮನರ್ಥಿ ಬಂದು ಕ |
ಯ್ಯಾಂತೊಡೆ ಕೊಟ್ಟನೆಂದೆ ಬಗೆ ಬೇಱಿಪ್ಪರನಂಜಿ ಶರಣ್ಗೆ ವಂದರ ||
. ಂತಿಯೆ ಕಾದನೆಂದೆ ಬಗೆ ವೀರದ ಚಾಗದ ಕಾವ ಪೆರ್ಮೆಗಾ |
ವಂ ತೊಣೆಯೆಂದು ಒಣ್ಣಿಪುದು ಧಾರಿಣಿ ಗೋವಣಮಂಡಳೇಶನಂ ||

## ಬಿಂದರಸ (ನೆರೆಯೋಡೆ ಗಂಡ)

ಬಂದೋಪೀರ್ಶ್ವರನೀರ್ಷ್ಯೆಯಿಂ ರಿಪುಶಿರೋವ್ರಾತಂಗಳಂ ಪೊಯ್ದು ಬಂ |
ದಂದಾಕಾಶನದೀಪ್ರವಾಹದೊಳೆ ಬೀಱಲ್ ಸಿದ್ಧಮುಗ್ಧಾಂಗನಾ ||
ಸಂದೋಹಂ ಸರಸೀಜಸೊಂದೆ ತೆಱೆಯುಲ್ ಸಾರ್ದೆಯ್ದು ಭೀತತ್ವದಿಂ |
ನಿಂದಿರ್ದರ್ ನಭದೊಳ್ ನಿರೀಕ್ಷಿಪ ಸುರಗ್ರಾಮಂ ಹಾಸ್ಯಮುಪ್ಪನ್ನಗಂ ||
ಹಗೆವರಸ್ತ್ರಗ್ಗಳಂ ಬಳಮುವಂದಿರ ಪಂದಲೆ ರಕ್ತಪಂಕಜಂ |
ಸೊಗಯಿಪ ಕಣ್ಗಳೋಳಿ ಶಫರಂ ಕರುಳೋಳಿ ಮೃಣಾಳವಾಗಿ ದಿ ||
ಟ್ಟಿಗೆ ನೆರೆಯೋಡೆಗಂಡನದಟಿಂದಮೆ ಗೆಲ್ದ ಮಹಾಹವಾಂಗಣಂ |
ನಗುವವೊಲಿರ್ದುದೆಯ್ದೆ ಕಮಳಾಕರಮಂ ದಿಟದಿಂ ವಿಚಿತ್ರಮೋ ||
ಘನಭುಜಮುಷ್ಟಿಯಿಂದೆ ವಿಜಯಾಂಗನೆ ನರ್ತಿಪ ನಾಟ್ಯಶಾಲೆ ಭೂ |
ವಿನುತವಚೋಲತಾಂಗಿಗೆ ಮುಖಾಂಬುಜವೊಪ್ಪಿನ ಚಿತ್ರಶಾಲೆ ಮಾಂ ||
ತನನಿಧಿ ರಾಜ್ಯಲಕ್ಷ್ಮಿಗುರವೋಗಶಾಲೆಯೆನಲ್ಕೆ ಬಂದಭೂ |
ಪನತೆಱದಿಂದೆ ಪೆಂಡಿರ ಮನಂಗಳನಿರ್ಕುಳಿಗೊಂಡನಾಪನೋ ||

## ಬೊಪ್ಪಚಮೂಪ.

ಅಳಿದಿತ್ತಂ ಬಲಿ ಭಾನುಜಾತನೆಣಿಸಿತ್ತಂ ತೊಕದಿಂದಿತ್ತನಿಂ |
ತಳಿಪಿಂದಂ ಶಿಬಿ (ಯನ್ನರಂ) ಪಱಿದು ತನ್ನಂ ಬೇಱಿದಂ ಬೇಱಿವ ||
ಗ್ಗಳೆಯಿಂ ಲೆಕ್ಕಿಸದಿಲ್ದು ತೂಗನಸಿವಾರ್ಧ್ಯಂ ಕೊಟ್ಟಪಂ ನೋಡೆ (ಪೊಂ) |
ಗಳನರ್ಥಾರ್ಥಿಗ ಕಾತುರ ಬೊಪ್ಪಣಚಮೂಪಂಗಾರ್ ಸಮಂ ದಾನಿಗಳ್ ||

## ಆಚೆಯ.

ಮನೆಗಲ್ಲರ್ ಪೊನೆಗಲ್ಲರಾಗಳನ ಸೇನಾನಾಯಕರ್ ಭಾವಿಸಲ್ |
ಮನೆಯೊಳ್ ಕಲ್ಪಕುಜಾತದಂತೆ ಕುಡಲುಂ ಮಾಱಾಂತರಂ ಕೋಪದಿಂ ||
ಮೊನೆಯೊಳ್ ನಾಡ ಕೃತಾಂತನಂತೆ ಕೊಲಲುಂ ಶ್ರೀಬಂದಿಗಳ್ಳೋಣಿಪಾ |
ಳನ ಚಿತ್ತಪ್ರಿಯ ತಂತ್ರಪಾಳನೆನಿಸಿರ್ಪ ಬಯಾಚೆಯುಂ ಸಾಲನೇ ||[1]

---

1. ಈ ಎರಡು ಶಾಸನಗಳ ಪ್ರತಿಗಳನ್ನೂ ಶ್ರೀಮಾನ್ ಹಲಸಂಗಿ ಚೆನ್ನಮಲ್ಲಪ್ಪನವರು ಕಳುಹಿಸಿಕೊಟ್ಟಿದ್ದಾರೆ

## ಕವಿಪದ್ಮ. 1296.

ಈತನು ಬೇಲೂರು 322ನೆಯ (ಹಾಸನದ ಡಿಸ್ಟ್ರಿಕ್ಟ್ ಶಾಸನಗಳ: ಆನುಬಂಧ) ಶಾಸನವನ್ನು ಬರೆದುದಾಗಿ ಆ ಶಾಸನದ ಕೊನೆಯಲ್ಲಿರುವ

ಸರಸಕವಿತುಂಗನೆನಿಸಿದ | ವರಕವಿಪದ್ಮಂ . . . ನಿಷಿದಿಗೆ ಪದ್ಯಂ |
ಬರೆದು ಪರೋಕ್ಷದ ಪದವಂ | ವಿರಚಿಸಿ ಜಿನಸಭೆಯೊಳಗ್ರಪೂಜೆಯ ಪಡೆದಂ ||

ಎಂಬ ಪದ್ಯದಿಂದ ತಿಳಿಯುತ್ತದೆ. ಇವನು ಜೈನಕವಿ. ಈ ಶಾಸನದಲ್ಲಿ ವರ್ಧಮಾನಮಲಧಾರಿಗಳು 1296 ರಲ್ಲಿ ಸ್ವರ್ಗಸ್ಥರಾಗಲು ದೋರಸಮುದ್ರದ ಭವ್ಯಜನಗಳು ಅವರ ನಿಷಿಧಿಯನ್ನು ಮಾಡಿಸಿದರು ಎಂದು ಹೇಳಿದೆ. ಶಾಸನದ ಅಕ್ಷರಗಳು ಸವೆದು ಹೋಗಿರುವುದರಿಂದ ಸರಿಯಾಗಿ ಪದ್ಯಗಳನ್ನು ಉದಾಹರಿಸಲು ಅವಕಾಶವಿಲ್ಲದಂತಿದೆ. ಒಂದು ಪದ್ಯವನ್ನು ಬರೆದು ತೋರಿಸುತ್ತೇವೆ :—

ಕರಸಿ ಸಮಸ್ತ . . . . . . . . . ಯಕರಂ ಜನ(ಂಗಳ)ಂ |
ನೆರಪಿ ಪರಿಗ್ರಹಂಗಳನಿಸ . . . . . . ಚಿತ್ತದೊಳ್ ||
ದರಿಸಿ ಜಿನೇಂದ್ರನಂ ಜಿನಸಮಾನ ನಿಜಾತ್ಮ . . . . . . . |
. . ವರವರ್ಧಮಾನಮುನಿ ಪೊಕ್ಕನನಿಂದಿತ (ಸಿಂದ್ರಲೋಕಮಂ) ||

## ದೇವಪ್ಪ ಸು. 1526

ಇವನು ರಾಮವಿಜಯಚರಿತೆಯನ್ನು ಬರೆದಿದ್ದಾನೆ. ಈತನು ಜೈನಕವಿ, ಭೂಸುರವಂಶೋದ್ಭವಂ ಎಂದು ಹೇಳಿಕೊಂಡಿದ್ದಾನೆ ; ಈತನ ಪಿತಾಮಹನು ಹೊಯ್ಸಳಧರೇಶನಲ್ಲಿಯ ಚಂಗನಾಡಪೊಳಲ ಸಚಿವಶಿರೋಮಣಿ ದೇವಪ್ಪ, ತಂದೆ ಬುಕ್ಕರಸ ತನ್ನನಪ್ಪ ಸಚಿವದೇವಪ್ಪಂ ಎಂದು ಹೇಳಿಕೊಳ್ಳುತ್ತಾನೆ ; ಆವ ಪ್ರಭುವಿನಲ್ಲಿ ಸಚಿವನಾಗಿದ್ದನೋ ತಿಳಿಯದು.

ಪೂರ್ವಕವಿಗಳನ್ನು ಸ್ತುತಿಸುವಾಗ ವಿಜಯಣ್ಣನ (1448) ಹೆಸರನ್ನು ಹೇಳುವುದರಿಂದ ಕವಿ ಅವನ ಕಾಲಕ್ಕಿಂತ ಈಚೆಯವನಾಗಿರಬೇಕು. ಗುರುಗಳನ್ನು ಸ್ತುತಿಸುವಾಗ 3ನೆಯ ಮಂಗರಸನಂತೆ (1508) ಪ್ರಭೇಂದುಶ್ರುತಮುನಿಗಳ ಹೆಸರುಗಳನ್ನು ಹೇಳಿ ಮುಂದಕ್ಕೆ ವಿಮಲಕೀರ್ತಿಯ ಹೆಸರನ್ನೂ ಹೇಳುವುದರಿಂದ ಮಂಗರಸನ ಕಾಲಕ್ಕಿಂತ ಸ್ವಲ್ಪ ಈಚೆಯವನಾಗಿರಬಹುದೆಂದು ತೋರುತ್ತದೆ ; ಸುಮಾರು 1525ರಲ್ಲಿ ಇದ್ದಿರಬಹುದು.

ಪೂರ್ವಕವಿಗಳನ್ನು ಈ ಪದ್ಯದಲ್ಲಿ ಸ್ತುತಿಸುತ್ತಾನೆ:—

ಗುಣಗಣ ಗುಣವರ್ಮನ ಶಾಂತಿವರ್ಮನ | ವಿಜಯನ ಪೊನ್ನನಗ್ಗಳನ |
ಸುಜನೋತ್ತಂಸ ರನ್ನರ ಮಧುರಮನ | ಸುಜನರಿವರ ಸ್ತುತಿಸುವೆನು ||

ಅಲ್ಲದೆ ಅಭಿನವಪಂಪನನ್ನು, "ಸುಟ್ಟುಕಾದಂಬರಿಯನು ಲೀಲಾವತಿ | ಗಟ್ಟು ಕಪ್ಪನು ಲೋಕವಳಿಯ | ದಟ್ಟವಾದಿಯ ಗೆಲ್ದ" ನೇಮಿಚಂದ್ರನನ್ನು, "ಚಂದದ ಮೃದುಬಂಧದ ಮೈಸಿರಿಯೊಳ | ನೊಂದಿದ ನವಿನುಡಿಯಿಂದ | ಅಂದವಡೆದ ಕಾವ್ಯ ಘನುಸುಂದ" ನಾಗಚಂದ್ರನನ್ನು ಹೊಗಳಿದ್ದಾನೆ. ತನ್ನ ಕವಿತಾಚಾತುರಿಯನ್ನು ರಸಿಕರು ಹೀಗೆ ಸ್ತುತಿಸಿದರು ಎಂದು ಈ ಪದ್ಯಗಳಲ್ಲಿ ಹೇಳಿಕೊಂಡಿದ್ದಾನೆ:—

ಕಿಂಗಳ ತಗ್ಗದಿರ್ದೆಂಗಲ ಸಿರಿಯಂ | ತಿಂಗಳಲಿನ ರಸದಂತೆ |
ರಂಗುವಡೆದ ಮಾಣಿಕದ ಮಂಜರಿಯ ದೆ | ಡಂಗಿನಂತಿವೆ ನಿನ್ನ ಮಾತು ||
ಕಂಬರಲಿನ ತೊಡವನು ಬಿರಿಮುಗುಳ್ ತೆಂ | ಡಂಬಿಯನಂಬುಜಾಕ್ಷಿಯರ |
ಕಂಬುಕಂಧರದಾಲಿಂಗನವನು ವಾಜಿ | ಗೊಂಬನ್ನೊಲಿವೆ ನಿನ್ನ ಮಾತು ||
ಒಸರುವ ಸುಧೆಯ ಕೊಡನೊ ಮುಸಿದಗಲಿದ | ಸಸಿವದನೆಯ ಕಾಲದರವೊ |
ಪೊಸಜವ್ವನೆಯ ಬೀಟದ ಸುಗ್ಗಿಯಂತೆ ಸಂ | ತಸವೀವುತಿವೆ ನಿನ್ನ ಮಾತು ||
ಕೋವಿದರುಗಳ ಹೃತ್ಕಮಲಭಾಸ್ಕರ ವಾ | ಗ್ದೇವಿಯ ಮುಖಮಣಿಮುಕುರ |
ಭಾವಕರುಗಳ ಸಂತಸಸಾಗರಮಿತ್ರ | ದೇವಪ್ಪನೊರೆದ ಸತ್ಕಾವ್ಯ ||

ಇವನ ಗ್ರಂಥ

ರಾಮವಿಜಯ ಚರಿತೆ

ಇದು ಸಾಂಗತ್ಯದಲ್ಲಿ ಬರೆದಿದೆ; ಸಂಧಿ ೧೮, ಪದ್ಯ ೨೬೮೩. ಇದರಲ್ಲಿ ಜೈನಸಂಪ್ರದಾಯದ ಪ್ರಕಾರ ರಾಮಾಯಣದ ಕಥೆ ಹೇಳಿದೆ. ರಾವಣವಧಾನಂತರ ಶ್ರೀರಾಮನು ಅಯೋಧ್ಯೆಗೆ ಬಂದು ಕೆಲವುಕಾಲ ರಾಜ್ಯಭಾರಮಾಡಿ ಬಳಿಕ ತನ್ನ ಹಿರಿಯಮಗನಿಗೆ ಪಟ್ಟವನ್ನು ಕಟ್ಟಿ ತಾನು ವಿರಕ್ತನಾಗಿ ತಪಸ್ಸು ಮಾಡಿ ಮುಕ್ತಿಯನ್ನು ಪಡೆದನೆಂದು ಹೇಳಿದೆ. ಗ್ರಂಥಾವತಾರದಲ್ಲಿ ಜಿನಸ್ತುತಿ ಇದೆ. ಅನಂತರ ಕವಿ ಸಿದ್ಧಾದಿಗಳು, ಸರಸ್ವತಿ ಇವರನ್ನು ಸ್ತುತಿಸಿ, ಬಳಿಕ ಪೂಜ್ಯಪಾದ, ಅಕಳಂಕ, ಸಮಂತಭದ್ರ, ಕೊಂಡಕುಂದ, ಚಾರುಕೀರ್ತಿಪಂಡಿತ,

ಪ್ರಭೇಂದುಮುನಿ, ಶ್ರುತಮುನಿ, ವಿಮಲಕೀರ್ತಿ ಎಂಬ ಗುರುಗಳನ್ನು ಹೊಗಳಿದ್ದಾನೆ. ಸಂಧಿಗಳ ಕೊನೆಯಲ್ಲಿ ಈ ಪದ್ಯವಿದೆ :—

ಇದು ಸರಸ್ವತಿಯಂಗಭೂಷಣ ಕೇಳ್ವರ | ಹೃದಯಕಮಲದವನೇಂದ್ರ |
ಇದು ರಸಿಕರ ಕಿವಿಗಮೃತರಸಾಯನ | ವಿದು ಭವ್ಯಕುಮುದಚಂದ್ರಮನು ‖

ಇವನ ಬಂಧವು ಲಲಿತವಾಗಿಯೂ ಹೃದಯಂಗಮವಾಗಿಯೂ ಇದೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

### ಉದ್ಯಾನ

ಒಲಗನಾಳೆ ಪೂಗಿಗಗಳೊಳಗೆ ಜೇನ | ಸಾಲೆಯಂಗಜಗೆ ಜೇವಣಾದಾ |
ಸಾಲೆಯೊಳಡಿಗೆ ತಂಜೆಲರಿಗೆ ನಾಟ್ಯದ | ಸಾಲೆಯಂತೆಸೆದುದಾರಾಮ ‖

### ಹಲಸು

ಅಲರಬಿಡದೆಯೊಳು ಫಲವನಿತ್ತು ಬಾಳುವ | ತರುಗಳು ಸರಿಯಲ್ಲವೆಂದು |
ಅರಗಿಳಿಯುಂ ನುಡಿಸುತ ಒಕ್ಕವಲಸಿನ | ಮರಗಳೆಸೆದುವಂದದಲಿ ‖

### ಸ್ತ್ರೀವರ್ಣನೆ

ಅಸಿಯನಡುವಿನ ಸಿಟ್ಟಿಸಲುಗಂಗಳ ಪೊಚ್ಚ | ಪೊಸಜವ್ವನದ ಮುದ್ದುಮೊಗದ |
ನಸಿಗೆಂಪೆದುಟಿಯಂಜೆಗವನದ ಪೆಣ್ಗಳ | ಕಿಸೆದಹರಾದೇಶದೊಳು ‖
ಸಣ್ಣನಡುವಿನೆಳಮಿಂಚ ನಗುವ ನಗು | ಗಣ್ಣ ಸಂಜೆಯ ಕೆಮ್ಮುಗಿಲಾ |
ಬಣ್ಣವನಿಟ್ಟಕ್ಕೆವ ರಂಗದುಟಿಯ ಮುದ್ದು | ವೆಣ್ಣಲ್ಲದಿಲ್ಲವದಟೊಳು ‖

### ರಾಮನ ಪ್ರಲಾಪ

ಕದಪಿನ ನುಣ್ಪು ಕನ್ನಡಿಗೆ ಚಂದ್ರಗೆ ನಿನ್ನ | ವದನದರವ ಕೋಗಿಲೆಗೆ |
ಮೃದುಮಧುರಾಲಾಪವನಿತ್ತು ವಂಚಿಸಿ | ಸುದತಿ ನೀಪೋಪುದುಚಿತವೆ ‖
ಕೆಂಬಲ್ಲ ಕಡುಗಾಂತಿಯ ಕಾಂತಿ ರಸದಾ | ಳಿಂಬದ ಬಿತ್ತಿಗೆ ಕೊಟ್ಟು |
ಕಂಬುಗೆ ನಿನ್ನ ಕೊರಲ ಸೊಬಗಿತ್ತೆನ್ನ | ಹಂಬಲ ಬಿಡುವುದುಚಿತವೆ ‖
ಮುಗುದ ಕೇಕಿಗಳಿಗೆ ಕುರುಳುಗಳ | ಕಡುಗಾಂತಿಯ ಕೋಳ್ಗಳರವ |
ಕುಡುವಿಲ್ಲನ ಕೈಯ ಸಿರಿಪದವಾಲಿಗೆ | ತಡೆಯದೆ ಕೊಡುವುದುಚಿತವೆ ‖

ದುರ್ಜನನು

ಒಡಲೊಳು ಜನಿಸಲವನ ಬಾಯೊಳು ಹ | ಲ್ಲೊಡನೆ ಪುಟ್ಟದುದಱಿಂ ಖಳನ |
ಪಡೆದ ಜನನಿ ಬದುಕಿದಳೆಂದೊಡೆ ಮಿಕ್ಕ | ಪೊಡವಿಯ ಜನಕುಂಟೆ ಸುಖವು ||

## ಮುಖಬೋಳು ಸಿದ್ಧರಾಮಯೋಗಿ. 1656

ಇವನು ಷಟ್ಸ್ಥಲತಿಲಕವನ್ನು ಬರೆದಿದ್ದಾನೆ. ಈತನು ವೀರಶೈವಕವಿ, ಚೆನ್ನಮಲ್ಲೇಶನ ಕರಜಾತನು. ರಾಘವಾಂಕಚಾರಿತ್ರವನ್ನು ಬರೆದ ಸಿದ್ಧನಂಜೇಶನು (ಸು. 1650) ತನ್ನ ಗುರು ಪಂಚವಣ್ಣಿಗೆ ಸಿದ್ಧನಂಜೇಶನ ಶಿಷ್ಯರ ಗುಂಪಿನಲ್ಲಿ ಈ ಕವಿಯ ಹೆಸರನ್ನೂ ಹೇಳಿರುವುದರಿಂದ[1] ಇವನೂ ಸುಮಾರು 1650ರಲ್ಲಿ ಇದ್ದಿರಬೇಕು. ಆದುದರಿಂದ ಗ್ರಂಥಾಂತ್ಯದಲ್ಲಿ ಇವನ ಕಾಲವನ್ನು ತಿಳಿಸುವ "ದುರುಳಪಸಿವತ್ಸರದ ಮಾರ್ಗಮಸ್ತಕಮಾಸ | ವರಶುದ್ಧಪೌರ್ಣಮಿಸೌಮ್ಯವಾರದಿ" ಎಂಬ ಪದ್ಯಭಾಗದಲ್ಲಿ ಉಕ್ತವಾದ ದುರುಳಪಸಿ ಎಂದರೆ ದುರ್ಮುಖಿವರ್ಷವು 1656 ಆಗಬೇಕು.

ಇವನ ಗ್ರಂಥ

### ಷಟ್ಸ್ಥಲತಿಲಕ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಕಂದವೃತ್ತಗಳೂ ಇವೆ, ಸ್ಥಲ 20, ಪದ ವೃತ್ತ ಗ್ರಂಥ ಕಂದ ಸಹ 923. ಇದರಲ್ಲಿ ಷಟ್ಸ್ಥಲಗಳು ಗುರುಶಿಷ್ಯಸಂವಾದರೂಪವಾಗಿ ನಿರೂಪಿಸಲ್ಪಟ್ಟಿವೆ. ಈ ಗ್ರಂಥದ ಉತ್ಕೃಷ್ಟತೆಯನ್ನು ಕವಿ ಈ ಪದ್ಯಭಾಗಗಳಲ್ಲಿ ತಿಳಿಸಿದ್ದಾನೆ.—

ಶರಣಚಾರಿತ್ರಗಳ ಶಿವಪುರಾಣಗಳ ಖಣಿ |
ಶರವಚನರತ್ನಪೂರಿತಕೋಶವೆಂದೆನಿಪುದೀಕೃತಿಯು.
ಇದು ನಿಜಾನಂದರಸಚುಳುಕ ಶರಣರ ಪುಳಕ |
ಮಿದು ಮುಕ್ತಿಕರತಳಾಮಳಕ ಪರಬೆಳಗುಳಕ.

---

1. Vol. II, 380.

ಗ್ರಂಥಾವತಾರದಲ್ಲಿ ಬಸವಲಿಂಗಸ್ತುತಿ ಇದೆ. ಬಳಿಕ ಕವಿ ಬಸವ, ಚೆನ್ನಬಸವ, ಪ್ರಭುದೇವ ಇವರನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ.—

ಕ್ಷೀರಾಬ್ಧಿಯೊಳಗಿರ್ಪ ಹಂಸೆ ಮತ್ತನ್ಯಪಕ್ಷ |
ಕ್ಷೀರಮಂ ಬಯಸುವುದೆ ಕುಸುಮದೊಳಗಿರ್ಪಳಿಗೆ |
ಬೇಱೆಪರಿಮಳದಾಸೆಯುಂಟೆ ಕಡಲೊಳಗಿರ್ಪ ಭೇಕನನ್ಯಾಂಬುಗಳನು ||
ಹಾರಯಿಪುದೇ ಮೊಲೆಯನುಂಬ ಶಿಶು ಬಯಸುವುದೆ |
ಕ್ಷಾರಜಲ ಸಕಲಸಿದ್ಧಿಗಳೀವ ಲಿಂಗದೊಳ್ |
ಮಾರಾರಿಶರಣ ಕೂಡಿರ್ದು ತನಗನ್ಯವಹ ಫಲಪದವ ಬಯಸನಱುಗಾ ||

ಸುೞಿ'ನಾಭಿಯೊಳಜಿದಿರಿನಂತೆ ನಳನಳಿಪ ತೋೞ |
ಳೆಳವಾಪೆಯಂತೆ ಥಳಥಳಿಪ ತೊಡೆ ನಳಿಸಕು |
ಟ್ಮಳದಂತೆ ಪೊಳೆವ ಕುಚ ಪವಳದುಟಿ ಶಳಿಂಡಿಯ ಅಳಿಗುರುಳ ನಳಿಸದೆಸಳಾ||
ತಳೆದ ಕಂಗಳ ಕಂಬುಗಳ ಶೋಣವೆಳಗ ಪ |
ಲ್ಗಳ ಗಿಳಿಯ ನುಡಿಯ ಕೋಕಿಳರವದ ನಳನಖಿಳ |
ವೆಳಗಿಸಾನನದ ಪೆಣ್ಗಳ ಸುಖದೊಳಿರ್ಪವಗೆ ಶಿವಪಥವುಸಾಧ್ಯಮಲ್ತೇ ||

ಕಟ್ಟುಗ್ರಸಿದ್ಧರೆದೆಮೆಟ್ಟಿ ತಪಸಿಗಳ ಹುಡಿ |
ಗುಟ್ಟಿ ಯತಿಜನರ ಬೆನ್ನಟ್ಟಿ ಕಾಮುಕರ ಎದೆ |
ದಟ್ಟಿ ನಿರ್ಜರರ ಮನ ಸುಟ್ಟುಱಿದು ಶಾಸ್ತ್ರಕರ ಕಟ್ಟಿ ವಿಷಯದವಾಶದಿಂ ||
ನಿಟ್ಟಿದೆಯರ ಪಟ್ಟಗಟ್ಟಿ ಜಾರರ ದೇಶ |
ಕಟ್ಟಿ ವೀರರ ಮನಂ ಮುಟ್ಟಿ ಪೀಡಿಸಿ ಮನರ |
ಘಟ್ಟಿಯಂ ಕರಗಿಸುತ ಹುಟ್ಟುಗಡಲೊಳ್ ತಿರುಗಿಸುವ ಕಾಮನಖಿಳಜನರಾ||

ಹರನಾಲಯಮಕೆಯ್ದಿದವಂ | ಚರಣಾಸುರಕ್ಷ್ಮಗಳ ಪೊಱಗೆ ಬಿಟ್ಟಾಚಿಂತೆಯೊ |
ಳಿರುತಿರ್ಪನಂತೆ ಸಲ್ಲದು | ಹರಶಾಸ್ತ್ರವ ಕೇಳುವಗ್ಗೆ ಪರಚಿಂತೆಗಳುಂ ||

1. Volume II, 380.

## ಸೆಜ್ಜೆಯುಸಿದ್ಧಲಿಂಗಾರ್ಯ ಸು. 1666

ಈತನು ಮಳೆಯರಾಜನ ಚರಿತ್ರೆಯನ್ನು ಬರೆದಿದ್ದಾನೆ. ಇವನು ವೀರಶೈವ ಕವಿ; ಕೊಲ್ಲಿಪಾಕೆಯ ಸೋಮೇಶ್ವರಲಿಂಗನ ಒಡಲಿಂದ ಚರಲಿಂಗವಾಗಿ ಹೊರಟ ರೇವಣಸಿದ್ಧನ ಸಂತತಿಯವನಾದ ಸುಳಿಯ ಮಲ್ಲೇಶನ ಶಿಷ್ಯಪರಂಪರೆಗೆ ಸೇರಿದ ವಿದ್ಯಾನಗರದ ಹಿರಿಯಮಠದ ಸಿದ್ಧವೀರನ ಶಿಷ್ಯ ಸಿದ್ಧನಂಜೇಶನ ಕರಜಾತನು. ಇವನ ವಿದ್ಯಾಗುರು ಸಿದ್ಧರಾಮಾರ್ಯ. ತನ್ನ ವಿಷಯವಾಗಿ ಈ ಅಂಶಗಳನ್ನು ತಿಳಿಸಿದ್ದಾನೆ :—

ಈತನು ಕೊಟ್ಟೂರಿಗೆ ಹೋಗಿ ಬಸವಲಿಂಗೇಶ್ವರನ ಪಾದದೆಡೆಯಲ್ಲಿ ಇರುತ್ತ ಸಿದ್ಧರಾಮಾರ್ಯನಿಂದ ಬಹುಶಾಸ್ತ್ರಗಳನ್ನು ಕಲಿತನು. ಇಷ್ಟಲಿಂಗಕ್ಕೆ ಸೆಜ್ಜೆಗಳನ್ನು ಕಲ್ಪಿಸುತ್ತಿದ್ದುದರಿಂದ ಸೆಜ್ಜೆಯ ಸಿದ್ಧಲಿಂಗಾರ್ಯ ಎಂಬ ಹೆಸರನ್ನು ಪಡೆದನು. ಬಸವಲಿಂಗೇಶ್ವರನ ಬಳಿ 9 ವರ್ಷ ಶಿಷ್ಯಭಾವದಲ್ಲಿದ್ದು ಅಲ್ಲಿಂದ ಅವನ ಅಪ್ಪಣೆಯನ್ನು ಪಡೆದು ಹೊರಟು ಸುಗಟೂರ ದೊರೆಯಾದ ಇಮ್ಮಡಿ ತಮ್ಮನ ವಂಶಗುರು ಜ್ಞಾನಮೂರ್ತೀಶನು ಇರುವ ಸೌಂದರ್ಯಪುರಿಗೆ ಹೋಗಿ ಆ ಗುರುವಿನ ಮಗ ಬಸವಾರ್ಯನಿಗೆ ಸಕಲಶಾಸ್ತ್ರಗಳನ್ನೂ ಹೇಳಿದನು. ಬಸವಾರ್ಯನು ಇವನಿಗೆ ತನ್ನ ಕುಲದ ಹೆಣ್ಣನ್ನು ಕೊಟ್ಟು ಮದುವೆಮಾಡಿ ಹೇರಳ ದ್ರವ್ಯವನ್ನೂ ಕೊಟ್ಟನು. ಇಮ್ಮಡಿ ತಮ್ಮನ ಮಗ ಮುಮ್ಮಡಿ ತಮ್ಮನು 11ನೆಯ ವರ್ಷದಲ್ಲಿ ಶೌರ್ಯದಿಂದ ಸಿಮೇಂದ್ರಪಾಚ್ಛನನ್ನು ಸೋಲಿಸಿದನು ಇವನಿಗೆ ಮೂರು ಭಾಷೆಗಳಲ್ಲಿ ಕವಿತ್ವಮಾಡುವ ಶಕ್ತಿಯಿದ್ದಿತು. ಈ ದೊರೆ ಕವಿಗೆ ಪುರ, ಕ್ಷೇತ್ರ, ಮಂದಿರ ಮುಂತಾಗಿ ಬಹು ಭಾಗ್ಯವನ್ನು ಕೊಟ್ಟನು. ಕವಿ ಅಲ್ಲಿರುವಾಗ ಅಲ್ಲಿಗೆ ಬಂದ ನಂದೀಶದೇವನ ಶಿಷ್ಯ ಮಹತಾರ್ಯನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿ ವಿದ್ಯೆಕಲಿಸಿದನು. ಮಹತಾರ್ಯನಿಗೆ ಗುರುಬಸವರಾಜ, ಮಹತಾರ್ಯ, ಮುದ್ದುಲಿಂಗಾರ್ಯ ಎಂಬ ಮೂವರು ಮಕ್ಕಳು ಜನಿಸಿದರು. "ಧರೆ ಸಹಿತ ಕೈಲಾಸಕೆ ತೆರಳಿದ ಮಹಾತ್ಮನಾವಂ ಭಕ್ತರೊಳಗೆ" ಎಂದು ಆಹುಡುಗರು ಕೇಳಲು ಈ ಮಳೆಯರಾಜನ ಚರಿತ್ರೆಯನ್ನು ಕವಿ ಹೇಳಿದನು.

ಕವಿ ಸುಗಟೂರು ದೊರೆಯಾಗ ಮುಮ್ಮಡಿ ತಮ್ಮನ[1] (ಸು 1665) ಸಮಕಾಲದ [illegible]ದಿಂದ ಅವನ ಕಾಲವೂ ಸುಮಾರು 1666 ಆಗಬಹುದು

1 Volume II, 450.

ಮುಮ್ಮಡಿ ತಮ್ಮನಿಗೆ ಮೂರು ಭಾಷೆಗಳಲ್ಲಿ ಕವಿತ್ವ ಮಾಡುವ ಶಕ್ತಿ ಇದ್ದಿತೆಂದು ಕವಿ ಹೇಳುವಂತೆಯೇ ಇವನೂ ತನ್ನ ಶಂಕರಸಂಹಿತೆಯಲ್ಲಿ ತಾನು ತ್ರಿವಿಧಕವೀಶ್ವರನೆಂದು ಹೇಳಿಕೊಂಡಿದ್ದಾನೆ.

ಪೂರ್ವಕವಿಗಳಲ್ಲಿ ಭವಭೂತಿ, ವ್ಯಾಸ, ಕೆರೆಯ ಪದ್ಮರಸ, ಮಯೂರ, ಹಲಾಯುಧ, ವಾಲ್ಮೀಕಿ, ಭಾರವಿ, ಸೋಮಾರಾಧ್ಯ, ಬಾಣ ಇವರುಗಳನ್ನು ಸ್ತುತಿಸಿದ್ದಾನೆ. ಅಲ್ಲದೆ ತೋಂಟದ ಸಿದ್ಧಲಿಂಗ, ನಿಜಗುಣಯೋಗಿ ಇವರ ಹೆಸರುಗಳನ್ನೂ ಹೇಳಿದ್ದಾನೆ.

‘ಸಕ್ಕದ ಕನ್ನಡದ ಕವಿತೆಯ ಚದುರ’ ಎಂದು ತನ್ನನ್ನು ವಿಶೇಷಿಸಿ ಹೇಳಿಕೊಂಡಿದ್ದಾನೆ.

ಇವನ ಗ್ರಂಥ

## ಮುಳೆಯರಾಜನ ಚರಿತ್ರೆ

ಇದು ವಾರ್ಧಕಷಟ್ಪದಿಯಲ್ಲಿ ಬರೆದಿದೆ; ಸಂಧಿ 34. ಇದರಲ್ಲಿ ಮುಳೆಯರಾಜನೆಂಬ ಪುರಾತನ ಶಿವಭಕ್ತನ ಕಥೆ ಹೇಳಿದೆ. ಇದಕ್ಕೆ ಕವಿಕರ್ಣಭೂಷಣ ಎಂಬ ಹೆಸರೂ ಉಂಟು. ಗ್ರಂಥಾವತಾರದಲ್ಲಿ ಭೋಗಲಿಂಗಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ವಿನಾಯಕ, ವೀರಭದ್ರ, ಸುಬ್ರಹ್ಮಣ್ಯ, ನಂದಿ, ಭೃಂಗಿ ಇವರನು ಸ್ತುತಿಸಿ ಬಸವ ಮೊದಲಾದ ಪುರಾತನರನ್ನೂ ತೋಂಟದ ಸಿದ್ಧಲಿಂಗ ಮುಂತಾದ ನೂತನರನ್ನೂ ಹೊಗಳಿದ್ದಾನೆ.[1] ಸಂಧಿಗಳ ಕೊನೆಯಲ್ಲಿ ಈ ಪದ್ಯವಿದೆ —

ಇದು ಸಕಲಶಿವಭಕ್ತಮಾದ ಪಂಕೇಜಷ |
ಟ್ಪದನೆನಿಪ ವಿಜಯನಗರದ ಹಿರಿಯಮಠದ ಪ |
ಟ್ಟದ ಸಿದ್ಧನಂಜೇಶಕರಜಾತನಾದ ಸಕ್ಕದ ಕನ್ನಡದ ಕವಿತೆಯ ||

1. ಬಸವ, ಚೆನ್ನಬಸವ, ಪ್ರಭುದೇವ, ನಂಬಿಯಣ್ಣ, ಮಾಚಯ್ಯ. ಸಾನಂದಗಣವರ, ಆದಿಮಯ್ಯ, ನಗೆಯಮಾರಿತಂದೆ, ಚಿಕ್ಕಯ್ಯ, ಕಣ್ಣಪ್ಪ, ಶಂಕರದಾಸ, ಶಾಂತಯ್ಯ, ಪರಮಸದ್ಯೋಜಾತವಾಮದೇವಾಘೋರವರತತ್ಪುರುಷವಕ್ತ್ರನೆಂಬ ಶರೀರವಾದ ರೇವಣ ಏಕೋರಾಮ ಮರುಳಸಿದ್ಧ ಪಂಡಿತಾರಾಧ್ಯರು, ತೋಂಟದಸಿದ್ಧಲಿಂಗ, ಕೊಟ್ಟೂರುಬಸವ, ಶಾಂತಮಲ್ಲೇಶ, ಸಿದ್ಧನಂಜೇಶ, ಸಿದ್ಧರಾಮಾರ್ಯ, ನಿಜಗುಣಯೋಗಿ, ಒಂಟಿಜೋಳಿಗೆದೇವ, ಕೋರಾನ್ಯದಯ್ಯ, ಮರುಳೇಶ, ಸರ್ಪೇಶ, ಗೂಳೂರ ಒಪ್ಪತ್ತಿನಯ್ಯ, ಗಂಗಾಧರೇಶ್ವರ, ಮಹತ್ತೇಶ, ಚೆನ್ನವೀರ, ಮೌನದೇವ ಬೋಳಬಸವ.

ಚದುರ ಸೆಟ್ಟಿಯ ಸಿದ್ಧಲಿಂಗಾರ್ಯನಣುಗಗೊರ್ |
ರೆದ ಶರಣಾಮಳೆಯರಾಜೇಂದ್ರಸಚ್ಚಾರಿತ್ರ |
ವಿದಿತಕವಿಕರ್ಣಭೂಷಣಂ.

ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ಸಮುದ್ರ

ಸುರಧರಾಧರಮೆನೆ ಶಿವಾನ್ವಿತಂ ಕಿನ್ನರೇ |
ಶ್ವರನಂತೆ ಪದ್ಮಕಚ್ಛಪಶಂಖನೀಲೋನ್ನ |
ಕರಮಹಾಪದ್ಮಾಂಕಿತಂ ವರಮುಕುಂದಬಂಧುರವಾಗಿ ಕುಂದದುದಧಿ ||
ತರುಣಿಯುರ ಬೆರಳಂತೆಯೂರ್ಮಿಕೋದ್ಭಾಸಿತಂ |
ಪಿರಿಯುರಂತುಣ್ಣೆ ನೋಡೆವ ಮರಿಯಾದೆ ತಪ್ಪದಾ |
ನರಪವಾಹಿನಿಯಂತೆ ವಾರಿವಾರಣದಿಂದ ಶರಧಿ ಕಂಗೊಳಿಸಿವುದು ||

ಪಟ್ಟಣ

ಅರಸಂಚೆಯಿಂ ಕಮಲಮುಬ್ಬರಜದಿಂ ಜಲಂ |
ಶರದಿಂದ ಸರಸಿ ಸರಣಿಂ ಕಂಪುಗಳನೆಳೆಯು |
ಪರಿಮಳಿಸುವರಲನನುಸರಿಪ ಷಟ್ಪದಗಳಿಂದರಲ ಪಕ್ಕಿಗಳನಾಂತ ||
ಬಿರಿಮುಗುಳ್ಗಳಿಂದರಲ್ಗಳಿಂದೆಸೆವ ಲತೆಗಳಾ |
ವರಿಸಿರ್ಪ ತರುಗಳಿಹ ಬನಗಳಿಂ ಮರಗಳಿಂ
ದುರುನಂದನಂಗಳಂ ಪೊರೆವ ಆಶ್ರಮಿತಿಗಳಿಂ ಪುರಪಲ್ಲಿಗಳ್ ನೋಡೆವುವು ||

(ದ್ವಿ. ಸಂಪುಟ, 531) ಬೆಂಗಳೂರು ಮುದ್ದವೀರಸ್ವಾಮಿ. ಸು 1700

ಈತನ ವಚನಗಳಲ್ಲಿ ಶಾಂಭವಿ ಎಂಬ ಅಂಕಿತವಿದೆ ಒಂದು ವಚನವನ್ನು ಉದಾಹರಿಸುತ್ತೇವೆ :—

ಅಂಗದೊಳ್ ಗೋಮುಖವದು, ತತ್ಪ್ರಾಣಲಿಂಗದೊಳ್ ಪತ್ರಕಂ ; ನೋಡೆ ಸಂಗದಿಂ ಗೋಳಂಗಳೊಳ್ ಪರಂಜ್ಯೋತಿ ಆಡಿವದೆ ಶಾಂಭವಿಯ ನಿಜವು.

## ಅಂತಪ್ಪ. ಸು. 1720

ಈತನು ಅಹಿಂಸಾಕಥೆ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಇವನು ಜೈನಕವಿ, ವೈಶ್ಯವಂಶಾಗ್ರಣಿ ಎಂದು ಹೇಳಿಕೊಂಡಿದ್ದಾನೆ. ಇವನ ತಂದೆ ಚಂದಣ್ಣಸೆಟ್ಟಿ, ತಾಯಿ ಚನ್ನಮ್ಮ, ಸ್ಥಳ ಚಿಕ್ಕಬಳ್ಳಾಪುರ ಸಮಂತಭದ್ರರ ವರದಿಂದ ತಾನು ಹುಟ್ಟಿದಂತೆ ಹೇಳುತ್ತಾನೆ ಇವನ ಕಾಲದಲ್ಲಿ ಬೈಚಭೂಪನು ಚಿಕ್ಕಬಳ್ಳಾಪುರದಲ್ಲಿ ಪ್ರಭುವಾಗಿದ್ದನೆಂದು ಹೇಳಿದೆ. ಬೈಚಭೂಪನಕಾಲವು ಸುಮಾರು 1720 ಎಂದು ತಿಳಿವುದರಿಂದ ಕವಿಯ ಕಾಲವೂ ಅದೇ ಆಗಿರಬೇಕು.

ಇವನ ಗ್ರಂಥ

### ಅಹಿಂಸಾಕಥೆ

ಇದು ಯಕ್ಷಗಾನರೂಪವಾಗಿದೆ. ಇದರಲ್ಲಿ "ವ್ರತವೊಂದಱತಿಶಯದಿಂ ದುರಿತವ ಹರಿಸಿ ಮುಕ್ತಿಯ ಸುಖವ ಪಡೆದ" ಧನಕೀರ್ತಿಯ ಚರಿತ್ರೆ ಹೇಳಿದೆ. ಇತರರ ಸಹಾಯವಿಲ್ಲದೆ ಈ ಗ್ರಂಥವನ್ನು ಆರುತಿಂಗಳಲ್ಲಿ ಮುಗಿಸಿದಂತೆ ಕವಿ ಹೇಳುತ್ತಾನೆ. ಈ ಗ್ರಂಥದ ವಿಷಯವಾಗಿ ಹೀಗೆ ಹೇಳಿಕೊಂಡಿದ್ದಾನೆ :—

ನವರಸಾಲಂಕಾರಮಧುರಾಲಾಪದಿಂದೊಪ್ಪುವಳನೀಕೃತಿ ।
ಯುವತಿಯನು ಕಂಡವರು ಸೋಲದರುಂಟೆ ಜಗದಿ ॥

ಆರಂಭದಲ್ಲಿ ವೀರಜಿನಸ್ತುತಿ ಇದೆ. ಬಳಿಕ ಕವಿ ಸಿದ್ಧಾದಿಗಳು, ಸರಸ್ವತಿ ಸಮಂತಭದ್ರ ಲಕ್ಷ್ಮೀಸೇನಮುನಿ ಇವರುಗಳನ್ನು ಸ್ತುತಿಸಿದ್ದಾನೆ.

## ರಾಯಣ್ಣ. ಸು. 1720

ಇವನು ಪದ್ಮಾವತಿಯ ಕೊರವಂಜಿ ಎಂಬ ಯಕ್ಷಗಾನವನ್ನು ಬರೆದಿದ್ದಾನೆ ಈತನು ಜೈನಕವಿ, ಇವನ ಪಿತಾಮಹನು ನಾಗಣ್ಣ, ತಂದೆ ದೊಮ್ಮಣ್ಣಕವಿ, ಸ್ಥಳ ಶ್ರವಣಬೆಳುಗೊಳಕ್ಕೆ ಉತ್ತರದಲ್ಲಿರುವ ವೇಣುಪುರಿ. ಇವನ ಕಾಲದಲ್ಲಿ ಶ್ರೀರಂಗಪಟ್ಟಣದಲ್ಲಿ ಕೃಷ್ಣರಾಜೇಂದ್ರನು ದೊರೆಯಾಗಿದ್ದನೆಂದು ಹೇಳುತ್ತಾನೆ ಈ ರಾಜನು ಒಂದನೆಯ ಕೃಷ್ಣರಾಜನೋ (1713-1731) ಅಥವಾ ಎರಡನೆಯ ಕೃಷ್ಣರಾಜನೋ (1734-1766) ಆಗಿರಬೇಕು. ಒಂದನೆಯವನೇ ಆಗಿರಬಹುದೆಂದು ತೋರುತ್ತದೆ.

ಇವನ ಗ್ರಂಥ

ಪದ್ಮಾವತಿಯ ಕೊರವಂಜಿ

ಈ ಯಕ್ಷಗಾನಕ್ಕೆ ರಾಮಜನನ ಎಂಬ ಹೆಸರೂ ಉಂಟು. ಇದರಲ್ಲಿ ಪದ್ಮಾವತೀದೇವಿ ಕೊರವಂಜಿಯ ವೇಷವನ್ನು ಧರಿಸಿ ಕೌಸಲ್ಯೆಯ ಬಳಿಗೆ ಹೋಗಿ ಅವಳಿಗೆ ಗಂಡುಮಗು ಆಗುವುದೆಂದು ಹೇಳಿದ ಕಥೆ ಉಕ್ತವಾಗಿದೆ.

ಕೈಲಾರದ ಬಸವಪ್ಪ. ಸು. 1800

ಈತನು ಗುರುಕರುಣಾತ್ರಿಪದಿ, ನಿರಾಭಾರಿ ವೀರಶೈವಸಿದ್ಧಾಂತ ಇವುಗಳನ್ನು ಬರೆದಿದ್ದಾನೆ. ಇವನು ವೀರಶೈವ ಕವಿ. ಬಳ್ಳಾರಿಗೆ ಸೇರಿದ ಲಿಂಗನಾಯಕನಹಳ್ಳಿಯ ಚೆನ್ನವೀರಸ್ವಾಮಿಯ ಕರಜಾತನು. ಇವನ ಕಾಲವು ಸುಮಾರು 1800 ಆಗಬಹುದೆಂದು ಹೇಳುತ್ತಾರೆ.

ಇವನ ಗ್ರಂಥಗಳಲ್ಲಿ

1. ಗುರುಕರುಣಾತ್ರಿಪದಿ

ಇದರಲ್ಲಿ 332 ಪದ್ಯಗಳಿವೆ. ಒಂದೊಂದು ಪದ್ಯವೂ 'ಗುರುವೆ ಕೃಪೆಯಾಗು' ಎಂದು ಮುಗಿಯುತ್ತದೆ ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ:—

ನವಚಕ್ರದೊಳಗಿರ್ದ | ನವಬ್ರಹ್ಮವನು ತೆಗೆದು |
ಶಿವಲಿಂಗ ವಿಗ್ರಹವ ಮಾಡಿ | ಕರುಣಿಸಿದ | ಸುವಿವೇಕಗುರುವೆ ಕೃಪೆಯಾಗು ||
ಅಷ್ಟಾಂಗಯೋಗ ಬಲು | ಕಷ್ಟ ಎಲೊ ಮಗನೆ ಎಂ |
ದಿಷ್ಟಲಿಂಗವನು ಸೃಷ್ಟಿಸಿ | ಕರಕಿತ್ತ | ಶ್ರೇಷ್ಠಶ್ರೀಗುರುವೆ ಕೃಪೆಯಾಗು ||

2 ನಿರಾಭಾರಿ ವೀರಶೈವ ಸಿದ್ಧಾಂತ

ಇದು ಪ್ರಾಯಿಕವಾಗಿ ವಾರ್ಧಕ ಷಟ್ಪದಿಯಲ್ಲಿ ಬರೆದಿದೆ, ಪ್ರಕರಣ 3, ಪದ್ಯ 121. ಇದರಲ್ಲಿ ಅಷ್ಟಾವರಣಮಹತ್ವ, ಪಂಚಾಚಾರ ಮುಂತಾದ ವಿಷಯಗಳು ಹೇಳಿವೆ. ಇದರಿಂದ ಒಂದೆರಡು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:-

ಗುರುವೆ ಅಜ್ಞಾನತಿಮಿರಾರ್ಕ ಭವಭಂಜನನು |
ಗುರುವೆ ಭಕ್ತಿಜ್ಞಾನ ವೈರಾಗ್ಯಮಂದಿರನು |
ಗುರುವೆ ದೀಕ್ಷೆಸುಶಿಕ್ಷೆ ಮೋಕ್ಷಕಾರಣಕರ್ತರಲ್ಲದಿನ್ನೊರ್ವರಿಲ್ಲ ||
ಗುರುವಿನಿಂದಧಿಕದೈವಗಳಿಲ್ಲವೆಂದರಿದು |
ಹರನು ನ ಗುರೋರಧಿಕವಿದಿತವೆಂದೋದಿದನು |
ನಿರುತವಿದು ಕೇಳು ಸದ್ಗುರುವಧಿಕನಿಂತಪ್ಪಗುರುಕರೋದ್ಭವರಧಿಕರು ||
ಪರಸತಿಗೆ ಪರಧನಕೆ ಪರನಿಂದೆ ಪರದೈವ |
ಕೆರಗಿಯನ್ಯರಜೀವಹಿಂಸೆಗಳ ಮಾಡುತಿಸ |
ದುರಿತ ಮಹಪಂಚಪಾತಕವೆಂದು ಗುರುಮುಖದೊಳರಿದವಕ್ಕಿಚ್ಛೆ ಪ್ರಸದೆ ||
ಗುರುಕರಾಂಬುಜದೊಳಗಿಹಿಷ್ಟಮಹಲಿಂಗವನು |
ಸರಸಸಂಯೋಗಸಮರಸಭಾವದಿಂದಪ್ಪಿ |
ಹೆರಹಿಂಗದಂತಿಪ್ಪನಿಷ್ಠೆಸದ್ವೀರಮಾಹೇಶನ ಸದಾಚಾರರು ||

## ಅನಂತನಾಥ ಸು. 1800

ಇವನು ಮನ್ಮಥ ಕೊರವಂಜಿ ಎಂಬ ಯಕ್ಷಗಾನವನ್ನು ಬರೆದಿದ್ದಾನೆ. ಈತನು ಜೈನಕವಿ. ಇವನ ಕಾಲವು ಸುಮಾರು 1800 ಆಗಿರಬಹುದು. ಇವನ ಗ್ರಂಥದಲ್ಲಿ ಮನ್ಮಥನು ಕೊರಚಿಯ ವೇಷವನ್ನು ಧರಿಸಿ ತನ್ನ ಸೋದರದ ಮಾವನ ಮಗಳಾದ ವಿದರ್ಭೆಗೆ ಕಣಿಯನ್ನು ಹೇಳಿದ ಕಥೆ ಉಕ್ತವಾಗಿದೆ. ಆದಿಯಲ್ಲಿ ನೇಮಿಜಿನ, ಸರಸ್ವತಿ ಇವರ ಸ್ತುತಿ ಇದೆ.

## ವ್ರಾಣೇಶವಿಠಲ, ಸು. 1800

ಈತನು ಕೀರ್ತನೆಗಳನ್ನು ಬರೆದಿದ್ದಾನೆ. ಇವನು ಮಾಧ್ವನು; ಜಗನ್ನಾಥದಾಸನ (ಸು. 1775) ಶಿಷ್ಯನು. ಈತನ ಸ್ಥಳ ನಿಜಾಂ ಇಲಾಖಾ ಲಿಂಗಸೂರು. ಇವನು 1822 ರಲ್ಲಿ ಸತ್ತನೆಂದು ಹೇಳುತ್ತಾರೆ.

## ಬಾಲಲೀಲಾ ಮಹಂತ ಶಿವಯೋಗಿ. ಸು. 1820

ಈತನು ಕೈವಲ್ಯದರ್ಪಣವನ್ನು ಬರೆದಿದ್ದಾನೆ. ಇವನು ವೀರಶೈವಕವಿ. ಧಾರವಾಡಜಿಲ್ಲೆಗೆ ಸೇರಿದ ಮುಳುಗುಂದದ ವಿರಕ್ತಮಠಕ್ಕೆ ಸ್ವಾಮಿಯಾಗಿ

ದ್ದನು. ಬಾಲರಂತೆ ಲೀಲೆಯನ್ನು ಮಾಡುತ್ತಿದ್ದುದರಿಂದ ಈತನಿಗೆ ಬಾಲಲೀಲಾ ಮಹಂತಶಿವಯೋಗಿ ಎಂದು ಹೆಸರು ಉಂಟಾಯಿತು. ಇವನು ಮೈಸೂರಿಗೆ ಹೋಗಿ ಮುಮ್ಮಡಿ ಕೃಷ್ಣರಾಜನಿಂದ (1799-1868) ಸನ್ಮಾನಿತನಾಗಿ ಅವನಿಗೆ ಬುದ್ಧಿವಾದವನ್ನು ಹೇಳಿದಂತೆ ಈ ಗ್ರಂಥದಿಂದ ತಿಳಿವುದರಿಂದ ಕವಿಯ ಕಾಲವು ಸುಮಾರು 1820 ಆಗಿರಬಹುದು

ಇವನ ಗ್ರಂಥ

ಕೈವಲ್ಯದರ್ಪಣ

ಇದರಲ್ಲಿ ಹಾಡುಗಳು, ಕಂದ, ಷಟ್ಪದಿ ಇವೆ. ಒಂದು ಹಾಡನ್ನೂ ಒಂದು ಷಟ್ಪದಿಯನ್ನೂ ಉದಾಹರಿಸುತ್ತೇವೆ —

ರಾಗ ದ್ವಿಜಾವಂತಿ. ಆದಿತಾಳ.

ಅವರವರ ಭಕ್ತಿಗೆ ಅವರವರ ಭಾವಕ್ಕೆ |
ಅವರವರ ಕೇಜನಾಗಿ ಇರುತಿಹನು ಶಿವಯೋಗಿ || ಪಲ್ಲವಿ |
ಇರದೊಂದು ಕನ್ನಡಿಯು ನೂರಾರು ಜನ ಪಿಡಿಯೆ |
ಸರಳಾಗಿ ಅವರವರ ರೂಪು ಕಾಣ್ಬಂತೆ |
ಹರಿಯ ಭಕ್ತರಿಗೆ ಹರಿ ಹರನ ಭಕ್ತರಿಗೆ ಹರ |
ನರರೇನು ಭಾವಿಸುವರದರಂತೆ ತೋರುವನು || 1 ||
ಮತಭೇದದವರು ದುರ್ಮತಿಯಿಂದ ಯತಿವರಗೆ |
ಸ್ತುತಿನಿಂದೆಮಾಡಿದರೆ ಅವರಿಗೇ ತಿರುಗುವುವು |
ಯತಿವರನು ತಾ ತನ್ನ ಪಥದಲ್ಲಿ ಇರುತಿಹನು |
ಕ್ಷಿತಿಜನರ ಪಾಪಪುಣ್ಯವ ಪರೀಕ್ಷಿಸುತ || 2 ||
ಕುಲಜಲವ ಹಿಡಿದಿರುವ ಕಲಕುಮನದವರಲ್ಲಿ |
ತಿಳಿವಳಿಕೆ ರವಿಚಂದ್ರ ಕಾಣುವ ಪರಿಯೆಂತು |
ಕುಲಜಲವನತಿಗಳೆದ ತಿಳಿಯ ಮನದವರಲ್ಲಿ |
ಸಲೆ ಮಹಂತಲಿಂಗ ಚಿತ್ಸೂರ್ಯ ಕಾಣುವನು || 3 ||

ಬೇಡದಿರು ನರರ ಕೊಂಡಾಡದಿರು ಹಿಂಸೆಯಂ |
ಮಾಡದಿರು ಪಾಪಕೆಡೆಯಾಡದಿರು ಕುಚಿತರೊಡ |
ನಾಡದಿರು ಕಾಮದೊಳು ನೋಡದಿರು ಪರಸತಿಯ ಕೂಡದಿರು ಕನಸಿನಲ್ಲಿ |

ಕೇಡೆಣಿಸದಿರು ಪರರಿಗಾಡದಿರು ನಿಷ್ಠುರವ |
ಪೀಡಿಸದಿರನ್ಯರನು ರೂಢಿಸದಿರಪಜಯದಿ |
ಕೂಡಿಸದಿರನ್ಯಾಯದೊಡವೆಯಂ ಸದ್ಗತಿಯುಮುಕ್ತಿಯಿದೆ ಎಂದನಾರ್ಯಂ||

## ಕಡಕೊಳ್ಳದ ಮಡಿವಾಳಪ್ಪ. ಸು. 1820.

ಈತನು ತತ್ವಪದಗಳನ್ನೂ ವಚನಗಳನ್ನೂ ಬರೆದಿದ್ದಾನೆ. ಇವನು ವೀರ ಶೈವಕವಿ. ಇವನ ಸ್ಥಳ ನಿಜಾಂ ಇಲಾಖೆಯಲ್ಲಿರುವ ಕಡಕೊಳ್ಳ. ಈತನು ಸುಮಾರು ನೂರುವರ್ಷಕ್ಕೆ ಹಿಂದೆ ಇದ್ದನೆಂದು ಹೇಳುತ್ತಾರೆ. ಇವನ ವಚನ ಗಳಲ್ಲಿ ನಿರುಪಮನಿರಾಳಮತ್ಪ್ರಭುಮಹಂತಯೋಗಿ ಎಂಬ ಅಂಕಿತವಿದೆ. ಒಂದು ವಚನವನ್ನು ಉದಾಹರಿಸುತ್ತೇವೆ.—

ದಯೆ ಧರ್ಮ ಕ್ಷಮೆ ದಮೆ ಶಾಂತಿ ದಾಂತಿ ನಯ ನೀತಿ ಸುಮನ ಸುಬುದ್ಧಿ ನಿರಹಂಕಾರ ಸುಜ್ಞಾನ ಸುಚಿತ್ತ ಸದ್ಭಾವ ಸತ್ಕರ್ಮ ಪರೋಪಕಾರ ಸುಖಭೋಗ ಶಿವಯೋಗ ರಾಜಯೋಗ ಸಾಧುವರಸಂಗ ಶಿವತತ್ವಾಪೇಕ್ಷೆ ಶಿವಕಥಾಸಂಗೋಷ್ಠಿ ಯಲ್ಲಿದ್ದು ತನ್ನ ತಾನರಿಯದೆ ಸತ್ತುಸತ್ತು ಹೋಯಿತ್ತು ಅನಂತಕಾಲ ಅನಂತಜನ್ಮ ನಿರುಪಮ ನಿರಾಳ ಮತ್ಪ್ರಭುಮಹಂತಯೋಗಿ.

## ಕುಮಾರವಿಭು. 1821

ಈತನು ಭಿಕ್ಷುಕಮಹೇಶವಿಲಾಸವನ್ನು ಬರೆದಿದ್ದಾನೆ. ಕುಮಾರೇಶ್ವರ ಪುರಾಣವೇ ಮೊದಲಾದ ಹಲವು ಇತರಗ್ರಂಥಗಳನ್ನೂ ರಚಿಸಿರುವುದಾಗಿ ಹೇಳುತ್ತಾರೆ. ಇವು ನಮಗೆ ದೊರೆತಿಲ್ಲ.

ಇವನು ವೀರಶೈವ ಕವಿ, ಧಾರವಾಡ ಜಿಲ್ಲೆಗೆ ಸೇರಿದ ಹಾನಗಲ್ಲ ವಿರಕ್ತ ಮಠದ ಸ್ವಾಮಿಯಾಗಿದ್ದನು. ಭಿಕ್ಷುಕಮಹೇಶವಿಲಾಸವನ್ನು ಶಕ 1744 ನೆಯ ಚಿತ್ರಭಾನುವಿನಲ್ಲಿ (1821) ಬರೆದಂತೆ ಹೇಳುತ್ತಾನೆ. ಪೂರ್ವಕವಿಗಳಲ್ಲಿ ತೋಂಟದ ಸಿದ್ಧಲಿಂಗ, ಷಡಕ್ಷರದೇವ ಇವರುಗಳನ್ನು ಸ್ತುತಿಸಿದ್ದಾನೆ. ಕವಿತಾ ಸರಣಿಯಲ್ಲಿಯೂ ಷಡಕ್ಷರದೇವನನ್ನು ಅನುಕರಿಸಿರುವಂತೆ ತೋರುತ್ತದೆ.

ಇವನ ಗ್ರಂಥ

### ಭಿಕ್ಷುಕ ಮಹೇಶವಿಲಾಸ.

ಇದು ಚಂಪೂರೂಪವಾಗಿದೆ, ಪ್ರಕರಣ 3. ಇದರಲ್ಲಿ ಶಿವನು ದ್ವಾರಾ ವತಿಗೆ ಹೋಗಿ ಭಿಕ್ಷಾಟನಮಾಡಿದ ಕಥೆ ಹೇಳಿದೆ. ಪೂರ್ವದಲ್ಲಿ ಲಿಂಗಣಾರ್ಯನು

(ಗುರುಲಿಂಗವಿಭು-ದ್ವಿ. ಸಂಪುಟ, 262) ವರ್ಣಕರೀತಿಯಲ್ಲಿ ಬರೆದಿದ್ದ ಭಿಕ್ಷಾಟನಚರಿತೆಯನ್ನು ತಾನು ಗುರುಸಿದ್ಧದೇಶಿಕನ ಅಪ್ಪಣೆಯಮೇರೆಗೆ ವಸ್ತುಕರೀತಿಯಲ್ಲಿ ಬರೆದಂತೆ ಕವಿ ಹೇಳುತ್ತಾನೆ. ತನ್ನ ಗ್ರಂಥದ ಉತ್ಕೃಷ್ಟತೆಯನ್ನು ಈ ಪದ್ಯದಲ್ಲಿ ಹೇಳಿಕೊಂಡಿದ್ದಾನೆ :—

ಸುರಗಿರಿಯಂತೆ ಸದ್ವಿಬುಧಸೇವಿತಮಂಬುಜದಂತೆ ಶ್ರೀಗುಣಂ |
ಸರಸಿಜಮಿತ್ರನಂತೆ ಘನಮಾರ್ಗಸುಶೋಭಿ ಸಮುದ್ರದಂತೆವೋಲ್ ||
ಸರಸಮುದಾರಭಾಮಿನಿಯರೋಳಿಯವೊಲ್ ಮಿಗೆ ಭಾವಜಾತಿಯಿಂ |
ಧುರಮೆನಿಕುಂ ಕುಮಾರವಿಭುನಿರ್ಮಿತವಿಾಕೃತಿ ಸರ್ವಲೋಕದೊಳ್ ||

ಗ್ರಂಥಾವತಾರದಲ್ಲಿ ಶಿವಸ್ತುತಿ ಇದೆ. ಬಳಿಕ ಕವಿ ಪಾರ್ವತಿ, ಗಣೇಶ, ಷಣ್ಮುಖ, ವೀರಭದ್ರ, ಬಸವ, ಚೆನ್ನಬಸವ ಇವರುಗಳನ್ನು ಸ್ತುತಿಸಿದ್ದಾನೆ. ಈ ಗ್ರಂಥದಿಂದ ಕೆಲವು ಪದ್ಯಗಳನ್ನು ತೆಗೆದು ಬರೆಯುತ್ತೇವೆ :—

ಗಣೇಶ.

ಎಱಗುವ ನಿರ್ಜರಾಧಿಪರ ರತ್ನಕಿರೀಟಗಳೊಂದನೊಂದು ತಾ |
ನೊರಸಲುದಿರ್ದ ಪೊನ್ನ ಪುಡಿಯಂ ಕರದೊಳ್ ತಳೆದೆತ್ತಿ ನೆತ್ತಿಯೊಳ್ ||
ಸುರಿದುಕೊಳುತ್ತೆ ಪಾಂಸುಮಯಕೇಳಿಯನಾಡಿ ಮನೋನುರಾಗಮಂ |
ವಿರಚಿಪ ವಿಘ್ನರಾಜನತುಳೋತ್ಸವದಿಂ ಮಿಗೆ ಮಾಳ್ಕೆವಿಘ್ನಮಂ ||

ಮೇರು.

ಅಳಿಯಂ ಶ್ರೀಪತಿ ಚಂದ್ರನಾತ್ಮತನಯಂ ನಿಚ್ಚಂ ನದೀನಾರಿಯರ್ |
ಒಱಗೊಂಡಿರ್ಪರನಂತಶೈಳಚಯಮೆನ್ನೊಳ್ ತೋರ್ಪುದೆನ್ನಂತೆ ಮಂ ||
ಜುಳಸತ್ವಾನ್ವಿತನಾವನೀ ಭುವನದೊಳ್ ಪೇಪೆಂದು ತಾನಬ್ಧಿ ಮಂ |
ಗಳಮಾದುಜ್ವಲಕೇತನಂನೆಗಪಿದಂತೊಪ್ಪಿತ್ತು ಹೇಮಾಚಳಂ ||

ಚಂದ್ರ.

ಒಗೆದಂಧಕಾರಮೆಂಬಾ | ಜಗುನೆಯ ಮಧ್ಯದೊಳೆ ಬೆಳೆದು ಬೆಳ್ವಳಗಿಂ ತಾಂ |
ಸೊಗಯಿಪ ಬೆಳ್ದಾವರೆಯೆನೆ | ಮಿಗೆ ಮೆಱೆದುದು ಚಂದ್ರಮಂಡಲಂಬಾನೆಡೆಯೊಳ್ ||

ಗೋಪಿಕಾಸ್ತ್ರೀ.

ನಡೆಯಿಂ ಹಂಸೆಯ ನಿಂದಿಸುತ್ತೆ ನುಡಿಯಿಂ ಕೀರಾಳಿಯಂ ದೂಷಿಸು |
ತ್ತೊಡನಂಗಪ್ರಭೆಯಿಂ ಕ್ಷಣಪ್ರಭೆಯುಮಂ ಕೋಡಾಡುತುಂ ಬಟ್ಟ ನು ||
ಣ್ದೊಡೆಯಿಂ ಬಾಳೆಯ ಬಿಂಕಮಂ ಜಱೆಯುತುಂ ಹಸ್ತಾಬ್ಜದಿಂದಬ್ಜಮಂ |
ಜಡಿಯುತ್ತುಂ ಪದದಿಂದೆ ಮಾಂದಳಿರುಮಂ ತಂದಿಕ್ಕಿದಳ್ ಭಿಕ್ಷಮಂ ||

ಶ್ರೀಪಾರ್ಶೀಶವಿಠಲ. ಸು. 1830

ಇವನು ಕೀರ್ತನೆಗಳನ್ನು ಬರೆದಿದ್ದಾನೆ ಈತನು ಮಾಧ್ವನು; ಪ್ರಾಣೇಶವಿಠಲನ (ಸು. 1800) ಮಗನು. 1860 ರಲ್ಲಿ ಸತ್ತನೆಂದು ಹೇಳುತ್ತಾರೆ.

ಶಿಶುನಾಳ ಸರೀಫ್ ಸಾಬ. ಸು. 1840

ಈತನು ಪದಗಳನ್ನು ಬರೆದಿದ್ದಾನೆ. ಇವನು ಮುಸಲ್ಮಾನನು; ಹಿಂದೂ ಮತದೀಕ್ಷೆಯನ್ನು ತೆಗೆದುಕೊಂಡಂತೆ ತೋರುತ್ತದೆ. ಈತನ ಗುರು ಗೋವಿಂದ; ಸ್ಥಳ ಧಾರವಾಡಜಿಲ್ಲೆಗೆ ಸೇರಿದ ಶಿಶುನಾಳ. ಇವನು ಸುಮಾರು 70, 80 ವರ್ಷಗಳಿಗೆ ಹಿಂದೆ ಇದ್ದನೆಂದು ಹೇಳುತ್ತಾರೆ. ಇವನ ಪದಗಳಲ್ಲಿ ಒಂದನ್ನು ತೆಗೆದು ಬರೆಯುತ್ತೇವೆ.—

ಶ್ರೀಗುರುನಾಥ ನಿರಾಲಯನಾಲಯದೊಳು |
ನಾವು ಈರ್ವರು ನಲಿದಾಡುವ ಬಾ ||
ಬಾರದಿದ್ದರೆ ನಿನ್ನ ಮೋರೆಗೆ ಹೊಡೆವೆನು |
ಸಾರಿ ಈರ್ವರು ನವಿದಾಡುವ ಬಾ ||
ಯೋಗದ ಕುದುರೆಯ ಬೇಗನೆ ಏರುತ |
ಮೇಗೇರಿಯು ಮರಳೋಗುವ ಬಾ ||
ನಡೆ ನಡೆ ಶಿಶುವಿನಾಳದೀಶನ ಗುಡಿಯೊಳು |
ಅಡಗಿಹ ಪ್ರಣಮವ ನೋಡುವ ಬಾ ||

ನರೇಗಲ್ಲ ಶಿವಬಸಪ್ಪಶಾಸ್ತ್ರಿ. ಸು 1840

ಇವನು ಬಸವಪವಾಡಲೀಲಾಮೃತವನ್ನು ಬರೆದಿದ್ದಾನೆ. ಈತನು ವೀರಶೈವ ಕವಿ. ಇವನ ಸ್ಥಳ ಧಾರವಾಡಜಿಲ್ಲೆಗೆ ಸೇರಿದ ನರೇಗಲ್ಲು. ಈತನು ಸುಮಾರು 1840 ರಲ್ಲಿ ಇದ್ದನೆಂದು ಹೇಳುತ್ತಾರೆ.

ಇವನ ಗ್ರಂಥ

ಬಸವಪವಾಡಲೀಲಾಮೃತ.

ಇದು ಭಾಮಿನೀಷಟ್ಪದಿಯಲ್ಲಿ ಬರೆದಿದೆ; ಸಂಧಿ 11, ಪದ್ಯ 980. ಇದರಲ್ಲಿ ಬಸವನ ಚರಿತ್ರವು ಸುಲಭಶೈಲಿಯಲ್ಲಿ ಬರೆದಿದೆ. ಕೆಲವು ಪದ್ಯಗಳನ್ನು ಉದ್ಧರಿಸಿ ಬರೆಯುತ್ತೇವೆ:—

ಉದ್ಯಾನ.

ಮರುಗ ಮಲ್ಲಿಗೆ ಜಾಜಿ ಕೇತಕಿ | ಪರಿಮಳಿಪ ಸುರಹೊನ್ನೆ ತಾವರೆ |
ಮೆರೆವ ಸೈದಿಲು ಬಟ್ಟದಾವರೆ ಪುಷ್ಪಜಾತಿಗಳು ||
ಭರದಿ ವನದೊಳು ಬೆಳೆದಿಹುವು ಬಹು | ತರದ ಸೇವಂತಿಗೆಯ ಪುಷ್ಪವು |
ಹರನಿಗರ್ಪಿತವಾಗೆ ನಿಂದಿಹ ದುಂಡುಮಲ್ಲಿಗೆಯು ||

ಪುರದ ಶೃಂಗಾರ

ಎಲ್ಲಿ ನೋಡಲು ಝಲ್ಲಿತೋರಣ | ವಲ್ಲಿಗಲ್ಲಿಗೆ ಮಕರತೋರಣ |
ಬಿಲ್ಲುಬಾಗಿದವೊಲು ಎಸೆದುವು ಕನಕತೋರಣವು ||
ಮಲ್ಲಿಗೆಯ ಸರದೊಳಗೆ ತೋರಣ | ಝಲ್ಲಿನವರತ್ನಗಳ ತೋರಣ |
ಎಲ್ಲಿ ನೋಡಲು ಎಸೆಯುತಿರ್ದುವು ಹಸಿರುತೋರಣವು ||

ಶ್ರೀಶ ಪ್ರಾಣೇಶವಿಠಲ, ಕರ್ಜಗಿ ಸುಖನಿಧಿವಿಠಲ, ಬಳ್ಳಾರಿ ವೆಂಕಟೇಶವಿಠಲ.

ಇವರುಗಳೂ ಕೀರ್ತನೆಗಳನ್ನು ಬರೆದಿರುವಂತೆ ತೋರುತ್ತದೆ. ಇವರು ಮಾಧ್ವರು. ಮೊದಲನೆಯವನು ಶ್ರೀ ಪ್ರಾಣೇಶವಿಠಲನ (ಸು 1830) ಸೋದರರ ಳಿಯನು. ಇವನು 1890 ರಲ್ಲಿ ಗತಿಸಿದಂತೆ ತಿಳಿಯಬರುತ್ತದೆ. ಎರಡನೆಯವನು ಶ್ರೀದವಿಠಲನ (ಸು. 1800) ಸೋದರರಳಿಯನು. ಮೂರನೆಯವನು ಬಹಳ ಆಧುನಿಕನು; 1925 ರಲ್ಲಿ ಸತ್ತನು.

ಪರಮೇಶ್ವರಭಟ್ಟ.

ಈತನು ಸ್ಮಾರ್ತನು ಇವನ ತಂದೆ ವೆಂಕಟೇಶಭಟ್ಟ, ಸ್ಥಳ ಹರಿಹರ ಪುರ. ಶ್ರೀಮಾನ್ ಕೆರೋಡಿ ಸುಬ್ಬರಾಯರು ಈತನನ್ನು ಯಕ್ಷಗಾನಕವಿ ಸಾರ್ವಭೌಮ ಎಂದು ಪ್ರಶಂಸಿಸುತ್ತಾರೆ [1] ಗ್ರಂಥಗಳು — ಪ್ರಭಾವತೀಸ್ವಯಂವರ, ಕಾಲನೇಮಿಕಾಳಗ, ಅಭಿಮನ್ಯುಕಾಳಗ ಇತ್ಯಾದಿ

ವಿ ನರಸಿಂಹಮೂರ್ತಿರಾಯ.

ಇವನು ಮಾಧ್ವನು. ಮೈಸೂರು ಪ್ರಾಂತದವನೆಂದು ತೋರುತ್ತದೆ. ಸರಕಾರದ ಫಾರೆಸ್ಟ್ ಇಲಾಖೆಯಲ್ಲಿ ಅಧಿಕಾರಿಯಾಗಿದ್ದನು. ಗ್ರಂಥಗಳು— ವಿರಾಟಪರ್ವ, ಭ್ರಾಂತಿಯಾಮಿನೀನಾಟಕ, ಕಲಿಮಾಹಾತ್ಮ್ಯ (ಕಥೆ.)

---

1. ರಂಗಭೂಮಿ, I, 244

## ಸಿದ್ಧಾಂತಿ ಪುಸ್ತಕಂ ಅಳಸಿಂಗರಾಚಾರ್ಯ.

ಇವನು ಶ್ರೀವೈಷ್ಣವನು. ಇವನ ಸ್ಥಳ ಮೈಸೂರು. ಗ್ರಂಥಗಳು— ಚಾಣಾಕ್ಯತಂತ್ರ ಚಮತ್ಕಾರ, ನಾಗವರ್ಮನ ಕರ್ಣಾಟಕಭಾಷಾಭೂಷಣದ ಟೀಕೆ.

## ಬೇಗೂರು ಮಲ್ಲಪ್ಪ.

ಈತನು ವೀರಶೈವನು. ಮೈಸೂರಲ್ಲಿ ಮಹಾರಾಜರ ಕನ್ನಡ ಸ್ಕೂಲಿನ ಹೆಡ್ಮಾಸ್ಟರಾಗಿದ್ದನು. ಗ್ರಂಥಗಳು—ನಾಗವರ್ಮನ ಕಾವ್ಯಾವಲೋಕನದಲ್ಲಿಯ ಅರ್ಥಾಲಂಕಾರದ ಟೀಕೆ, ಶಬ್ದಾದರ್ಶ. ನಾಗವರ್ಮನ ಕಾದಂಬರಿಯನ್ನು ಈತನೇ ತಿದ್ದಿ ಮುದ್ರಿಸಿದವನು.

## ಎಂ. ಎ. ತಿರುಮಲಾಚಾರ್ಯ.

ಇವನು ಶ್ರೀವೈಷ್ಣವನು. ಮೈಸೂರು ಸರಕಾರದಲ್ಲಿ ಅಸಿಸ್ಟೆಂಟ್ ಕಮಿಷನರಾಗಿದ್ದನು. ಗ್ರಂಥಗಳು—ನಾರದಭಕ್ತಿಸೂತ್ರಟೀಕೆ, ಆರ್ಯಮತಸಮನ್ವಯ.

## ಎಂ. ಎ. ನರಸಿಂಹಾಚಾರ್ಯ.

ಈತನು ಶ್ರೀವೈಷ್ಣವನು. ಮೈಸೂರು ವೆಸ್ಲಿಯನ್ ಮಿಷನ್ ಹೈಸ್ಕೂಲಿನಲ್ಲಿ ಹಲವು ವರ್ಷಗಳು ಉಪಾಧ್ಯಾಯನಾಗಿದ್ದು ಬಳಿಕ ವಕೀಲನಾಗಿದ್ದನು. ಗ್ರಂಥ-ಯಜುಸ್ಸಂಧ್ಯಾಭಾಷ್ಯಟೀಕೆ.

## ಪಂಡಿತ ಟಿ. ಎಂ. ಚಂದ್ರಶೇಖರಶಾಸ್ತ್ರಿ.

ಈತನು ವೀರಶೈವಕವಿ ಇವನ ಸ್ಥಳ ದಾವಣಗೆರೆ. ಅಲ್ಲಿಯ ತೆಲಿಗಿ ಮಠದಲ್ಲಿ ಅಧಿಕಾರಿಯಾಗಿದ್ದನು. ಗ್ರಂಥಗಳು—ಅಥಣಿ ಶಿವಯೋಗೀಶ ಚರಿತ್ರ (ಷ.), ಅಥಣಿ ಶಿವಯೋಗಿ ಮಹಿಮ ಮಂಜರಿ (ಗದ್ಯ), ನವರಾತ್ರಸಮಾರಂಭ ಕಾವ್ಯ (ಚಂಪು.)

## ಸಿ. ಸುಬ್ಬರಾಯ, ಬಿ. ಎ.

ಈತನು ಮಾಧ್ವನು. ಮೈಸೂರು ಮಹಾರಾಣಿ ಸ್ಕೂಲಿನಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥ—ಆಹಾರವಿಷಯೋಪನ್ಯಾಸ. ಬಸವಪ್ಪಶಾಸ್ತ್ರಿಯೊಡನೆ ಸೇರಿ ಶೂರಸೇನಚರಿತ್ರೆಯನ್ನು ಬರೆದನು. (ಪುಟ 317)

### ಕೆ. ಎ. ದೇಶಿಕಾಚಾರ್ಯ.

ಇವನು ಶ್ರೀವೈಷ್ಣವನು. ಮೈಸೂರು ಸರಕಾರದ ಅಗ್ರಿಕಲ್ಚರಲ್ ಇಲಾಖೆಯಲ್ಲಿ ಕೆಲವು ಕಾಲ ಕೆಲಸದಲ್ಲಿದ್ದನು. ಗ್ರಂಥ—ಮನುಷ್ಯ ಶರೀರ ಧರ್ಮಶಾಸ್ತ್ರ.

### ಎಂ. ಸುಬ್ಬಯ್ಯ, ಬಿ. ಎ

ಈತನು ಒಕ್ಕಲಿಗನು. ಬೆಂಗಳೂರಲ್ಲಿ ಫ್ಯಾರಿಸ್ಟಾಗಿದ್ದನು. ಗ್ರಂಥ-ತೋಟದ ಬೇಸಾಯ.

### ಪಿ ವೇದಮಿತ್ರ.

ಇವನು ಕ್ರಿಸ್ತನು. ಮೈಸೂರಲ್ಲಿ ಉಪಾಧ್ಯಾಯನಾಗಿದ್ದನು. ಗ್ರಂಥ-ಸ್ವಪ್ರಯಾಸ ಫಲದೀಪಿಕೆ.

### ಭಾಷ್ಯಂ ತಿರುಮಲಾಚಾರ್ಯ.

ಈತನು ಶ್ರೀವೈಷ್ಣವನು. ಇವನ ಸ್ಥಳ ಬೆಂಗಳೂರು. ಗ್ರಂಥ—ಸಂಕ್ಷೇಪ ರಾಮಾಯಣ (ವಾಲ್ಮೀಕಿ ರಾಮಾಯಣದ ಪ್ರಥಮ ಸರ್ಗದ ಟೀಕೆ)

### ಎಂ. ಎ. ಶ್ರೀನಿವಾಸಾಚಾರ್ಯ.

ಇವನು ಶ್ರೀವೈಷ್ಣವನು. ಮೈಸೂರು ಸರಕಾರದಲ್ಲಿ ಅಸಿಸ್ಟೆಂಟ್ ಕಂಟ್ರೋಲರಾಗಿದ್ದನು. ಗ್ರಂಥ—ರಾಜಾ ಮಲಯಸಿಂಹ.

### ಬಿ. ರಾಮಕೃಷ್ಣರಾಯ.

ಈತನು ಸ್ಮಾರ್ತನು. ಮೈಸೂರು ಅರಮನೆಯಲ್ಲಿ ಕಂಟ್ರೋಲರಾಗಿದ್ದನು. ಗ್ರಂಥ—ಶ್ರೀರಾಮ ಕಥಾಪ್ರಸಂಗ. ಇವನು ಮೈಸೂರು ಮಹಾರಾಜರ ವಂಶಾವಳಿಯ ಎರಡು ಸಂಪುಟಗಳನ್ನು ತಿದ್ದಿ ಮುದ್ರಿಸಿದನು.

### ಮೋಟಗಾನಹಳ್ಳಿ ರಾಮಶೇಷಶಾಸ್ತ್ರಿ.

ಇವನು ಸ್ಮಾರ್ತನು. ಮೈಸೂರು ಪ್ರಾಂತದವನು. ಗ್ರಂಥ—ಸಾನಂದ ಗಣೇಶನ ಕಥೆ (ಯ.)

## ಎಂ. ಬಿ. ಶ್ರೀನಿವಾಸಯ್ಯಂಗಾರ್.

ಈತನು ಶ್ರೀವೈಷ್ಣವನು. ಮೈಸೂರು ಸರಕಾರದಲ್ಲಿ ಅಪಾತಿಕೆರಿಯಾಗಿದ್ದನು. ಗ್ರಂಥಗಳು—ಗರ್ಭಿಣೀಶಿಶುಸಂರಕ್ಷಣ, ವಿಷೂಚಿ.

## ಎಂ. ರಾಮಸ್ವಾಮಿಶಾಸ್ತ್ರಿ.

ಇವನು ಸ್ಮಾರ್ತನು. ಸರಕಾರಿ ಟ್ರಾನ್ಸ್ಲೇಟರಿಗೆ ಸಹಾಯಕನಾಗಿ ಪಂಡಿತಕೆಲಸದಲ್ಲಿದ್ದನು. ಗ್ರಂಥ—ವಾಗ್ವಿಧಾಯಿನಿ

## ತಿರುಮಲೆ ಶ್ರೀನಿವಾಸಾಚಾರ್ಯ.

ಈತನು ಶ್ರೀವೈಷ್ಣವನು. ಇವನ ಸ್ಥಳ ಮೈಸೂರು. ಮಂಗಳೂರಲ್ಲಿ ಮೆ. ಕಿಟಲ್‌ಸಾಹೇಬನಿಗೆ ಸಹಾಯಕನಾಗಿ ಪಂಡಿತಕೆಲಸದಲ್ಲಿದ್ದನು. ಗ್ರಂಥಗಳು—ಷಡಕ್ಷರೀಯ ವಚನಟೀಕೆ, ಅನುಭವಾಮೃತ ಟೀಕೆ.

## ಕೆ. ರಾಮಸ್ವಾಮಿ ಅಯ್ಯಂಗಾರ್.

ಈತನು ಶ್ರೀವೈಷ್ಣವಕವಿ. ಮೈಸೂರು ವಿದ್ಯಾಇಲಾಖೆಯಲ್ಲಿ ಉಪಾಧ್ಯಾಯನಾಗಿದ್ದನು. ಇವನ ಸ್ಥಳ ಮಾಗಡಿ. ಈತನು ಅನೇಕ ಗ್ರಂಥಗಳನ್ನು ಪದ್ಯರೂಪವಾಗಿಯೂ ಗದ್ಯರೂಪವಾಗಿಯೂ ಬರೆದಿದ್ದಾನೆ.

ಗ್ರಂಥಗಳು—ಈಶ್ವರಚಂದ್ರವಿದ್ಯಾಸಾಗರ (ಗ), ಉಪದೇಶಮಾಲೆ (ದ್ವಿಪದಿ), ಒಳ್ಳೆಗನ್ನಡಿ (ಕಂ), ಕನ್ನಡ ಬಾಲಭಾರತ (ಗ), ಕನ್ನಡ ಬಾಲಭಾಗವತ (ಗ), ಕನ್ನಡ ಬಾಲರಾಮಾಯಣ (ಗ), ಕಪಿಲನ ಇತಿಹಾಸ (ಗ), ಕುಮಾರವ್ಯಾಸನ ಮಹಾಭಾರತದ ಸಂಗ್ರಹ—ಆದಿಪರ್ವ (ಗ), ಸಭಾಪರ್ವ (ಗ), ಅರಣ್ಯಪರ್ವ (ಗ), ವಿರಾಟಪರ್ವ (ಗ), ಉದ್ಯೋಗಪರ್ವ (ಗ), ಭೀಷ್ಮದ್ರೋಣಪರ್ವಗಳು (ಗ), ಕರ್ಣಶಲ್ಯಸೌಪ್ತಿಕ ಸ್ತ್ರೀಪರ್ವಗಳು (ಗ); ಕೌಸಲ್ಯಾಪರಿಣಯ (ಗ), ಚಂದ್ರಕಲಾಕಲ್ಯಾಣ (ನಾ), ಚಾಣಕ್ಯತಂತ್ರ (ಗ), ಜೀರ್ಣವಿಜಯನಗರಾದರ್ಶ (ಗ), ದಾರಿದ್ರ್ಯಶತಕ, ನೀತಿರಸಾಯನ (ದ್ವಿ. ಚೌ. ಹಾ.), ಬಾಲಭಾರತ (ಷ), ಬಾಲಿಕಾನೀತಿಮಾಲಿಕೆ (ಕಂ), ಭೂಗೋಳಮಾಲಿಕೆ, ಮಕ್ಕಳಆಟಗಳು, ಮಹಾಭಕ್ತವಿಜಯ (ಗ), ಮುಕುಂದಮಾಲಾಸ್ತೋತ್ರ (ಷ. ವೃ. ಚೌ.), ರಂಗನಾಥ ರಾಮಾಯಣ (ಷ), ರಾಜತರಂಗಿಣಿ (ಗ), ರಾಜಪುತ್ರ ರಮಣಿಯರು (ಗ), ರಾಜಭಕ್ತಿಸಾರ (ಷ), ರಾಜಾ ರಾಮಮೋಹನರಾಯನ ಚರಿತ್ರೆ (ಗ), ಲೇಖ್ಯಪ್ರದರ್ಶಿನಿ, ಸಂಕ್ಷೇಪ ಮುದ್ರಾರಾಕ್ಷಸ, ಸಂಗೀತ ಕಲ್ಯಾಣ ಪಾರಿಜಾತ (ಹಾ), ಸಂಸಾರ ನಿರ್ವಾಹಕ್ರಮ ಮತ್ತು ಗೃಹಶಿಕ್ಷಣ (ಗ), ಸತ್ಯಾ

ದ್ರೌಪದೀಸಂವಾದ (ಷ), ಸುಕನ್ಯಾಚರಿತ್ರ (ಷ), ಸುಯಜ್ಞೋಪಾಖ್ಯಾನ, ಹಿತಬೋಧಿನಿ (ಷ), ಹಿತೋಪದೇಶ (ಚಂ). ಈತನು ಆನಂದರಾಮಾಯಣ ಅಥವಾ ರಾಮರಾಭ್ಯುದಯ ಕಥಾಕುಸುಮಮಂಜರಿ ಎಂಬ ಗ್ರಂಥವನ್ನು ತಿದ್ದಿ ಮುದ್ರಿಸಿದನು.

## ಶ್ರೀಕಂಠೇಶಗೌಡ, ಬಿ.ಎ., ಬಿ.ಎಲ್.

ಈತನು ಒಕ್ಕಲಿಗನು. ಮೈಸೂರು ಸರಕಾರದಲ್ಲಿ ಮುನ್ಸಿಫ್ ಕೆಲಸದಲ್ಲಿದ್ದನು. ಗ್ರಂಥಗಳು—ಕನ್ಯಾವಿತಂತು, ಚಾಮನೃಪ ಚಂದ್ರಪ್ರಭೆ (ಕಂ) ಚಿಕ್ಕಬಣಜಿಗರು, ಪ್ರತಾಪರುದ್ರದೇವ, ಪ್ರಮೀಳಾರ್ಜುನೀಯ, ಪ್ರಿಯದರ್ಶಿಕೆ, ಸೀತಾಸ್ವಯಂವರ, ಸುರಭಿ

## ಬಿ. ಶ್ರೀನಿವಾಸ ರಾಮಚಂದ್ರ ಸವದಿ.

ಇವನು ಬ್ರಾಹ್ಮಣನು. ಧಾರವಾಡ ಪ್ರಾಂತದವನು. ಗ್ರಂಥಗಳು—ದೀರ್ಘಾಯುಷ್ಯದ ಗುಟ್ಟು, ಪ್ಲೇಗೆಂಬ ಪಿಡುಗು.

## ರಾಜಗೋಪಾಲಾಚಾರ್ಯ ಕಡಕೋಳ.

ಈತನು ಮಾಧ್ವನು. ಇವನ ಸ್ಥಳ ಕರಜಗಿ. ಗ್ರಂಥ—ಕೀಚಕಸಂಧಿ.

## ಜಯರಾಯಾಚಾರ್ಯ (ಪುಟ 321)

ಇತರ ಗ್ರಂಥಗಳು—ಸಿರಿಯಾಳರಾಜ, ಚಂದ್ರಹಾಸ, ಕಲ್ಯಾಣಗೀತಾವಳಿ, ಸಂಗೀತದ ಕೃತಿಗಳು, ನಾಡೀನಿದಾನ, ಅನುಕರಣಗೀತಲಹರಿ, ಭವಿಷ್ಯೋತ್ತರ ಪುರಾಣ (ಚಂ). ಈತನು ನರಪತಿಚರಿತವೆಂಬ ಅಲಂಕಾರಗ್ರಂಥವನ್ನು ತಿದ್ದಿ ಮುದ್ರಿಸಿದನು.

## ಶಂಕರಾನಂದಯೋಗಿ ಪುಟ (258)

ಈತನು ಬ್ರಾಹ್ಮಣನಲ್ಲ, ಕ್ಷತ್ರಿಯುಮನೆತನದವನು. ಇವನ ಇತರ ಗ್ರಂಥಗಳು—ಉತ್ತರ ಕೈವಲ್ಯನವನೀತ, ರಾಮಶತಾಮೃತ, ರಾಮಭಕ್ತಿಸಾರ, ಭಕ್ತಿಕಲ್ಪದ್ರುಮ, ಪಾರ್ವತೀಪಂಚರತ್ನ, ಮುಕ್ತಿಕಾಂತಾಕಲ್ಯಾಣ, ಹರಿಹರಲೀಲಾಮೃತ.

ನಂಜನಗೂಡು ಸುಬ್ಬಾಶಾಸ್ತ್ರಿ (ಪುಟ 220)

ಇತರ ಗ್ರಂಥಗಳು—ಮಾಳವಿಕಾಗ್ನಿಮಿತ್ರ, ಮೃಚ್ಛಕಟಿಕೆ.

ಶಾಂತಕವಿ (ಪುಟ 221)

ಇತರ ಗ್ರಂಥಗಳು—ಅಷ್ಟಕಥೆಗಳ ಬುಕ್ಕು, ಅಲಂಕಾರಶಾಸ್ತ್ರ, ಅಲಾವಿ ಜಂಗು, ಆಂಜನೇಯವಿಜಯ, ಆನಂದಲಹರಿ, ಋತುಸಂಹಾರ, ಕನ್ನಡ ದಾಸ ಯ್ಯನ ಪದಗಳು, ಕನ್ನಡಿಗರಿಗೆ ಸವಾಲುಗಳು, ಕವಿಕಂಠಕುಠಾರ, ಕಾಲಮಹಿಮೆ, ಕಾಳಾಸುರ, ಕೃಷ್ಣರಾಧಿಕಾವಿಲಾಸ, ಗೀತಗೋವಿಂದ, ಗಾಲವಚಿತ್ರಸೇನ, ಚಿತ್ರ ಸೇನಗಂಧರ್ವ (ನಾ), ಜರಾಸಂಧವಧ, ನಾಗಾನಂದ, ನಾರದಕುಚೇಷ್ಟೆ, ಪುಷ್ಪ ಬಾಣವಿಲಾಸ, ಬರಗಾಲರಸು, ಬೃಹಜ್ಜಂಬೂಚರಿತ್ರೆ, ಭುಜಂಗೋಪದೇಶ, ಮಯೂರಧ್ವಜಪ್ರತಾಪ, ಮುಕುಂದದಾನಾಮೃತ, ಮೃಚ್ಛಕಟಿಕ (ನಾ), ರಘು ವಂಶ 2ನೆಯ ಸರ್ಗ, ರಸಿಕಾರಸಿಕವಿಚಾರ, ರಾವಣವಧೆ, ರಾವಣವೇದವತಿ, ಲಘುಕವಿತಾಪದ್ಧತಿ, ವಾಸಪ್ಪನಾಯಕನ ಫಾರ್ಸ್, ವಿಟಕಂಠಖಡ್ಗ, ವಿರಾಟ ಪರ್ವ, ವಿಶ್ವಾಮಿತ್ರತಪೋಭಂಗ ಅಥವಾ ಶಕುಂತಲೆಯ ಉತ್ಪತ್ತಿ, ವೇಶ್ಯಾವಾ ಟಿಕಾಸಂಚಾರ, ವ್ಯಭಿಚಾರಾನರ್ಥಸಿಂಧು, ಶಾಕುಂತಲ (ನಾ), ಶೃಂಗಾರಸಾಗರ, ಶ್ರೀಮತೀಸ್ವಯಂವರ, ಸದ್ವರ್ತನ, ಸೀತಾಸ್ವಯಂವರ, ಸುಧನ್ವವಧ, ಸೌಭದ್ರ (ನಾ), ಸ್ಯಮಂತಕಮಣಿ ಚರಿತ, ಹರಗರ್ವಪರಿಹಾರ, ಹರಿಮಿತ್ರೋಪಾಖ್ಯಾನ, ಹರಿಶ್ಚಂದ್ರ ಸತ್ಯಪರೀಕ್ಷೆ.

ಹಿಂದೆ ಕೊಟ್ಟಿರುವ ಮೌನೇಶ್ವರನ ಬಾಲಲೀಲೆ ಎಂಬ ಗ್ರಂಥವು ಈ ಕವಿ ಯದಲ್ಲವೆಂದು ತಿಳಿಯುತ್ತದೆ.

ಬಿ. ವೆಂಕಟಾಚಾರ್ಯ (ಪುಟ 223)

ಇತರ ಗ್ರಂಥಗಳು—ಅಮೃತಪುಲಿನ, ಇದೊಂದು ಚಿತ್ರ, ಉನ್ಮಾದಿನಿ, ಉಪವಾಸ, ಕರ್ಮಕ್ಕೆ ತಕ್ಕಫಲ, ಕಾಗೆ, ಕೊಹಿನೂರು, ಕ್ಷತ್ರಿಯರಮಣಿ, ಗೀತೋಕ್ತಧರ್ಮ, ಚಿತ್ರವಿಚಿತ್ರಾವಳಿ, ಚಿರತ್ನನಾಟಕರತ್ನ, ದಾಡಿಯ ಹೇಳಿಕೆ, ದೇಶಾಂತರಗಳಲ್ಲಿ ಪ್ರಾಚೀನಭಾರತ ಉಪನಿವೇಶಗಳು, ನವಾಬನಂದಿನಿ, ನೀಳಾ ಗೀತೆ, ನೊಂದನುಡಿ, ಭರತಖಂಡದ ಪೂರ್ವವೃತ್ತ, ಭರತಖಂಡದಲ್ಲಿ ವಿದುಷಿಯ ರಾಗಿದ್ದ ರಮಣಿಯರು, ಮನೋರಮಾ, ಮಶಕ, ಯುಗಳಪ್ರದೀಪ, ಲೀಲೆ,

ಲೋಕರಹಸ್ಯ, ವಂಗವಿಜೇತ, ವೆನಿಸುನಗರದ ವಣಿಕ, ವೈಜ್ಞಾನಿಕ ಪ್ರಹಸನ, ಶಾಂತಿ, ಸಾಧನೆ, ಸುಶಿಕ್ಷಿತರೆಂಬ ಸಧ್ಯರಾದ ಹಿಂದುಗಳು, ಸ್ತ್ರೀಶಿಕ್ಷೆಯು ಸಮಸ್ಯೆ, ಹಿಂದುಗಳ ಮನುಷ್ಯತ್ವ.

ಭೀಮಾಜಿ ಶ್ರೀನಿವಾಸ ಅಡಬಡ್ಡಿ (ಪುಟ 222)

ಈತನ ನೀತಿದರ್ಪಣವು ಷಟ್ಪದಿ, ಕಂದ, ವೃತ್ತ ಇವುಗಳಲ್ಲಿ ಬರೆದಿದೆ. ಇತರ ಗ್ರಂಥಗಳು—ಸ್ತ್ರೀಧರ್ಮಸಾರ, ಧಾತ್ವರ್ಥಪ್ರಕಾಶಿಕೆ, ಕೆಲವು ನಾಟಕಗಳು.

ಗಿರಿಭಟ್ಟರ ತಮ್ಮಯ್ಯ (ಪುಟ 238)

ಇತರ ಗ್ರಂಥ—ನೀತಿಚೂಡಾಮಣಿ. ದೊಡ್ಡ ಗ್ರಂಥ, ಕಂದದಲ್ಲಿ ಬರೆದಿದೆ.

ಗರಣಿ ಕೃಷ್ಣಾಚಾರ್ಯ (ಪುಟ 221)

ಇತರ ಗ್ರಂಥಗಳು—ಹವ್ಯಪಾಕಪದ್ಧತಿ, ಗಜೇಂದ್ರಮೋಕ್ಷ ಟೀಕೆ, ಕರ್ಣಾಟಕ ಭಾಷಾವಿಷಯ, ಕರ್ಣಾಟಕ ಭಾಷಾಸವ್ಯಾಕರಣೋಪನ್ಯಾಸ, ಸದ್ವೃತ್ತಾನುಷ್ಠಾನ.

ವೆಂಕಟೇಶಶಾಸ್ತ್ರಿ (ಪುಟ 225)

ಇತರ ಗ್ರಂಥ—ರಾಜಮಾರ್ತಾಂಡ ಚರಿತ್ರೆ.

ಕೃಷ್ಣರಾಯ ರಾ. ಬಂಕಾಪುರ (ಪುಟ 394)

ಇತರ ಗ್ರಂಥ—ಮುಳಬಾಗಿಲವರ ಚರಿತ್ರಶತಕ (ನಾನಾವೃತ್ತ).

ಬಸವಪ್ಪಶಾಸ್ತ್ರಿ (ಪುಟ 217)

ಇತರ ಗ್ರಂಥಗಳು—ರತ್ನಾವಳಿ, ಮಾಲತೀಮಾಧವ, ವಿಕ್ರಮೋರ್ವಶೀಯ, ಕೃಷ್ಣರಾಜಾಭ್ಯುದಯ, ಶಂಕರಶತಕ, ಹರ್ಷಚರಿತ, ದಕ್ಷಿಣಾಮೂರ್ತ್ಯಷ್ಟಕ.

ಪಾರ್ತಿ ಸುಬ್ಬಯ್ಯ (ಪುಟ 398)

ಇವನು ಶಿವಬ್ರಾಹ್ಮಣನು. ಇವನ ಗ್ರಂಥಗಳು—ಪುತ್ರಕಾಮೇಷ್ಟಿ,

ಪಂಚವಟಿ, ವಾಲಿಸುಗ್ರೀವ ಕಾಳಗ, ಉಂಗರಸಂಧಿ, ಸೇತುಬಂಧನ, ಅಂಗದ ಸಂಧಾನ, ಸಭಾಲಕ್ಷಣ. (ಪಂಚಕಜ್ಞಾಯ, 32).

### ಗಂಗಾಧರ ಮಡಿವಾಳೇಶ್ವರ 1 (ಪುಟ 212)

ಇತರ ಗ್ರಂಥಗಳು—ಕಾವ್ಯಸಂಗ್ರಹ, ರಾಜಶೇಖರವಿಲಾಸ ಟೀಕೆ.

### ಪಗಡದಿನ್ನೆ ಮರದ ನನ್ನಪ್ಪಶಾಸ್ತ್ರಿ

ಈತನು ವೀರಶೈವನು; ರಾಯಚೂರು ಪ್ರಾಂತದವನು. ಗ್ರಂಥಗಳು—ನವಮುಗ್ಧಲೀಲೆ, ತ್ರಿಷಷ್ಟಿ ಪುರಾತನ ಚರಿತ್ರೆ, ವೇದಾಂತ ಪಟಲ, ಶಿಖಾಧಾರಣ ಖಂಡನ.

### ಪಂಡಿತ ಪ್ರಭುವಪ್ಪ

ಈತನು ವೀರಶೈವನು. ಇವನ ಸ್ಥಳ ನ್ಯಾಮತಿ. ಗ್ರಂಥ—ಹಳಗನ್ನಡದ ಶಬ್ದಕೋಶ.

### ಮಾಳಿ

ಇವನು ವೀರಶೈವನು; ದಾರವಾಡಪ್ರಾಂತದವನು. ಚಿತ್ರಶಿಲ್ಪದಲ್ಲಿ ಚತುರನು. ಕನ್ನಡದಲ್ಲಿ ಲೇಖನಗಳನ್ನೂ ಕವಿತೆಗಳನ್ನೂ ಬರೆಯುತ್ತಿದ್ದಂತೆ ತಿಳಿಯುತ್ತದೆ.

### ಕಿತ್ತೂರ ಬಸವಾರ್ಯ

ಈತನು ವೀರಶೈವನು; ದಾರವಾಡಪ್ರಾಂತದವನು. ಅನೇಕ ಲೇಖನಗಳನ್ನೂ ಕವಿತೆಗಳನ್ನೂ ಪ್ರಬೋಧ ಮುಂತಾದ ಮಾಸಪತ್ರಿಕೆಗಳಲ್ಲಿ ಬರೆದಿರುವನು.

### ಬೂದಿಹಾಳ ಬಸವಾರ್ಯ

ಇವನು ವೀರಶೈವನು; ದಾರವಾಡಪ್ರಾಂತದವನು. ಉಪನ್ಯಾಸ ಲೇಖಕನು, ಗ್ರಂಥಗಳು—ದಿವ್ಯಸುಂದರಿ ಇತ್ಯಾದಿ.

---

1. ಇಲ್ಲಿಂದ ಬೂದಿಹಾಳ ಬಸವಾರ್ಯನವರೆಗೆ ವೀರಶೈವ ಕರದರ್ಪಣದ ಆಧಾರದ ಮೇಲೆ ಬರೆದಿದೆ,

## ಬಿ. ಕೃಷ್ಣಪ್ಪ ಎಂ. ಎ.

ಈತನು ಬ್ರಾಹ್ಮಣನು; ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಕನ್ನಡ ಪ್ರೊಫೆಸರಾಗಿಯೂ ಕರ್ಣಾಟಕ ಗ್ರಂಥಮಾಲೆಯ ಸಂಪಾದಕನಾಗಿಯೂ ಇದ್ದನು. ಗ್ರಂಥಗಳು—ರಾಯಚೂರು ವಿಜಯ, ಅಭಿಜ್ಞಾನ ಶಾಕುಂತಳನಾಟಕ ಕರ್ಣಾಟಕ ಗದ್ಯಾನುವಾದ (ವಿಮರ್ಶೆ ಸಹಿತ), ಕನಕೋದ್ಧಾರ್ಜನ, ಟಿಪ್ಪೀಜರ್ ದಂಡಯಾತ್ರೆ, ಯವನ ಮಹಾವೀರ ಚರಿತೆ, ಯವನ ವೀರಕಥಾವಳಿ.

## ಬಿ. ಎಲ್. ರೈಸ್ ಸಿ. ಐ. ಇ.

ಈತನು ಮೈಸೂರು ಸರಕಾರದ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದು ಬಳಿಕ ಶಾಸನದ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದನು. ಕನ್ನಡದಲ್ಲಿ ಬಾಲಕರಿಗೂ ಪಂಡಿತರಿಗೂ ಉಪಯೋಗವಾಗುವಂತೆ ಹಲವು ಗ್ರಂಥಗಳನ್ನು ಪ್ರೌಢ ಪೀಠಿಕೆಯೊಡನೆ ಮುದ್ರಿಸಿ ಪ್ರಕಟಿಸಿದನು. ಗ್ರಂಥಗಳು—ಅಮರಕೋಶ, ಪದ್ಯಸಾರ, ಕರ್ಣಾಟಕ ಭಾಷಾಭೂಷಣ, ಪಂಪರಾಮಾಯಣ, ಪಂಪಭಾರತ, ಕರ್ಣಾಟಕ ಶಬ್ದಾನುಶಾಸನ.

## ಕೆರೋಡಿ ಸುಬ್ಬರಾಯ ಬಿ. ಎ.

ಈತನು ಬ್ರಾಹ್ಮಣನು, ಮಂಗಳೂರು ಪ್ರಾಂತದಲ್ಲಿ ಇದ್ದನು. ಶ್ರೀಕೃಷ್ಣಸೂಕ್ತಿಗೆ ಪ್ರಥಮ ಸಂಪಾದಕನು.

ಗ್ರಂಥಗಳು—ಸೌಭಾಗ್ಯವತೀ ಪರಿಣಯ, ಶೃಂಗಾರಶತಕ, ಕುಮಾರಶೇಖರ, ತಾರಾನಾಥ, ಪಲಾಂಡುಚರಿತ.



# ADDITIONS AND CORRECTIONS

## ಗ್ರಂಥಶುದ್ಧಿ (3)

ಈ ಸಂಪುಟಕ್ಕೆ 3ನೆಯ ಪರಿಶಿಷ್ಟರೂಪವಾಗಿ 327ನೆಯ ಪುಟದಿಂದ 333 ನೆಯ ಪುಟದವರೆಗೆ ಒಂದು ಗ್ರಂಥಶುದ್ಧಿಯೂ, 348ನೆಯ ಪುಟದಲ್ಲಿ ಮತ್ತೊಂದು ಗ್ರಂಥಶುದ್ಧಿಯೂ ಹಿಂದೆಯೇ ಕೊಟ್ಟಿವೆ. ಈಗ ಕೊಡುವ ಗ್ರಂಥಶುದ್ಧಿ ಈ ಸಂಪುಟಕ್ಕೆ ಮಾತ್ರವಲ್ಲದೆ 1ನೆಯ ಮತ್ತು 2ನೆಯ ಸಂಪುಟಗಳಿಗೂ ಅನ್ವಯಿಸುತ್ತದೆ.

### 3ನೆಯ ಸಂಪುಟ

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| i | 20 | ಅಪ್ಪಯ್ಯ | ಅಯ್ಯಪ್ಪ |
| iv | 34 | ಕಡ್ಕಯ | ಡಕ್ಕಯ |
| x | 3 | ಕೆ. ವಿನಾಯಕಶಾಸ್ತ್ರಿ ಎಂಬ ಹೆಸರನ್ನು ಬಿಡಬೇಕು | |
| xii | 13 | ಶಾಷಾದ್ರಿ | ಶೇಷಾದ್ರಿ |
| ,, | 25 | ಸ್ತ್ರಗೆಕಾಯಕದ | ಸತ್ತಿಗೆಕಾಯಕದ |
| xvi | 37 | ಕಪಾಕುಂಡಲಾ | ಕಪಾಲಕುಂಡಲಾ |
| xvii | 14 | ಕಾಮಶಾಸ್ತ್ರ ಎಂಬುದನ್ನು ಬಿಡಬೇಕು. ನಂದಳಿಕೆ ಲಕ್ಷ್ಮೀನಾರಣಪ್ಪನು ಕಾಮಶಾಸ್ತ್ರವನ್ನು ಬರೆದಿಲ್ಲ. | |
| xx | 41 | ತುಣುಕುವಿಣುಕು ಎಂಬುದನ್ನು ಬಿಡಬೇಕು. | |
| xxvi (219) | 52 | ರತ್ನಾವಳೀಕಲ್ಯಾಣ | ರತ್ನಾವತೀಕಲ್ಯಾಣ |
| ,, (221) | 35 | ಮೌನೇಶ್ವರನ ಬಾಲಲೀಲೆ ಎಂಬುದನ್ನು ಬಿಡಬೇಕು; ಇದನ್ನು ಶಾಂತಕವಿ ಬರೆದಿಲ್ಲ | |
| xxvii | 10 | ರಾಜಾಸ್ಥಾನ | ರಾಜಸ್ಥಾನ |
| xxviii | 9 | ಲುಲಾಯಶಾಸ್ತ್ರ ಎಂಬುದನ್ನು ಬಿಡಬೇಕು. ವಲೀಮುಖವಿಲಾಸನಾಟಕ 236 ಎಂದು ಸೇರಿಸಬೇಕು | |
| xxx | 11 | ಶಬ್ದವ್ಯುತತ್ತಿ | ಶಬ್ದವ್ಯುತ್ಪತ್ತಿ |
| xxx (I64) | 15 | ಶಬ್ದಾರ್ಥಮಂಜರಿಯನ್ನು ಬಿಡಬೇಕು; ಇದನ್ನು ಚಂದ್ರಸಾಗರವರ್ಣಿ ಬರೆದಿಲ್ಲ | |

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| xxxi | 11 | ಶುದ್ಧಿಪತ್ರ ಎಂಬುದನ್ನು ಬಿಡಬೇಕು | |
| ,, | 21 | ಷಟಚಕ್ರದೀಪಿಕೆ | ಷಟ್ಚಕ್ರದೀಪಿಕೆ |
| ,, | 22 | ಚೆಲುವಾಂಬೆ ಕೃಷ್ಣಕರ್ಣಾಮೃತ ಟೀಕೆಯನ್ನೂ ಬರೆದಿರುವುದಾಗಿ ತಿಳಿಯುತ್ತದೆ. | |

96 ನಿಟ್ಟೂರು ನಂಜಯ್ಯನಿಗೆ ಹಿಂದೆ ಇನ್ನೂ ಇಬ್ಬರು ಶಬ್ದಮಣಿದರ್ಪಣಕ್ಕೆ ವ್ಯಾಖ್ಯಾನವನ್ನು ಬರೆದಿದ್ದಂತೆ ತಿಳಿಯುತ್ತದೆ. ಇವರಲ್ಲಿ ಒಬ್ಬನು ಲಿಂಗಣಾರಾಧ್ಯ. ಇವನ ವ್ಯಾಖ್ಯಾನಕ್ಕೆ "ಸೂತ್ರಾನ್ವಯರತ್ನಮಾಲೆ" ಎಂದು ಹೆಸರು.[1] ಸಂಧಿಗಳ ಕೊನೆಯಲ್ಲಿ ಈ ಗದ್ಯವಿದೆ :—ಇದು ಸಂಸ್ಕೃತ ಕರ್ಣಾಟಕೋಭಯಭಾಷಾವಿಶಾರದ ಶ್ರೀ ವೀರಶೈವ ಲಿಂಗಣಾರಾಧ್ಯ ವಿರಚಿತಮಪ್ಪ ಸೂತ್ರಾನ್ವಯರತ್ನಮಾಲೆಯೊಳ್. ಇವನ ಕಾಲವು ಸುಮಾರು 1600 ಆಗಿರಬಹುದೆಂದು ಊಹಿಸುತ್ತೇವೆ. 69ನೆಯ ಸೂತ್ರದ ವ್ಯಾಖ್ಯಾನವನ್ನು ಉದಾಹರಿಸುತ್ತೇವೆ :—

ಪರಪದಪೂರ್ವಂ ದ್ವಿತ್ವಾ | ಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾ |
ಕ್ಷರಮಾಗೆ ಸಂಧಿದೋಷಂ | ಸರೇಫಮಿದಿತಾಗೆ ಶಿಥಿಲಮೆಂದನುಸರಿಸರ್ ||

ಪರಪದದ ಪೂರ್ವಂ ದ್ವಿತ್ವಾಕ್ಷರಮಾಗಿರೆ ಪೂರ್ವಪದದ ಚರಮಂ ಲಘುವಾಗಿರೆ ಸಂಧಿದೋಷಮಕ್ಕುಂ. ಛಂದೋವಿಷಯದಲ್ಲಿ ಪರಪದದ ಪೂರ್ವಂ ರೇಫೆವೆರಸಿದೊರ್ಡಂ ಶಿಥಿಲಮಾಗಲಾಪುರ್ದೆಂದು ಕೆಲಬರಂಗೀಕರಿಸುವರ್. ಸರೇಫಮಿದಿರಾಗೆ ದೋಷಂ ಎಂದು........ತಾಂ ಮಾಡಿದ ಶಬ್ದಮಣಿದರ್ಪಣ ವ್ಯಾಖ್ಯಾನದೊಳ್ ಬರೆದಂ. ಅದು ಪೊಲ್ಲ. ಸೂತ್ರಕಾರನಾಗ ಕವಿಕೇಶವಂ ತಾಂ ಮಾಡಿದ ಶಬ್ದಮಣಿವೃತ್ತಿಯೊಳ್ ಸಂಧಿದೋಷಮಕ್ಕುಮೆಂದು "ಬರಿಸಿ ಕ್ಷಿತೀಶನಂ" ಇತ್ಯಾದಿ ಪದ್ಯಮಂ ಬರೆದಂ. ಸರೇಫಶಿಥಿಲಕ್ಕೆ—ಮಿಱುಗುತ್ತಿರ್ಪ ತ್ರಿಶೂಲದಿಂ.

ಚುಕ್ಕಿ ಹಾಕಿರುವ ಕಡೆ ಹುಳು ಕೊರೆದು ಓಲೆ ಹೋಗಿದೆ. ಆಲ್ಲಿಯ ಭಾಗವು ಸಿಕ್ಕಿದ್ದರೆ ಲಿಂಗಣಾರಾಧ್ಯನಿಗೆ ಹಿಂದೆ ಇದ್ದ ವ್ಯಾಖ್ಯಾಕಾರನ ಹೆಸರು ತಿಳಿಯುತ್ತಿದ್ದಿತು. ಲಿಂಗಣಾರಾಧ್ಯನು 'ಬರಿಸಿ ಪ್ರಧಾನರಂ' ಎಂಬ ಪಾಠವು

---

1. ಈ ವ್ಯಾಖ್ಯೆಯ ವಿಷಯವು ಮದರಾಸ್ ಯೂನಿವರ್ಸಿಟಿ ಕನ್ನಡ ಫೆಲ್ಲೋ ಆದ ಶ್ರೀಮಾನ್ ಎಸ್. ಶಿವಯ್ಯಂಗಾರಿಂದ ತಿಳಿಯಿತು. ಇದು ಮದರಾಸ್ ಪ್ರಾಚ್ಯ ಲಿಖಿತ ಕೋಶಾಗಾರದಲ್ಲಿದೆ.

ತಪ್ಪೆನ್ನುತ್ತಾನೆ. ಕವಿರಾಜಮಾರ್ಗದಲ್ಲಿಯೂ ‘ ಬರಿಸಿ ಕ್ಷಿತಿಪತಿಯಂ ’ (II,7) ಎಂಬ ಪಾಠವೇ ಇದೆ.

98 ತಾವು ಗುಣಿಸಿ ನೋಡಿದುದರಲ್ಲಿ ಜಾಯೇಂದ್ರನ ಕಾಲವು 1674ಕ್ಕೆ ಸರಿಹೋಗುತ್ತದೆ ಎಂದು ಶ್ರೀಮಾನ್ ಮಂಜೇಶ್ವರದ ಗೋವಿಂದಪೈ ನನಗೆ ಬರೆದ ಒಂದು ಪತ್ರದಲ್ಲಿ ತಿಳಿಸಿದ್ದಾರೆ. ಜಾಯೇಂದ್ರನು ಪರಿವರ್ತಿಸಿರುವ ಸಂಸ್ಕೃತ ಕುವಲಯಾನಂದವನ್ನು ಅಪ್ಪಯ್ಯದೀಕ್ಷಿತನು ವಿಜಯನಗರದ ದೊರೆಯಾದ 1ನೆಯ ವೆಂಕಟಪತಿರಾಯನ (1586—1615) ಅಜ್ಞಾನುಸಾರವಾಗಿ ರಚಿಸಿದಂತೆ ಆ ಗ್ರಂಥದಲ್ಲಿರುವ ಈ ಶ್ಲೋಕದಿಂದ ತಿಳಿಯುತ್ತದೆ :—

ಅಮುಂ ಕುವಲಯಾನಂದ ಮಕರೋದಪ್ಪದೀಕ್ಷಿತಃ ।
ನಿಯೋಗಾದ್ವೇಂಕಟಪತೇರ್ನಿರುಪಾಧಿಕೃಪಾನಿಧೇಃ ॥

102. ಎಚ್ಚರಿಕೆ ಮುಕ್ತಣ್ಣನು ಬಸವನ ಸಮಕಾಲದವನೆಂದು ಕೆಲವರು ಹೇಳುತ್ತಾರೆ. ಹಾಗಿದ್ದಪಕ್ಷದಲ್ಲಿ ಈತನ ಕಾಲವು ಸುಮಾರು 1160 ಆಗಬಹುದು.

153 ಮಧ್ವದಾಸ. ಕುಡುಮಪುರ ಎಂಬುದು ಧರ್ಮಸ್ಥಳದ ಹಿಂದಣ ಹೆಸರು.

157, 390 ಯಾದವನ ಕಾಲವು ಸುಮಾರು 1830 ಆಗಬಹುದು

164 ಚಂದ್ರಸಾಗರವರ್ಣಿ. ಧರ್ಮಪುರಿ ಎಂಬುದು ಶೋವನಕೆರೆಯ ನಾಮಾಂತರವೆಂದು ತಿಳಿಯುತ್ತದೆ. ಈ ಕವಿಯ ಜಿನರಾಮಾಯಣದಲ್ಲಿ 4913 ಪದ್ಯಗಳೂ ಜಿನಭಾರತದಲ್ಲಿ 4628 ಪದ್ಯಗಳೂ ಇವೆ ಎಂದೂ, ಈತನು ವಿಕ್ರಮಂಧರ ಕಾವ್ಯ (ಭಾ. ೩ ಪದ್ಯ 3044), ಚಾವುಂಡರಾಯನ ಕಥೆ, ವಿಭೀಷಣನ ಬುದ್ಧಿ, ವಸಂತತಿಲಕೆ ಎಂಬ ಗ್ರಂಥಗಳನ್ನೂ ಬೆಳುಗೊಳದ ಅಣ್ಣಯ್ಯ, ನಾಗಯ್ಯ ಮುಂತಾದವರಿಗೋಸ್ಕರ ಪಂಡಿತಾಚಾರ್ಯರ ಅಜ್ಞಾನುಸಾರವಾಗಿ ಧರ್ಮಪರೀಕ್ಷೆ ಎಂಬ ಗದ್ಯಗ್ರಂಥವನ್ನೂ ಬರೆದಿರುವನೆಂದೂ ಶ್ರೀಮಾನ್ ಟಿ. ಕೆ. ಸೀತಾರಾಮ ಜೋಯಿಸರು ಬರೆದಿದ್ದಾರೆ. (School Folk, Kannada Supplement, June 1927). ಈ ಹೊಸ ಗ್ರಂಥಗಳನ್ನು ಈ ಕವಿ ರಚಿಸಿದನೆಂಬುದಕ್ಕೆ ಆಧಾರವನ್ನು ತಿಳಿಸಿಲ್ಲ.

| | | | |
|---|---|---|---|
| 168 | 11 | ಒಂದೆರಡ, | ಒಂದೆರಡು |
| ,, | 12 | ಸರ್ವಸತೀ | ಸರಸ್ವತೀ |

180 ಭವ್ಯಜನಚಿಂತಾಮಣಿ. ಬೆಂಗಳೂರು ಶ್ರೀಯುತ್ ಪಂಡಿತ ಯಲ್ಲಪ್ಪನವರಲ್ಲಿರುವ ಈ ಗ್ರಂಥದ ಕೈ ಬರಹದ ಪ್ರತಿಯಲ್ಲಿ ಗ್ರಂಥವನ್ನು ಚಂದ್ರಸಾಗರವರ್ಣಿ ಬರೆದಂತೆ ಹೇಳಿದೆ. ಗ್ರಂಥದ ಆದಿಭಾಗದಲ್ಲಿ—

ದೇವರು ಶಾಸ್ತ್ರಂ ಮುನಿಗಳ | ಪಾವನತರವನ್ನು ಭಜಿಸಿ ಚಂದ್ರಸಾಗರ [ಕವಿಗಳ್] |
ಕಾವಿತಜನ ಚಿಂತಾಮಣಿ | ಯಾ ವಿರಚನೆಗೈದರಚ್ಚಗನ್ನಡದಿಂದಂ ||

ಎಂಬ ಪದ್ಯವು ದೊರೆಯುತ್ತದೆ. ಆಶ್ವಾಸಾಂತಗದ್ಯಗಳಲ್ಲಿ "ಚಾರುಕೀರ್ತಿ ಪಂಡಿತಾಚಾರ್ಯ ವಿರಚಿತಮಪ್ಪ" ಎಂಬುದಕ್ಕೆ ಪ್ರತಿಯಾಗಿ "ಚಾರುಕೀರ್ತಿಪಂಡಿತಾಚಾರ್ಯರಸುಮತಿಯಿಂ ಶ್ರೀ ಚಂದ್ರಸಾಗರವರ್ಣಿವಿರಚಿತಮಪ್ಪ" ಎಂದಿದೆ ಅಲ್ಲದೆ ಗ್ರಂಥವು ಸಕಲಭೂಷಣನ ಸಂಸ್ಕೃತಗ್ರಂಥದ ಪರಿವರ್ತನವೆಂದೂ ಹೇಳಿದೆ. ಕೊನೆಯಲ್ಲಿ ಚಂದ್ರಸಾಗರವರ್ಣಿ ಬಹುಧಾನ್ಯವರ್ಷದಲ್ಲಿ (1818) ಗ್ರಂಥವನ್ನು ಗಂಜಾಮಿನಲ್ಲಿ ಪ್ರತಿಮಾಡಿದಂತೆ ಬರೆದಿದೆ.

231 ಕೆರೂರು ವಾಸುದೇವಾಚಾರ್ಯ. ಇತರ ಗ್ರಂಥ—ನೀಳ್ಕತೆಗಳು.

242 ಈ ನಾರಾಯಣಕವಿಯ ವಿದ್ಯಾಗುರುವಾದ ಭಾನುಕವಿಸುತ ತಿಮ್ಮಣಾರ್ಯನು ಶ್ರೀಯುತ್ ಉಗ್ರಾಣ ಮಂಗೇಶರಾಯರು ಹೇಳುವಂತೆ (ಕನ್ನಡ ಪರಿಷತ್ಪತ್ರಿಕೆ xii, 102—3) ಕೃಷ್ಣರಾಜಭಾರತವನ್ನು ಬರೆದ ತಿಮ್ಮಣ್ಣ ಕವಿಯೋ (ಸು. 1510) ಆಗಿರಬಹುದು. ಹಾಗಿದ್ದಪಕ್ಷದಲ್ಲಿ ಕವಿಯ ಕಾಲವು ಅವರು ಹೇಳುವಂತೆ ಸುಮಾರು 1530 ಆಗಬಹುದು.

334 ಈಚೆಗೆ ದೊರೆತ ಒಂದು ಹಳೆಯ ಕೈಬರಹದ ಪುಸ್ತಕದಲ್ಲಿ ಅರ್ಕೇಶ್ವರಲಿಂಗ ಎಂಬುದು ಮಧುವಯ್ಯನ ಅಂಕಿತ ಎಂದು ಸ್ಪಷ್ಟವಾಗಿ ಹೇಳಿದೆ. ಈ ಮಧುವಯ್ಯನು ಬಸವನ ಸಮಕಾಲದವನು. ಇವನ ಕಾಲವು ಸುಮಾರು 1160 ಆಗಬಹುದು. ಆದುದರಿಂದ ಮಡಿವಳಮಾಚಯ್ಯನವೆಂದು ಹೇಳಿರುವ ವಚನಗಳು (I, 183) ಮಧುವಯ್ಯನವು. ಕಲಿದೇವರದೇವ ಎಂಬ ಅಂಕಿತವು (I, 194) ಮಡಿವಳ ಮಾಚಯ್ಯನದು; ಕಲಿದೇವಯ್ಯನದಲ್ಲ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| 394 | ಕೊನೆಯ 4 ಪಙ್ಕ್ತಿಗಳನ್ನು ಬಿಡಬೇಕು. | | |
| 438 | 18 | ಕಾಮಂ ‖ | ಕಾಮಂ ‖1 |
| 440 | 8 | ಲ್ಲವಬರಾರೊ | ಬಲ್ಲವರಾರೊ |

442 ಬಿಬ್ಬಿದೇವಯ್ಯನ ಮತ್ತೊಂದು ವಚನ— ಭಾವಭ್ರಮೆವಂತರು ಬಾರದಿರಿ, ಜ್ಞಾನಹೀನರು ಬೇಗ ಹೋಗಿ, ತ್ರಿವಿಧವುಳ್ಳ ಕಚ್ಚುಟ್ಟ ಹೊಡೆದಾಡುವರತ್ತಲಿರಿ ನಿರತಸ್ವಯಾನುಭಾವರು ಬನ್ನಿ, ಪರಬ್ರಹ್ಮಸ್ವರೂಪರು ಬನ್ನಿ, ಏಕಲಿಂಗ ನಿಷ್ಠಾಪರ ದೃಢಗಂತರು ಬನ್ನಿ, ಸನ್ಮಾರ್ಗ ಸತ್ಕ್ರಿಯೆವಂತರು ಬನ್ನಿ ಎಂದು ಎನಗೆ ಕೊಟ್ಟ ಕಾಯಕ ಕೂಡಲ ಸಂಗಮ ದೇವರಲ್ಲಿ ಬಸವಣ್ಣ.

## ೧ನೆಯ ಸಂಪುಟ

| | | | | |
|---|---|---|---|---|
| Introduction | xv | 1 | Kannadar | Karunadar |
| ,, | xvii | 28 | Nripatunga compares it to an unnatural union with an old woman. | Nripatunga compares it to mixing drops of buttermilk with boiling milk. |

ಅವತರಣಿಕೆ 17 3 "ಅವಲಂಬವಾಗಿದ್ದನು" ಆದಮೇಲೆ "೩ನೆಯ ಕೃಷ್ಣರಾಜನು ಪೊನ್ನನಿಗೆ ಕವಿಚಕ್ರವರ್ತಿ ಎಂಬ ಬಿರುದನ್ನು ಕೊಟ್ಟನು" ಎಂಬ ವಾಕ್ಯವನ್ನು ಸೇರಿಸಬೇಕು.

See II, Introduction, 8; also ಅವತರಣಿಕೆ, 14

,, ,, 6 ಪೊನ್ನ ಎಂಬುದನ್ನು ಬಿಡಬೇಕು.

,, ,, 10 ಕರ್ಣಪಾರ್ಯ, ಕರ್ಣಪಾರ್ಯನು ಕರಹಾಟದ ಶಿಲಾಹಾರ ರಾಜರ ಆಳಿಕೆಯಲ್ಲಿ ನೇಮಿನಾಥ ಪುರಾಣವನ್ನು ರಚಿಸಿದನು. See 11, Introduction, 10, also ಅವತರಣಿಕೆ, 16.

1,5 ಹರಿವಂಶವನ್ನು ಬರೆದ ಜಿನಸೇನನೇ (783) ಬೇರೆ, ಆದಿಪುರಾಣವನ್ನು ಬರೆದ ಜಿನಸೇನನೇ (ಸು. 838) ಬೇರೆ. ಒಂದನೆಯವನು ಪುನ್ನಾಟ ಸಂಘಕ್ಕೆ ಸೇರಿದವನು, ಕೀರ್ತಿಷೇಣನ ಶಿಷ್ಯನು; ಎರಡನೆಯವನು ಸೇನ ಸಂಘಕ್ಕೆ ಸೇರಿದವನು, ವೀರಸೇನನ ಶಿಷ್ಯನು.

4 ಶ್ವೇತಾಂಬರ ವೀರವಂಶಾವಳಿಯಲ್ಲಿ ಸಮಂತಭದ್ರನು ಮಹಾವೀರನ ನಿರ್ವಾಣವಾದ 889ನೆಯ ವರ್ಷದಲ್ಲಿ, ಎಂದರೆ 419ರಲ್ಲಿ, ಇದ್ದನೆಂದು ಹೇಳಿದೆ.

5 ಕವಿಪರಮೇಶ್ವರನನ್ನು ಜಿನಸೇನನು ಆದಿಪುರಾಣದಲ್ಲಿ ಹೀಗೆ ಸ್ತುತಿಸಿದ್ದಾನೆ:—

ಸ ಪೂಜ್ಯಃ ಕವಿಭಿರ್ಲೋಕೇ ಕವೀನಾಂ ಪರಮೇಶ್ವರಃ |
ವಾಗರ್ಥಸಂಗ್ರಹಂ ಕೃತ್ಸ್ನಂ ಪುರಾಣಂ ಯಃ ಸಮಗ್ರಹೀತ್ ||

ಉತ್ತರಪುರಾಣವನ್ನು ಬರೆದ ಗುಣಭದ್ರನೂ ಕವಿ ಪರಮೇಶ್ವರನ ಗದ್ಯಗ್ರಂಥದ ಆಧಾರದಿಂದ ಆದಿಪುರಾಣವು ಬರೆಯಲ್ಪಟ್ಟಿದೆ ಎಂದು ಹೇಳುತ್ತಾನೆ.

7 ಪೂಜ್ಯಪಾದ. ದಿಗಂಬರ ದರ್ಶನವೆಂಬ ಗ್ರಂಥದಲ್ಲಿ ಪೂಜ್ಯಪಾದನ ಶಿಷ್ಯನಾದ ವಜ್ರನಂದಿ ಎಂಬವನು 470ರಲ್ಲಿ ಒಂದು ದ್ರಾವಿಡ ಸಂಘವನ್ನು ದಕ್ಷಿಣ

ಮಧುರೆಯಲ್ಲಿ ಸ್ಥಾಪಿಸಿದಂತೆ ಹೇಳಿರುವುದಾಗಿ ತಿಳಿಯ ಬರುತ್ತದೆ. ಈ ಹೇಳಿಕೆ ಆಧಾರಯುಕ್ತವಾಗಿದ್ದ ಪಕ್ಷದಲ್ಲಿ ಪೂಜ್ಯಪಾದನ ಕಾಲವನ್ನು ಹಿಂದಕ್ಕೆ ಹಾಕಬೇಕಾಗುತ್ತದೆ.

9 ಚೂಡಾಮಣಿವ್ಯಾಖ್ಯಾನವನ್ನು ಬರೆದ ತುಂಬುಲೂರಾಚಾರ್ಯನಿಗೂ ಚೂಡಾಮಣಿಕಾವ್ಯವನ್ನು ಬರೆದ ಶ್ರೀವರ್ಧದೇವನಿಗೂ ಏನೂ ಸಂಬಂಧವಿಲ್ಲವೆಂದು ತೋರುತ್ತದೆ. ತಮಿಳಿನಲ್ಲಿ ಚೂಡಾಮಣಿ ಎಂಬ ಒಂದು ಹಳೆಯ ಜೈನಕಾವ್ಯವಿದೆ. ಇದನ್ನು ಬರೆದವನು ಶ್ರೀವರ್ಧದೇವ ಎಂಬ ನಾಮಾಂತರವುಳ್ಳ ತೋಲಾಮೊಳಿ ದೇವ ಎಂಬವನು. ಇವನೇ ದಂಡಿಯಿಂದ ಸ್ತುತನಾದವನು ಎಂದು ತೋರುತ್ತದೆ.

| | | | |
|---|---|---|---|
| 17 | 23 24 | ಜಿನಸೇನನ (783) | ಜಿನಸೇನನ |
| 23 | 2 | ಏಳುಜನ | ಸುಮಾರು ಏಳುಜನ |
| 28 | 4 | ಇನೂಱಿರ್ಪದಿಂಬರುಂ | ಇನ್ನೂಱಿರ್ಪದಿಂಬರುಂ |

39 ಅಸಗ ಇವನ ವರ್ಧಮಾನಪುರಾಣದ ಒಂದು ಪ್ರತಿಯಿಂದ (*Peterson's Report* IV, 163-4) ಈತನು ಪಟುಮತಿ, ವೆರೆತ್ತಿ ಎಂಬವರ ಮಗನೆಂದೂ ನಾಗನಂದಿಯ ಶಿಷ್ಯನೆಂದೂ ಆರ್ಯನಂದಿಯ ಪ್ರಾರ್ಥನಾನುಸಾರವಾಗಿ ಈ ಪುರಾಣವನ್ನು ಬರೆದನೆಂದೂ ತಿಳಿಯುತ್ತದೆ. ಆದರೆ ಕಾರಂಜಾನಲ್ಲಿರುವ ಮತ್ತೊಂದು ಪ್ರತಿಯಲ್ಲಿ (*Catalogue of Sanskrit and Prakrit manuscripts in the Central Provinces and Berar*, xxxii–iii) ಈ ವಿಷಯಗಳು ಹೇಳಿಲ್ಲ. ಅದರಲ್ಲಿ ಅಸಗನು ಶ್ರೀನಾಥನ ರಾಜ್ಯದ ಮೌದ್ಗಲ್ಯಪರ್ವತದಲ್ಲಿ ಭಾವಕೀರ್ತಿ ಮುನಿಯಬಳಿ ವಿದ್ಯೆಯನ್ನು ಕಲಿತಂತೆಯೂ ಅಲ್ಲಿಂದ ಚೋಳರಾಜ್ಯದ ವರಲಾ ಎಂಬ ಪಟ್ಟಣಕ್ಕೆ ಹೋಗಿ ಅಲ್ಲಿ 910 ರಲ್ಲಿ (ಸಂವತ್ಸರೇ ದಶನವೋತ್ತರವರ್ಷಯುಕ್ತೇ) 8 ಗ್ರಂಥಗಳನು ರಚಿಸಿದಂತೆಯೂ ಹೇಳಿದೆ. ಈ ವರ್ಷಸಂಖ್ಯೆ ಶಾಲಿವಾಹನಶಕಕ್ಕೆ ಅನ್ವಯಿಸುತ್ತದೆ ಎಂದು ಭಾವಿಸಿ ಶ್ರೀಮಾನ್ ಹೀರಾಲಾಲ್ ಗ್ರಂಥರಚನಾಕಾಲವು 988 ಎಂದು ಹೇಳುತ್ತಾರೆ. ಆದರೆ ಅಸಗನು ಪೊನ್ನನ (ಸು. 950) ಹೇಳಿಕೆಯಂತೆ ಆ ಕವಿಯ ಕಾಲಕ್ಕೆ ಹಿಂದೆ ಇದ್ದಿರಬೇಕಾಗುವುದರಿಂದ ಈ ವರ್ಷಸಂಖ್ಯೆ ವಿಕ್ರಮಶಕಕ್ಕೆ

ಅನ್ವಯಿಸುತ್ತದೆ ಎಂದು ನಮಗೆ ತೋರುತ್ತದೆ. ಈ ಪಕ್ಷದಲ್ಲಿ ಅಸಗನ ಗ್ರಂಥ ರಚನಾಕಾಲವು 853 ಆಗುವುದು.

46 ಚಾವುಂಡರಾಯನು ತನ್ನ ಗುರು ನೇಮಿಚಂದ್ರನಿಂದ ರಚಿತವಾದ ಗೊಮ್ಮಟಸಾರಕ್ಕೆ ವೀರಮಾರ್ತಂಡಿ ಎಂಬ ಕನ್ನಡವೃತ್ತಿಯನ್ನು ಬರೆದಿರುವುದಾಗಿ ತಿಳಿಯುತ್ತದೆ (ಕರ್ಣಾಟಕ ಕೇಸರಿ, 1, 39).

ಈತನು ಗೊಮ್ಮಟೇಶ್ವರ ಪ್ರತಿಷ್ಠೆಯನ್ನು ಮಾಡಿಸಿದ ವಿಷಯವು ಚಾವುಂಡರಾಯಪುರಾಣದಲ್ಲಿ ಹೇಳಿಲ್ಲ.

52 ಧಾರಾಪುರದ ಭೋಜರಾಜನು 1010 ರಲ್ಲಿ ಆಳುವುದಕ್ಕೆ ಆರಂಭಿಸಿದಂತೆ ತಿಳಿವುದರಿಂದ ಕಾದಂಬರಿಯನ್ನು ಬರೆದ ನಾಗವರ್ಮನು ಛಂದೋಂಬುಧಿಯನ್ನು ಬರೆದ ನಾಗವರ್ಮನಿಗಿಂತ ಬೇರೊಬ್ಬನಾಗಿರಬಹುದೋ ಎಂಬ ಸಂದೇಹಕ್ಕೆ ಅವಕಾಶವಿರುವಂತೆ ತೋರುತ್ತದೆ.

| | | | |
|---|---|---|---|
| 82 | 1 | ಸು. 990 | ಸು. 982 |
| 63 | 2 | ಸತ್ಯಾಶ್ರಯನಲ್ಲಿ (997-1009) | ತೈಲಪನಲ್ಲಿ. |
| 87 | 5 | ಸು. 1070 | 1071 |
| ,, | 14 | 1071 | 1072 |
| ,, | 16 | ದಂಡನಾಯಕಂ | ದಂಡನಾಯಕಂ" |
| ,, | 16-17 | ಬ್ರಹ್ಮಕ್ಷತ್ರ ಎಂಬುದರಿಂದ ನಾಥಂ ಎಂಬುದರವರೆಗೆ ಬಿಡಬೇಕು. | |
| ,, | 17 | ಉರಯಾದಿತ್ಯನು | ಉದಯಾದಿತ್ಯನ |
| ,, | ,, | ಈ ಉದಯಾದಿತ್ಯನು 1074 ರಲ್ಲಿ ಹುಟ್ಟಿದ ಶಿಕಾರಿಪುರ 295, ಸೊರಬ 299, ನಗರ 30 ಈ ಶಾಸನಗಳಲ್ಲಿಯೂ ಕೀರ್ತಿತನಾಗಿದ್ದಾನೆ ಮೊದಲೆರಡು ಶಾಸನಗಳಲ್ಲಿ ಇವನು | |

ಬನವಸೆ 12000, ಸಾಂತಳಿಗೆ 1000 ಇವುಗಳನ್ನು ಆಳುತ್ತಿದ್ದಂತೆ ಹೇಳಿದೆ. ಷಿಕಾರಿಪುರ 51. 109, 110, 130, 221, ಇವುಗಳಲ್ಲಿ ಉಕ್ತನಾಗಿರುವ ಬ್ರಹ್ಮಕ್ಷತ್ರ ವಂಶದ ಉದಯಾದಿತ್ಯನ ಬೇರೆ.

| | | | |
|---|---|---|---|
| ,, | 17-19 | ಬನವಸೆ ಎಂಬುದರಿಂದ ಅವನ ಎಂಬುದರವರೆಗೆ ಬಿಡಬೇಕು. | |
| ,, | 20 | ಇದ್ದಂತೆಯೂ | ಇದ್ದಂತೆ |
| ,, | 22 | ಸುಮಾರು 1070 | 1071 |
| 89 | 13, 14, 18 | 1079 | 1025 |
| 90 | 12-14 | ಈ ಮಾರಿರಾಜನು ಚಂದ್ರರಾಜನ ಪೋಷಕನಲ್ಲ. | |
| ,, | 17-20 | ಈ ಭಾಗವನ್ನು ಬಿಡಬೇಕು. ಕವಿ ಚಾಳುಕ್ಯರಾಜನಾದ 1 ನೆಯ ಜಯಸಿಂಹಜಗದೇಕಮಲ್ಲನ ಆಳಿಕೆಯಲ್ಲಿ (1015-1042) ಇದ್ದನು. | |
| 92 | 22 | ಪ್ರಥಮಮುದ್ರಣದಲ್ಲಿ ಕೊಟ್ಟಿರುವ (1, 73) ಜಯಸಿಂಹಸ್ತುತಿರೂಪವಾದ ಈ ಪದ್ಯವು ತಿದ್ದಿದ ಮುದ್ರಣದಲ್ಲಿ ಪ್ರಮಾದದಿಂದ ಬಿಟ್ಟುಹೋಗಿದೆ:— | |

ತ್ರಿಜಗದ್ವ್ಯಾಪಿತಕೀರ್ತಿ ಕುಂತಲಧರಾಧೀಶಂ ದ್ವಿಷದ್ಭೂಮಿಪ |
ವ್ರಜಕಾಲಂ ಹರಿಮೂರ್ತಿ ನಿರ್ಮಳಗುಣಂ ಸಿಂಹಾಸನಾಧಿಷ್ಠಿತಂ ||
ವಿಜಯಾರ್ದ್ಯ.. ವಿಳಾತಿವರ್ತಿ ಜಯಸಿಂಹಂ ದೇವದೇವಾಂಘ್ರಿಪಂ |
ಕಜಭೃಂಗಂ ನುತಚಕ್ರವರ್ತಿತಿಳಕಂ ಚಾಳುಕ್ಯವಂಶೋತ್ತಮಂ ||

| | | | |
|---|---|---|---|
| 100 | 4,6,8. | ಸೂತ | ಸೂತ್ರ |
| 101 | 7-8 | ಒಂದು ಎಂಬುದರಿಂದ ಸಂಶಯವಿಲ್ಲ ಎಂಬುದರ ವರೆಗೆ ಬಿಡಬೇಕು. | |
| ,, | 8 | ದುರ್ಗಸಿಂಹನು ಎಂಬುದರಿಂದ ಸ್ತುತಿಸಿರುವ ಎಂಬುದರವರೆಗೆ ಬಿಡಬೇಕು. | |
| 102 | 15 | ಮುನಿ 1115ರಲ್ಲಿ ಗತಿಸಿದ ಮೇಘಚಂದ್ರನ ಸಧರ್ಮನೆಂದೂ 7 | ಮುನಿ ಸುಮಾರು 1100ರಲ್ಲಿ ಇದ್ದನೆಂದೂ |
| ,, | 16 | ತಿಳಿಯುತ್ತದೆ | ತಿಳಿಯುತ್ತದೆ 7 |
| ,, | 16-19 | ಹಿಂದೆ ಹೇಳಿದ ಎಂಬುದರಿಂದ ವ್ಯಕ್ತವಾಗುತ್ತದೆ ಎಂಬುದರವರೆಗೆ ಬಿಡಬೇಕು. | |
| ,, | 19-20 | ನಯಕೀರ್ತಿಯ ಶಿಷ್ಯನಾದ, ನಯಕೀರ್ತಿಯ ತಂದೆಯ ಸಧರ್ಮನಾದ ಎಂಬ ಭಾಗಗಳನ್ನು ಬಿಡಬೇಕು. | |
| 103 | 14-15 | ನಾಗಚಂದ್ರನ ಗುರುವಾದ ಬಾಲಚಂದ್ರನ ಮಗನೆಂದು | ಅಮೋಘಚಂದ್ರನ ಸಧರ್ಮನೆಂದು |
| ,, | 17 | ತನ್ನ ಗುರು ಬಾಲಚಂದ್ರನೂ ಅವನ ಮಗ | ಅಮೋಘಚಂದ್ರನ ಸಧರ್ಮ |
| ,, | 19 | ದುರ್ಗಸಿಂಹ (ಸು. 1145), ಎಂಬುದನ್ನು ಬಿಡಬೇಕು | |
| ,, | 22-23 | ಈ ಪದ್ಯವು ಆದಿಪಂಪನ ಸ್ತುತಿಯಾಗಿರಬೇಕು. | |
| 106 | 24 | (ತತ್ಸಧರ್ಮ) ಎಂಬುದನ್ನು ಬಿಡಬೇಕು. | |
| | 25 | (ಬಾಲಚಂದ್ರಪುತ್ರ) | (ತತ್ಸಧರ್ಮ) |

| | | | |
|---|---|---|---|
| 113 | 7,15 | 1100 | 1000 |
| 122 | 23 | 1120 | 1190 |
| ,, | 28 | ರಾಜಾದಿತ್ಯನಿಗೆ ಗಣಿತವಿರಿಂಚ ಎಂಬ ಬಿರುದೂ ಉಂಟು | |
| 123 | 16 | ಹೊಯ್ಸಳ ಎಂಬುದರಿಂದ ಇದ್ದಿರ ಬಹುದು ಎಂಬುದರವರೆಗೆ ಬಿಡಬೇಕು. See 111 376. ರಾಜಾದಿತ್ಯನು "ಬಾಹುಬಲಿ ಭರತರಾತ್ಮೇಶ್ವರರ್" ಎಂದು ಹೇಳಿಕೊಂಡಿದ್ದಾನೆ. ಬಾಹುಬಲಿ, ಭರತ ಎಂಬವರು 2ನೆಯ ಬಲ್ಲಾಳನ (1173-1220) ದಂಡನಾಯಕರಾಗಿದ್ದಂತೆ ನಾಗಮಂಗಲದ 32ನೆಯ ಶಾಸನದಿಂದ (1183) ತಿಳಿವುದರಿಂದ ಕವಿ ಇವರ ಆಶ್ರಯದಲ್ಲಿ ಈ ದೊರೆಯ ಆಳಿಕೆಯಲ್ಲಿ ಇದ್ದಿರಬೇಕು. | |
| 124 | 28 | ವಿನುತಂ | ವಿನೂತಂ |
| 127 | 5 | ನಸಮಾಹಂ ತನಿಗಂಪನೆಣ್ದೆಸೆಗೆ ನಿಚ್ಚಂ ಬೀಜಲನ್ವರ್ಥಮಾ \| | |
| 129 | 13 | 1125 | 1100 |
| 130 | 5 | ಆದುದರಿಂದ ಕವಿ ಸುಮಾರು 1125ರಲ್ಲಿ | ಕವಿ ಸುಮಾರು 1100ರಲ್ಲಿ |
| 131, 132 | 14, 15 | 1125 | 1100 |
| 137 | 5 | 1130 | 1129 |
| 140 | 20 | (3) ನೆಯ ಮತ್ತು (4) ನೆಯ ಕಾರಣಗಳನ್ನು ಪೂರ್ತಿಯಾಗಿ ಬಿಡಬೇಕು. ಕರ್ಣಪಾರ್ಯನು | |

ಹೇಳುವ ಶಿಲಾಹಾರ ರಾಜನಾದ ವಿಜಯಾದಿತ್ಯನು 1143, 1153, ಈ ವರ್ಷಗಳಲ್ಲಿ ಆಳುತ್ತಿದ್ದಂತೆ ತಿಳಿವುದರಿಂದ (*Dynasties of Kanarese Districts* 545) ಕವಿಯ ಕಾಲವು ಸುಮಾರು ಇದೇ ಆಗಿರಬೇಕು.

113 4 ಅಕಳಂಕ ಚಂದ್ರ ಕನಕಚಂದ್ರ

29 ಕೆಳಗಣ ಟಿಪ್ಪಣಿ ಮೈಸೂರು ಪ್ರಾಚ್ಯ ಕೋಶಾಲಯದ ಕೈಬರಹದ ಪುಸ್ತಕಗಳಂತೆ ಹೀಗಿರಬೇಕು:—

ಸಮಂತಭದ್ರ, ಗುಣಭದ್ರ, ಪೂಜ್ಯಪಾದ, ಗೃಧ್ರಪಿಂಛ, ವೀರಸೇನ, ಕೊಂಡಕುಂದಾಚಾರ್ಯ, ಮಲಧಾರಿದೇವ, ತ್ರೈವಿದ್ಯ ಕಲ್ಯಾಣಕೀರ್ತಿ, ಕೊಲ್ಲಾಪುರದ ಚಂದ್ರಪ್ರಭ ಬಸ್ತಿಯ ಶುಭಚಂದ್ರ, ಬೆಟ್ಟದಮುನಿ, ಕಾಣೂರ್ಗಣದ ನೇಮಿಚಂದ್ರಮುನಿ, ಕನಕಚಂದ್ರ. ಕೊನೆಯ ಹೆಸರು ಒಂದು ಪುಸ್ತಕದಲ್ಲಿ ಕನಕಂಕಚಂದ್ರ ಎಂದೂ ಮತ್ತೊಂದರಲ್ಲಿ ಕನಕಕಂಕಚಂದ್ರ ಎಂದೂ ಇರುವುದರಿಂದ ಅಕಳಂಕಚಂದ್ರ ಎಂದಿರಬಹುದೋ ಎಂಬ ಸಂದೇಹಕ್ಕೆ ಅವಕಾಶವುಂಟಾಯಿತು

144 1,6 1140 1025

149 24 1145 1025 (ಎಲ್ಲಾ ಕಡೆಯೂ)

150 19-23 ಈ ಭಾಗವನ್ನು ಬಿಡಬೇಕು. ಈ ಕವಿ ನಾಗಚಂದ್ರನನ್ನು ಸ್ತುತಿಸಿಲ್ಲ. ಇವನು ಸ್ತುತಿಸುವ ಪಂಪನು ಆದಿಪಂಪನಾಗಿರಬೇಕು. ಇವನ ಸ್ವಾಮಿ 1015ರಿಂದ 1042 ರವರೆಗೆ ಆಳಿದ 1ನೆಯ ಜಯಸಿಂಹ ಜಗದೇಕಮಲ್ಲನಾದುದರಿಂದ ಇವನ ಕಾಲವು ಸುಮಾರು 1025 ಆಗಿರಬಹುದು.

| | | | |
|---|---|---|---|
| 161 | 20 | 1150 | 1175 (ಎಲ್ಲಾ ಕಡೆಯೂ) |
| ,, | 22 | ಸೇರಿಸಿರುವುದರಿಂದ | ಸೇರಿಸಿರುವಂತೆ ತೋರುವುದರಿಂದ |
| ,, | 23-24 | ಬರೆದಿದ್ದಾನೆ ಎಂಬುದರಲ್ಲಿ ಸಂಶಯವಿಲ್ಲ | ಬರೆದಿರಬಹುದು |
| 162 | 21-22 | ಈ ಎರಡು ಪಙ್ಕ್ತಿಗಳನ್ನು ಬಿಟ್ಟು ಈ ವಾಕ್ಯಗಳನ್ನು ಸೇರಿಸಬೇಕು :— | |

ಈ ನರಸಿಂಹನು 1220 ರಿಂದ 1235 ರವರೆಗೆ ಆಳಿದ ಎರಡನೆಯ ನರಸಿಂಹನು. ಈ ದೊರೆಯ ಆಳಿಕೆಯ ಆದಿಭಾಗದಲ್ಲಿ ಸುಮನೋಬಾಣನು ಬದುಕಿದ್ದಿರಬಹುದು. ಆದರೂ 1190ರಲ್ಲಿ ಶಾಸನಕವಿತೆಯನ್ನು ಬರೆದ ಜನ್ನನ ತಂದೆಯಾದುದರಿಂದ ಇವನ ಕಾಲವನ್ನು ಸುಮಾರು 1175 ಎಂದು ಹೇಳಬಹುದು.

| | | | |
|---|---|---|---|
| ,, | 23 | ಕೇಶಿರಾಜ ಮೊದಲಾದವರು | ಕೇಶಿರಾಜ, ಜಗದ್ದಳ ಸೋಮನಾಥ ಮೊದಲಾದವರು |
| ,, | 27 | ನವೀನೋಜ್ಜ್ವಳ | ಸೂಕ್ತಿನವೀನೋಜ್ಜ್ವಳ |
| 164 | 18,25 | 1150 | 1175 |
| ,, | 26 | ಅಲ್ಲದೆ ಎಂದು ಆರಂಭಿಸುವ ವಾಕ್ಯವನ್ನು ಬಿಡಬೇಕು. | |
| 169 | 5 | 1160 | 1360 (ಎಲ್ಲಾ ಕಡೆಯೂ) |
| ,, | 16-20 | ಒಬ್ಬ ಎಂಬುದರಿಂದ ಆಗಬಹುದು ಎಂಬುದರ ವರೆಗೆ ಬಿಡಬೇಕು. | |
| ,, | 21 | ಶಾಸನದಲ್ಲಿ | ಶಾಸನದಲ್ಲಿ [1373) |
| ,, | 22 | ಅಮಲ | ಅಮರ |
| ,, | 23 | ದು. ಆದುದರಿಂದ ಕವಿಯ ಕಾಲವು ಸುಮಾರು 1360 ಆಗಬಹುದೆಂದು ಊಹಿಸುತ್ತೇವೆ. | |

| | | | |
|---|---|---|---|
| 169 | 23-27 | ಸಂದೇಹ ಎಂಬುವದರಿಂದ ಊಹಿಸುತ್ತೇವೆ ಎಂಬದರವರೆಗೆ ಬಿಡಬೇಕು. | |
| 172 | 10 | ನರೆದೆಲೆ | ನರೆದಲೆ |
| 204 | 2 | 206 | 385 |
| 207 | 4 | ಮಾರಿದಂತೆ | ಮಾರಿತಂದೆ |
| 208 | 19; III, 337 | ಕೇರಣ್ಣ | ದೇಕಣ್ಣ |
| 212 | | ಶ್ರೀಪತಿಪಂಡಿತ. ಈತನ ಸ್ಥಳ ಬೆಜವಾಡ. ಈತನನ್ನು ಮಲ್ಲಿಕಾರ್ಜುನ ಪಂಡಿತಾರಾಧ್ಯನು ತನ್ನ ಶಿವತತ್ತ್ವಸಾರವೆಂಬ ತೆಲುಗು ಗ್ರಂಥದಲ್ಲಿ ಸ್ತುತಿಸಿದ್ದಾನೆ. | |
| 238 | 10 | ಮತ್ತೊಂದು ಪ್ರತಿಯಲ್ಲಿ ಸಂಧಿ 17, ಪದ 782 ಎಂದಿದೆ. | |
| 255 | 21 | ಇದೇ ಲಕ್ಷ್ಮಣರಾಜನನ್ನು ಎಂಬುದರಿಂದ ಪುಟದ ಕೊನೆಯವರೆಗೆ ಬಿಡಬೇಕು. ಈ ಲಕ್ಷ್ಮಣ ಅಥವಾ ಲಕ್ಷ್ಮೀಧರ ಎಂಬ ರಾಜನು ಕರ್ಣಪಾರ್ಶ್ವನ ಪೋಷಕನಲ್ಲ, ಪರಂತು ಸೌಂದತ್ತಿಯ ರಟ್ಟರಾಜನಾದ 3ನೆಯ ಕಾರ್ತವೀರ್ಯನ ಮಗನು. ಈ ಕಾರ್ತವೀರ್ಯನು 1143 ರಲ್ಲಿ ಆಳುತ್ತಿದ್ದಂತೆ ಡಾಕ್ಟರ್ ಫ್ಲೀಟ್ ಹೇಳುತ್ತಾರೆ. [*Dynasties of Kanarese Districts*, 551]; 1165 ರಲ್ಲಿಯೂ ಆಳುತ್ತಿದ್ದಂತೆ ಎಕ್ಸಂಬಿ ಶಾಸನದಿಂದ [*Mysore Archaeologiacl Report* for 1916, 48–50) ತಿಳಿಯುತ್ತದೆ. ಇವನ ಮಗನಾದ ಲಕ್ಷ್ಮೀಧರನ ಅಥವಾ ಲಕ್ಷ್ಮೀದೇವನ ಆಳಿಕೆ | |

